*AATHMAAHUTHI* - A book on V D. Savarkar written by Shivaramu and published by Mitra Madhyama, 410, 17th Cross, 6th Main, BEML Layout Ist Stage, Basaweshwaranagara, Bangalore - 560 079 Phone · (080) 3482103

**Fifth Revised Edition : 1999** **Price : Rs. 135.00**

ಪರಿಷ್ಕೃತ ಐದನೆಯ ಆವೃತ್ತಿ : 1999
ಪ್ರತಿಗಳು : ಒಂದು ಸಾವಿರ
ಬೆಲೆ : ರೂ. **135.00**



ಪ್ರಕಾಶಕರು :
**ಮಿತ್ರಮಾಧ್ಯಮ**
410, ಮಹಡಿ, 17ನೆಯ ಅಡ್ಡರಸ್ತೆ, 6ನೆಯ ಮುಖ್ಯರಸ್ತೆ, ಬಿಇಎಂಎಲ್ ಲೇಔಟ್ ಒಂದನೆಯ ಹಂತ,
ಬಸವೇಶ್ವರನಗರ, ಬೆಂಗಳೂರು - 560 079 ದೂರವಾಣಿ : 348201 3

ಮುದ್ರಣ : ರಾಷ್ಟ್ರೋತ್ಥಾನ ಮುದ್ರಣಾಲಯ, ಬೆಂಗಳೂರು. ದೂರವಾಣಿ : 6612730

## ಪ್ರಕಾಶಕರ ಮಾತು

ಓದುಗರೆ,

'ಆತ್ಮಾಹುತಿ'ಯ ಪರಿಷ್ಕೃತ ಐದನೆಯ ಆವೃತ್ತಿಯನ್ನು ಕೊಂಡು ಓದುತ್ತಿರುವ ನಿಮಗೆಲ್ಲ ನಮ್ಮ ಧನ್ಯವಾದಗಳು. ಕನ್ನಡದ ಪ್ರಮುಖ ಸಾಹಿತಿ, ಕವಿ ಶ್ರೀ ಶಿವರಾಮುರವರ ಈ ಕೃತಿಯನ್ನು ಮತ್ತೆ ಕನ್ನಡದ ಓದುಗರ ಮುಂದಿಡಲು 'ಮಿತ್ರಮಾಧ್ಯಮ'ವು ಹೆಮ್ಮೆಪಡುತ್ತದೆ. ಕಳೆದ ವರ್ಷವಷ್ಟೆ ಆರಂಭವಾದ 'ಮಿತ್ರಮಾಧ್ಯಮ'ಕ್ಕೆ ಈ ಕೃತಿಯನ್ನು ಪ್ರಕಟಿಸಲು ಅನುಮತಿ ನೀಡಿ ಪ್ರೋತ್ಸಾಹಿಸಿದ ಶ್ರೀ ಶಿವರಾಮುರವರಿಗೆ ನಮ್ಮ ಕೃತಜ್ಞತೆಗಳು.

ಪುಸ್ತಕದ ಮೂಲ ಪ್ರಕಾಶಕ ಸಂಸ್ಥೆಯಾದ ರಾಷ್ಟ್ರೋತ್ಥಾನ ಪರಿಷತ್, ಮೊದಲ ಆವೃತ್ತಿಯಲ್ಲಿ ಪುಸ್ತಕದ ಬಗ್ಗೆ ಹೇಳಿದ ಕೆಲವು ಮಾತುಗಳು ಇಲ್ಲಿ ಉಲ್ಲೇಖನೀಯ :

''ಸ್ವಾತಂತ್ರ್ಯವೀರ ವಿನಾಯಕ ದಾಮೋದರ ಸಾವರಕರ್ ನಿಸ್ಸೀಮ ಕ್ರಾಂತಿಪುರುಷರು. ಆಜನ್ಮ ಸ್ವಾತಂತ್ರ್ಯ ಹೋರಾಟಗಾರರು. ರಾಷ್ಟ್ರೀಯತೆಯ ಅಪ್ರತಿಮ ಕೈವಾರಿ. ಅಲ್ಲದೆ, ಖ್ಯಾತಿವೆತ್ತ ಕವಿ, ನಾಟಕಕರ್ತ, ಇತಿಹಾಸಕಾರ, ಸಮಾಜ ಸುಧಾರಕ, ಭಾಷಾ ಶುದ್ಧಿಕರ್ತ, ಲಿಪಿ ಸಂಶೋಧಕ, ಎದುರಿಲ್ಲದ ವಾಗ್ಮಿ ಮತ್ತು ರಾಜಕೀಯ ನಾಯಕರು ಅವರು.

''ಸ್ವದೇಶದ ಸೇವೆಯಲ್ಲಿ ತಮ್ಮ ಜೀವನದ ಹವಿಸ್ಸನ್ನು ಹಿಡಿ ಹಿಡಿಯಾಗಿ ಅರ್ಪಿಸುತ್ತಾ ಕೊನೆಗೆ, ಬಾಲ್ಯದಲ್ಲಿ ಸ್ವೀಕರಿಸಿದ್ದ ತಮ್ಮ ಆತ್ಮಾಹುತಿಯ ಪ್ರತಿಜ್ಞೆಯನ್ನು ಪೂರ್ತಿಗೊಳಿಸಿದ ಸ್ಫೂರ್ತಿದಾತ ಅವರು. ಅವರ ರೋಮಾಂಚಕಾರಿ ಜೀವನವೇ 'ಆತ್ಮಾಹುತಿ'ಯ ಕಥಾವಸ್ತು.

''ನಿಜಸಂಗತಿಗಳೇ ಕೆಲವೊಮ್ಮೆ ಕಲ್ಪನೆಗಳನ್ನೂ ಮೀರಬಲ್ಲವು ಎಂಬುದಕ್ಕೆ ಸಾವರಕರರ ರಮ್ಯಾದ್ಭುತ ಬದುಕೊಂದು ಭವ್ಯ ಸಾಕ್ಷಿ. ಬಹುಮುಖವಾದ ಅವರ ಹುಟ್ಟುಪ್ರತಿಭೆ ಹಾಗೂ ಪ್ರಚಂಡ ಸಾಹಸ ಪ್ರವೃತ್ತಿಯ ತೇಜಸ್ಸು ಇಲ್ಲಿ ಮಿಂಚುತ್ತದೆ. ದಟ್ಟದಾರಿದ್ರ್ಯ, ಅಪಾರ ಕಷ್ಟನಷ್ಟಗಳು, ಭೀಷಣ ಹತಾಶತೆ ಹಾಗೂ ಭಯಾನಕ ನರಕಯಾತನೆಗಳ ನಡುವೆಯೂ ಜಗ್ಗದ ಅಜೇಯ ಮನೋಬಲದ ದರ್ಶನ ಇಲ್ಲಾಗುತ್ತದೆ.

''ವೀರ ಸಾವರಕರರ ಬಹುಮುಖ ಜೀವನದ ಚಿತ್ರಣ ಇಷ್ಟು ಸಮಗ್ರವಾಗಿ ಕನ್ನಡದಲ್ಲಿ ಬರುತ್ತಿರುವುದು ಇದೇ ಮೊದಲು.........ಸಾವರಕರರ ಜೀವನದಲ್ಲಿನ ಕಥಾಭಾಗಕ್ಕೆ ಮಾತ್ರ ಇಲ್ಲಿ ಪ್ರಾಮುಖ್ಯ. ಅವರ ಪ್ರತಿಭೆ ಪಾಂಡಿತ್ಯಗಳು, ದೇಶಭಕ್ತಿ ಧರ್ಮಭಕ್ತಿಗಳು, ಪೌರುಷ ಸಾಹಸಗಳು, ತ್ಯಾಗಸೇವೆಗಳು ಆದರ್ಶಪ್ರಾಯ ; ಅವು ಇಂದಿನ ಹಾಗೂ ಮುಂದಿನ ಪೀಳಿಗೆಗಳಿಗೆ ಪರಿಚಿತವಾಗಬೇಕು, ಮಾರ್ಗದರ್ಶಕವಾಗಬೇಕು ; ಅದಕ್ಕಾಗಿ ಈ ಪುಸ್ತಕ.

''ಇದರ ವಿಷಯ ನಿರೂಪಣೆ ನವೀನ ; ಆತ್ಮಚರಿತ್ರೆಯಂತಿರುವ ಜೀವನ ಕಥೆ ಅನುವಾದವಲ್ಲ, ಸ್ವತಂತ್ರ ಕೃತಿ. ಭಾಷೆಯ ಶೈಲಿಯೂ ಮನೋಜ್ಞ; ಸುರಸ ಕಾದಂಬರಿಯಂತೆ ಓಡುತ್ತದೆ. ವರ್ಣರಂಜಿತ ಸನ್ನಿವೇಶಗಳು, ಜೀವಂತವಾಗಿ ಕಣ್ಣಿಗೆ ಕಟ್ಟುವ ಪಾತ್ರಗಳು, ಜೀವನದ ಏರುಪೇರಿನ ರಸ ನಿಮಿಷಗಳು ಮನಸ್ಸನ್ನು ಸೂರೆಗೊಳ್ಳುತ್ತವೆ. ಇಷ್ಟಾದರೂ ಇದು ಕಲ್ಪನೆಯಲ್ಲ, ಆಧಾರ ಸಂಪನ್ನವಾದ ಸತ್ಯ ಘಟನಾವಳಿ.''

ಈ ಐದನೆಯ ಪರಿಷ್ಕೃತ ಆವೃತ್ತಿಯಲ್ಲಿ ಸಾವರ್‌ಕರರ ಕೊನೆಯ ಪತ್ರಿಕಾ ಸಂದರ್ಶನವನ್ನು ಸೇರಿಸಲಾಗಿದೆ. ಮೂಲ ಪುಸ್ತಕದಲ್ಲಿ ಇದ್ದ, ಶ್ರೀ ಬಿ.ಕೆ.ಎಸ್. ವರ್ಮಾ ವಿರಚಿತ ಕೆಲವು ರೇಖಾಚಿತ್ರಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಜೊತೆಗೆ ಸಾವರ್‌ಕರರ, ಅವರ ಜೀವನಕ್ಕೆ ಸಂಬಂಧಿಸಿದ ಹಲವು ಛಾಯಾಚಿತ್ರಗಳನ್ನು ಈ ಆವೃತ್ತಿಯಲ್ಲಿ ಹೊಸದಾಗಿ ಸೇರಿಸಲಾಗಿದೆ. ಮುಖಪುಟಕ್ಕಾಗಿ ದೇಶದ ಹಿರಿಯ ಕಲಾವಿದ ದಿ। ಎಸ್.ಎಂ. ಪಂಡಿತ್‌ರವರು ಬರೆದ ಸಾವರ್‌ಕರರ ಭಾವಚಿತ್ರವನ್ನು ಬಳಸಿಕೊಳ್ಳಲಾಗಿದೆ. ಇದಕ್ಕೆ ಅನುಮತಿ ನೀಡಿದ ಡಾ. ಎಸ್.ಎಂ. ಪಂಡಿತ್ ಮೆಮೋರಿಯಲ್ ಟ್ರಸ್ಟಿಗೆ ನಮ್ಮ ಕೃತಜ್ಞತೆಗಳು. ಈ ಹೊಸ ಆವೃತ್ತಿ ಕುರಿತು ಕಾಳಜಿ ವಹಿಸಿದ ರಾಷ್ಟ್ರೋತ್ಥಾನ ಸಾಹಿತ್ಯದ ಶ್ರೀ ರ.ವಿ. ಜಹಾಗಿರದಾರರನ್ನೂ ಇಲ್ಲಿ ಸ್ಮರಿಸಿಕೊಳ್ಳುತ್ತಿದ್ದೇವೆ. ಪರಿಷ್ಕೃತ ಆವೃತ್ತಿಯ ಕರಡನ್ನು ತಿದ್ದಿದ 'ಹೊಸದಿಗಂತ'ದ ಸಂಪಾದಕ ಶ್ರೀ ದು.ಗು. ಲಕ್ಷ್ಮಣರವರಿಗೆ ನಮ್ಮ ಧನ್ಯವಾದಗಳು.

ಪುಸ್ತಕ ಪ್ರಕಟವಾಗುವ ಹೊತ್ತಿನಲ್ಲಿ 'ಪುಸ್ತಕ ಬಂತೆ ?', 'ಪುಸ್ತಕ ಬಂತೆ ?' ಎಂದು ಅಕ್ಕರೆಯಿಂದ ವಿಚಾರಿಸಿದ ಎಲ್ಲ ಹಿತೈಷಿಗಳಿಗೆ 'ಮಿತ್ರಮಾಧ್ಯಮ'ದ ಅಭಿವಂದನೆಗಳು.

ಪುಸ್ತಕ ಓದಿ, ನಿಮ್ಮ ಅಭಿಪ್ರಾಯಗಳನ್ನು ತಪ್ಪದೆ ತಿಳಿಸಿ.

**ಬೇಳೂರು ಸುದರ್ಶನ**

30. 1. 1999

# ಮರುಮಾತು

ಮರುಮುದ್ರಣಕ್ಕೆ ಮರುಮಾತು ಬೇಕೆಂದು ಈಗಿನ ಪ್ರಕಾಶಕರು ಇಷ್ಟಪಟ್ಟಿದ್ದಾರೆ. ಲೇಖಕನ ಕುರಿತು ಪ್ರೀತಿ, ಗೌರವ ಈ ಕಾಲದಲ್ಲೂ ಇರುವುದು ಸಾಧ್ಯ ಎಂದು ಅವರು ನಂಬಿದಂತಿದೆ ಅದಕ್ಕೆ ನನ್ನಿಂದೇಕೆ ಅಡ್ಡಿ !

ಹೊಸ ಪೀಳಿಗೆಗಳ ಸಾವಿರಾರು ಯುವ ಹೃದಯಗಳನ್ನು ಅರಳಿಸಿದ, ಬೆಳಗಿಸಿದ, ಸ್ಫೂರ್ತಿಗೊಳಿಸಿ ಪರಿವರ್ತಿಸಿದ, ಸುದೃಢ ಸಂಕಲ್ಪಗಳಿಗೆ ಪ್ರೇರೇಪಿಸಿದ ಕೃತಿ 'ಆತ್ಮಾಹುತಿ'. ನನ್ನನ್ನು ನಾನು ಹೊಗಳಿ ಕೊಳ್ಳುತ್ತಿದ್ದೇನೆಯೇ? ಮೇಲ್ಕಂಡ ಮಾತುಗಳನ್ನು ಅಂಥ ಯುವಕರು ನನ್ನಲ್ಲಿ ನೇರವಾಗಿ ಬಂದು ಹೇಳಿ ದ್ದಾರೆ; ಕಾಗದ ಬರೆದು ತಿಳಿಸಿದ್ದಾರೆ; ಬಸ್ ಪ್ರಯಾಣದಲ್ಲಿ, ಅಪರಿಚಿತ ಊರುಗಳಲ್ಲಿ ಅಚಾನಕ್ ಆಗಿ ಪ್ರತ್ಯಕ್ಷರಾಗಿ ತೋಡಿಕೊಂಡಿದ್ದಾರೆ. ಈ ಸ್ವಾನುಭವದ ಸಂತೋಷ ನನಗಲ್ಲದೆ ಇನ್ನಾರಿಗೆ? ಅದನ್ನು ಹೇಳು ವುದಕ್ಕೆ ಜಿಪುಣನಾಗಬೇಕೆ?

ಇನ್ನು ಮುಂದಿನ ಪೀಳಿಗೆಗಳಿಗೆ ಸಹ ಅಂಥ ಸ್ಫೂರ್ತಿ ತಲುಪಬೇಕು. ಅದರ ನಿರಾಕರಣೆ ಸರಿಯಾಗದು. ಅದಕ್ಕಾಗಿ, ಪ್ರಿಯ ಬೇಳೂರು ಸುದರ್ಶನ್ ಮರುಮುದ್ರಣಕ್ಕೆ ಮುಂದಾಗಿದ್ದಾರೆ. ಅವರ ಈ ಪ್ರಯತ್ನ ದಿಂದ, ಇನ್ನೂ ಸಾವಿರಾರು ಯುವಕರು ಸಾವರಕರರ ಜೊತೆಗೆ ನನ್ನನ್ನೂ ಸ್ಮರಿಸುವಂತಾಗುವತ್ತದೆ; ನನ್ನ ಇಳಿವಯಸ್ಸಿನಲ್ಲೂ ಕೃತಜ್ಞತೆಯ ಕಣ್ ನೋಟಗಳು ನನ್ನ ಅಂತರಂಗವನ್ನು ಮೀಟುತ್ತವೆ. ನನ್ನ ಬಾಳಿಗೆ ಧನ್ಯಭಾವದ ಅಗಾಧ ಆಸ್ತಿ ಒದಗಿಬರುತ್ತದೆ. ಅದಕ್ಕಿಂದ ದೊಡ್ಡದು ಇನ್ನಾವುದು ?

ಪ್ರಕಾಶಕರ ಆತ್ಮೀಯತೆಗೆ ಧನ್ಯವಾದಗಳು. ಅವರ ಉದ್ಯಮಶೀಲತೆಗೆ ಶುಭ ಹಾರೈಕೆಗಳು.

ದೀಪಾವಳಿ

ಬಲಿಪಾಡ್ಯಮಿ — ಶಿವರಾಮು

21-10-1998

(ಮೊದಲನೆಯ ಮುದ್ರಣಕ್ಕೆ ಲೇಖಕರು ಬರೆದ ಮಾತು)

# ಸ್ವಸ್ವನ

ಈ 'ಆತ್ಮಾಹುತಿ'ಗೆ ಮೂಲಪ್ರೇರಣೆ ಯಾರು ? - ಎಂದು ಯೋಚಿಸಿದಾಗಲೆಲ್ಲ, ಮನಸ್ಸು ನಾರಿ ಹೇಳುತ್ತದೆ - ರಾಷ್ಟ್ರಸೇವೆಯ ಮಹಾಯಜ್ಞದಲ್ಲಿ ಆತ್ಮಾಹುತಿ ನೀಡಿದ ಆ ಸ್ವಾತಂತ್ರ್ಯವೀರ ಸಾವರಕರರಲ್ಲದೆ ಇನ್ನಾರು ?

ಹಿಮಾಲಯದಂತೆ ಹಬ್ಬಿನಿಂತ ಎತ್ತರದ ವ್ಯಕ್ತಿತ್ವ; ನಿರಂತರ ಅಂತರ್ಗಂಗೆಯಂತೆ ಚಿಮ್ಮಿ ಹತ್ತು ದಿಕ್ಕಿಗೂ ಹರಿದ ಪ್ರತಿಭೆ, ಕರ್ತೃತ್ವ; ಅಪಾರ ವಿದ್ವತ್ತಿನ ಅನುಪಮ ಸತ್ವ; ವಿದ್ಯುತ್ತಿನ ನಿರ್ಘಾತದಂತೆ ಅಡಿಗಡಿಗೂ ಸಿಡಿಯುವ ಪ್ರಖರ ಸ್ವತ್ವ - ಇಷ್ಟೆಲ್ಲವನ್ನೂ ನವಜಾತ ಲೇಖನಿಯ ಮೊನೆಯಲ್ಲಿ ಸೆರೆಹಿಡಿಯಲು ಹೊರಡುವುದು ದುಸ್ಸಾಹಸವೇ ಸರಿ.

ಆದರೆ, ಕೃತಿಯ ನಾಯಕನೇ ನೆರವಿಗಿದ್ದಲ್ಲಿ, ಒಂದು ಕೈನೋಡಬಾರದೇಕೆ ? ಸ್ವರ್ಗೀಯ ಸಾವರಕರ್ ತಮ್ಮ ಜೀವನದ ಕೆಲವೊಂದು ಭಾಗಗಳನ್ನು ತಾವೇ ಬರೆದಿಟ್ಟಿದ್ದಾರೆ. ಅವರು ತಮ್ಮನ್ನು ಮತ್ತು ಅನ್ಯರು ಅವರನ್ನು ಕುರಿತು ಬರೆದ ಮೂಲಗ್ರಂಥಗಳನ್ನು ಓದಿ; ಅವರನ್ನು ಪ್ರತ್ಯಕ್ಷ ಕಂಡವರನ್ನೂ ಅವರ ಮಾತಿನ ಸವಿಯುಂಡವರನ್ನೂ ಕೇಳಿ ; ಮತ್ತು ತತ್ಸಂಬಂಧಿತ ಇತರ ಗ್ರಂಥ ಹಾಗೂ ಲೇಖನಗಳ ರಾಶಿಯಿಂದ ವಿಷಯ ಸಂಗ್ರಹಿಸಿ, ತಯಾರಿಸಿರುವ ಸತ್ಯನಿಷ್ಠ ಕೃತಿ - ಈ 'ಆತ್ಮಾಹುತಿ'. ಇಲ್ಲಿ ಸಾಧ್ಯವಿದ್ದಷ್ಟೂ ಸಾವರಕರರ ವಾಕ್ಯಗಳನ್ನೇ, ಅವರದೇ ಮಾತಿನ ಧಾಟಿಯಲ್ಲಿ, ಅಳವಡಿಸಿಕೊಡಲು ಪ್ರಯತ್ನಿಸಲಾಗಿದೆ. ಅನೇಕ ಅನುಭವಿ ಹಿರಿಯರ ಮಾರ್ಗದರ್ಶಕ ಮತ್ತು ಪ್ರೋತ್ಸಾಹ ಇಲ್ಲವಾಗಿದ್ದಲ್ಲಿ ಈ ಕೃತಿ ರಚನೆಯ ಕಾರ್ಯ ಕೈಗೊಡುತ್ತಿರಲಿಲ್ಲ. ಈ ಎಲ್ಲ ಮಹನೀಯರಿಗೆ ನಾನು ತುಂಬ ಆಭಾರಿ.

ಈ ಗ್ರಂಥಕ್ಕೆ ಸಂಬಂಧಿಸಿದಂತೆ ಅಧ್ಯಯನ ಮತ್ತು ಬರವಣಿಗೆಗೆ ಪ್ರಶಾಂತ ವಾತಾವರಣ ಮತ್ತು ಇನ್ನಿತರ ಸೌಲಭ್ಯಗಳನ್ನು ಕಲ್ಪಿಸಿಕೊಟ್ಟ ಆತ್ಮೀಯರ ನೆರವನ್ನೂ, ಪ್ರೀತಿ ವಾತ್ಸಲ್ಯಗಳನ್ನೂ ಮರೆಯುವಂತಿಲ್ಲ. ಸರ್ವಶ್ರೀ ಮಾಚಿಕೊಪ್ಪದ ದಕ್ಷಿಣಾಮೂರ್ತಿ, ಕೊಪ್ಪದ ಪಿ. ಎ. ಶ್ರೀನಿವಾಸ ರಾವ್, ಸೋಮನಹಳ್ಳಿಯ ಕೆ.ಆರ್. ನರಸಿಂಹಶಾಸ್ತ್ರಿ ಮತ್ತು ಅಮೃತೂರಿನ ಎ.ಎಸ್. ರಾಮಮೂರ್ತಿಯವರಿಗೂ, ಅವರೆಲ್ಲರ ಪರಿವಾರದ ಬಂಧುಗಳಿಗೂ ನಾನು ಚಿರಋಣಿ.

ಪುಸ್ತಕಕ್ಕೆ ಕಳೆಗಟ್ಟುವಂತೆ ಕುಂಚ ಆಡಿಸಿದ ನೆಚ್ಚಿನ ಗೆಳೆಯ ಶ್ರೀ ಶ್ರೀನಿವಾಸ ವರ್ಮನಿಗೆ ಹೃತ್ಪೂರ್ವಕ ಧನ್ಯವಾದಗಳು.

'ಆತ್ಮಾಹುತಿ'ಯ ಪ್ರಕಟಣೆಗೆ ಸಂತೋಷದಿಂದ ಒಪ್ಪಿ, ಅದಕ್ಕಾಗಿ ಅಪಾರ ಪರಿಶ್ರಮ ವಹಿಸಿದ ಪ್ರಸಿದ್ಧ ಪ್ರಕಟಣಾ ಕೇಂದ್ರ 'ರಾಷ್ಟ್ರೋತ್ಥಾನ ಸಾಹಿತ್ಯ'ದ ಪದಾಧಿಕಾರಿಗಳಿಗೂ ಮತ್ತು 'ರಾಷ್ಟ್ರೋತ್ಥಾನ ಮುದ್ರಣಾಲಯ'ದ ಬಂಧುಗಳೆಲ್ಲರಿಗೂ ನನ್ನ ಅನಂತ ಕೃತಜ್ಞತೆಗಳು.

- ಶಿವರಾಮು



# ಹವಿಸ್ಸು ಒಂದು

ನಿಜ ಹೇಳಬೇಕು ಅಂದರೆ, ನಾನು ಹುಟ್ಟಿದ್ದು ನನಗೆ ಕಿಂಚಿತ್ತೂ ನೆನಪಿಲ್ಲ 1883ರ ಮೇ 28 ಸೋಮವಾರದಂದು ನಾನು ಈ ಜಗತ್ತಿಗೆ ಬಂದೆನಂತೆ ಬಾಪೂಕಾಕಾ, ಅಂದರೆ ನಮ್ಮ ದೊಡ್ಡಪ್ಪ, ಹೇಳುತ್ತಿದ್ದರು:

'ಲೋ ತಾತ್ಯಾ – ಮರಿಜಹಗೀರುದಾರ, ನೀನು ಯಾರು ಅಂತ ನಿನಗೆ ಗೊತ್ತೇನೊ? ಹುಟ್ಟುವಾಗಲೇ ಊರಿಗೆಲ್ಲ ಕೇಳುವಂತೆ ಕಿರಿಚುತ್ತಿದ್ದೆ. ಏನು ಮಾಡಿದರೂ ಹಾಲು ಕುಡಿಯಲಿಲ್ಲ ಎಲ್ಲರಿಗೂ ಗಾಬರಿ ಹತ್ತಿತು. ಯಾರ ಬುದ್ಧಿಗೂ ಉಪಾಯ ಹೊಳೆಯಲಿಲ್ಲ. ನಾನು ಮಾಡಿದ್ದೇನು ಗೊತ್ತೆ? ಒಳಗಿನಿಂದ ಭಸ್ಮ ತಂದೆ ನಿನ್ನ ತಾತನನ್ನು ಜ್ಞಾಪಿಸಿಕೊಂಡೆ. ಆ ಪುಣ್ಯಾತ್ಮನ ಹೆಸರಿನಲ್ಲಿ, ''ನೀನೇ ವಿನಾಯಕ ದೀಕ್ಷಿತ ಆಗಿದ್ದರೆ ಹಾಲು ಕುಡಿ – ಹಾಗೇ ಹೆಸರಿಡುತ್ತೇವೆ'' ಎಂದು ದೊಡ್ಡದಾಗಿ ಕೂಗುಹಾಕಿ, ಭಸ್ಮ ಹಚ್ಚಿದೆ ನೋಡು, ತಟ್ಟನೆ ನೀನು ಅಳು ನಿಲ್ಲಿಸಿಬಿಟ್ಟೆ ಕೊಟ್ಟ ಹಾಲನ್ನೆಲ್ಲ ಒಂದೇ ಗುಟುಕಿಗೆ ಹೀರಿಬಿಟ್ಟೆ!'

ಹೀಗೆ, ನಾನು ವಿನಾಯಕ ಆದದ್ದು, ನಮ್ಮ ಬಾಪೂಕಾಕನ ಕೃಪೆಯಿಂದ!

ನಾಸಿಕ್ ತಾಲ್ಲೂಕಿನ ಭಗೂರು ನಮ್ಮ ಗ್ರಾಮ. ಅದು ದಾರಣಾ ನದಿಯ ದಡದಲ್ಲಿದೆ ನಮ್ಮ ಪೂರ್ವಿಕರು ಪಾಲಶೇತ್ ಬಳಿ ಇದ್ದ ಸಾವರ ವಾಡಿಯವರು. ಅದರಿಂದಲೇ 'ಸಾವರಕರ್' ಎಂಬ ಹೆಸರು ಬಂತು ಅವರು ಪ್ರಸಿದ್ಧ ಚಿತ್ಪಾವನ ಕುಲಸ್ಥರು; ವೇದವಿದ್ಯಾ ಸಂಪನ್ನರು. ಪೇಶ್ವೆಗಳ ಆಸ್ಥಾನದಲ್ಲಿ ದೊಡ್ಡ ಹುದ್ದೆಯಲ್ಲಿದ್ದವರು ಅವರಿಗೆ ಭಗೂರಿನಲ್ಲಿ ಸ್ವಲ್ಪ ಭೂಮಿಕಾಣಿ ಇನಾಮು ಸಿಕ್ಕಿತ್ತು ದಾರಣಾನದಿಯ ಆಚೆಗಿರುವ ರಾಹುರಿ ಗ್ರಾಮದ ಜಹಗೀರಿ ದೊರೆಯಿತು. ಭಗೂರಿಗೆ – ನನ್ನ ಜನ್ಮಸ್ಥಾನಕ್ಕೆ – ಅವರು ಬಂದು ನೆಲಸಿದ್ದು ಏಳು ತಲೆಮಾರುಗಳ ಹಿಂದೆ

ನಮ್ಮ ತಾತ ವಿನಾಯಕ ದೀಕ್ಷಿತರಿಗೆ ಎರಡು ಗಂಡು, ಒಂದು ಹೆಣ್ಣು. ಹಿರಿಯ ಮಗನೇ ಬಾಪೂಕಾಕ – ಮಹದೇವಪಂತರು ಅವರ ನಂತರ ನಮ್ಮ ತಂದೆ ದಾಮೋದರ ಪಂತರು ಇಬ್ಬರಿಗೂ ಹದಿನೈದು ವರ್ಷಗಳಷ್ಟು ಅಂತರ ನಾವು ತಂದೆಯನ್ನು 'ಅಣ್ಣಾ' ಅಂತಲೇ ಕರೆಯುತ್ತಿದ್ದುದು 'ಬನ್ನಿ, ಹೋಗಿ' ಎಂದರೆ ಅವರಿಗೆ ಆಗದು 'ಏ ಅಣ್ಣಾ' ಎಂದು ಕರೆಸಿಕೊಳ್ಳುವುದೇ ಅವರಿಗೆ ಇಷ್ಟ ನಮ್ಮ ತಂದೆ ದಾಮೂ ಅಣ್ಣ ಸ್ಫುರದ್ರೂಪಿ ಹುರಿಯಾದ ಮೈಕಟ್ಟು, ಚೆನ್ನದಂಥ ಮೈಬಣ್ಣ, ಆಕರ್ಷಕವಾದ ಮುಖಲಕ್ಷಣ ಅವರ ಮಾತು ತುಂಬ ಮೃದು, ಪ್ರೀತಿ ಅಪಾರ; ಕನಿಕರ ಸ್ವಭಾವದವರು. ನಾಸಿಕ್‌ನಲ್ಲಿ ಮೆಟ್ರಿಕ್ ಮುಗಿಸಿದ್ದರು

ನಮ್ಮ ಸುತ್ತಿಗೆಲ್ಲಾ ಇಂಗ್ಲಿಷ್ ಕಲಿತವರಲ್ಲಿ ಅವರೇ ಮೊದಲಿಗರು. ಅವರಿಗೆ ಪದ್ಯ ಬರೆಯುವ ಹವ್ಯಾಸವೂ ಇತ್ತು. ಕಾವ್ಯವಾಚನ ಎಂದರೆ ಪ್ರಾಣ. ಕಂಠವೂ ಮಧುರ ಎಳೆಯನಾದ ನನ್ನನ್ನು ಕೂರಿಸಿಕೊಂಡು ಸಂಸ್ಕೃತ ಹಾಗೂ ಮರಾಠಿ ಕಾವ್ಯಗಳನ್ನು ಓದುತ್ತಿದ್ದರು. ಅದನ್ನು ಕೇಳಿ ಕೇಳಿ, ವಾಮನಪಂಡಿತ, ಮೋರೋಪಂತ ಇತ್ಯಾದಿ ಕವಿಗಳ ಕೃತಿಗಳೆಲ್ಲ ನನಗೆ ಬಾಯಿಪಾಠ ಆಯಿತು

ನಮ್ಮ ದೊಡ್ಡಪ್ಪ ಬಾಪೂಕಾಕಾ ಭೀಮಕಾಯರು. ಒಳ್ಳೆ ಎತ್ತರದ ಆಳು. ಅಂಗಸಾಧನೆಯಲ್ಲಿ ಎತ್ತಿದ ಕೈ. ಹುಲಿಮೀಸೆಯ ಧೀರಗಂಭೀರ ಮುಖ. (ನಾನು ಹುಟ್ಟಿದಂದು ಅವರ ಗರ್ಜನೆ ಕೇಳಿಯೇ ಅಳು ನಿಲ್ಲಿಸಿದ್ದಲ್ಲಿ ಏನೂ ಆಶ್ಚರ್ಯವಿಲ್ಲ!) ಕಾಯಿದೆ ಕಾನೂನು ಬಲ್ಲವರು. ಕೋರ್ಟು ಕಚೇರಿಯ ವ್ಯವಹಾರದಲ್ಲಿ ಕುಶಲರು. ಸರಕಾರಿ ಅಧಿಕಾರಿಗಳಲ್ಲಿ ಅವರಿಗೆ ಸ್ನೇಹ, ಸಲಿಗೆ ಇತ್ತು. ಮನೆಯ ಯಜಮಾನಿಕೆ, ಜಹಗೀರಿಯ ಕಾರುಬಾರು ಅವರೇ ನೋಡಿಕೊಳ್ಳುತ್ತಿದ್ದರು. ಶ್ರೀಮಂತಿಕೆ, ಜಹಗೀರು, ಇಂಗ್ಲಿಷ್ ಕಾಯಿದೆಯ ತಿಳಿವಳಿಕೆ ಇವೆಲ್ಲದರಿಂದಾಗಿ ನಮ್ಮ ಮನೆತನದ ಪ್ರಭಾವ ಹಾಗೂ ಕೀರ್ತಿ ಸುತ್ತಮುತ್ತಲೂ ಸಾಕಷ್ಟು ಹರಡಿತ್ತು.

ಚಿಕ್ಕಮಕ್ಕಳಾದ ನಮ್ಮನ್ನು ಬಾಪೂಕಾಕಾ ಬಹಳ ಅಕ್ಕರೆಯಿಂದ ಕಾಣುತ್ತಿದ್ದರು. ನಮ್ಮ ದೊಡ್ಡಮ್ಮ ಸಣ್ಣ ವಯಸ್ಸಿನಲ್ಲೇ ತೀರಿಹೋಗಿದ್ದರು. ಅವರಿಗೆ ಮಕ್ಕಳುಮರಿ ಇರಲಿಲ್ಲ. ಅದರಿಂದ ನಮಗೆಲ್ಲ ಬಾಪೂ ಬಗ್ಗೆ ಏನೋ ಒಂದು ತರಹದ ಕನಿಕರ! ಅವರು ನನ್ನನ್ನು ದತ್ತು ತೆಗೆದುಕೊಳ್ಳಬೇಕೆಂದು ಇದ್ದರಂತೆ. ಆದರೆ ದಾಮೂ ಅಣ್ಣನಿಗೂ ಅವರಿಗೂ ಮೊದಲಿಂದ ಯಾವುದೋ ವೈಮನಸ್ಸು. ಅಣ್ಣ ತಮ್ಮಂದಿರಲ್ಲಿ ನೇರವಾದ ಮಾತುಕತೆ ಇಲ್ಲ. ಹಾಗಾಗಿ ಆ ವಿಷಯ ಬಿದ್ದುಹೋಯಿತು.

'ಏನು ಬಾಳಂಭಟ್ಟರೇ!' ಎಂದು ಬಾಪೂ ಪ್ರೀತಿಯಿಂದ ನನ್ನ ತಲೆ ನೇವರಿಸುತ್ತಿದ್ದುದು ಇನ್ನೂ ಚೆನ್ನಾಗಿ ನೆನಪಿದೆ. ಯಾರಾದರೂ ಹಿರಿಯ ಅಧಿಕಾರಿಗಳು ಮನೆಗೆ ಬಂದರೆ ಸಾಕು, 'ನೋಡಿ, ನಮ್ಮ ಮರಿಜಹಗೀರುದಾರನನ್ನ. ನಮ್ಮ ಮನೆತನಕ್ಕೆ ಇವನು ಭೂಷಣ' ಎನ್ನುತ್ತಿದ್ದರು. ಹೊಸಬರೆದುರಿಗೆ ನನ್ನ ಗುಣಸಂಕೀರ್ತನೆ ಹಾಡಿದ್ದೂ ಹಾಡಿದ್ದೇ!

ನನಗೆ ಲಾವಣಿ, ಒಗಟು, ಗಾದೆ, ಆಟಪಾಟ ಇತ್ಯಾದಿ ಕಲಿಸಿದವರು ನಮ್ಮ ಬಾಪೂಕಾಕನೇ. ಅವರ ಬಾಯಿಂದ ಕಥೆ ಕೇಳುವುದೇ ಒಂದು ದೊಡ್ಡ ಗಮ್ಮತ್ತು. ರಾತ್ರಿ ಊಟ ಮುಗಿಸಿಕೊಂಡು ಹುಡುಗರೆಲ್ಲ ದಿವಾನಖಾನೆಯಲ್ಲಿ ಬಾಪೂಕಾಕನ ಸುತ್ತಲೂ ಕೂರುತ್ತಿದ್ದೆವು ಚಲನಚಿತ್ರ ಆರಂಭವಾಗುವುದಕ್ಕೆ ಮೊದಲಿನ ಪರದೆಯಂತೆ ಅವರ ಮುಖಭಾವ ಒಂದು ಗಳಿಗೆ ನಿಶ್ಚಲವಾಗಿರುತ್ತಿತ್ತು. ಅನಂತರ ಇದ್ದಕ್ಕಿದ್ದಂತೆ ಕೈಗಳ ಚಲನೆ, ಕಣ್ಣುಗಳ ನಾಟ್ಯ, ಮೀಸೆಯ ಕುಣಿತ ಮೊದಲಾಗುತ್ತಿತ್ತು.

'ಬಿದ್ದ, ಬಿದ್ದ' ಎಂದು ಒಮ್ಮೆಗೇ ನೆಲಕ್ಕೆ ಅಂಗೈ ಅಪ್ಪಳಿಸುತ್ತಿದ್ದರು. ಯಾರು, ಯಾರು ? ಎಂದು ಗಾಬರಿಯಿಂದ ಮೂಕವಾಗಿ ನೋಡುತ್ತಿದ್ದೆವು. ಅವರ ಬಲಿಷ್ಠ ತೋಳಿನ ಮಾಂಸಖಂಡಗಳು ಉಬ್ಬುತ್ತಿದ್ದವು. ಕತ್ತಿವರಸೆ, ದೊಣ್ಣೆವರಸೆಗಳಲ್ಲಿ ಪಳಗಿದ ಬಾಹು ಅದು. ನಮ್ಮ ಮನೆಗೆ ಮೊದಲಿಂದ ಕಳ್ಳರ ಕಾಟ ಹೆಚ್ಚು. ಬಾಪೂಕಾಕಾ ಎಷ್ಟೋ ವೇಳೆ ಅವರ ಮೇಲೆ ಕತ್ತಿ ಹಿರಿದು ಏಕಾಂಗಿಯಾಗಿ ಏರಿ ಹೋಗುತ್ತಿದ್ದರು. ಕತ್ತಲಲ್ಲಿ ಊರಾಚೆಯವರೆಗೂ ಅವರ ಬೆನ್ನಟ್ಟಿಹೋಗಿ ಓಡಿಸಿ ಬರುತ್ತಿದ್ದರು. ಆಗ ನಮ್ಮ 'ಕರಿಯ'ನೇ ಅವರಿಗೆ ಅಂಗರಕ್ಷಕ. ಕರಿಯನಿಗೂ ನಮ್ಮ ಮನೆಗೂ ಎಷ್ಟೋ ವರ್ಷಗಳ ನಂಟು. ಆ ನಾಯಿಯ ಬಗ್ಗೆ ಪ್ರಸಾರವಾಗಿರುವ ದಂತಕಥೆಗಳಿಗೆ ಲೆಕ್ಕವೇ ಇಲ್ಲ. ಊರಿನವರಿಗೆ ಅದರ ವಿಷಯ ಎಂದರೆ ಪುರಾಣ

ಪುಣ್ಯಕಥೆಗಳಿಗಿಂತ ಉತ್ಸುಕತೆ. ಕರಿಯ ಇದ್ದಾನೆ ಎಂದರೆ ಸರಿ, ನಮ್ಮ ಬಾಪೂಕಾಕಾ ಸಾವಿರಗಟ್ಟಲೆ ಹಣ ಬಿಟ್ಟುಹೋಗುತ್ತಿದ್ದರಂತೆ!

'ಧರ್ಮದ ಶತ್ರು ಬಿದ್ದ, ದೇಶದ ಶತ್ರು ಬಿದ್ದ!' ಎಂದು ಕಥೆ ಮುಂದುವರಿಸುತ್ತಿದ್ದರು ಬಾಪೂಕಾಕಾ.

'ಖಾನನು ಬಿದ್ದ. ಹೊಟ್ಟೆ ಹರಿಯಿತು. ತಲೆ ಕತ್ತರಿಸಿಬಿದ್ದಿತು. ಪ್ರಾಣಪಕ್ಷಿ ಹಾರಿಹೋಯಿತು. ಅಫ ಜಲಖಾನ ನೆಲಕ್ಕೆ ಬಿದ್ದ. ಶಿವಛತ್ರಪತಿ ಗೆದ್ದ, ಗೆದ್ದ' ಎಂದು ಕಾಕಾ ತಮ್ಮ ಪೀಠಿಗೆ ಮುಗಿಸುತ್ತಿದ್ದರು. ಅನಂತರ ಉಳಿದ ಕಥೆ ವಿವರಿಸುತ್ತಿದ್ದರು. ಅವರ ಕಥನದ ಅಪೂರ್ವ ಧಾಟಿಯೇ ಹೀಗೆ. ನಾವು ಎವೆ ಯಿಕ್ಕದೆ ಮೈಯೆಲ್ಲ ಕಿವಿಯಾಗಿ ಕೇಳುತ್ತಿದ್ದೆವು.

ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ 1857ರಲ್ಲಿ ನಡೆಯಿತಷ್ಟೆ. ಆಗ ನಮ್ಮ ಬಾಪೂಗೆ 25ರ ಹರಯ. ಅದರ ವರ್ಣನೆಯನ್ನೆಲ್ಲ ಅವರ ಬಾಯಲ್ಲೆ ಕೇಳಬೇಕು.

'ನೋಡಿ, ನೋಡಿ!'

ನಾವು ಅವರ ಮುಖದ ಕಡೆ ನೋಡುತ್ತಿದ್ದೆವು.

'ಹಾರಿತು ಕುದುರೆ! ರಾಣಿಯ ಕುದುರೆ!'

ಎಲ್ಲಿಗೆ, ಏತಕ್ಕೆ, ಯಾವ ರಾಣಿ? ಎಳೆಯ ಹುಬ್ಬುಗಳ ನಡುವೆ ಪ್ರಶ್ನಾರ್ಥಕ ಚಿಹ್ನೆ ಏಳುತ್ತಿತ್ತು.

'ಅರೆ, ನಮ್ಮ ಝಾನ್ಸೀ ರಾಣಿ ಕುದುರೆ! ಕೇಳಿ, ಕೇಳಿ - ''ಮಾರೋ ಫಿರಂಗೀ ಕೋ'', ''ಹರಹರ ಮಹದೇವ್'' ಗರ್ಜನೆ! ಬಿಳಿಯರ ರುಂಡ ಹಾರಿತು. ರಕ್ತದ ಕಾರಂಜಿ ಚಿಮ್ಮಿತು. ಸುತ್ತಲೂ ಮುತ್ತಿದ್ದ ಶತ್ರುಗಳನ್ನು ಕತ್ತರಿಸಿ ಕೆಡವಿ ಹೊರಟಳು ರಾಣಿ. ಓಡಿತು ಕುದುರೆ! ಲಕ್ಷ್ಮೀಬಾಯಿಯ ಕುದುರೆ!'

ಬಾಪೂಕಾಕಾ ಎರಡು ಕೈಗಳನ್ನೂ ಮೇಲೆತ್ತಿ ಕತ್ತಿಯಂತೆ ಆಡಿಸಿ ಕೆಳಗಿಳಿಸುತ್ತಿದ್ದರು. ಒಂದು ನಿಮಿಷ ಸ್ತಬ್ಧ. ಪುನಃ ಕಥೆಗೆ ರಂಗೇರುತ್ತಿತ್ತು.

ತಾಯಿಯ ನೆನಪು ನನಗೆ ಅಷ್ಟಾಗಿ ಇಲ್ಲ. ಆಕೆ ಸತ್ತಾಗ ನನ್ನ ವಯಸ್ಸು ಕೇವಲ ಒಂಬತ್ತು. ಅದಾದ ಎಷ್ಟೋ ದಿನಗಳವರೆಗೆ, ಆಕೆ ಎದುರಿಗೆ ಬಂದಾಳು ಎಂಬ ಭ್ರಮೆ ಇತ್ತು. ಅಕಸ್ಮಾತ್ ಬಂದರೆ, ನನಗೆ ಗುರುತು ಸಿಕ್ಕಿತೋ ಇಲ್ಲವೋ ಎನ್ನುವ ಸಂಶಯ ಮೂಡಿ ಭಯವಾಗುತ್ತಿತ್ತು!

ತಾಯಿಯ ತವರು ಕೋಠೂರು. ಆಕೆಯ ಅಣ್ಣ - ನಮ್ಮ ಸೋದರ ಮಾವ ಆ ಊರಿನಲ್ಲಿದ್ದರು. ಭವ್ಯ ಶರೀರ, ತೀಕ್ಷ್ಣ ಬುದ್ಧಿ, ನಿಂತು ನೋಡುವಂಥ ರೂಪ ಅವರಿಗೆ. ಮಲ್ಲಯುದ್ಧದಲ್ಲಿ ಪರಿಣತರು. ಸುರಸ ಕವಿತೆಗಳನ್ನೂ ರಚಿಸುತ್ತಿದ್ದರು. ಬಹುಶಃ ನಾವು ಅಣ್ಣ ತಮ್ಮಂದಿರೆಲ್ಲರ ಕಾವ್ಯಶಕ್ತಿಗೆ ತಂದೆ ತಾಯಿಗಳಿಬ್ಬರ ವಂಶಗಳ ಪುಣ್ಯವೂ ಸೇರಿರಬೇಕು.

ಊರಿಗೆ ಊರೇ ನನ್ನ ತಾಯಿಯ ಗುಣಗಾನ ಮಾಡುತ್ತಿತ್ತು. ಗುಣವಂತೆ, ರೂಪವಂತೆ ; ಅವಳು ಅಮೃತಶಿಲೆಯ ಪುತ್ಥಳಿ ಅಂತೆ. 'ನಮ್ಮ ಮನೆಗೆ ಭಾಗ್ಯಲಕ್ಷ್ಮಿಯೇ ಕಾಲಿಟ್ಟಿದ್ದಾಳೆ' ಎಂದು ಆಗಾಗ್ಗೆ ದೊಡ್ಡಪ್ಪ ಬಾಪೂಕಾಕಾ ಹೇಳುತ್ತಿದ್ದರು. 'ಎಷ್ಟು ಒಳ್ಳೆಯವರೋ ಆ ಮಹಾತಾಯಿ!' ಎನ್ನುತ್ತಿದ್ದರು, ರೈತರೆಲ್ಲ. ಜಹಗೀರುದಾರರ ಮನೆಯ ಈ 'ಗೃಹದೇವತೆ' ಅತ್ಯಂತ ಕರುಣಾಮಯಿ. ಶ್ರೀಮಂತಿಕೆಯ ಆಡಂಬರ ಎಳ್ಳಷ್ಟೂ ಇಲ್ಲ. ನಮ್ಮ ತಂದೆ ದಾಮೂ ಅಣ್ಣನಿಗೆ ಹೆಂಡತಿ ಎಂದರೆ ಪಂಚಪ್ರಾಣ. ಅವರ ಪ್ರೀತಿ, ಅಕ್ಕರಾಸ್ಥೆ ಹೇಳತೀರದು. ನೆಮ್ಮದಿಯಾಗಿತ್ತು, ಸಂಸಾರ.

ಮೊದಲ ಎರಡು ಮಕ್ಕಳು ಎಳೆತನದಲ್ಲೇ ತೀರಿಕೊಂಡವು. ದೈವ ಹೀಗೆ ಕೊಟ್ಟಿತ್ತು, ಹಾಗೆ ಕಿತ್ತು

ಕೊಂಡಿತ್ತು! ಅನಂತರ ಅಣ್ಣ ಬಾಬಾ (ಗಣೇಶರಾವ್ ಸಾವರಕರ್) ಹುಟ್ಟಿದ. ನಾಲ್ಕು ವರ್ಷಗಳ ನಂತರ ನಾನು ; ಆಮೇಲೆ ಮೂರು ವರ್ಷ ಕಳೆದು ನನ್ನ ತಂಗಿ 'ಮಾಯಿ.' ಕೊನೆಯವನು ನನ್ನ ತಮ್ಮ 'ಬಾಳಾ' (ನಾರಾಯಣ ಸಾವರಕರ್). ಮಾಯಿಗೂ ಅವನಿಗೂ ಎರಡು ವರ್ಷ ವ್ಯತ್ಯಾಸ.

ದಾರಣಾನದಿಯ ಆಚೆಗಿದ್ದ ನಮ್ಮ ಮಾವಿನ ತೋಪು ಬಲು ತಂಪು; ಬಲು ಸೊಂಪು. ಮನೆಯವರೆಲ್ಲ ಆಗಾಗ ಅಲ್ಲಿಗೆ ವನಭೋಜನಕ್ಕೆ ಹೋಗುತ್ತಿದ್ದೆವು. ಬೇಸಿಗೆ ಬಂದರೆ ಸಾಕು, ಮರಗಳ ತುಂಬ ಫಲದ ರಾಶಿ. ರೈತರು ಅದನ್ನು ಗಾಡಿಗಳಿಗೆ ತುಂಬಿ ಮನೆಗೆ ತರುತ್ತಿದ್ದರು. ಮಧ್ಯಾಹ್ನ ಉರಿಬಿಸಿಲಿನಲ್ಲಿ ಅವರ ಮೈ ಯಿಂದ ಧಾರಾಕಾರವಾಗಿ ಬೆವರು ಹರಿಯುತ್ತಿತ್ತು. ನನಗೆ 'ಅಯ್ಯೋ ಪಾಪ' ಅನ್ನಿಸುತ್ತಿತ್ತು. ಒಳಗಿಂದ ತಂಪಾದ ನೀರು ತಂದು ಕೊಡುತ್ತಿದ್ದೆ. 'ಮೇಲೆ ಬನ್ನಿ ; ಜಗುಲಿಯಲ್ಲಿ ಕುಳಿತು ಸುಧಾರಿಸಿಕೊಳ್ಳಿ. ನಮ್ಮ ಬಾಪೂಕಾಕಾ ಇದೀಗ ಬರುತ್ತಾರೆ' ಎನ್ನುತ್ತಿದ್ದೆ.

'ವ್ಹಾ, ಛೋಟೇ ಜಹಗೀರದಾರ್! ಮೇಲೆ ಕುಳಿತರೆ ಬಾಪೂ ಸಾಹೇಬರು ಕೋಪಿಸಿಕೊಂಡರೆ ?'

'ನನ್ನ ಹೆಸರು ಹೇಳಿ, ನಾನು ತಾನೆ ಕೂರಿಸಿದ್ದು! ಅಂದಮೇಲೆ ಬಾಪೂ ಹೇಗೆ ಕೋಪಿಸಿಕೊಂಡಾರು?' ಎಂದು ಆಢ್ಯತೆಯಿಂದ ಅಭಯ ನೀಡುತ್ತಿದ್ದೆ. ಅವರೆಲ್ಲ ಕುಳಿತುಕೊಳ್ಳುವವರೆಗೆ ನಾನು ಬಿಡುತ್ತಿರಲಿಲ್ಲ.

ಸ್ವಲ್ಪ ಹೊತ್ತಿಗೆಲ್ಲ ಬಾಪೂ ಬರುತ್ತಿದ್ದರು. ಅವರನ್ನು ಕಾಣುತ್ತಲೇ ರೈತರು, 'ಬಾಪೂಸಾಹೇಬ್, ನಮ್ಮ ಚಿಕ್ಕ ದಣಿಗಳ ಬಲವಂತಕ್ಕೆ ಇಲ್ಲಿ ಕೂಡಬೇಕಾಯಿತು. ನಿಮ್ಮ ಹುಡುಗ ಎಷ್ಟೊಂದು ದಯಾವಂತರು' ಎನ್ನುತ್ತಿದ್ದರು.

ನನ್ನ ದೊಡ್ಡಸ್ತಿಕೆ ನೆನಸಿಕೊಂಡು ಬಾಪೂಕಾಕಾಗೆ ನಗು!

'ಓಹೋ, ನಮ್ಮ ಬಾಳಂಭಟ್ಟರ ಬಲವಂತವೋ ? ಸರಿ, ಸರಿ. ನಿಮ್ಮನ್ನು ಏಳಿಸುವುದಕ್ಕೆ ನಾನೇನು ಸರ್ಪಸಂತತಿಯವನೇ ? ಕೂರಿ, ಕೂರಿ.'

ಮಾವಿನ ಹಣ್ಣಿನ ಕಾಲ ಬಂತೆಂದರೆ, ನಮ್ಮ ಮನೆಗೆ ಬಂದು ಹೋಗುವವರಿಗೆ ಲೆಕ್ಕವಿಲ್ಲ. ಪರ ಊರಿನ ನೆಂಟರಿಷ್ಟರು, ಸರಕಾರಿ ಅಧಿಕಾರಿಗಳು, ವಕೀಲರು ತಪ್ಪದೆ ಹಾಜರಾಗುತ್ತಿದ್ದರು. ಅನೇಕ ಆಪ್ತರಿಗೆ ಬಾಪೂ ತಾವೇ ಹೇಳಿಕಳಿಸುತ್ತಿದ್ದುದೂ ಉಂಟು. ಬಂದವರು ನಾಲ್ಕು ದಿನ ನಿಲ್ಲುತ್ತಿದ್ದರು. ಆಗ ಮನೆಯ ಅಂಗ ಳವೇ ಸ್ಪರ್ಧೆಯ ಕಣ. ಹೆಚ್ಚು ಹಣ್ಣು ತಿಂದವರದೇ ಹೆಚ್ಚುಗಾರಿಕೆ! ಹೋಗುವಾಗ ಪ್ರತಿಯೊಬ್ಬರ ಕೈ ಯೊಳಗೂ ಹಣ್ಣು ತುಂಬಿದ ಚೀಲ.

ರಾತ್ರಿ ಮಲಗುವ ಮುನ್ನ ಉತ್ತಮ ಗ್ರಂಥಗಳನ್ನು ಓದಿಸಿ ಕೇಳುವುದು ನಮ್ಮ ತಂದೆಯ ರೂಢಿ. ನಮ್ಮ ಅಣ್ಣ ಬಾಬಾ ರಾಮವಿಜಯ, ಹರಿವಿಜಯ, ಪಾಂಡುಪ್ರತಾಪ, ಶಿವಲೀಲಾಮೃತ, ಜೈಮಿನಿ ಅಶ್ವಮೇಧ ಮುಂತಾದ ಕಾವ್ಯಗಳನ್ನು ಓದಿ ಹೇಳುತ್ತಿದ್ದ. ನಡುನಡುವೆ ತಂದೆಯೂ ತಾಯಿಯೂ ಆ ಬಗೆಗೆ ಚರ್ಚಿಸು ತ್ತಿದ್ದರು. ಒಮ್ಮೆ ಕಾಲಗಣನೆಯ ವಿಷಯ ನನ್ನ ಕಿವಿಗೆ ಬಿತ್ತು. ಕಲ್ಪಗಳು ಒಂದಾದ ಮೇಲೊಂದು ಬರುತ್ತ ವಂತೆ ; ಎಲ್ಲ ಕಲ್ಪಗಳ ಘಟನೆಗಳೂ ಒಂದೇ ರೀತಿ ಇರುತ್ತವಂತೆ.

ನನಗಾಗ ಎಂಟು ವರ್ಷ. ದಿನವೂ ಮಧ್ಯಾಹ್ನ ಶಾಲೆಯ ಬಿಡುವಿನ ಸಮಯದಲ್ಲಿ ಮನೆಗೆ ಬರುತ್ತಿದ್ದೆ. ಒಂದು ದಿನ ಆಗ ಏಕೋ ಕೋಪಿಸಿಕೊಂಡಿದ್ದೆ. ಬಹುಶಃ ತಿಂಡಿಯ ವಿಷಯ ಇದ್ದೀತು. ಅದರಿಂದ ತಾಯಿ ಯ ಜೊತೆ ಪ್ರೀತಿಯಿಂದ ಮಾತನಾಡಲು ಆಗಲಿಲ್ಲ. ಅಷ್ಟರಲ್ಲಿ ಶಾಲೆಗೆ ಹೊತ್ತಾಯಿತು. ಹೋಗುತ್ತಾ ದಾರಿಯಲ್ಲಿ, ತಾಯಿಯೊಡನೆ ಸಂತೋಷದಿಂದ ಮಾತನಾಡಬೇಕಾಗಿದ್ದ ಆ ಕ್ಷಣ ಕಳೆದುಹೋಯಿತಲ್ಲಾ

ಎಂದು ವ್ಯಥೆಯಾಯಿತು. ತತ್‌ಕ್ಷಣ ನಾನು ಕೇಳಿದ್ದ 'ಕಲ್ಪ' ಕಥೆ ನೆನಪಿಗೆ ಬಂತು : ಮುಂದಿನ ಕಲ್ಪದಲ್ಲಿ ಇದೇ ದಿನ, ಇದೇ ಕ್ಷಣ ಬರುತ್ತದೆ. ಇದೇ ತಾಯಿ ಇರುತ್ತಾಳೆ. ಆಗ ನಾನು ಮುನಿಸಿಕೊಳ್ಳದಿದ್ದರೆ ಆಯಿತು. ಇಂದು ಕಳೆದುಕೊಂಡ ಸುಖ ಸಿಗುತ್ತದೆ ; ಆಗ ತಾಯಿಯ ಜೊತೆ ಒಳ್ಳೆಯ ಮಾತನಾಡುತ್ತೇನೆ ಅಂದು ಕೊಂಡೆ. ಆದರೆ ಹಾಯ್ ! ಅಷ್ಟರಲ್ಲೆ ಇನ್ನೊಂದು ಯೋಚನೆ. ಈಗಿನ ಎಲ್ಲ ಘಟನೆಗಳೂ ಮುಂದಿನ ಕಲ್ಪದಲ್ಲಿ ಪುನರಾವೃತ್ತಿ ಆಗುವುದಾದರೆ, ಕೋಪಿಸಿಕೊಳ್ಳುವುದು ತಾನೆ ಹೇಗೆ ತಪ್ಪೀತು ? ಅದೂ ಆಗಲೇ ಬೇಕಲ್ಲವೆ ? ಆದ್ದರಿಂದ ಆ ಕ್ಷಣ ಎಂದೆಂದಿಗೂ ಹೋದಂತೆಯೇ ವ್ಯರ್ಥಗೊಳಿಸಿದ ಕಾಲ ಎಂದೆಂದಿಗೂ ಮರಳಿ ಬಾರದು. ನನಗೆ ಇದೊಂದು ಜೀವನದ ಪಾಠ ಆಯಿತು.

ನಮ್ಮ ಪರಾಕ್ರಮಿ ಪೂರ್ವಜರ ಬಳಿ ಕುದುರೆ ಸವಾರರ ಪಡೆ ಇತ್ತಂತೆ. ಅದರಿಂದ ಅವರೊಮ್ಮೆ ದರೋಡೆಕೋರರ ಬಂಡಾಯ ಅಡಗಿಸಿದ್ದರು. ಆ ಪುಂಡರ ಬಳಿ ಒಂದು ಅಷ್ಟಭುಜದ ಭವಾನಿ ವಿಗ್ರಹ ಇತ್ತು. ನೋಡಲು ಬಹು ಲಕ್ಷಣವಾಗಿ, ಸುಂದರವಾಗಿ ಇತ್ತು. ನಮ್ಮ ಹಿರಿಯರು ಅದನ್ನು ಭಕ್ತಿಯಿಂದ ಮನೆಗೆ ತಂದರು. ಅಂದಿನಿಂದ ಅವಳು ನಮ್ಮ ಕುಲದೇವತೆ ಆದಳು. ಅವರಿಗೆ ಆಗಾಗ್ಗೆ ರಕ್ತದ ಬಲಿ ಬೀಳು ತ್ತಿರಬೇಕಂತೆ. ಅದರಿಂದ ಊರಾಚೆ ಇದ್ದ ಖಂಡೋಬಾ ದೇವಸ್ಥಾನದಲ್ಲೆ ಆಕೆಗೂ ವಸತಿ. ನವರಾತ್ರಿಯ ಮೊದಲ ದಿನ ಉತ್ಸವ ಸಹಿತ ಭವಾನಿಯನ್ನು ಮನೆಗೆ ತರುತ್ತಿದ್ದರು. ವಿಜಯದಶಮಿ ಕಳೆಯುತ್ತಲೇ ವಾಪಸು ಕಳುಹಿಸಿಕೊಡುತ್ತಿದ್ದರು.

ನಮ್ಮ ಮನೆಯ ಅಟ್ಟದ ಮೂಲೆಯಲ್ಲಿ ದೊಡ್ಡದೊಂದು ಮರದ ತುಂಡು ಬಿದ್ದಿತ್ತು. ಅದರ ಮೇಲೆಲ್ಲ ಕಸ, ಧೂಳು, ಜೇಡರ ಬಲೆಗಳು. ನಮ್ಮ ಬಾಪೂಕಾಕಾ ಅದನ್ನು ಹೆಮ್ಮೆಯಿಂದ ತೋರಿಸುತ್ತಿದ್ದರು. 'ನಮ್ಮದು ವೀರರ ಕುಲ ; ವಿದ್ವಾಂಸರ ವಂಶ. ಅದಕ್ಕಾಗಿ ಪೇಶ್ವೆಗಳು ಕೊಟ್ಟ ಪಲ್ಲಕ್ಕಿಯ ಅವಶೇಷ ಅದು' ಎನ್ನುತ್ತಿದ್ದರು. ಎಷ್ಟೋ ವೇಳೆ ನಾನೊಬ್ಬನೇ ಅಟ್ಟದ ಮೇಲೆ ಹೋಗುತ್ತಿದ್ದೆ. ಗಂಟೆಗಟ್ಟಲೆ ಆ ಅವಶೇಷದ ಕಡೆ ಮೂಕವಾಗಿ ದಿಟ್ಟಿಸುತ್ತಿದ್ದೆ. ಇದ್ದಕ್ಕಿದ್ದಂತೆ ಆ ಕೊರಡು ಅಲುಗಾಡುತ್ತಿತ್ತು. ಧೂಳೆಲ್ಲ ಉದುರಿ ಹೋಗುತ್ತಿತ್ತು. ಧೂಳಿನ ಜಾಗದಲ್ಲಿ ಚಿನ್ನ ಬೆಳ್ಳಿಯ ಹೊಳಪು, ಬಣ್ಣಬಣ್ಣದ ಅಲಂಕಾರಗಳು ! ಆಗ ಪಲ್ಲಕ್ಕಿಯ ಶೋಭೆಯೇ ಶೋಭೆ. ನವರತ್ನಖಚಿತವಾಗಿ ಕಂಗೊಳಿಸುತ್ತಿತ್ತು. ನಮ್ಮ ಬಾಪೂಕಾಕನಂತೆ ಆಜಾನುಬಾಹುವಾದ ದಿವ್ಯಪುರುಷರೊಬ್ಬರು ಗಂಭೀರವಾಗಿ ನಡೆದು ಬರುತ್ತಿದ್ದರು. ರಾಜೋಚಿತ ವೇಷಭೂಷಣ ಧರಿಸಿ ಅದನ್ನೇರುತ್ತಿದ್ದರು. ರಾಜವಾಡೆಯ ಬೋವಿಗಳು ಅದನ್ನು ಹೊತ್ತು ಮುಂದೆ ಸಾಗುತ್ತಿದ್ದರು. ಮರುಕ್ಷಣವೇ ಆ ದೃಶ್ಯ ಅದೃಶ್ಯ ! ಅದೇ ಮರದ ಕೊರಡು ; ಅದೇ ಧೂಳು, ಕಸ, ಜೇಡದ ಬಲೆ ! ದುಃಖದಿಂದ ಕಣ್ಣೀರು ಸುರಿಸುತ್ತಿದ್ದೆ.

1891ರ ನವರಾತ್ರಿಯ ಪಾಡ್ಯ ನನಗೆ ಚೆನ್ನಾಗಿ ನೆನಪಿದೆ. ಬೆಳಿಗ್ಗೆ ಹಾಸಿಗೆಯಲ್ಲಿ ಮಲಗಿದ್ದಂತೆಯೇ ಬಾಪುವಿನ ಧ್ವನಿ ಕೇಳಿಸಿತು : 'ಮರಿ ಜಹಗೀರುದಾರ, ಏಳು ; ಏಳೋ !' ಕಣ್ಣು ತೆರೆದೆ. ಎದ್ದುಹೋಗಿ ಬಾಪುವಿನ ಕೈಹಿಡಿದು ಕೇಳಿದೆ.

'ಬಾಪೂ, ದೇವಿಯನ್ನು ತರಲು ನಮ್ಮ ಮನೆಯ ಪಲ್ಲಕ್ಕಿಯನ್ನೇ ಕಳಿಸಿಬಿಡೋಣ, ಅಲ್ಲವೇ ?'

'ಅಯ್ಯೋ ಬಾಳಂಭಟ್ಟ, ನಿನಗೆಲ್ಲೋ ಹುಚ್ಚು ಕಣೋ, ಹುಚ್ಚು ! ನಮ್ಮ ಮನೇಲಿ ಪಲ್ಲಕ್ಕಿಯಾದರೂ ಎಲ್ಲಿದೆ ? ಹೋಗಿ ಮುಖ ತೊಳೆದುಕೊಂಡು ಬಾ.'

ಛೆ, ಬಾಪೂಗೆ ನಾನು ಹೇಳಿದ್ದು ಅರ್ಥವೇ ಆಗಲಿಲ್ಲ. ಬಹುಶಃ ದೊಡ್ಡವರೆಲ್ಲ ಹಾಗೆಯೇ. ನವ

ರಾತ್ರಿಯ ವಾದ್ಯ ಒಳ್ಳೆಯ ಶುಭದಿವಸ ಆಗಿತ್ತು. ನಮ್ಮ ಮನೆಯ ಮರದ ತುಂಡನ್ನು ದೇವಿಯ ಮುಂದಿಟ್ಟು ನಮಸ್ಕರಿಸಬೇಕಾಗಿತ್ತು. 'ದೇವಿ ಭವಾನಿ! ಇದನ್ನು ಮೊದಲಿನಂತೆ ಪಲ್ಲಕ್ಕಿ ಮಾಡು. ನಿನ್ನನ್ನು ಇದರಲ್ಲೆ ಕೂರಿಸಿ ಮನೆಗೆ ಕರೆದುಕೊಂಡು ಹೋಗುತ್ತೇವೆ' ಎಂದಿದ್ದರೆ ಸಾಕಾಗಿತ್ತು. ನಮ್ಮ ಕುಲಸ್ವಾಮಿನಿಯ ಕೃಪೆಯಿಂದ ಅದು ತಾನಾಗಿ ಪಲ್ಲಕ್ಕಿ ಆಗಿಹೋಗುತ್ತಿತ್ತು! ಅವಳಿಗೆ ಅಸಾಧ್ಯವಾದದ್ದು ಯಾವುದಿದೆ ? ನಮ್ಮ ತಾಯಿಗೂ ಈ ವಿಷಯ ಚೆನ್ನಾಗಿ ಗೊತ್ತಿದೆ. ಛೆ, ನಮ್ಮ ಬಾಪೂಗೆ ಇಷ್ಟೂ ಅರ್ಥವಾಗಬೇಡವೆ ? ಹುಂ, ದೊಡ್ಡವರಿಗೆ ಹೇಳಿ ಪ್ರಯೋಜನವಿಲ್ಲ ಎಂದು ಸುಮ್ಮನೆ ಅಲ್ಲಿಂದ ಹೊರಟುಬಿಟ್ಟೆ.

ಹೊರಗೆ ಕೊಂಬು ಕಹಳೆಗಳ ಸದ್ದಾಯಿತು. ದೇವಿಯ ಉತ್ಸವ ಬಂತು. ದೇವಸ್ಥಾನದ ಪಲ್ಲಕ್ಕಿಯಲ್ಲೇ ಅವಳು ಬಂದಿದ್ದಳು. ನಮ್ಮ ಮನೆಯ ಎದುರಿಗೆ ಬಂದರೆ ಸಾಕು, ಪಲ್ಲಕ್ಕಿ ತಟ್ಟನೆ ನಿಂತುಬಿಡುತ್ತದೆ. ಏನು ಮಾಡಿದರೂ ಅದು ಕದಲುವುದಿಲ್ಲ ಅನ್ನುತ್ತಾರೆ, ಬೋವಿಗಳು. ಮನೆಯ ಹಿರಿಯರು ಬಂದು ದೇವಿಯ ದರ್ಶನ ಪಡೆದರು. ಅನಂತರ ಆಕೆಯನ್ನು ಯಥೋಚಿತ ಸತ್ಕಾರಗಳೊಂದಿಗೆ ಒಳಕ್ಕೆ ಕರೆತಂದರು. ದೇವರ ಕೋಣೆಯಲ್ಲಿ ಪ್ರತಿಷ್ಠಾಪಿಸಿದರು.

ಆಗ ಸುಗ್ಗಿಯ ದಿನಗಳು. ಮನೆಯೊಳಗೆ ನೋಡಿದಲ್ಲೆಲ್ಲ ದವಸ ಧಾನ್ಯದ ರಾಶಿ. 'ಲಕ್ಷ್ಮಿ ಮನೆಯೊಳಗೆ ಹೆಜ್ಜೆ ಇಟ್ಟಿದ್ದಾಳೆ. ಆಕೆಯ ಕಾಲ ಗುಣ ಅದು' ಎನ್ನುತ್ತಾರೆ ಊರಿನವರು.

ಹತ್ತು ದಿನಗಳೂ ದಾಮೂ ಅಣ್ಣ ವ್ರತದಲ್ಲಿರುತ್ತಾರೆ. ದೇವಗೃಹದ ತುಂಬ ಹೂ ಹಣ್ಣು, ಧೂಪದೀಪ; ಪೂಜಾ ದ್ರವ್ಯಗಳ ಪರಿಮಳ. ಪಂಚ ಪಕ್ವ ಪರಮಾನ್ನಗಳ ನೈವೇದ್ಯ. ದೀಪದ ಬೆಳಕಿನಲ್ಲಿ ದಾಮೂ ಅಣ್ಣನ ಅಂಗಕಾಂತಿ, ಮುಖದ ತೇಜಸ್ಸು ಎದ್ದು ಕಾಣುತ್ತದೆ. ಅವರ ಬಾಯಿಂದ ಮಧುರವಾಗಿ, ಗಂಭೀರವಾಗಿ ಸಪ್ತಶತಿಯ ಮಂತ್ರಗಳು ನಿರರ್ಗಳವಾಗಿ ಹೊರಬರುತ್ತವೆ:

**ಯೋ ಮಾಂ ಜಯತಿ ಸಂಗ್ರಾಮೇ ಯೋ ಮೇ ದರ್ಪಂ ವ್ಯಪೋಹತಿ**
**ಯೋ ಮೇ ಪ್ರತಿಬಲೋ ಲೋಕೋ ಸ ಮೇ ಭರ್ತಾ ಭವಿಷ್ಯತಿ ||**
**ಯಾ ದೇವೀ ಸರ್ವಭೂತೇಷು ಬುದ್ಧಿರೂಪೇಣ ಸಂಸ್ಥಿತಾ**
**ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ||**
**ಯಾ ದೇವೀ ಸರ್ವಭೂತೇಷು ಶಕ್ತಿರೂಪೇಣ ಸಂಸ್ಥಿತಾ**
**ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ ||**
**ರೂಪಂ ದೇಹಿ ಜಯಂ ದೇಹಿ ಯಶೋ ದೇಹಿ ದ್ವಿಷೋ ಜಹಿ**
**ದೇಹಿ ಸೌಭಾಗ್ಯಮಾರೋಗ್ಯಂ ದೇಹಿ ದೇವಿ ಪರಂ ಸುಖಮ್ ||**

ಎಷ್ಟೊಂದು ಭಾವಸುಂದರ ಶ್ಲೋಕಗಳು! ಮಂತ್ರಮುಗ್ಧನಾಗಿ ಕೈ ಜೋಡಿಸಿ ಕುಳಿತುಕೊಳ್ಳುತ್ತಿದ್ದೆ. ಅರ್ಥ ಸರಿಯಾಗಿ ತಿಳಿಯುತ್ತಿರಲಿಲ್ಲ. ಆದರೂ ಅಣ್ಣ ಹೇಳುತ್ತಿದ್ದ ಸಾಲುಗಳನ್ನು ಮನಸ್ಸಿನಲ್ಲೆ ಹೇಳಿಕೊಳ್ಳುತ್ತಿದ್ದೆ.

ಎಷ್ಟೋ ಸಲ ಪೂಜಾಗೃಹಕ್ಕೆ ಒಬ್ಬನೇ ಹೋಗುವುದು, ದೇವಿಯ ಎದುರು ಕುಳಿತುಕೊಳ್ಳುವುದು, ನನ್ನ ಪುಟ್ಟ ಜೀವವನ್ನೆಲ್ಲ ಕಣ್ಣಲ್ಲಿ ತುಂಬಿಕೊಂಡು ಆಕೆಯ ಕಡೆಗೇ ದಿಟ್ಟಿಸುವುದು, ಶಂಖ, ಚಕ್ರ, ಗದೆ, ಪದ್ಮ! ಖಡ್ಗ ಶೂಲ ಪರಶು! ನೋಡನೋಡುತ್ತಾ ಮೆಲ್ಲಗೆ ಮಾತಾಡತೊಡಗಿದ್ದೆ. ಕೈ ನೀಡಿ ದೈನ್ಯದಿಂದ ಬೇಡಿಕೊಳ್ಳುತ್ತಿದ್ದೆ: 'ಹೇ, ದೇವಿ! ನಾನು ನಿನಗೆ ರಾಕ್ಷಸರನ್ನು ಕೊಲ್ಲಲು ಸಹಾಯ ಮಾಡುತ್ತೇನೆ. ನಿನ್ನ

ಕೈಯಲ್ಲಿರುವ ಖಡ್ಗ ಕೊಡುತ್ತೀಯಾ ? ಆ ಚಕ್ರ, ಆ ಗದೆ ನನಗೆ ಬೇಕು. ಆ ತ್ರಿಶೂಲ, ಆ ಗಂಡುಗೊಡಲಿ ನನಗೆ ಬೇಕು ಕೊಡುತ್ತೀ ತಾನೆ ? ನೀನು ಒಳ್ಳೆಯವಳು, ಕೊಟ್ಟುಬಿಡು ಮತ್ತೆ !'

ಯಾರಾದರೂ ಕೇಳಿಸಿಕೊಂಡರೆ, ಎನ್ನುವ ಭಯ. ಸುತ್ತಲೂ ಒಮ್ಮೆ ತಿರುಗಿ ನೋಡಿ ಪುನಃ ದೇವಿಯ ಕಡೆಗೇ ದಿಟ್ಟಿಸುತ್ತಿದ್ದೆ. ಸದಾ ಭವಾನಿಯದೇ ಧ್ಯಾನ.

ಒಂದು ದಿನ ಕನಸಿನಲ್ಲಿ ಆಕೆ ಪ್ರತ್ಯಕ್ಷ ಆದಳು. ನನ್ನೊಡನೆ ಮಾತನ್ನೂ ಆಡಿದಳು. ಬೆಳಗಾಗುತ್ತಲೇ ತಾಯಿಗೆ ಹೇಳಿದೆ · 'ನಿನ್ನೆ ನಿದ್ದೆಯಲ್ಲಿ ದೇವಿ ಬಂದಿದ್ದಳು.'

'ಹೌದೇ ? ಏನು ಹೇಳಿದಳು ಮಗು, ದೇವಿ ?' ಎಂದಳು ತಾಯಿ, ಅಚ್ಚರಿಯಿಂದ.

ನಾನು ಒಂದು ಕ್ಷಣ ತಡೆದು ಹೇಳಿದೆ : 'ದೇವಿ ಬಂದು ಹೇಳಿದರು - ''ನನಗೆ ನಿನ್ನ ಬಲಿ ಬೇಕು'' ಅಂತ!'

ತಾಯಿಯ ಹೃದಯಕ್ಕೆ ವಜ್ರಾಘಾತ ಆಯಿತು ನನ್ನ ಬಾಯಿಯ ಮೇಲೆ ಕೈಯಿಟ್ಟು ಹೇಳಿದಳು : 'ಹುಷ್, ಬೇಡ ; ಹಾಗನ್ನಬೇಡವೋ ; ಬಿಡ್ತು ಅನ್ನು !'

ತಾಯಿ ನನ್ನನ್ನು ದೇವಿಯ ಎದುರಿಗೆ ಕರೆದುಕೊಂಡು ಹೋದಳು. ಅಲ್ಲಿ ಅವಳ ಹೊಟ್ಟೆಯ ಸಂಕಟ ಹೊರಬಂತು : 'ಇನ್ನೂ ಬಲಿ ಬೇಕೆ ನಿನಗೆ ? ಮೊದಲು ಹುಟ್ಟಿದ ಎರಡು ಮಕ್ಕಳನ್ನು ಬಲಿತೆಗೆದುಕೊಂಡಿದ್ದು ಸಾಲದೆ ? ಇನ್ನೂ ನಿನಗೆ ತೃಪ್ತಿಯಾಗಲಿಲ್ಲವೆ ? ನಿನ್ನ ರಕ್ತದಾಹ ತೀರಲಿಲ್ಲವೆ ? ಹೆಮ್ಮಾರಿ ! ಈ ನನ್ನ ಮುದ್ದುಮಗುವನ್ನೂ ಏಕೆ ಕಿತ್ತುಕೊಳ್ಳುತ್ತಿ ? ಬೇಕಿದ್ದರೆ ನನ್ನನ್ನೇ ಬಲಿ ತೆಗೆದುಕೋ.... ತೆಗೆದುಕೊಂಡುಬಿಡು ನನ್ನ ಬಲಿ !'

ಆ ದಿನ ತಾಯಿ ಬಹಳ ಹೊತ್ತು ದೇವರ ಕೋಣೆಯಲ್ಲೇ ನನ್ನನ್ನೂ ಕೂರಿಸಿಕೊಂಡು ಕೂತಿದ್ದಳು. ಅದಾದ ಮೇಲೆ ಮರುವರುಷದ ನವರಾತ್ರಿ ಬಂದಿತು. ದೇವಿಯೂ ಮನೆಗೆ ಬಂದಳು. ಆದರೆ ನಮ್ಮ ತಾಯಿ ಮಾತ್ರ ಹೊರಟು ಹೋಗಿದ್ದಳು. ಹೋದದ್ದು ಹೇಗೆ ಎನ್ನುತ್ತೀರಾ ?

1892ರ ಜುಲೈ ತಿಂಗಳು. ಭಗೂರಿಗೆ ಮಾರಿಬೇನೆ ತಲೆಹಾಕಿತು. ನನಗೆ ಆ ದಿನ ಚೆನ್ನಾಗಿ ಜ್ಞಾಪಕವಿದೆ. ಅಮಾವಾಸ್ಯೆಯಂದು ನಮ್ಮ ಮನೆಯಲ್ಲಿ ಯಾರೋ ಹಿರಿಯರ ಶ್ರಾದ್ಧ. ಬೆಳಗಿನಿಂದಲೇ ತಾಯಿಗೆ ಭೇದಿ ಆಗುತ್ತಿತ್ತು. ಆದರೆ ಒಳಗಿನ ಕೆಲಸಕ್ಕೆ ಬೇರೆ ಯಾರೂ ಇರಲಿಲ್ಲ. ಪಿತೃ ಕರ್ಮವೂ ನಿಲ್ಲುವಂತಿರಲಿಲ್ಲ. ಜೀವ ಎಡಗೈಲಿ ಹಿಡಿದುಕೊಂಡು ಅಡಿಗೆ ಮಾಡಿ ಪೂರೈಸಿದಳು. ಪುನಃ ಒಮ್ಮೆ ಭೇದಿಯಾಯಿತು. ತುಟಿ ಪಿಟಕ್ಕೆನ್ನದೆ ಪುನಃ ಸ್ನಾನ ಮಾಡಿ ಬಂದಳು. ತನ್ನ ಬಗ್ಗೆ ಚಿಂತಿಸದೆ, ಕರ್ತವ್ಯದಲ್ಲೇ ದೃಷ್ಟಿ ನೆಟ್ಟ ಒಂದು ಗೃಹಿಣಿಯ ಸ್ವಭಾವ ಅವಳದು. ಅರ್ಧ ಪಂಕ್ತಿ ಬಡಿಸುತ್ತಲೇ ತಲೆ ಸುತ್ತಿತು. ಅಡಿಗೆಮನೆ ಸೇರಿಕೊಳ್ಳಲು ಧಾವಿಸಿದಳು. ಆದರೆ ಮಧ್ಯದಲ್ಲೇ ದೇವರ ಮನೆಯ ಬಾಗಿಲಲ್ಲಿ ಬಿದ್ದುಬಿಟ್ಟಳು. ಪುನಃ ಏಳಲಿಲ್ಲ. ಊಟ ಅಷ್ಟಕ್ಕೇ ನಿಂತಿತು. ನಮ್ಮ ತಂದೆ ದಾಮೂ ಅಣ್ಣ ಓಡಿಹೋಗಿ ನಡುಮನೆಯ ಕೋಣೆಗೆ ತಂದು ಮಲಗಿಸಿದರು. ಔಷಧೋಪಚಾರ ಮೊದಲಾಯಿತು. ಏನೂ ಉಪಯೋಗ ಆಗಲಿಲ್ಲ. ಆಷಾಢ ಶುದ್ಧ ಪಾಡ್ಯದ ದಿನ ಬೆಳಗಿನ ಜಾವ ಕೈಕಾಲು ಸೆಟೆದುಕೊಂಡಿತು.

ನಾವು ನಾಲ್ವರು ಮಕ್ಕಳನ್ನೂ ಕರೆದು ಪಕ್ಕದಲ್ಲಿ ನಿಲ್ಲಿಸಿದರು. ನಮ್ಮ ಬಾಳಾ ಎಲ್ಲರಿಗಿಂತ ಚಿಕ್ಕವನು. ಅವನಿಗೆ ನಾಲ್ಕು ತುಂಬಿ ಐದನೆಯ ವರುಷ. ಒಂದು ಕ್ಷಣವೂ ಅಮ್ಮನನ್ನು ಬಿಟ್ಟು ಇದ್ದವನಲ್ಲ. ನಮ್ಮ ತಾಯಿಯ ಕಣ್ಣಿಂದ ನೀರು ಉಕ್ಕಿ ಹರಿಯಿತು. ಅರ್ಧ ಮೂರ್ಛಾವಸ್ಥೆಯಲ್ಲೂ, 'ಅವನನ್ನು ಚೆನ್ನಾಗಿ

ನೋಡಿಕೊಳ್ಳಿ' ಎಂದು ಕೈಸನ್ನೆ ಮಾಡಿದಳು. ದೇವರ ಮನೆಯಿಂದ ಅಣ್ಣ ತುಳಸಿಪತ್ರ, ಗಂಗೋದಕ ತಂದು ಬಾಯಿಗೆ ಹಾಕಿದರು ಆ ಸಾಧ್ವಿ ಶಾಶ್ವತವಾಗಿ ಕಣ್ಣುಮುಚ್ಚಿಕೊಂಡಳು.

ಅಷ್ಟು ಹೊತ್ತೂ ಹೇಗೋ ಗಟ್ಟಿ ಮನಸ್ಸಿನಿಂದ ಇದ್ದ ಅಣ್ಣ ಶವದ ಪಕ್ಕದಲ್ಲಿ ಕುಸಿದು ಕುಳಿತರು ಅವರ ದುಃಖದ ಕಟ್ಟೆ ಒಡೆಯಿತು. ಎಳೆ ಮಗುವಿನಂತೆ ಗಳಗಳನೆ ಅಳತೊಡಗಿದರು ನಮ್ಮ ದೊಡ್ಡಪ್ಪ ಬಾಪೂಕಾಕಾ ನಾವು ನಾಲ್ವರನ್ನೂ ಅಪ್ಪಿಕೊಂಡು, 'ರಾಧೇ, ಓ ರಾಧೇ, ಈ ಮಕ್ಕಳನ್ನು ತಬ್ಬಲಿ ಮಾಡಿ ಹೇಗೆ ಹೋದೆ! ಈ ಅನಾಥರಿಗೆ ಇನ್ನು ಯಾರು ದಿಕ್ಕು? ದೈವಕ್ಕೆ ಕಣ್ಣಿಲ್ಲ, ಹೋದಳು, ನಮ್ಮ ಮನೆಯ ಭಾಗ್ಯಲಕ್ಷ್ಮಿ ಹೋಗಿಯೇ ಬಿಟ್ಟಳು' ಎಂದು ಬಿಕ್ಕಳಿಸುತ್ತಿದ್ದರು.

ನಮ್ಮ ತಾಯಿಗೆ ಆಗ ಮೂವತ್ತೆರಡು ವರ್ಷ ವಯಸ್ಸು. ಆದರೂ ಇಪ್ಪತ್ತಕ್ಕಿಂತ ಹೆಚ್ಚು ಹೇಳುವಂತಿರಲಿಲ್ಲ. ನಾವು ನಾಲ್ವರು ಎಳೆಯರು, ಪ್ರಾಣಕ್ಕಿಂತ ಮಿಗಿಲಾಗಿ ಪ್ರೀತಿಸುವ ಪತಿ, ಸುಖಸಂಪತ್ತು ಯಾವುದನ್ನೂ ನೋಡಲಿಲ್ಲ , ವಿಧಿ. ಎಷ್ಟೋ ರಾತ್ರಿ ನನಗೆ ನಿದ್ರೆ ಹತ್ತಲಿಲ್ಲ. ಕುಲದೇವತೆಯ ಹತ್ತಿರ ಹೋಗಿ ಕೇಳಿದರೆ ತಾಯಿಯನ್ನು ಬದುಕಿಸಿಕೊಟ್ಟಾಳು ಅಂದುಕೊಂಡೆ. ಕಡೆಗೊಂದು ದಿನ ದೇವಿ ಕನಸಿನಲ್ಲಿ ಕಾಣಿಸಿಕೊಂಡಳು. ಕೂಡಲೇ ಕೇಳಿದೆ : 'ನಾನು ನಿನಗೆ ಬಲಿಯಾಗುವುದಿಲ್ಲ ಅಂದಿದ್ದೇನೇನು ? ತಾಯಿಯನ್ನೇಕೆ ಬಲಿ ತೆಗೆದುಕೊಂಡೆ? ನಾನು ಹೆದರಿಕೊಳ್ಳಬಹುದೆಂದು ನಿನಗೆ ಹೆದರಿಕೆಯಾಯಿತೆ? ಇಲ್ಲ, ಇಲ್ಲ; ನಾನು ಚಿಕ್ಕವನಿರಬಹುದು, ಆದರೆ ಎಳ್ಳಷ್ಟೂ ಹೆದರಿಕೆಯಿಲ್ಲ. ನನ್ನನ್ನೇ ಬಲಿ ತೆಗೆದುಕೋ; ಆದರೆ ನನ್ನ ತಾಯಿಯನ್ನು ಬದುಕಿಸು!'

ನನ್ನ ಮಾತಿಗೆ ಸಮ್ಮತಿಸಿದಳೆಂದು ಕಾಣುತ್ತದೆ, ದೇವಿ ಮೃದುವಾಗಿ ನಕ್ಕಳು! ನನ್ನ ಮನಸ್ಸಿನ ಭಾರ ಇಳಿದಂತಾಯಿತು.





# ಹವಿಸ್ಸು ಎರಡು

1889ರ ಸೆಪ್ಟೆಂಬರ್ 9 ಒಂದು ಮಹತ್ವದ ದಿನ ಅಂದೇ ನನಗೆ ಶಾಲೆಯ ಮೊದಲ ದರ್ಶನ ಮುಖ್ಯೋಪಾಧ್ಯಾಯರು ವೃದ್ಧರು ; ದಯಾಳು ಹಾಗೂ ಸಹನಶೀಲ ಗೃಹಸ್ಥರು ಅವರಿಗೆ ಮಧ್ಯಾಹ್ನ ತೂಕಡಿಕೆ ಬಂದು ಕಣ್ಣು ಮುಚ್ಚಿದಾಗ ಅವರನ್ನು ಎಚ್ಚರಿಸುವ ಕಾರ್ಯಗೌರವವನ್ನೂ ನನಗೇ ವಹಿಸಿದ್ದರು! ನಾನು ಬರೆದ ಕವನಗಳನ್ನು ಓದಿಸಿ ಕೇಳಿ ಬೆನ್ನು ತಟ್ಟುತ್ತಿದ್ದರು 'ವ್ಹಾ, ಹೀಗೇ ಪ್ರಯತ್ನ ಮುಂದುವರಿಸು, ದೊಡ್ಡ ಕವಿ ಆಗುತ್ತಿ' ಎನ್ನುತ್ತಿದ್ದರು

ನಾನು ಆ ಶಾಲೆ ಬಿಡುವ ಸ್ವಲ್ಪ ಮೊದಲು ಅವರ ಸ್ಥಾನಕ್ಕೆ ಹೊಸಬರೊಬ್ಬರು ಬಂದರು. ರಾಜಕೀಯ ವಿಷಯದಲ್ಲಿ ಅವರಿಗಿಂತ ನಾನೇ ಹೆಚ್ಚು ಅರಿತಿದ್ದೆ ಆದ್ದರಿಂದ ಚರ್ಚೆ ಆರಂಭಿಸಿದೊಡನೆ, ಅವರು ಕೊಡುತ್ತಿದ್ದುದು ಒಂದೇ ಉತ್ತರ . 'ಕುಳಿತುಕೋ ; ಸಣ್ಣ ಬಾಯಲ್ಲಿ ದೊಡ್ಡ ತುತ್ತು ನುಂಗಲು ಹೋಗಬೇಡ !'

ನನ್ನ ಚಿಕ್ಕಂದಿನಲ್ಲೇನು, ಯೌವನದಲ್ಲೇನು, ಕಾವ್ಯರಚನೆಯ ಸಾಹಸದಿಂದ ಹಿಡಿದು ಸ್ವಾತಂತ್ರ್ಯ ಘೋಷಣೆ, ರಾಜ್ಯಕ್ರಾಂತಿ, ಸಾಮಾಜಿಕ ಕ್ರಾಂತಿ ಹಾಗೂ 'ಅಭಿನವ ಭಾರತ'ದ ಸಾಹಸದವರೆಗೆ ನನಗೆ ಉತ್ತೇಜನ ನೀಡುವ ಶಿಕ್ಷಕರು ಸಿಕ್ಕದಿದ್ದುದು ನನ್ನ ದುರ್ದೈವ! ಅದಕ್ಕೆ ಬದಲಾಗಿ ತೇಜೋಭಂಗ ಹಾಗೂ ಮನೋಭಂಗದ ಬೇಡಿಗಳಿಂದ ನನ್ನ ಕಾಲುಗಳನ್ನು ಹಿಂದಕ್ಕೆ ಜಗ್ಗುತ್ತಿದ್ದವರೇ ಹೆಚ್ಚು! ಮುಂದೆ ಧಾವಿಸಿ ಹೋಗಲು ಉಪಯೋಗವಾಗಲಿದ್ದ ನನ್ನ ಬಹುಪಾಲು ಶಕ್ತಿಯನ್ನೆಲ್ಲ ಅವರ ಭರ್ತ್ಸನೆ, ಖಂಡನೆಗಳ ಶೃಂಖಲೆಯನ್ನು ತುಂಡರಿಸುವುದರಲ್ಲೇ ವ್ಯಯಿಸಬೇಕಾಗಿ ಬಂತು ಅದು ಹಾಗಿರಲಿ.

ಹೊಸ ಮುಖ್ಯ ಶಿಕ್ಷಕರಿಗೆ ಶಾಲಾ ಅಧಿಕಾರಿಗಳ ಭೇಟಿ ಎಂದರೆ ದೊಡ್ಡ ಗಂಡಾಂತರ. ಆಗಿನ ಅವರ ತರತರದ ಮುಖಭಾವ, ಗಡಿಬಿಡಿಯ ಓಡಾಟ, ಗಾಬರಿಯ ಬೆದುರುನೋಟ ಹುಡುಗರಿಗೆಲ್ಲ ಮೋಜಿನ ದೃಶ್ಯವೇ ಸೈ. ಅಧಿಕಾರಿಗಳು ಬಂದಾಗ, ವ್ಯಾಯಾಮದಲ್ಲಿ ತರಬೇತಾದ ಹುಡುಗರು ಶಾಲೆಗೆ ಬಾರದಿದ್ದರೆ, ಮಾನ್ಯ ಮುಖ್ಯೋಪಾಧ್ಯಾಯರು ತಾವೇ 'ಸಿಂಗಲ್ ಬಾರ್', 'ಡಬ್ಬಲ್ ಬಾರ್' ಇತ್ಯಾದಿ ಕಸರತ್ತುಗಳನ್ನೆಲ್ಲ ಮಾಡಿ ತೋರಿಸಿಬಿಡುತ್ತಿದ್ದರು ! ನಾನು ಅನುಕರಣೆಯಲ್ಲಿ ಪ್ರವೀಣ. ಮನೆಯೊಳಗೆ ಆಗಾಗ್ಗೆ ಅವರ ಪಾತ್ರವನ್ನು ಚಾಚೂ ತಪ್ಪದೆ ಪ್ರದರ್ಶಿಸುತ್ತಿದ್ದೆ. ಪ್ರೇಕ್ಷಕವೃಂದ ಕಿಕ್ಕಿರಿದು ಸೇರುತ್ತಿತ್ತು ಶಿಕ್ಷಕರ ಧ್ವನಿ, ನಡಿಗೆ,

ವ್ಯಾಯಾಮ ಇನ್ನಿತರ ಹಾವಭಾವಗಳನ್ನು ಎಷ್ಟು ಸಲ ತೋರಿಸಿದರೂ ಗೆಳೆಯರಿಗೆ ತೃಪ್ತಿಯಿಲ್ಲ. ಚಪ್ಪಾಳೆ, ನಗು, ಗದ್ದಲವೋ ಗದ್ದಲ !

1890ರ ಬೇಸಿಗೆಯಲ್ಲಿ ನೆಂಟರಿಷ್ಟರು ಬಂದಿದ್ದರು. ಊರೂರಿನಿಂದ ಶುಭಹರಕೆ ತಂದಿದ್ದರು. ಆಗ ನಮ್ಮ ತಾಯಿಯೂ ಇದ್ದರು ಮನೆಯ ಮುಂದೆ ಚಪ್ಪರ ಎದ್ದಿತು. ಮೇಳವಾದನ ಮೊಳಗಿತು. ಶಾಸ್ತ್ರೋಕ್ತವಾಗಿ ನನಗೆ ಬ್ರಹ್ಮೋಪದೇಶ ಆಯಿತು. ದಾಜೀ ಘೋಪಾವರಕರರು ನನ್ನ ಸಂಧ್ಯಾ ವಂದನೆಯ ಗುರು. ಐದಾರು ದಿನಗಳಲ್ಲೆ ಅವರು ನಿವೃತ್ತರಾಗಬೇಕಾಗಿ ಬಂತು. ಕಾರಣ, ಅಷ್ಟರಲ್ಲೆ ನನಗೆ ಮಂತ್ರಗಳೆಲ್ಲ ಬಾಯಿಪಾಠವಾಯಿತು. ಆಗ ಅವರ ಆನಂದಕ್ಕೆ, ಆಶ್ಚರ್ಯಕ್ಕೆ ಪಾರವಿಲ್ಲ. ಅವರು ಮಾಡಿದ ನನ್ನ ಸ್ಮರಣಶಕ್ತಿಯ ಗುಣಗಾನವನ್ನು ಮರೆಯುವಂತೆಯೇ ಇಲ್ಲ. ಮರೆತರೆ ಆ ಹೊಗಳಿಕೆ ಹುಸಿಯಾದೀತೆಂಬ ಅಂಜಿಕೆ !

ದಾಮೂ ಅಣ್ಣ ಹುಡುಗರನ್ನು ಹದ್ದಿನಲ್ಲಿಡಲು, ಮಿತಿಮೀರಿದಾಗ ಹೊಡೆಯುತ್ತಿದ್ದುದುಂಟು. ಆದರೆ ಎಂದೂ ನನ್ನ ಮೈ ಮುಟ್ಟಿದವರೇ ಅಲ್ಲ. ಈ ಪಕ್ಷಪಾತಕ್ಕಾಗಿ ಅವರನ್ನು ಮನೆಯವರೆಲ್ಲ ಆಕ್ಷೇಪಿಸುತ್ತಿದ್ದರು. ನನ್ನ ಮೇಲಿನ ಅವರ ಅಕ್ಕರೆ ಯಾವಾಗಲೂ ಒಂದು ತೂಕ ಹೆಚ್ಚು. ಇಷ್ಟಾದರೂ ಒಮ್ಮೆ ನನ್ನ ಚೇಷ್ಟೆ ಅತಿಯಾಯಿತು ; ಅವರ ಪ್ರೀತಿ, ಸಹನೆಗಳನ್ನು ಸ್ಫೋಟಗೊಳಿಸಿತು. 'ಇವತ್ತು ಅವನಿಗೆ ತಕ್ಕ ಶಾಸ್ತಿ ಮಾಡದೆ ಬಿಡುವುದಿಲ್ಲ' ಎಂದು ಅವರು ಮಹಡಿಯ ಮೇಲೆ ಗಟ್ಟಿಯಾಗಿ ಪ್ರತಿಜ್ಞೆ ಮಾಡುತ್ತಿದ್ದರು. ನನ್ನ ಜಂಘಾಬಲವೇ ಉಡುಗಿಹೋಯಿತು. ನಡುಮನೆಯಲ್ಲಿ ಅವಿತುಕೊಳ್ಳಲು ಇನ್ನೇನು ಹೊರಡಲಿದ್ದೆ. ಅಷ್ಟರಲ್ಲೆ ನಮ್ಮ ಬಾಬಾ ಆಪದ್ಬಾಂಧವನಂತೆ ಬಂದ.

'ನೋಡೋ, ಈ ಪೆಟ್ಟಿಗೆ ಖಾಲಿ ಇದೆ. ಒಳಗೆ ಕುಳಿತುಬಿಟ್ಟರೆ ಆಯಿತು' ಎಂದ. ನಾನು ಒಳಗೆ ಸೇರಿ ಬಾಗಿಲು ಹಾಕಿಕೊಂಡೆ. ಅಣ್ಣ ರೋಷಾವೇಶದಿಂದ ದಡದಡನೆ ಮಹಡಿ ಇಳಿದು ಬಂದರು. ನಾನು ಅಷ್ಟರಲ್ಲೆ ಮಾಯವಾಗಿದ್ದುದನ್ನು ಕಂಡು ಅವರಿಗೆ ಫಕ್ಕನೆ ನಗು ಬಂತು. 'ಘಟಿಂಗ ! ಮನೆಹಾಳ ! ಎಲ್ಲೊ ಹಾಳಾಗಿಹೋದ!' ಎಂದು ಶಪಿಸುತ್ತಾ ಮೇಲಕ್ಕೆ ವಾಪಸಾದರು. ಅಂತೂ ಪೆಟ್ಟು ತಪ್ಪಿಸಿಕೊಂಡೆ. ಪೆಟ್ಟಿಗೆಯೊಳಗೆ ನನಗೆ ನಾನೇ 'ಶಿವಾಜಿ' ಯ ಪಟ್ಟ ಕಟ್ಟಿಕೊಳ್ಳುತ್ತಿದ್ದೆ! ಆದರೆ ಮರುಕ್ಷಣವೇ ರಾಜತ್ವದ ಜಂಭವೆಲ್ಲ ಜರ್‍ರನೆ ಇಳಿದುಹೋಯಿತು. ಉಸಿರಾಟ ಕಷ್ಟವಾಯಿತು. ಬವಳಿ ಬಂದಂತಾಗಿ ಹುಳುವಿನಂತೆ ವಿಲಿಗುಟ್ಟತೊಡಗಿದೆ. ಸದ್ಯ, ಅಣ್ಣನೇನೋ ಬೇಗ ಜಾಗ ಬಿಟ್ಟಿದ್ದರು ! ಆದರೆ ಹೊರಗೆ ಪೆಟ್ಟಿಗೆಯ ಚಿಲಕ ತಾನಾಗಿ ಹಾಕಿಕೊಂಡುಬಿಟ್ಟಿತ್ತು ! ಬಾಬಾ ಓಡೋಡಿ ಬಂದು ಬಾಗಿಲು ತೆಗೆದ. ಆ ಹೊತ್ತಿಗೆ ನಾನು ತೇಲುಗಣ್ಣು ಮೇಲುಗಣ್ಣು ಆಗಿದ್ದೆ! ಒಳಗಿಂದ ತಾಯಿ ನೀರು ತಂದು ತಟ್ಟಿದ ಮೇಲೆ ಬದುಕಿತು ನನ್ನ ಬಡಜೀವ !

ಒಂದು ಸಲ ಬಾಬಾ ಇಂಗ್ಲಿಷ್ ಶಬ್ದಗಳನ್ನು ಸರಿಯಾಗಿ ಬಾಯಿಪಾಠ ಮಾಡಿರಲಿಲ್ಲ. ಅಣ್ಣನಿಗೆ ರೇಗಿತು. ಅಂಗಳದಲ್ಲಿ ಆ ತುದಿಯಿಂದ ಈ ತುದಿಯವರೆಗೂ ಕಿವಿ ಹಿಡಿದುಕೊಂಡು ಓಡಾಡುತ್ತಾ ಗಟ್ಟಿ ಮಾಡಿಕೊಂಡು ಬಾ ಎಂದು ಶಿಕ್ಷೆ ವಿಧಿಸಿದರು. ಆದರಂತೆ ಬಾಬಾ ಆ ಪದ ಜಪಿಸುತ್ತಾ ಠಳಾಯಿಸತೊಡಗಿದ. ನನಗೆ ಏಕೋ ಅದು ಸರಿಬೀಳಲಿಲ್ಲ. ಮೆಲ್ಲಗೆ ಹೋಗಿ ಹೇಳಿದೆ : 'ರೇ ಬಾಬಾ, ಬಾಯಿಪಾಠ ಮಾಡುವುದು ತಾನೆ ಮುಖ್ಯ ? ಆ ಕೆಲಸ ಓಡಾಡುತ್ತಾ ಮಾಡಿದರೆ ಆಗುತ್ತದೆ, ಕುಳಿತು ಮಾಡಿದರೆ ಆಗುವುದಿಲ್ಲ ಎಂದು ಎಲ್ಲಿ ಹೇಳಿದೆ ? ಆ ತುಳಸಿ ಕಟ್ಟೆಯ ಹಿಂದೆ ಕುಳಿತು ಹೇಳಿಕೋ. ಅಣ್ಣ ಮಹಡಿಯಿಂದ ಇಳಿದು ಬಂದರೆ ನಾನು ತಿಳಿಸುತ್ತೇನೆ, ನೀನು ತಟ್ಟನೆ ಮೇಲೆದ್ದು ಕಿವಿ ಹಿಡಿದುಕೊಂಡು ಹೆಜ್ಜೆ ಹಾಕಿದರೆ

ಆಯಿತು !' ನನ್ನ ನಲಹೆ ಅವನಿಗೆ ಮೆಚ್ಚಿಕೆಯಾಯಿತು.

ತಾಯಿ ತೀರಿಹೋದ ನಂತರ ದಾಮೂ ಅಣ್ಣನಿಗೆ ಹಳೆಯ ಮನೆ ಹಿಡಿಸಲಿಲ್ಲ. ಅದರ ಪಕ್ಕದಲ್ಲೆ ಅವರು ಭವ್ಯವಾಗಿ ಎರಡಂತಸ್ತಿನ ಹೊಸ ಮನೆ ಕಟ್ಟಿಸುತ್ತಿದ್ದರು - ಹೆಂಡತಿ ಮಕ್ಕಳೊಡನೆ ಅಲ್ಲಿ ಸಂಸಾರ ಹೂಡುವ ಆಸೆಯಿಂದ. ಆದರೆ ಈಗ ? ತಾಯಿ ಅಳಿದು, ತಬ್ಬಲಿಗಳು ಮಾತ್ರ ಉಳಿದಿದ್ದೆವು. ಹೊಸ ಕಟ್ಟಡ ಹಾಗೂ ಹೀಗೂ ಮುಗಿಯಿತು. ಅಣ್ಣ ನಾಲ್ವರು ಮಕ್ಕಳನ್ನೂ ಸಾಗಿಸಿಕೊಂಡು ಹೊಸ ಮನೆಗೆ ಬಂದರು. ಹಳೆಯ ಮನೆಯಲ್ಲಿ ದೊಡ್ಡಪ್ಪ ಬಾಪೂಕಾಕಾನ ಒಂಟಿ ಬಾಳು ಮುಂದುವರಿಯಿತು.

ದಾಮೂ ಅಣ್ಣನ ವಯಸ್ಸು ಆಗ 40-42 ವರ್ಷ ಇದ್ದೀತು. ಯಾರು ಎಷ್ಟೇ ಒತ್ತಾಯಿಸಿದರೂ ಅವರು ಎರಡನೆಯ ಮದುವೆಗೆ ಒಪ್ಪಲಿಲ್ಲ. ತಾಯಿಗಿಂತ ಹೆಚ್ಚಾಗಿ ತಾವೇ ಮಕ್ಕಳ ಸೇವೆ ಮಾಡುತ್ತಿದ್ದರು. ಒಂದೆರಡು ವರ್ಷದ ನಂತರ ನಾನು ಮತ್ತು ಬಾಬಾ ಅಡಿಗೆ ಕೆಲಸ ವಹಿಸಿಕೊಂಡೆವು. ಬಾಬಾ ಪಾಕಶಾಸ್ತ್ರದಲ್ಲಿ ಪ್ರವೀಣ. ಅವನದು ನಳನನ್ನೂ ನಾಚಿಸುವಂಥ ಹಸ್ತಗುಣ. ನಾನು ಆ ಕ್ಷೇತ್ರದಲ್ಲಿ ಅಷ್ಟಕ್ಕಷ್ಟೆ. ಕಡೆಯವರೆಗೂ ಹಾಗೆಯೇ ಅನ್ನಿ !

ನಮ್ಮ ಮನೆಯ ಹತ್ತಿರದಲ್ಲೆ ಒಂದು ಹಾಳು ಜಾಗ. ಅಲ್ಲಿ ಮುಳ್ಳು, ಕಲ್ಲು, ಗಿಡಗಂಟೆ ತುಂಬಿತ್ತು. ಹಿಂದೆ ಅಲ್ಲೊಂದು ಹದಿನಾಲ್ಕು ಚೌಕದ ರಾಜವಾಡೆ ಇತ್ತಂತೆ. ಅದರ ನಡುವೆ ಒಂದು ಹಾಳುಬಾವಿ. ಆ ಬಾವಿಯ ಒಳಗೆ ಒಂದು ಗುಪ್ತ ನೆಲಮಾಳಿಗೆ ಇದೆಯಂತೆ. ಅದರ ತುಂಬ ಪೇಶ್ವೆಗಳ ಕಾಲದ ನಗನಾಣ್ಯಗಳ ರಾಶಿ. ಒಂದು ಭೀಕರ ಘಟಸರ್ಪ ಆ ನಿಧಿಗೆ ಕಾವಲು ! ಆ ಸರ್ಪದ ಹೆಡೆ ಮನುಷ್ಯರ ತೊಡೆಗಿಂತಲೂ ದೊಡ್ಡದು ! ಯೋಗ್ಯ ವಾರಸುದಾರ ಬಂದೊಡನೆ ಆ ನಿಧಿ ಒಪ್ಪಿಸಿ, ಸರ್ಪ ಸದ್ದಿಲ್ಲದೆ ಹೊರಟು ಹೋಗುತ್ತದಂತೆ ! 'ದೇವರಾಣೆಗೂ ಸುಳ್ಳಲ್ಲ' ಎನ್ನುತ್ತಿದ್ದರು, ಊರಿನವರೆಲ್ಲ. ಎಷ್ಟೋ ಸಲ ಒಬ್ಬನೆ ಹೋಗಿ ಬಾವಿಯ ಕಲ್ಲಿನ ಮೇಲೆ ಕುಳಿತುಕೊಳ್ಳುತ್ತಿದ್ದೆ. ಕಲ್ಪನೆಯ ಕುದುರೆ ಏರಿ, ಸವಾರಿ ಹೊರಡುತ್ತಿದ್ದೆ.

ನಮ್ಮ ತಾಯಿ ಹೇಳುತ್ತಿರಲಿಲ್ಲವೆ ? ಶಿವಾಜಿ ಮಹಾರಾಜರು ತೋರಣ ಗಡ ಹಿಡಿದಾಗ ಅವರಿಗೆ ಹಣದ ಕೊಪ್ಪರಿಗೆ ಸಿಕ್ಕಿತಂತೆ. ಅದರಿಂದ ಅವರು ಸೈನ್ಯ ಕಟ್ಟಿದರಂತೆ ; ಸ್ವರಾಜ್ಯ ಸ್ಥಾಪಿಸಿದರಂತೆ. ಅವರಿಗೆ ಭವಾನಿಯ ಅನುಗ್ರಹ ಆಗಿತ್ತಂತೆ. ನನಗೂ ಒಬ್ಬ ಭವಾನಿ ಇದ್ದಾಳೆ ! ದಾಮೂ ಅಣ್ಣ ಈಗ ಅವಳನ್ನು ಖಂಡೋಬಾನ ದೇವಸ್ಥಾನದಿಂದ ತಂದು ಮನೆಯಲ್ಲೇ ಇಟ್ಟಿದ್ದರು. 'ದೇವಿ ಅನುಗ್ರಹಿಸು' ಎಂದು ಕೇಳಿಕೊಳ್ಳುತ್ತೇನೆ. 'ವತ್ಸಾ, ಹಾಗೇ ಆಗಲಿ' ಎನ್ನುತ್ತಾಳೆ. ಆ ಸರ್ಪ ಬರುತ್ತದೆ ; ನನ್ನನ್ನು ಕರೆದುಕೊಂಡು ಹೋಗಿ ನಿಧಿ ಒಪ್ಪಿಸುತ್ತದೆ. ಅದರಿಂದ ಸೈನ್ಯ ಕಟ್ಟುತ್ತೇನೆ. ಸ್ವರಾಜ್ಯ ಸ್ಥಾಪಿಸುತ್ತೇನೆ. ನಾನೂ ಶಿವಾಜಿ ಆಗುತ್ತೇನೆ !

ಊರಾಚೆ ಹಳೆಯ ಮಠಮಂದಿರಗಳು ಹಾಗೂ ಮಸೀದಿ ಇದೆ. ಮಠದ ಆವರಣದಲ್ಲಿರುವ ಪಾರಿಜಾತದ ಮರ ಮರೆಯಲೆಂತು ? ಅದರ ಎಲೆಗಳ ಸೊಂಪು ಕಂಡು ತಾಯಿಯ ನೆನಪಾಗುತ್ತಿತ್ತು. ಆಕೆಗೆ ಹಸಿರು ಸೀರೆ ಬಲು ಮೆಚ್ಚಂತೆ ! ಬೆಳಿಗ್ಗೆ ಅಚ್ಚ ಬಿಳಿಯ ಹೂಗಳಿಂದ ಗಿಡವೆಲ್ಲ ಮುಚ್ಚಿಹೋಗಿರುತ್ತಿತ್ತು. ಅದನ್ನು ಕಂಡು, ನನ್ನ ತಾಯಿಯ ಮುಗುಳ್ನಗೆ ಕಣ್ಮುಂದೆ ಸುಳಿಯುತ್ತಿತ್ತು. ಮರದ ಕಾಂಡ ಅಪ್ಪಿನಿಂತಾಗ ಉದುರಿ ಬೀಳುತ್ತಿದ್ದ ಹೂಗಳು ನನ್ನ ಭಾಗಕ್ಕೆ ತಾಯಿಯ ವಾತ್ಸಲ್ಯದ ಕಿರಣಗಳು !

ಇನ್ನು ನನ್ನ ಪ್ರೀತಿಯ ನದಿ ದಾರಣಾ ! ದೇವರು ಅದನ್ನು ನನಗೆಂದೇ ನಿರ್ಮಿಸಿದ್ದಾನೆ ಅಂದು ಕೊಂಡಿದ್ದೆ, ಬಹು ದಿನಗಳವರೆಗೆ. ಅದರ ನೀರಿನ ಸವಿಯೇ ಸವಿ. ಅದರ ಕಲರವದಲ್ಲಿ ಅಡಗಿದ್ದ ಅರ್ಥ

ಗಳು ನೂರಾರು. ನನ್ನ ಬಾಲಮನಧ ಕ್ಷಿತಿಜದಲ್ಲಿ ಕ್ಷಣಕ್ಕೊಂದು ಕಾಮನಬಿಲ್ಲು ಕಟ್ಟುತ್ತಿತ್ತು, ದಾರಣಾ ನದಿಯ ದೃಶ್ಯ. ಮನೆಯವರಿಗೆಲ್ಲ ಕುಡಿಯುವುದಕ್ಕೆ ಆ ನದಿಯ ನೀರೇ ಆಗಬೇಕು. ಇರುವಷ್ಟು ದಿನ ನಿತ್ಯವೂ ನೀರು ಹೊತ್ತು ತರುತ್ತಿದ್ದಳು ನನ್ನ ತಾಯಿ. ಎಷ್ಟೋ ದಿನ ನಾನೂ ಅವಳ ಹಿಂದೆಯೇ ಹೋಗಿ ಬಂದಿದ್ದೇನೆ. ಆ ದಾರಿಯ ಅಂಗುಲ ಅಂಗುಲವನ್ನೂ ನಾನು ಬಲ್ಲೆ. ಎಡಬಲದ ಗಿಡಗಳು ದಾರಿಯಲ್ಲಿ ಅಲ್ಲಲ್ಲೆ ದಿನವೂ ಹೊಸಹೊಸ ಹೂವಿನ ರತ್ನಗಂಬಳಿ ಹಾಸಿರುತ್ತಿದ್ದವು - ನನ್ನ ತಾಯಿಯ ಸ್ವಾಗತಕ್ಕೆ! ಸುಮಾರು ಅರ್ಧ ದಾರಿಯಲ್ಲೊಂದು ಹುಣಸೆಯ ಮರ. ಅದರ ಕಾಂಡದ ಮೇಲೆ ಏನೇನು ಗುರುತುಗಳಿವೆ ಎಂಬುದನ್ನು ಇಂದಿಗೂ ಹೇಳಬಲ್ಲೆ. ಕಣ್ಣು ಕಟ್ಟಿ ಬಿಟ್ಟರೂ, ಈಗಲೂ ಆ ಮರದ ನೆರಳಿನಲ್ಲಿ ಹೋಗಿ ನಿಲ್ಲಬಲ್ಲೆ - ಈಗಲೂ ಅದಿದ್ದರೆ! ನದಿಯಿಂದ ಬರುವಾಗ ತಾಯಿ ಅಲ್ಲಿ ನಿಂತು, ಒಂದು ಗಳಿಗೆ ದಣಿವು ಆರಿಸಿಕೊಳ್ಳುತ್ತಿದ್ದಳು. ಆಗ ನಾನು ಹುಣಸೆಯ ಹೀಚುಗಳ ಕಡೆಗೆ ಆಸೆಗಣ್ಣಿನಿಂದ ನೋಡುತ್ತಿದ್ದೆ!

ನಮ್ಮ ಮಹಡಿಯ ಮೇಲಿನ ಅಟ್ಟದಲ್ಲಿ ಎಷ್ಟೋ ಹಳೆಯ ಕಾಲದ ಶಸ್ತ್ರಗಳಿದ್ದವು ; ಕತ್ತಿ, ಕಠಾರಿ, ಗುಪ್ತಿ, ಬಿಲ್ಲು - ಬಾಣ ಇತ್ಯಾದಿ. ದಾಮು ಅಣ್ಣ ಕೋವಿಯನ್ನೂ ಇಟ್ಟಿದ್ದರು. ನಮ್ಮ ಬಾಬಾ ಬಾಣ ಪ್ರಯೋಗದಲ್ಲಿ ನಿಸ್ಸೀಮ. ಅದರಿಂದ ಕಣಗಲೆ ಹೂ ಉದುರಿಸುತ್ತಿದ್ದ. ಕಾಗೆಗಳಿಗೂ ಅವನು ತನ್ನ ಬಾಣದ ರುಚಿ ತೋರಿಸಿದ್ದಾನೆ. ಅವನ ಶಿಷ್ಯರಲ್ಲಿ ಮೊದಲಿಗನೂ ನಾನೇ, ಕೊನೆಯವನೂ ನಾನೇ. ಒಮ್ಮೆ ಗುರು-ಶಿಷ್ಯರಿಗೆ ಸ್ಪರ್ಧೆ ಬಿತ್ತು. ಬಾಬಾ ಒಂದೇ ಸಮನೆ ಕತ್ತಿ ತಿರುಗಿಸುತ್ತಿದ್ದ. ನಾನು ದೂರದಿಂದ ಅವನಿಗೆ ತಾಗುವಂತೆ ಬಾಣ ಹೊಡೆಯಬೇಕಾಗಿತ್ತು. ಎರಡು ಮೂರು ಸಲ ಬಾಣ ಬಿಡುವವನಂತೆ ನಟಿಸಿದೆ, ಆದರೆ ಬಿಡಲಿಲ್ಲ. ಕಡೆಗೆ, ಅವನು ವೇಗ ಕಡಿಮೆ ಮಾಡುತ್ತಲೇ, ಹೊಡೆದುಬಿಟ್ಟೆ. ಅವನ ಬೆರಳಿನಿಂದ ಚಿಲ್ಲನೆ ರಕ್ತ ಹೊರಟಿತು. ಕೈಯೊಳಗಿದ್ದ ಕತ್ತಿ ಠಣ್ಣನೆ ನೆಲಕ್ಕೆ ಬಿತ್ತು. ನಾನು ವಿಜಯೋತ್ಸಾಹದಿಂದ ಘೋಷಣೆ ಹಾಕಿದೆ : 'ಕ್ಷತ್ರಿಯ ತೇಜಸ್ಸಿನ ರುಚಿ ನೋಡಿದೆಯೋ ?'

ನನ್ನ ಲೇಖನ ವ್ಯವಸಾಯ ಮಹಾಕಾವ್ಯದಿಂದಲೇ ಆರಂಭ! ಬೆಂಕಿ ಪೊಟ್ಟಣದಷ್ಟು ಅಗಲಕ್ಕೆ ತಾಳೆಯ ಗರಿ ಕತ್ತರಿಸಿದೆ. ಒಂದೊಂದು ಅಧ್ಯಾಯದ ಹಾಳೆಯನ್ನೂ ಪ್ರತ್ಯೇಕವಾಗಿ ದಾರದಲ್ಲಿ ಸುತ್ತಿಟ್ಟೆ. ಅದಕ್ಕೆ ಗ್ರಂಥದ ಕಳೆ ಬರಲೆಂದು, ಹಾಳೆಗಳ ಅಂಚಿನಲ್ಲಿ ನಾಲ್ಕೂ ಕಡೆ ಕೆಂಪು ರೇಖೆಯ ಚೌಕಟ್ಟು ಎಳೆದೆ. ಅಲ್ಲಿಗೆ, ನನ್ನ ದೃಷ್ಟಿಯಲ್ಲಿ, ಗ್ರಂಥ ತಯಾರಿಕೆಯ ಮಹತ್ವದ ಭಾಗವೆಲ್ಲ ಮುಗಿಯಿತು. ಮೇಲೆ 'ಶ್ರೀ ಗಣೇಶಾಯ ನಮಃ' ಸಹ ಬರೆದಾಯಿತು. ಇನ್ನು ಉಳಿದುದೆಂದರೆ ಒಳಗೆ ಭರ್ತಿ ಮಾಡುವುದಷ್ಟೆ! ಎಷ್ಟರ ಕೆಲಸ ಅದು! ಅದನ್ನೂ ಪ್ರಾರಂಭಿಸುವವನೇ ಇದ್ದೆ. ಅಷ್ಟರಲ್ಲೆ 'ಶ್ರೀ ಗಣೇಶಾಯ ನಮಃ' ಕಣ್ಣಿಗೆ ಬಿತ್ತು. ವಕ್ರವಕ್ರವಾದ ದಪ್ಪ ಅಕ್ಷರಗಳು! ಏಕೋ ಅದು ನನಗೆ ಸರಿಬೀಳಲಿಲ್ಲ. ಮೊದಲು ಬರವಣಿಗೆ ಅಂದವಾಗಲಿ, ಆಮೇಲೆ ಗ್ರಂಥದ ಕೆಲಸ ಕೈಗೆತ್ತಿಕೊಳ್ಳೋಣ ಎಂದು ಸುಮ್ಮನಾದೆ! ಗ್ರಂಥ ರಚನೆಯ ಬದಲು ಅಕ್ಷರ ತಿದ್ದಬೇಕಾಗಿ ಬಂತು!

ಹನ್ನೆರಡು ವರ್ಷ ತುಂಬುವ ವೇಳೆಗೆ ಓವಿ, ಘಟಕಾ, ಆರ್ಯಾ ಇತ್ಯಾದಿ ಛಂದಸ್ಸುಗಳನ್ನು ರೂಢಿ ಮಾಡಿ ಕೊಂಡಿದ್ದೆ. ನನ್ನ ಕವನಗಳನ್ನು ಪುಣೆಯ ಪತ್ರಿಕೆಗಳಿಗೆ ಕಳುಹಿಸತೊಡಗಿದೆ. ಇದ್ದಕ್ಕಿದ್ದಂತೆ ಒಂದು ದಿನ ನನ್ನ 'ಸ್ವದೇಶಿ ಗೀತೆ' ಅಚ್ಚಾಗಿ ಬಂದೇಬಿಟ್ಟಿತು. ಅದೂ ವರ್ತಮಾನ ಪತ್ರಿಕೆಯಲ್ಲಿ! ಅದರಲ್ಲೂ ಪುಣೆಯ 'ಜಗದ್ಧಿತೇಚ್ಛು' ಪತ್ರಿಕೆ! ಅಂದಮೇಲೆ ಬರೆದದ್ದು ಕವಿತೆಯೇ ಸರಿ ; ಬರೆದವನು ಕವಿಯೇ ಸರಿ. ನನ್ನನ್ನು ಕವಿ ಅಲ್ಲ ಅನ್ನುವ ಎದೆಗಾರ ಯಾರಿದ್ದಾನೋ ಒಂದು ಕೈ ನೋಡಿಯೇ ಬಿಡುತ್ತೇನೆ ಅಂದು

ಕೊಂಡೆ!

ನಮ್ಮ ತಂದೆ ದಾಮೂ ಅಣ್ಣ ಲೋಕಮಾನ್ಯ ತಿಲಕರ ಭಕ್ತರು. ತಿಲಕರ 'ಕೇಸರಿ' ಪತ್ರಿಕೆ ಮನೆಗೆ ತರಿಸುತ್ತಿದ್ದರು. ನನ್ನಿಂದ ಅದನ್ನು ಓದಿಸಿ ಕೇಳುತ್ತಿದ್ದರು. ಆಗ ನನಗೆ ಮುಂಬೈನ 'ಗುರಾಖೀ', ಪುಣೆಯ 'ಜಗದ್ಧಿತೇಚ್ಛು' ಮತ್ತು 'ಪುಣೆವೈಭವ' ಹೆಚ್ಚು ಇಷ್ಟ. ಅವುಗಳ ಚಂದಾದಾರರಿಗೆ ಎಷ್ಟೋ ಬಗೆಯಲ್ಲಿ ದಮ್ಮಯ್ಯಗುಡ್ಡೆ ಹಾಕಿ, ತಂದು ಓದುತ್ತಿದ್ದೆ. ಗೆಳೆಯರಿಗೂ ಓದಿ ಹೇಳುತ್ತಿದ್ದೆ.

ಮನೆಯಲ್ಲೊಂದು ಹಳೆಯ ಪುಸ್ತಕಗಳ ರಾಶಿ. ಗೋಡೆಯ ಬದಿಗೆ ಎತ್ತರದಲ್ಲಿದ್ದ ಒಂದು ಅಡ್ಡ ಹಲಗೆಯ ಮೇಲೆ ಅದಕ್ಕೆ ವಸತಿ. ಭಾನುವಾರ ಬಂತೆಂದರೆ ಅದೇ ನನ್ನ ಸಂಶೋಧನಾಲಯ. ಒಮ್ಮೆ ಅಲ್ಲಿ ತಾಳೆಗರಿಯ ಕಟ್ಟೊಂದು ಕಣ್ಣಿಗೆ ಬಿತ್ತು. ಒಳಗೆಲ್ಲ ಕೆಂಪು, ಹಸಿರು ಶಾಯಿಯಲ್ಲಿ ಆಕರ್ಷಕವಾಗಿ ಬರೆದ ಸಂಸ್ಕೃತದ ಸಾಲುಗಳು! ಅರ್ಥ ತಿಳಿಯುತ್ತಿರಲಿಲ್ಲವಾದರೂ, ಶಬ್ದಗಳು ಓದಿಗೆ ಹಿತವಾಗಿದ್ದವು. ಏನೋ ಕೆಲಸಕ್ಕೆ ಅತ್ತ ಬಂದ ಅಣ್ಣ ಪುಸ್ತಕ ಕಿತ್ತುಕೊಂಡರು. ದುಶ್ಯಕುನ ಕಂಡವರಂತೆ ಗಾಬರಿಯಿಂದ 'ಲೋ ಹುಚ್ಚಾ, ಏನು ಮಾಡ್ತಹೊರಟಿದ್ದೀ? ಇವು ಅರಣ್ಯಕಗಳು; ಮನೆಯಲ್ಲಿ ಓದಬಾರದು. ಓದಿದರೆ ಮನೆಯೇ ಅರಣ್ಯವಾಗಿಬಿಡುತ್ತದೆ' ಎಂದು, ಅದನ್ನು ಮೇಲಿಟ್ಟು ಹೋದರು.

ಅವರು ಹೇಳಿದ್ದು ಒಂದು ದೃಷ್ಟಿಯಿಂದಂತೂ ನಿಜವಾಗಿತ್ತು. ಅರಣ್ಯಕ ಹಾಗೂ ಉಪನಿಷತ್ತುಗಳ ಸಾರ ಗ್ರಹಿಸಿದವನಿಗೆ ಸಂಸಾರದ ಮಾಯಾಮೋಹಗಳು ತೊರೆದುಹೋಗುತ್ತವೆ. ಆಗ, ಬುದ್ಧನಂತೆ ಪ್ರಾಮಾಣಿಕನಾದ ವ್ಯಕ್ತಿ ಇಹದ ಕ್ಷಣಿಕತೆ ಮನಗಾಣುತ್ತಾನೆ. 'ತ್ಯಾಗೇನೈಕೇ ಅಮೃತತ್ವಮಾನಶುಃ' ಎಂಬುದರ ದಿವ್ಯದರ್ಶನವಾಗುತ್ತದೆ. ಅಂಥವನಿಗೆ ಗೃಹಪರಿವಾರವೆಲ್ಲ ಕಾಲನ ಕಾಳ್ಗಿಚ್ಚಿಗೆ ಆಹುತಿಯಾಗಲಿರುವ ಅರಣ್ಯದಂತೆಯೇ ಭಾಸವಾದರೆ ಅಚ್ಚರಿಯೇನು ? ಆದರೆ ನನಗೆ ಇಷ್ಟೆಲ್ಲ ಎಲ್ಲಿ ತಿಳಿದಿತ್ತು ? ರಂಗುರಂಗಿನ ಅಕ್ಷರದ ಸೆಳೆತಕ್ಕೆ ಸಿಕ್ಕಿ ಓದುತ್ತಿದ್ದೇನೇ ಹೊರತು, ಅರ್ಥ ಮಾಡಿಕೊಳ್ಳಲು ಅಲ್ಲ. ಅರ್ಥ ತಿಳಿಯುವ ವಯಸ್ಸೂ ಅದಾಗಿರಲಿಲ್ಲ. ಸುಮ್ಮನೆ ಓದಿದ ಮಾತ್ರಕ್ಕೆ ಮನೆ ಕಾಡಾಗುವುದು ಹೇಗೆ ? ಇದೂ ಒಂದು 'ಕತ್ತಲೆಗುಮ್ಮ'ನ ಬೆದರಿಕೆ ಅಂದುಕೊಂಡು ಮನಸ್ಸಿನಲ್ಲೆ ನಕ್ಕೆ! ಅಣ್ಣನ ಕಣ್ಣು ತಪ್ಪಿಸಿ ಪದೇ ಪದೇ ಅದನ್ನೇ ಓದಿದೆ.

ಒಮ್ಮೆ 'ಪ್ರಪಂಚದ ಸಂಕ್ಷಿಪ್ತ ಇತಿಹಾಸ'ದ ಒಂದು ಭಾಗ ಸಿಕ್ಕಿತು. ಅದರಲ್ಲಿದ್ದುದು ಅರಬಿಸ್ಥಾನದ ಚರಿತ್ರೆ. 'ಅರಬರಿಗಿಂತ ಮುಂಚೆ ಆ ದೇಶ ಹೇಗಿತ್ತು?' ಎಂಬ ಪ್ರಶ್ನೆ ಎತ್ತಿದೆ. ದಾಮೂ ಅಣ್ಣ ಅಂದರು: 'ನೋಡು, ಪುಸ್ತಕದ ಮೊದಲ ಹಾಳೆ ಹರಿದುಹೋಗಿದೆ. ಆ ವಿಷಯ ಹಾಳೆಯಲ್ಲಿದೆ.' ಆಗಲೇ ನನಗೊಂದು ಹೊಸ ಸಂಗತಿ ಹೊಳೆದದ್ದು. ಹರಿದುಹೋದ ಹಾಳೆ ಸಿಕ್ಕಿದರೆ ತಾನೆ ಏನು? ಅದರಲ್ಲಿ ಪ್ರಾರಂಭಿಸಿರುವುದಕ್ಕೂ ಮೊದಲು ಏನಿತ್ತು ಅನ್ನುವ ಪ್ರಶ್ನೆ ಉಳಿದೇ ಉಳಿಯುತ್ತದೆ! ಆದ್ದರಿಂದ ಮೊದಲ ಪುಟ ಮಾಯವಾಗಿರುವುದು ಹರಿದ ಪುಸ್ತಕದಲ್ಲಿ ಮಾತ್ರವಲ್ಲ; ಚರಿತ್ರೆಯ ಯಾವ ಗ್ರಂಥ ತೆಗೆದುಕೊಂಡರೂ ಅಷ್ಟೆ, ಎರಡನೇ ಪುಟದಿಂದಲೇ ಆರಂಭ! ಇತಿಹಾಸಕ್ಕೆ ಇದೊಂದು ಆಜನ್ಮ ಶಾಪ ಇದ್ದೀತು!

ರಾತ್ರಿಯ ಹೊತ್ತು ನಮ್ಮ ತಂದೆ ದಾಮೂ ಅಣ್ಣ ತಮಗಾಗಿ ಬಡಿಸಿದ ತಟ್ಟೆಯನ್ನು ಮಲಗುವ ಮನೆಗೇ ತಂದುಬಿಡುತ್ತಿದ್ದರು. ತಾವು ಊಟ ಮಾಡುತ್ತಾ, ನನ್ನ ಪ್ರಶ್ನೆಗಳಿಗೆ ಉತ್ತರ ಹೇಳುತ್ತಿದ್ದರು. ನನಗೆ 'ಮಹಾಭಾರತ' ಅಚ್ಚುಮೆಚ್ಚು. ಆಗ ಭೀಮನೇ ನೆಚ್ಚಿನ ನಾಯಕ. ಯಾರಾದರೂ ಹಿರಿಯರು ಅರ್ಜುನನನ್ನು ಹೊಗಳಿದರೆ ಸುಮ್ಮನೆ ಬಿಡುತ್ತಿರಲಿಲ್ಲ. ಧರ್ಮರಾಯನು ಮೊದಲೇ ಭೀಮನ ಮಾತು ಕೇಳಿದ್ದರೆ, ವಿಪತ್ತು

ಗಳು ಬರುತ್ತಲೇ ಇರಲಿಲ್ಲ. ಕೌರವರನ್ನು ಚಿಕ್ಕಂದಿನಲ್ಲೇ ಮುಗಿಸಿಬಿಟ್ಟಿದ್ದರೆ, ಕುರುಕ್ಷೇತ್ರದ ಭೀಷಣ ಸಂಹಾರ ತಪ್ಪುತ್ತಿತ್ತು. ದ್ಯೂತ, ಕೀಚಕವಧೆ, ಕೃಷ್ಣಸಂಧಾನ ಇತ್ಯಾದಿ ಎಲ್ಲ ಪ್ರಸಂಗಗಳಲ್ಲೂ ಭೀಮನ ಮಾತೇ ಗೆದ್ದಿತು. ಉಳಿದವರೆಲ್ಲ, ಕೃಷ್ಣನೂ ಸಹ, ತಲೆ ತಾಗಿದ ಮೇಲೆಯೇ ಬುದ್ಧಿ ಕಲಿತರು. ಮೋಹಕ್ಕೆ ಒಳಗಾದವನು ಅರ್ಜುನನೇ ಹೊರತು, ಭೀಮನಲ್ಲ. ಗೀತೆಯ ಶಂಖ ಊದಬೇಕಾಗಿ ಬಂದದ್ದು ಅರ್ಜುನನ ಮುಂದೆ ! ಭೀಮನಿಗಾದರೋ ಅದರ ಆವಶ್ಯಕತೆಯೇ ಇರಲಿಲ್ಲ! ನನ್ನ ಈ ವಾದ ಕೇಳಿ ಹಿರಿಯರೆಲ್ಲ ನಕ್ಕು ಸುಮ್ಮನಾಗಿಬಿಡುತ್ತಿದ್ದರು !

ಇನ್ನು ನನ್ನ ಪ್ರಚಂಡ ಗೆಳೆಯರ ಗುಂಪಿನ ಪರಿಚಯ ಆಗದಿದ್ದರೆ ಹೇಗೆ? ಮೊದಲ ಜೋಡಿ ರಾಣೂ ಶಿಂಪಿಯ ಮಕ್ಕಳಾದ ಪರಶುರಾಮ, ರಾಜಾರಾಮ. ಇಂಪಾಗಿ ಲಾವಣಿ ಹಾಡಬಲ್ಲರು. ಅವರ ಮನೆಯವರದ್ದೇ ಒಂದು ಮೇಳದ ತಂಡ ಇತ್ತು. ನಮ್ಮ ಪರಶಾ ಸ್ತ್ರೀವೇಷ ಕಟ್ಟಿಕೊಂಡು ಕುಣಿತಕ್ಕಿಳಿದರೆ ಎಂಥವರೂ ಮಾರುಹೋಗಬೇಕು. ನಾನೇ ಆ ತಂಡದ ರಾಜಕವಿ. ಎಷ್ಟೋ ರಾಜಕೀಯ ಹಾಗೂ ರಾಷ್ಟ್ರೀಯ ಲಾವಣಿಗಳನ್ನೂ, ಹಾಸ್ಯಮಯ ಸಂಭಾಷಣೆಗಳನ್ನೂ ಬರೆದುಕೊಡುತ್ತಿದ್ದೆ. ಅದರಿಂದ ಊರಿನಲ್ಲಿ ನನ್ನ ಘನತೆ ಏರಿತು. ರಾಜಾ - ಪರಶಾ ನಮ್ಮ ಮನೆಗೆ ದಿನವೂ ಬರುತ್ತಿದ್ದರು. ದಾಮೂ ಅಣ್ಣ ಊರಲ್ಲಿ ಇಲ್ಲದಿದ್ದಾಗ ರಾತ್ರಿಯೆಲ್ಲ ರಾಜದರ್ಬಾರು ನಡೆಸುತ್ತಿದ್ದೆವು. ನಾನೇ ಶಿವಛತ್ರಪತಿ ; ಗೆಳೆಯರೇ ಸರದಾರರು ! ನಮ್ಮ ಬಾಬಾ ಅಡಿಗೆ ಸಿದ್ಧಮಾಡಿ ಬಂದು, 'ಮಹಾಪ್ರಭುಗಳು ತಮ್ಮ ವೀರಸರದಾರರೊಡನೆ ಭೋಜನಕ್ಕೆ ದಯಮಾಡಿನಬೇಕು' ಎನ್ನುತ್ತಿದ್ದ. ತಕ್ಷಣವೇ ಆಸ್ಥಾನದ ರಾಜಗಾಂಭೀರ್ಯವೆಲ್ಲ ಗಾಳಿಯಪಾಲು ! ಬೀದಿಗೆಲ್ಲ ಕೇಳಿಸುವಂತೆ ನಗು, ಚಪ್ಪಾಳೆ, ಗದ್ದಲ! ಆ ಗಲಭೆಯಲ್ಲೂ ಮಹಾರಾಜರದೇ ಮುಖ್ಯ ಪಾತ್ರ! ಜಾತಿಭೇದ ಮೊದಲಿನಿಂದಲೂ ನನಗೆ ಒಪ್ಪಿಗೆಯಿಲ್ಲ. ಎಲ್ಲರಿಗೂ ಸಹಪಂಕ್ತಿ ಭೋಜನ. ರಾಜಾ - ಪರಶಾ ರಾತ್ರಿ ನಮ್ಮಲ್ಲೇ ಮಲಗುತ್ತಿದ್ದರು. ನಾನು ಅವರ ಮನೆಗೆ ಹೋದಾಗಲೆಲ್ಲ ಬಿಸಿಬಿಸಿ ಭಾಕರಿ, ಖಾರವಾದ ಬೆಳ್ಳುಳ್ಳಿ ಚಟ್ನಿ ಗಡದ್ದಾಗಿ ಹೊಡೆದು ಬರುತ್ತಿದ್ದೆ.

ಗೋಪಾಲ ಕುಲಕರ್ಣಿ ನನ್ನ ನಿಕಟ ಸಹಕಾರಿ. ಅವನ ಬರವಣಿಗೆ ಬಲು ಅಂದ. ನನ್ನದಾದರೋ ಬ್ರಹ್ಮಲಿಪಿ ! ನನ್ನ ಕವನಗಳನ್ನು ಗೋಪಾಲ ನಕಲು ಮಾಡಿಕೊಡುತ್ತಿದ್ದ. ಪತ್ರಿಕೆಗಳನ್ನೂ ಪುಸ್ತಕಗಳನ್ನೂ ಇಬ್ಬರೂ ಒಟ್ಟಾಗಿ ಸೇರಿ ಓದುತ್ತಿದ್ದೆವು. ಮುಂದೆ 1906ರ ಪ್ರಚಂಡ ಸ್ವದೇಶಿ ಆಂದೋಳನದಲ್ಲಿ ನಮ್ಮ ಭಗೂರಿಗೆ ಮೊದಲ ಸ್ಥಾನ ತಂದುಕೊಟ್ಟ ವೀರ ಅವನು. ಅದರಿಂದ ತನ್ನ ಕುಟುಂಬ ಅಪಾರ ಕಷ್ಟನಷ್ಟಗಳನ್ನು ಅನುಭವಿಸಬೇಕಾಗಿ ಬಂದರೂ, ಅವನು ಹಿಮ್ಮೆಟ್ಟಲಿಲ್ಲ. ನನ್ನ ನೆನಪಿಗೆ ಬರುವ ಇತರ ಗೆಳೆಯರೆಂದರೆ, ಧೋಪಾವರಕರ ಮನೆಯ ವಾಮನ, ಬಾಳು, ರಾವಜಿ ಮತ್ತು ತ್ರ್ಯಂಬಕ, ಭಿಕೂ ವಂಜಾರಿ, ಬಾಪೂ, ನಥೂ ಮುಂತಾದವರು.

ಸಂಜೆ ಆಯಿತು ಎಂದರೆ ನಮ್ಮ ಸೈನ್ಯ ವಿಜಯಯಾತ್ರೆಗೆ ಹೊರಡುತ್ತಿತ್ತು. ಪ್ರತಿಯೊಬ್ಬರ ಕೈಯಲ್ಲೂ ಒಂದೊಂದು ಉದ್ದವಾದ ಬೆತ್ತ. ಅದೇ ನಮ್ಮ ಶೂಲ, ಅದೇ ನಮ್ಮ ಕತ್ತಿ. ರಭಸದಿಂದ ಹೊರಟಾಗ ಅದೇ ನಮ್ಮ ಕುದುರೆ ; ಗುಂಡು ಹಾರಿಸಬೇಕಾದಾಗ ಅದೇ ನಮ್ಮ ಬಂದೂಕ ! ಆ ಶಸ್ತ್ರ ಇಲ್ಲವಾದರೆ ಸೈನ್ಯಕ್ಕೆ ಪ್ರವೇಶವೇ ಇಲ್ಲ. ಒಮ್ಮೆ ಹಳದಿಹೂವಿನ ಮುಳ್ಳು ಗಿಡವೊಂದು ನಮ್ಮ ಪರಾಕ್ರಮಕ್ಕೆ ಆಹುತಿಯಾಗಬೇಕಾಗಿ ಬಂತು. ಎಲ್ಲರೂ ಒಟ್ಟಾಗಿ ಖಡ್ಗ ಹಿರಿದು ಆ ಗಿಡದ ಮೇಲೆ ಬಿದ್ದೆವು. ಸಪಸಪನೆ ಹೊಡೆತ ಪ್ರಾರಂಭವಾಯಿತು. ಆ ದುರ್ದೈವಿ ಸಸ್ಯಕ್ಕೆ ನಿಮಿಷಮಾತ್ರದಲ್ಲಿ ನೂರು ವರ್ಷ ತುಂಬಿತು ! ಯಾರೋ

ಅದರ ಹೆಸರು 'ವಿಲಾಯತಿ ಗಿಡ' ಎಂದು ಹೇಳಿದ್ದೇ ಇಷ್ಟಕ್ಕೆಲ್ಲ ಕಾರಣ! ಅದನ್ನು ಹೊಡೆದು ಕೆಡಹುವಾಗ, 1857ರ ಸ್ವಾತಂತ್ರ್ಯ ಯೋಧರ ಆವೇಶಕ್ಕಿಂತಲೂ ಮಿಗಿಲಾಗಿತ್ತು, ನಮ್ಮ ಹುಮ್ಮಸ್ಸು!

1894-95ರಲ್ಲಿ ಮುಂಬೈ, ಪುಣೆ ಮುಂತಾದ ಕಡೆಗಳಲ್ಲಿ ಮುಸಲ್ಮಾನರು ಭೀಕರ ದೊಂಬಿ ನಡೆಸಿದರು. ಹಿಂದುಗಳ ಪ್ರಾಣ ಮಾನಗಳಿಗೆ ಬೆಂಕಿ ಹಚ್ಚಿ, ಆಸ್ತಿಪಾಸ್ತಿ ಲೂಟಿ ಮಾಡಿದರು. 'ಕೇಸರಿ'ಯಲ್ಲಿ ಆ ಸುದ್ದಿ ಓದಿದೆ. ಗೆಳೆಯರಿಗೆಲ್ಲ ಓದಿ ಹೇಳಿದೆ. ಹಿಂದು ಜನಕ್ಕೆ ಏನು ರೋಗ ? ಹೊಡೆತ ತಿಂದುಕೊಂಡು ತೆಪ್ಪಗಿರುತ್ತಾರೇಕೆ? ಕೋಪದಿಂದ ಪ್ರಶ್ನಿಸಿಕೊಳ್ಳುತ್ತಿದ್ದೆ. ಉತ್ತರ ಸಿಕ್ಕದೆ ಚಡಪಡಿಸುತ್ತಿದ್ದೆ. ಈ ಅನ್ಯಾಯಕ್ಕೆ ತಕ್ಕ ಪ್ರತೀಕಾರ ಆಗಲೇಬೇಕೆಂದು ನಮ್ಮ ಬಾಲಸೈನ್ಯ ನಿರ್ಧರಿಸಿತು. ಅಂದರೆ? ನಮ್ಮ ಎಳೆಯ ಬುದ್ಧಿಗೆ ಹೊಳೆದಂತೆ ಒಂದು ಯೋಜನೆ ತಯಾರಿಸಿದೆವು. ನಂಜೆ ಊರಾಚೆಯ ಮುರುಕಲು ಮಸೀದಿಯ ಮೇಲೆ ಆಕ್ರಮಣ ನಡೆಸುವುದು ! ಅದಕ್ಕೆ ಶಿವಾಜಿಯ 'ವೃಕ ಯುದ್ಧ'ದ ತಂತ್ರ ಉಪಯೋಗಿಸಬೇಕು ! ಹುಡುಗರೆಲ್ಲ - ಅಲ್ಲ, ಮರೆತೆ - ವೀರಯೋಧರೆಲ್ಲ ಶಸ್ತ್ರಸಜ್ಜಿತರಾಗಿ ಒಂದೆಡೆ ನೇರಿದರು. 10- 15 ಜನರ ಆ ಪ್ರಚಂಡ ಸೈನ್ಯವನ್ನು ನಾಲ್ಕಾರು ತಂಡಗಳಾಗಿ ವಿಭಾಗಿಸಲಾಯಿತು. ನಿಶ್ಚಿತ ಸಮಯಕ್ಕೆ ಎಲ್ಲ ದಿಕ್ಕುಗಳಿಂದಲೂ ಆಕ್ರಮಣ ನಡೆಸಿದೆವು.

ಮಸೀದಿಯೊಳಗೆ ಒಂದು ನರಪಿಳ್ಳೆಯೂ ಇರಲಿಲ್ಲ. ಬಹುಶಃ ಶತ್ರುಗಳು ಹೆದರಿ ಮೊದಲೇ ಪಲಾಯನ ಮಾಡಿರಬೇಕು! ನಾವು ಹೇಳಿಕೊಂಡ ಸಮಾಧಾನ ಅದು. ನಮ್ಮಿಂದ ಸಾಧ್ಯವಿದ್ದಷ್ಟೂ ಧ್ವಂಸ ನಡೆಸಿ, ಅಲ್ಲಿಂದ ಫಕ್ಕನೆ ಅದೃಶ್ಯರಾದೆವು. ಏಕೆಂದರೆ ಶಿವಾಜಿಯ ತಂತ್ರವೇ ಹಾಗೆ! ಆದರೆ ಮುಸಲ್ಮಾನ ಹುಡುಗರಿಗೆ ಈ ಸುದ್ದಿ ಹೇಗೋ ತಿಳಿದುಹೋಯಿತು.

ಮರುದಿನ ನಾವು ಪೂರ್ತಿ ತಯಾರಿ ಮಾಡಿಕೊಂಡೇ ಶಾಲೆಗೆ ಹೋದೆವು. ಉರ್ದು ಶಾಲೆಗೂ ನಮ್ಮ ಶಾಲೆಗೂ ನಡುವಿನ ಬಯಲೇ ರಣಕ್ಷೇತ್ರ. ಶಿಕ್ಷಕರು ಬರುವವರೆಗೂ ಘನಘೋರ ಸಂಗ್ರಾಮ. ಚಾಕು, ಬ್ಲೇಡು, ಪಿನ್ನು ಇತ್ಯಾದಿ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತಗೊಳಿಸಬಲ್ಲ ಸೈನ್ಯಾಧಿಕಾರಿ ಶತ್ರುಗಳಿಗೆ ದೊರೆಯದಿದ್ದುದು ಅವರ ದುರ್ದೈವ! ಸೋತು ಹಣ್ಣಾದರು. ಕೊನೆಗೆ, ಯಾರೂ ಶಿಕ್ಷಕರಿಗೆ ಈ ವಿಷಯ ತಿಳಿಸಬಾರದೆಂದು ಒಪ್ಪಂದವಾಯಿತು. ಅನಂತರ, ಮುಸಲ್ಮಾನ ಹುಡುಗರ ಪೈಕಿ ಒಂದಿಬ್ಬರು ಧಾಂಡಿಗರು, ಸೇಡು ತೀರಿಸಿಕೊಳ್ಳಲು - 'ಬೊಮ್ಮನ್ ಕೇ ಬಚ್ಚಾ'ನನ್ನು, ಅಂದರೆ ವಿನಾಯಕನನ್ನು ನೆಲಕ್ಕೆ ಕೆಡವಿ, ಅವನ ಬಾಯಿಗೆ (ಶಾಸ್ತ್ರೋಕ್ತವಾದ ಕಡುಬಿನ ಬದಲು) ಮೀನಿನ ಮಾಂಸ ತುರುಕಿ ಜಾತಿ ಕೆಡಿಸುವುದಾಗಿ ಪ್ರತಿಜ್ಞೆ ತೊಟ್ಟರಂತೆ! ಆದರೆ ಆಮೇಲೆ ಏನಾಯಿತೋ ತಿಳಿಯದು. ಈ ಅಭಿನವ ಶಿವಾಜಿ ಎಷ್ಟು ದಿನ ಕಾದು ನಿಂತರೂ ಆ ಅಫಜಲಖಾನರು ಬರಲೇ ಇಲ್ಲ. ಬಹುಶಃ ಹಿಂದಿನ ಚರಿತ್ರೆ ನೆನಪಾಗಿರಬೇಕು ಅಥವಾ ತಮ್ಮ ತರಗತಿಯ ಪಾಠಗಳನ್ನು ಮರೆಯುತ್ತಿದ್ದಂತೆಯೇ ಪ್ರತಿಜ್ಞೆಯನ್ನೂ ಮರೆತಿರಬೇಕು! ನೆನಪು ಇಟ್ಟಿರಲಿ, ಮರತೇ ಬಿಟ್ಟಿರಲಿ, ಎರಡೂ ಶ್ಲಾಘನೀಯವೇ!

ಗೆಳೆಯರಲ್ಲಿ ಶಿಸ್ತು ಮತ್ತು ಸ್ಥೈರ್ಯ ಬೆಳೆಸಲು ಒಂದು ಶಿಕ್ಷಣಕೇಂದ್ರ ಆರಂಭಿಸಿದೆ. ತರಬೇತಿಗಾಗಿ ಎರಡು ಗುಂಪು ಮಾಡುವುದು. ಅದರಲ್ಲಿ ಒಂದು ಗುಂಪು ಹಿಂದು ಸೈನ್ಯ; ಮತ್ತೊಂದು ಮುಸ್ಲಿಂ ಅಥವಾ ಇಂಗ್ಲಿಷ್ ಸೈನ್ಯ. ನಿಂಬೆ ಹೀಚುಗಳೇ ಮದ್ದುಗುಂಡುಗಳು ; ಅದನ್ನು ಪ್ರಯೋಗಿಸುತ್ತಾ ಎದುರು ಪಕ್ಷದ ಧ್ವಜವನ್ನು ನೆಲಕ್ಕೆ ಕೆಡವಿ, ಶಸ್ತ್ರಾಸ್ತ್ರ ಕಿತ್ತುಕೊಂಡರೆ ಗೆದ್ದಂತೆ! ಯಾವಾಗಲೂ ನನ್ನ ಹಿಂದು ಪಕ್ಷಕ್ಕೇ ಜಯ ಸಿದ್ಧ. ಅಕಸ್ಮಾತ್ ಸೋಲಾದರೆ, ಹಿಂದುಗಳಿಗೆ ಅಪಮಾನವಾಗದಿರಲು ನೀವು ಹಿಂದೆ ಸರಿಯಬೇಕು ಎಂದು

ಶತ್ರು ಪಕ್ಷದ ಮನವೊಲಿಸುವುದು. ಪಾಪ, ಅವರು ಒಪ್ಪಲೇಬೇಕಾಗುತ್ತಿತ್ತು! ಕೊನೆಗೆ ಎಲ್ಲರೂ ಒಟ್ಟಾಗಿ ಹಿಂದು ವಿಜಯೋತ್ಸವದ ಗೀತೆ ಹಾಡುತ್ತಾ, ಭಗೂರಿನ ಗಲ್ಲಿಗಲ್ಲಿಗಳಲ್ಲಿ ಮೆರವಣಿಗೆ ನಡೆಸುತ್ತಿದ್ದೆವು.

ಕುದುರೆ ಇಲ್ಲದಿದ್ದರೆ ಅದೆಂಥ ಸೈನಿಕ ಶಾಲೆ ? ಆದರೆ ಒಳ್ಳೆ ಕುದುರೆ ಆಗ ಸಿಕ್ಕುವುದಂತೂ ಸಾಧ್ಯವಿರಲಿಲ್ಲ. ತಾತ್ಕಾಲಿಕವಾಗಿ ಭಾವೀ ತಾನಾಜಿ - ಸೂರ್ಯಾಜಿಗಳ ಕುದುರೆಯನ್ನೇ ತರಬಾರದೇಕೆ? ರಾಜಾ - ಪರಶಾ ಅವರ ಮನೆಯಲ್ಲಿ ಸಂತೆಗೆ ಸಾಮಾನು ಒದಗಿಸುವ ಒಂದು ತಟ್ಟು ಇತ್ತು. ಮಹಾಪ್ರಭುಗಳ ಪಟ್ಟದ ಕುದುರೆ ಆಗುವ ಗೌರವವನ್ನು ಆ ಕಂತ್ರಿ ಕುದುರೆ ಅನುಭವಿಸಬೇಕಾಗಿ ಬಂತು! ಹಿರಿಯರಿಗೆ ಗೊತ್ತಾಗದಂತೆ ಅವರಿಬ್ಬರೂ ಅದನ್ನು ಆಗಾಗ ತರುತ್ತಿದ್ದರು. ನಾವು ಸರದಿಯ ಪ್ರಕಾರ ಅದರ ಮೇಲೆ ಕುಳಿತುಕೊಳ್ಳುವುದನ್ನು ಕಲಿತೆವು. ಅದರ ಆಕಾರ ಬಹುಮಟ್ಟಿಗೆ ಕುದುರೆಯಂತೆಯೇ ಇತ್ತು. ಆದರೆ ಎಲ್ಲ ಕುದುರೆಗಳಂತೆ ಚೆಲ್ಲು ಕುದುರೆ ಅಲ್ಲ ಅದು, ಅವಸರವಿಲ್ಲದೆ ರಾಜಗಾಂಭೀರ್ಯದಿಂದ ಸಾಗುವ ಗಜರಾಜನಂತೆ ಠೀವಿ! ನಮ್ಮ ಸ್ವಾತಂತ್ರ್ಯ ಯುದ್ಧಕ್ಕೆ ಅಶ್ವಸೇನೆ, ಗಜಸೇನೆ ಒಟ್ಟಿಗೆ ದೊರೆತಂತಾಯಿತು. ಅದನ್ನು ನಿಂತ ಜಾಗದಿಂದ ಕದಲಿಸಬೇಕಾದರೆ ಸಾಕಷ್ಟು ಬೆತ್ತದ ಪೂಜೆ ಆಗಲೇಬೇಕು. ಇಂತಿಷ್ಟು ಏಟಿಗೆ ಇಂತಿಷ್ಟೇ ದೂರ ಎಂಬ ಸೂತ್ರ ನನಗೆ ಬಾಯಿಪಾಠವಾಗಿತ್ತು. ಆ ಸೂತ್ರದ ಕಟ್ಟಿಗೆ ಕಟ್ಟುಬೀಳದಿರುವಂಥ ಕೆಟ್ಟ ಕುದುರೆಗಳೂ ಇರುತ್ತವೆ ಎಂಬುದು ನನಗೆಲ್ಲಿ ಗೊತ್ತಿತ್ತು ?

ಏಳೆಂಟು ವರ್ಷಗಳ ನಂತರ ಜವ್ಹಾರ್ ಸಂಸ್ಥಾನದ ರಾಜಧಾನಿಗೆ ಹೋಗಬೇಕಾಗಿ ಬಂತು. ನಮ್ಮ ಮಾವನವರು ಅಲ್ಲಿನ ಆಸ್ಥಾನ ಸಚಿವರು. ಅಳಿಯನ ಆರೋಹಣಕ್ಕೆಂದು ಒಂದು ಉನ್ನತ ತೇಜಸ್ವಿ ಕುದುರೆ ತಂದು ನಿಲ್ಲಿಸಿದರು. ರಾಜಠೀವಿಯಿಂದ ನಾನು ಹೇಗೋ ಹತ್ತಿ ಕುಳಿತಾಯಿತು. ಅಂಥ ಸಮಯದಲ್ಲಿ ನನ್ನ ಹಿಂದಿನ ಅನುಭವದ ಸೂತ್ರ ಬಳಸದಿದ್ದರೆ ಏನು ಸಾರ್ಥಕ? ಸರಿ, ಛಡಿ ಎತ್ತಿ ಪ್ರಯೋಗಿಸಿಯೇಬಿಟ್ಟೆ! ನನ್ನ ಶಾಸ್ತ್ರೋಕ್ತ ಪ್ರಯೋಗ ಇನ್ನೂ ಸರಿಯಾಗಿ ಪ್ರಾರಂಭವೇ ಆಗಲಿಲ್ಲ; ಮೊದಲ ಏಟಿಗೇ ಆ ದುಷ್ಟ ಪ್ರಾಣಿ ಹುಚ್ಚೆದ್ದು ಕುಣಿದು ನಾಗಾಲೋಟದಿಂದ ಧಾವಿಸಿತು. ಅಳಿಯದೇವರನ್ನು ಚೆಂಡಿನಂತೆ ಹತ್ತು ಮಾರು ದೂರಕ್ಕೆ ಎಸೆದುಬಿಟ್ಟಿತು. ಆ ನಾಚಿಕೆಗೇಡಿನ ಸಂಗತಿ ಸದ್ಯಕ್ಕೆ ಇಷ್ಟು ಸಾಕು!



ನಮ್ಮ ಕುಲದೇವತೆ ಭವಾನಿದೇವಿ ಖಂಡೋಬಾ ದೇವಸ್ಥಾನದಲ್ಲಿದ್ದಳಷ್ಟೆ. ನಾವು ಹೊಸ ಮನೆಗೆ ಬಂದ ನಂತರ, 'ನನ್ನ ಮನೆಗೆ ನನ್ನನ್ನು ತಲುಪಿಸು' ಎಂದು ಪೂಜಾರಿಗೆ ದೇವಿ ಕನಸಿನಲ್ಲಿ ಹೇಳಿದಳು. ಅಣ್ಣನಿಗೂ ದೇವಿ ಮನೆಗೆ ಬಂದಂತೆ ಸ್ವಪ್ನವಾಯಿತು. ಆಗ ಅವಳನ್ನು ಹೊಸ ಮನೆಯ ವಿಶಾಲ ದೇವಗೃಹಕ್ಕೆ ತಂದೆವು. ಅನೇಕರು ಎಚ್ಚರಿಸಿದರು : 'ಇವಳು ರುಧಿರಪ್ರಿಯೆಯಾದ ಜೀವಂತ ದೇವಿ ; ಇಡೀ ಮನೆಯನ್ನೇ ಭಸ್ಮಗೊಳಿಸಿಬಿಟ್ಟಾಳು !' ಅದಕ್ಕೆ ಅಣ್ಣ, ದೈವೇಚ್ಛೆ ಇದ್ದಂತೆ ಆಗಲಿ ಎಂದುಬಿಟ್ಟರು. ಊರಿನವರಿಗೆಲ್ಲ ದೇವಿಯ ಬಗ್ಗೆ ಭಯ ; ಆದರೆ ನನ್ನ ಕಣ್ಣಿಗಾದರೋ ಆಕೆ ದಯಾವಂತಳಾಗಿ, ವಾತ್ಸಲ್ಯಮಯಿಯಾಗಿ ಕಂಡಳು. ಅವಳಲ್ಲಿ ನನ್ನ ತಾಯಿಯನ್ನು ಕಂಡೆ.

ಕೊಳ್ಳುತ್ತಿದ್ದೆ. ಸಂಸ್ಕೃತದ 'ದೇವಿ ಭಾಗವತ' ಪಾರಾಯಣ ಮಾಡುತ್ತಿದ್ದೆ. ಆದರೆ ಅದರ ಅರ್ಥ ನನಗೆ ಸರಿಯಾಗಿ ತಿಳಿಯುತ್ತಿರಲಿಲ್ಲ. ಕಡೆಗೊಂದು ದಿನ ಅದರ ಮರಾಠಿ ಭಾಷಾಂತರ 'ದೇವೀ ವಿಜಯ' ಎಂಬ ಹೆಸರಿನಿಂದ ಪ್ರಕಟವಾಗುತ್ತಿದೆಯೆಂಬ ಸುದ್ದಿ ಪತ್ರಿಕೆಯಲ್ಲಿ ಬಂತು. ನನ್ನ ಆನಂದಕ್ಕೆ ಪಾರವಿಲ್ಲ! ಜತೆಗೇ, ಅಣ್ಣ ಈ ಹೊಸ ಪುಸ್ತಕ ತರಿಸುತ್ತಾರೋ ಇಲ್ಲವೋ ಎನ್ನುವ ಸಂದೇಹ! ಅವರಿಗೆ ತಿಳಿಯದಂತೆ ಕಾಸಿಗೆ ಕಾಸು ಕೂಡಿಟ್ಟು, ವಿ.ಪಿ. ಮೂಲಕ ಒಂದು ಪ್ರತಿ ತರಿಸಿದೆ. ಅದರಲ್ಲಿದ್ದ ಅನೇಕ ಭಕ್ತರ ಚರಿತ್ರೆ ಮನಸ್ಸಿಗೆ ಹಿಡಿಸಿತು. ಅದರಂತೆಯೇ ಶಿವಾಜಿ, ಪ್ರತಾಪ್ ಮತ್ತಿತರ ಸ್ವಾತಂತ್ರ್ಯ ವೀರರನ್ನು ಕುರಿತು ಕಾವ್ಯ ಬರೆಯಲು ಆರಂಭಿಸಿದೆ. ನನ್ನ ಗ್ರಂಥದ ಹೆಸರು 'ದುರ್ಗಾದಾಸ ವಿಜಯ'. ಅದರಲ್ಲಿ ದೇವಿಯ ಸ್ತೋತ್ರ; ಅನಂತರ ಗ್ರಂಥಕಾರನ ಚರಿತ್ರ; ಮುಂದೆ ಗ್ರಂಥಕಾರನು ಭಾರತೀಯ ಸ್ವಾತಂತ್ರ್ಯಕ್ಕಾಗಿ ಹೂಡಲಿರುವ ಯುದ್ಧದಲ್ಲಿ ಯಶಸ್ಸು ಕರುಣಿಸಬೇಕೆಂಬ ಪ್ರಾರ್ಥನೆ! ಆಮೇಲೆ ನಾಲ್ಕೈದು ಅಧ್ಯಾಯಗಳವರೆಗೂ ಗ್ರಂಥ ಮುಂದು ವರಿಯಿತು. 'ಓವಿ' ಛಂದಸ್ಸಿನಲ್ಲಿ ನಾಲ್ಕುನೂರು ಪದ್ಯಗಳಾಗಿದ್ದವು. ಒಂದೊಂದು ಅಧ್ಯಾಯ ಮುಗಿಯು ತ್ತಲೂ ದೇವಿಯ ಬಳಿ ಹೋಗಿ ಅದನ್ನು ಭಕ್ತಿಯಿಂದ ಓದಿ ಹೇಳುತ್ತಿದ್ದೆ!

ದಾಮು ಅಣ್ಣ ಅನೇಕರಿಗೆ ಸಾಲವಾಗಿ ಹಣ ಕೊಟ್ಟಿದ್ದರು. ಆದರೆ ಹಣ ವಾಪಸು ಬರಲಿಲ್ಲ. ಅದರಿಂದ ಒಮ್ಮೊಮ್ಮೆ ಅವರು ಚಿಂತಾಕ್ರಾಂತರಾಗಿ ಕುಳಿತುಬಿಡುತ್ತಿದ್ದರು. ತಾವು ಸಾಲ ಮಾಡಿದ್ದುದನ್ನು ತೀರಿಸಲಾಗದೆ ಮೂಕವೇದನೆ ಅನುಭವಿಸಬೇಕಾಗಿಬಂತು. ನಾನು ನೇರವಾಗಿ ಪೂಜಾಗೃಹಕ್ಕೆ ಹೋದೆ. ದೇವಿಯ ಎದುರು ಕೈಜೋಡಿಸಿ ಕುಳಿತೆ. ಕಣ್ಣೀರು ಹರಿಯತೊಡಗಿತು. 'ದೇವಿ! ನಮ್ಮ ದಾಮೂ ಅಣ್ಣನ ಕಷ್ಟ ನಿನಗೆ ತಿಳಿಯುವುದಿಲ್ಲವೆ? ಅವರಿಗೆ ನಿನ್ನಲ್ಲಿ ಎಷ್ಟೊಂದು ಭಕ್ತಿ! ಅವರನ್ನೇಕೆ ಕಷ್ಟಪಡಿಸುತ್ತಿ? ಈಗ ನಾನೇ ಬಂದು ಬೇಡಿಕೊಳ್ಳುತ್ತಿದ್ದೇನೆ. ದಯವಿಟ್ಟು ಸಹಾಯ ಮಾಡು. ಕಷ್ಟದಿಂದ ಪಾರು ಮಾಡು.' ಕಾವ್ಯರೂಪದಲ್ಲಿ ನನ್ನ ಪ್ರಾರ್ಥನೆ ಹರಿಯುತ್ತಿತ್ತು. ಸದಾ ಅದೇ ಧ್ಯಾನವಾಯಿತು. ಅಣ್ಣ ನನ್ನನ್ನು ದೇವರ ಕೋಣೆಯಲ್ಲಿ ನೋಡುತ್ತಲೇ, 'ಗಳಿಗೆಗೊಮ್ಮೆ ಬಂದು ದೇವಿಗೆ ತೊಂದರೆಪಡಿಸಬೇಡ' ಎಂದು ಹೊರಗೆ ಕರೆತರುತ್ತಿದ್ದರು.

ಚಿಕ್ಕಂದಿನಿಂದಲೂ ನಾನು ಓದುತ್ತಿದ್ದ ಪುಸ್ತಕಗಳ ಸಾರಾಂಶವನ್ನು ಕ್ರಮವಾಗಿ ಒಂದೆಡೆ ಬರೆದಿಡು ವುದು ನನ್ನ ರೂಢಿ. ಹಾಗೆಯೇ ವೃತ್ತಪತ್ರಿಕೆಗಳಲ್ಲಿ ಬಂದ ಮುಖ್ಯ ವಿಷಯವನ್ನೂ ಗುರುತು ಹಾಕಿಡುತ್ತಿದ್ದೆ. ನನ್ನ ಈ ಬರವಣಿಗೆ ಪುಸ್ತಕದ ಹೆಸರು 'ಸರ್ವಸಾರಸಂಗ್ರಹ.' ವಿದ್ಯಾರ್ಥಿ ಜೀವನದಲ್ಲಿ ಅನೇಕ ಸಂಪುಟ ಗಳಷ್ಟು ಅದು ಬೆಳೆಯಿತು. ಆದರೆ ಮುಂದೆ ಅವೆಲ್ಲವೂ ಸರ್ಕಾರದ ಝಡತಿಗೆ ಆಹುತಿಯಾಗಿಹೋದವು.

1896ರ ಪ್ರಾರಂಭದಲ್ಲಿ ನಮ್ಮ ಬಾಬಾನ ಮದುವೆ. ಹೆಣ್ಣಿನ ತಂದೆ ತ್ರ್ಯಂಬಕೇಶ್ವರ ನಾನಾರಾವ್ ಫಡಕೆಯವರು. ಫಡಕೆ! ಆ ಹೆಸರು ಕೇಳುತ್ತಲೇ ನನ್ನ ಚೇತನ ಅರಳುತ್ತದೆ. ಅವರ್ಣನೀಯ ಸ್ಫೂರ್ತಿಯಿಂದ ಹೃದಯ ಹಿಗ್ಗುತ್ತದೆ. ಹಿಂದೆ ಒಬ್ಬ ಧೀರ ಇದ್ದ; ಗಂಡೆದೆಯ ದೇಶಭಕ್ತ ಇದ್ದ - ವಾಸು ದೇವ ಬಲವಂತ ಫಡಕೆ! ನನ್ನ ತಾಯಿ ಕಣ್ಮರೆಯಾದ ಕ್ಷಣವೇ ಅವನು ಭಾರತ ಮಾತೆಯ ಸೇವಾದೀಕ್ಷೆ ಕೈಗೊಂಡ. ಬ್ರಿಟಿಷರ ವಿರುದ್ಧ ಕತ್ತಿ ಹಿರಿದು ಕ್ರಾಂತಿಯ ಕಹಳೆ ಊದಿದ. ನನಗೂ ಹೆತ್ತ ತಾಯಿ ಇಲ್ಲ; ನಾನೂ ಮಾತೃಭೂಮಿಯ ಸೇವಾದೀಕ್ಷೆ ಕೈಗೊಳ್ಳುವವನೇ; ಶತ್ರುಗಳ ವಿರುದ್ಧ ಕತ್ತಿ ಹಿರಿಯುವವನೇ; ಸಶಸ್ತ್ರ ಕ್ರಾಂತಿಯ ಕಹಳೆ ಮೊಳಗಿಸುವವನೇ! ಏಡನ್ನಿನ ಸೆರೆಮನೆಯಲ್ಲಿ ನರಕಯಾತನೆ ಅನುಭವಿಸುತ್ತಾ ಪಡಕೆ ತೀರಿಕೊಂಡಿದ್ದ. 1883ರಲ್ಲಿ ಅವನು ಸತ್ತ; ಅದೇ ವರ್ಷ ನಾನು ಹುಟ್ಟಿದೆ. ಅತ್ತ ಅವನು ಸತ್ತ,

ಇತ್ತ ನಾನು ಹುಟ್ಟಿದೆ! ಅಲ್ಲಿ ಫಡಕೆಯ ಪ್ರಾಣದ ಕಿಡಿ ಆರಿತು ; ಇಲ್ಲಿನ ಅವನ ಕ್ರಾಂತಿಯ ಕಿಡಿ ಪುನಃ ಹಾರಿದೆ! ಫಡಕೆಯನ್ನು 'ಶಿವಾಜಿಯ ಅವತಾರ' ಎನ್ನುತ್ತಿದ್ದರಂತೆ. ನಾನೂ ಹಾಗೆಯೇ ತಾನೆ? ಆ ಫಡಕೆ ಕೊನೆಯದಾಗಿ ಒಂದು ಮಾತು ಹೇಳಿದ್ದ : 'ನನಗೆ ಯಶಸ್ಸು ಸಿಗದಿರಬಹುದು, ಆದರೆ ನಾನು ಮಾಡಿದ್ದೆಲ್ಲವೂ ದೇಶಕ್ಕಾಗಿ ಎಂಬುದು ದೇವರಿಗೆ ಗೊತ್ತಿದೆ. ಓ, ನನ್ನ ಪ್ರಿಯ ಸ್ವದೇಶಬಾಂಧವರೇ! ನನ್ನಿಂದ ನಿಮಗೆ ಏನೂ ಲಾಭವಾಗಲಿಲ್ಲ; ನಾನು ನಿಮಗೆ ಸ್ವಾತಂತ್ರ್ಯ ತಂದುಕೊಡಲಾಗಲಿಲ್ಲ. ಅದಕ್ಕಾಗಿ ನನ್ನನ್ನು ಕ್ಷಮಿಸಿ!' ಆ ಹುತಾತ್ಮನ ಅತೃಪ್ತ ಆತ್ಮಕ್ಕೆ ನಾನು ಸಾವಿರ ಸಲ ಗದ್ಗದ ಕಂಠದಿಂದ ವಚನ ಕೊಟ್ಟಿದ್ದೆ : 'ಓ ನನ್ನ ಪ್ರೀತಿಯ ಫಡಕೆ! ನೀನು ನಮಗೆ ದಾರಿ ತೋರಿದೆ. ನನ್ನಿಂದ ನಮಗೆ ಅನಂತರ ಉಪಕಾರ ಆಗಿದೆ. ಚಿಂತಿಸಬೇಡ, ನಾವು ನಿನ್ನ ಉದ್ದೇಶವನ್ನು ಪೂರ್ಣಗೊಳಿಸುತ್ತೇವೆ.'

ನನ್ನ ಅತ್ತಿಗೆಯ ಮನೆತನಕ್ಕೂ ಫಡಕೆ ಅನ್ನುವ ಹೆಸರಿತ್ತು. ನನ್ನ ಸಂತೋಷಕ್ಕೆ ಅಷ್ಟೇ ಸಾಕಾಗಿತ್ತು. ಗಂಡಿನ ಕಡೆಯವರೆಲ್ಲ ತ್ರ್ಯಂಬಕೇಶ್ವರ ಮುಟ್ಟಿದೆವು. ಬಾಳನ ಕೈ ಹಿಡಿದುಕೊಂಡು ಠೀವಿಯಿಂದ ಹೆಣ್ಣಿನ ಮನೆಯ ಕಡೆ ಹೊರಟೆ. ಬಾಗಿಲಲ್ಲಿ ನಿಂತು, ಬೀಗತನದ ಆಢ್ಯತೆಯಿಂದ ಪ್ರಶ್ನಿಸಿದೆ : 'ಇದೇ ಏನು, ಫಡಕೆಯವರ ಮನೆ ? ಎಲ್ಲಿ ನಮ್ಮ ಅತ್ತಿಗೆ ?' ಹನ್ನೆರಡು ವರ್ಷದ ಹುಡುಗನ ಡೌಲು ಕಂಡು ಅಲ್ಲಿದ್ದವರೆಲ್ಲ ಮುಖಮುಖ ನೋಡಿಕೊಂಡರು. ಹೆಣ್ಣಿನ ಚಿಕ್ಕಮ್ಮ ಮುಂದೆ ಬಂದು, 'ನೀವು ಯಾರು, ಹೆಸರೇನು ?' ಎಂದರು. ನಾನು ಹೇಳುತ್ತಲೇ ತಾಯಿ ಹಿಗ್ಗಿಹೋದರು. 'ಎಷ್ಟು ಜಾಣ, ಎಷ್ಟು ಚುರುಕು, ಎಷ್ಟು ದಿಟ್ಟ ಹುಡುಗ ನೋಡಿರೆ, ನಮ್ಮ ಯೇಸೂಮೈದುನ' ಅಂದರು. 'ಹಸೆಯ ಮಣೆ ಎಲ್ಲಿ ? ನಮ್ಮ ಅತ್ತಿಗೆಯ ಹತ್ತಿರವೇ ಕೂರಬೇಕು ನಾನು' ಎಂದೆ. 'ಇಲ್ಲಿ ಬಾ ಮಗು ! ಇವಳೇ ನಿಮ್ಮ ಅತ್ತಿಗೆ' ಎಂದರು.

ಅವಳಿಗೂ ನನ್ನಷ್ಟೇ ವಯಸ್ಸು. ನಮ್ಮ ಮನೆಗೆ ಬಂದಮೇಲೆ ಅವಳಿಗೆ ನಾನೇ ಓದುಬರಹ ಕಲಿಸಿದ್ದು. ನನಗೆ ನೆನಪಿಲ್ಲದ ಘಟನೆಗಳನ್ನೆಲ್ಲ ಅವಳು ಬರೆದಿಟ್ಟಿದ್ದಾಳೆ. ಅದನ್ನು ಅವಳ ಮಾತಿನಲ್ಲಿ ಕೇಳುವುದೇ ಚೆನ್ನು :

'ಮದುವೆಯ ದಿನ ಮೊದಲ ಸಲ ನೋಡಿದೆ. ಎಂಥ ಸುಂದರ ಸುಕುಮಾರ ಮೂರ್ತಿ ನನ್ನ ಭಾವೂಜಿ! ಬಲು ಚೂಟಿಯ ಹುಡುಗ. ಊಟದ ಸಮಯದಲ್ಲಿ, ''ವಹಿನೀ, ಅಣ್ಣನಿಗೆ ತಿನ್ನಿಸು'' ಎನ್ನುತ್ತಿದ್ದ. ಅನಂತರ, ''ಬಾಬಾ, ಈಗ ನಿನ್ನ ಸರದಿ'' ಎನ್ನುತ್ತಿದ್ದ. ಯಾರಾದರೂ ದಕ್ಷಿಣೆ ಕೊಡುವುದಕ್ಕೆ ಬಂದರೆ, ''ನಮ್ಮ ಅತ್ತಿಗೆಗೆ ಕೊಡಿ'' ಎನ್ನುವುದು. ಅವರು ಕೊಡುತ್ತಲೇ ಅದನ್ನು ಫಟಕ್ಕನೆ ನನ್ನ ಕೈಯಿಂದ ಕಿತ್ತುಕೊಳ್ಳುವುದು ! ಹಿರಿಯರು ''ಯಾಕೋ ?'' ಎಂದರೆ, ''ವ್ಹಾ, ವ್ಹಾ ; ಅತ್ತಿಗೆ ಈಗ ನಮ್ಮವಳು. ಅಂದಮೇಲೆ ದಕ್ಷಿಣೆಯೂ ನಮ್ಮದೇ'' ಅನ್ನುವುದು. ನಾಲ್ಕು ದಿನ ಮದುವೆ ಮಂಟಪದ ತುಂಬ ಅವನ ಓಡಾಟ ಹೇಳತೀರದು. ಭಗೂರಿಗೆ ಹೊರಡುವ ಸಮಯ ಬಂತು. ಆಗ ಭಾವೂಜಿ ದೊಡ್ಡಸ್ತಿಕೆಯಿಂದ ನಮ್ಮ ತಾಯಿಗೆ ಹೇಳಿದ : ''ವಹಿನಿಯ ತಾಯಿ! ನೀವೇನೂ ಚಿಂತಿಸಬೇಡಿ. ಅತ್ತಿಗೆಯ ಕಣ್ಣು ನೋವಿಗೆ ನಾವು ಔಷಧಿ ಹಾಕಿ ವಾಸಿಮಾಡುತ್ತೇವೆ.''

ನಮ್ಮ ಅಣ್ಣ ಬಾಬಾನಿಗೂ ನನಗೂ ಮನೆಯಲ್ಲಿ ಜಗಳ ಆಗುತ್ತಿದ್ದುದುಂಟು. ಅವನು ಹೊಡೆಯಲು ಬಂದರೆ, ನಾನು ಅತ್ತಿಗೆಯ ಹತ್ತಿರ ಓಡಿಬಿಡುತ್ತಿದ್ದೆ. 'ನನ್ನ ದುರ್ಭೇದ್ಯ ಕೋಟೆ ಹೇಗಿದೆ! ಇಲ್ಲಿ ಬಂದು ನನ್ನನ್ನು ಹಿಡಿಯುವ ಛಾತಿ ಯಾರಿಗಿದೆ ?' ಎಂದು ಸವಾಲು ಹಾಕಿ ರೇಗಿಸುತ್ತಿದ್ದೆ. ಅತ್ತಿಗೆಯ ಹತ್ತಿರ ಸುಳಿಯಲು ಅಣ್ಣನಿಗೆ ನಾಚಿಕೆ! ಆದರೂ ಒಮ್ಮೆ ಕೋಪ ಮಿತಿಮೀರಿ, ಈರುಳ್ಳಿಯಿಂದ ಹೊಡೆಯತೊಡಗಿದ

ನಾನು ದೊಡ್ಡ ದನಿಯಲ್ಲಿ ಕೂಗಿದೆ : 'ಬಾಬಾ ಅತ್ತಿಗೆಯನ್ನು ಹೊಡೆಯುತ್ತಿದ್ದಾನೆ!' ಬಾಬಾ ಸರಕ್ಕನೆ ಹೊರಕ್ಕೆ ಓಡಿಬಿಟ್ಟ.

1897ರ ಜೂನ್ ಇರಬಹುದು. ನಾನು ನಾಸಿಕಕ್ಕೆ ಹೋಗಬೇಕಾಗಿ ಬಂತು. ಅಲ್ಲಿ ಶಿಕ್ಷಣ ಮುಂದುವರಿಸಬೇಕಾಗಿತ್ತು. ನನ್ನ ಆ ದಾರಣಾನದಿಯ ಸಿಹಿನೀರು, ಮಾವಿನ ತೋಪಿನ ತಂಪು, ಪಾರಿಜಾತದ ಮುಗುಳ್ನಗೆ, ಬಾಪೂಕಾಕಾನ ಕಥೆಗಳು, ರೈತರ ಪ್ರೀತಿ, ಗೆಳೆಯರ ಆತ್ಮೀಯತೆ, ನೆರೆಹೊರೆಯವರ ಅಕ್ಕರೆ, ನನ್ನ ಯೇಸೂವಹಿನಿ - ಯಶೋದಾ ಅತ್ತಿಗೆಯ - ಮಮತೆ ಎಲ್ಲವೂ ಒಮ್ಮೆಗೇ ನೆನಪಾಯಿತು. ಮನೆಯ ಮುಂದೆ ಸೇರಿದ್ದ ಎಷ್ಟೋ ಹೆಂಗಸರಿಗೆ, ಗಂಡಸರಿಗೆ ಕಣ್ಣೀರು ಬಂತು. ಗೆಳೆಯರಲ್ಲಿ ಕೆಲವು ಬಲಗೈ ಭಂಟರಂತೂ ನನ್ನ ಜತೆಗೆ ನಾಸಿಕದವರೆಗೂ ಬಂದರು.





# ಹವಿಸ್ಸು ಮೂರು

ನಾಸಿಕದ 'ಕಾನಡ್ಯಾ ಮಾರುತಿ' ಬೀದಿಯಲ್ಲಿ ನನ್ನ ಅಣ್ಣ ಬಾಬಾನ ಕೊಠಡಿಯಿತ್ತು. ಅಲ್ಲಿಯೇ ನನ್ನ ವಾಸ. ಗಂಗಾರಾಮನ ಖಾನಾವಳಿಯಲ್ಲಿ ಊಟ. ಹಸಿವಾದಾಗ ಹಲವಾಯಿ ಅಂಗಡಿಯಲ್ಲಿ ಜಿಲೇಬಿ ತಿನ್ನುತ್ತಿದ್ದೆ. ಕೊಠಡಿಗೆ ಬಂದುಹೋಗುತ್ತಿದ್ದ ಬಾಬಾನ ಜೊತೆಗಾರರು ನನಗಿಂತ ವಯಸ್ಸಿನಲ್ಲಿ ದೊಡ್ಡವರು. ನಾಟಕದ ಹಾಡು, ಕಾಡುಹರಟೆ, ಅಗ್ಗದ ಹಾಸ್ಯ ಇದರಲ್ಲೆ ಸಮಯ ಹಾಳುಮಾಡುತ್ತಿದ್ದರು. ಅವರಿಗೆ ಇಸ್ಪೀಟು ಹಾಗೂ ತಂಬಾಕಿನ ಷೋಕಿ. ನಾನು ಮಾತ್ರ ಏಕಾಕಿ! ಅವರೇನೂ ಅಂಥ ತೀರ ಬದ್ಮಾಷ್ ಜನರಲ್ಲ; ಸಾಮಾನ್ಯವಾಗಿ ಶಾಲಾ - ಕಾಲೇಜುಗಳಲ್ಲಿ ಕಾಣುವ ಉಡಾಳ ವಿದ್ಯಾರ್ಥಿಗಳಂತೆ ಇದ್ದರು, ಅಷ್ಟೆ. ನನ್ನ ದಿನಚರಿಯಾದರೋ ಪಾಠಗಳ ಅಭ್ಯಾಸ, ವ್ಯಾಯಾಮ, ವೃತ್ತಪತ್ರಿಕೆಗಳ ಹಾಗೂ ಅನ್ಯಪುಸ್ತಕಗಳ ವಾಚನ. ಬಿಡುವು ಸಿಕ್ಕಿದಾಗ ರಾಜಕಾರಣದ ಬಗ್ಗೆ ಚರ್ಚಿಸಬೇಕೆಂದು ಆಸೆ. ಆದರೆ ಅದಕ್ಕೆ ಸರಿಯಾದ ಜೋಡಿ ಇದ್ದರಲ್ಲವೆ ? ಪಟ್ಟಣದ ಈ ಸುಶಿಕ್ಷಿತರಿಗಿಂತ ನನ್ನ ಹಳ್ಳಿಗಾಡಿನ ಅಶಿಕ್ಷಿತ ಗೆಳೆಯರೇ ಹೆಚ್ಚು ಜ್ಞಾನಿಗಳೂ, ದೇಶಭಕ್ತರೂ, ಸುಶೀಲರೂ ಆಗಿ ಕಂಡರು

ನಾನು ಸೇರಿದ ಶಾಲೆ 'ಶಿವಾಜಿ ಸ್ಕೂಲ್.' ರಾನಡೆ, ಜೋಶಿ ಮತ್ತು ಅನಂತವಾಮನ ಬರ್ವೆ ಸಂಚಾಲಕರು. 'ನಾಸಿಕ ವೈಭವ'ದ ಸಂಪಾದಕ ಖರೆಯವರಿಗೆ ನಾನು ಬರಹಗಾರನೆಂಬ ವಿಷಯ ಗೊತ್ತಾಯಿತು. ಅವರ ಪ್ರೋತ್ಸಾಹದಿಂದ 'ಹಿಂದು ಸಂಸ್ಕೃತಿಯ ಶ್ರೇಷ್ಠತೆ' ಎಂಬ ಲೇಖನ ಬರೆದೆ. ಅದನ್ನವರು ಅಗ್ರಲೇಖನವಾಗಿ ಪ್ರಕಟಿಸಿದರು  ಬರ್ವೆ ಪ್ರಸಿದ್ಧ ನಾಟಕಕಾರರು ಹಾಗೂ 'ಲೋಕಸೇವಾ' ಪತ್ರಿಕೆಯ ಸಂಪಾದಕರು ; ಲೋಕಮಾನ್ಯ ತಿಲಕರ ದೃಷ್ಟಿಕೋನ ಉಳ್ಳವರು. ಗಣೇಶೋತ್ಸವ ಹಾಗೂ ಶಿವಾಜಿ ಉತ್ಸವಗಳಲ್ಲಿ ಮೇಳ, ಗೀತೆ ಹಾಗೂ ಭಾಷಣಗಳ ಮೂಲಕ ರಾಷ್ಟ್ರೀಯ ಜಾಗೃತಿ ನಿರ್ಮಿಸುತ್ತಿದ್ದವರು. ನಾನು ಅವರ ಕವನಗಳನ್ನು ತಲ್ಲೀನನಾಗಿ ಕೇಳುತ್ತಿದ್ದೆ, ಹಾಡುತ್ತಿದ್ದೆ :

**ಹೇ ಗಣಪತಿ ! ಹಿಂದೊಮ್ಮೆಗೆ ಗುರುವಾಗಿದ್ದೆವು ವಿಶ್ವಕ್ಕೆ**
**ಈಗಯ್ಯೋ ಸಿಲುಕಿರುವೆವು ಪರಕೀಯರ ದಾಸ್ಯಕ್ಕೆ**
**ಜಗಕೆಲ್ಲಕು ಪಥ ತೋರಿದ ದಿವ್ಯೋನ್ನತ ಜ್ಞಾನದಲಿ**
**ಈಗೇನುಳಿದಿದೆ ? ತೊಳಲುತಲಿರುವೆವು ಕಡು ದೈನ್ಯದಲಿ !**

ನಾಸಿಕದ 'ವಕ್ತೃತ್ವೋತ್ತೇಜಕ ಸಭೆ' ನಡೆಸಿದ ಸ್ಪರ್ಧೆಯಲ್ಲಿ ಆ ವರ್ಷ ನನಗೇ ಮೊದಲ ಬಹುಮಾನ. ಅಂದು ಬರ್ವೆಯವರು ತಮ್ಮ ಭಾಷಣದಲ್ಲಿ ಹೇಳಿದರು : 'ಅಷ್ಟು ಉತ್ತಮ ಭಾಷಣ ಕೇಳಿ, ಅದು ಬೇರೆಯವರು ಬರೆದುಕೊಟ್ಟಿರಬಹುದೇ ಅನ್ನುವ ಸಂಶಯ ತೀರ್ಪುಗಾರರಿಗೆ ಬಂದಿತ್ತು. ಆದರೆ ಅದು ಈ ಹುಡುಗನೇ ಬರೆದುದೆಂದೂ, ಅಂಥದೇ ಇನ್ನೂ ಅನೇಕ ಉತ್ತಮ ಲೇಖನಗಳನ್ನು ಇವನು ಬರೆದಿದ್ದು, ಅವು ಪತ್ರಿಕೆಗಳಲ್ಲಿ ಪ್ರಕಟವಾಗಿವೆಯೆಂದೂ ತಿಳಿಸಿದ ನಂತರ ತೀರ್ಪುಗಾರರಿಗೆ ಆನಂದವಾಯಿತು. ಮೋಹಕ ರೂಪದ ಈ ಎಳೆಯನ ಅಲಂಕೃತ ಭಾಷೆ, ಶಾಸ್ತ್ರಶುದ್ಧ ಲೇಖನ ಪದ್ಧತಿ, ಅಸ್ಖಲಿತ ವಕ್ತೃತ್ವ ಕಂಡು ಯಾರಾದರೂ ಬೆರಗಾಗಬೇಕು.'

ಬಳವಂತ ಖಂಡೂಜಿ ಪಾರಖೆಯವರು ಶೀಘ್ರಕವಿ ; ನಾಸಿಕದ ಸಾರ್ವಜನಿಕ ಮುಖಂಡರು, ವಕೀಲರು, ಮೇಲಾಗಿ ನಮ್ಮ ದಾಮೂ ಅಣ್ಣನ ಆಪ್ತರು. ನಾನು ಭಾಷಣ ಸ್ಪರ್ಧೆಯಲ್ಲಿ ಗೆದ್ದುದಕ್ಕಾಗಿ ಅವರಿಗೆ ಅಪಾರ ಆನಂದ. ದಾರಿಯಲ್ಲಿ ಸಿಕ್ಕಿದಾಗಲೆಲ್ಲಾ, ತಲೆ ನೇವರಿಸಿ, 'ಮಗು, ಸಾವರಕರ್ ಹೆಸರನ್ನು ಸಾರ್ಥಕ ಮಾಡಬೇಕು. ತಿಳಿಯಿತೋ! ಯಾರ ಕರ (ಕೈ) ರಾಷ್ಟ್ರವನ್ನು ಸವರುತ್ತದೋ (ಚೇತನಗೊಳಿಸುತ್ತದೋ), ಅಂಥವರೇ ಸಾವರಕರ್ ! ನೀನೂ ಹಾಗೆಯೇ ಆಗಬೇಕು, ನೋಡು' ಎಂದು ವಿನೋದವಾಗಿ ಹೇಳುತ್ತಿದ್ದರು.

ಗಣಪತಿ ಹಬ್ಬಕ್ಕೆ ಊರಿಗೆ ಹೋದಾಗ ರಾಜಾ, ಪರಶಾ, ಬಾಪು, ಬಾಳು, ಪ್ರಭೃತಿಗಳೆಲ್ಲ ಸೇರಿದರು ; ಅದ್ಧೂರಿಯಿಂದ ಗಣೇಶೋತ್ಸವ ನಡೆಸಲು ಸಿದ್ಧತೆ ಮಾಡಿದೆವು. ಆಗ ನಾನು ರಚಿಸಿದ ಹಾಡುಗಳು ಜನಪ್ರಿಯವಾದವು. ಆ ಸಂದರ್ಭದಲ್ಲೆ ನನ್ನ ಮೊಟ್ಟಮೊದಲ ಸಾರ್ವಜನಿಕ ಭಾಷಣವಾಯಿತು. ನಮ್ಮ ದೊಡ್ಡಪ್ಪ ಬಾಪೂಕಾಕಾ ಸಭೆಯಿಂದ ಎದ್ದು ಬಂದು ಭಾಷಣಕಾರನನ್ನು ಅಪ್ಪಿಕೊಂಡು ಮುದ್ದಿಸಿಬಿಟ್ಟರು. 'ವ್ಹಾ, ಬಾಳ್ಯಾ, ವ್ಹಾ! ಎಂಥ ಭರ್ಜರಿ ಭಾಷಣ ಬಿಗಿದೆಯೋ! ನಮ್ಮ ಮನೆತನಕ್ಕೆ ಹೆಸರು ತರುತ್ತೀ ಕಣೋ!' ಎಂದರು.

ನಾಸಿಕಕ್ಕೆ ಹಿಂದಿರುಗುತ್ತಲೇ ಅಲ್ಲಿಯೂ ಗಣೇಶೋತ್ಸವ ವೈಭವದಿಂದ ನಡೆದ ಸುದ್ದಿ ತಿಳಿಯಿತು. ಅದರಿಂದ ಸ್ಫೂರ್ತಿಗೊಂಡು ಒಂದು ಕವನ ಬರೆದೆ. ದಾಸ್ಯದ ದುಃಖವನ್ನೂ ಅದರಲ್ಲಿ ಸೇರಿಸಿದೆ :

**ರಾಜಾ ಪರಕೀ ಶಿಕ್ಷಣ ಪರಕೀ ಲಕ್ಷ್ಮೀ ಹಿ ಜಾಹಲೀ ಪರಕೀ**
**ಆತಾ ಪ್ರಭೋ ದಯಾಳಾ ತುಜವಿಣ ಕೋಣೇಚ ನಾ ರಿಪೂ ಹಾಂಕಿ ॥**

*(ಪರಕೀಯ ರಾಜ, ಪರಕೀಯ ಶಿಕ್ಷಣ ; ಧನವೂ ಪರಕೀಯರ ಸ್ವತ್ತಾಗಿದೆ. ಹೇ, ದಯಾಮಯ ಗಣಪತಿ ! ಶತ್ರುಗಳನ್ನು ಹೊರದೂಡಲು ಈಗ ನಮಗೆ ನೀನೇ ಗತಿ !)*

1896ರಲ್ಲಿ ಮಹಾರಾಷ್ಟ್ರದಲ್ಲಿ ಭೀಕರ ಕ್ಷಾಮ ತಲೆಹಾಕಿತು. ಜನ ಹಸಿವಿನಿಂದ ಕಂಗಾಲಾದರು. ಅವರಿಂದ ನಿರ್ದಯವಾಗಿ ತೆರಿಗೆ ವಸೂಲು ಮಾಡುತ್ತಿದ್ದ ಇಂಗ್ಲಿಷ್ ಸರಕಾರ, ನೆರವು ನೀಡಲು ನಿರಾಕರಿಸಿತು. ಕ್ರಿಶ್ಚನ್ ಪಾದ್ರಿಗಳಿಗೆ ಅದೇ ಸುಗ್ಗಿ ! ಹಿಡಿಕೂಳಿನ ಆಸೆ ತೋರಿಸಿ ಮತಾಂತರ ಮಾಡಲು ತೊಡಗಿದರು.

ಇಂಥ ವಿಷಮ ಸನ್ನಿವೇಶದಲ್ಲಿ ಪ್ಲೇಗ್ ರೋಗ ತಲೆಹಾಕಿತು. ಅದು ವರೆಗೆ ಹಿಂದುಸ್ಥಾನದ ಜನ ಕಂಡು ಕೇಳರಿಯದ ಕಾಹಿಲೆ ಅದು. ಇಂಗ್ಲೆಂಡು ನೀಡಿದ್ದ ಬಳುವಳಿ ಅದು ! ಮುಂಬೈನಿಂದ ಪುಣೆವರೆಗೂ ಪ್ಲೇಗ್ ವ್ಯಾಪಿಸಿತು. ಮನೆಮನೆಯಲ್ಲೂ ಹೆಣಗಳು ಬೀಳಲಾರಂಭಿಸಿದವು. ಸಾಗಿಸುವುದಕ್ಕೂ ಜನರಿಲ್ಲ.

ಎಲ್ಲೆಲ್ಲೂ ಚೀತ್ಕಾರ, ಗೋಳಾಟ, ಭೀಕರ ದೃಶ್ಯಗಳು.

ಸರಕಾರ 'ಪ್ಲೇಗ್ ನಿವಾರಣೆ' ಯ ಕ್ರಮ ಕೈಗೊಂಡಿತು. ಅದು ಹೇಗೆ? ಇಂಗ್ಲಿಷ್ ಅಧಿಕಾರಿಗಳೂ, ಸೈನಿಕರೂ ಮನೆಗಳಿಗೆ ನುಗ್ಗುತ್ತಿದ್ದರು. ದವಸ ಧಾನ್ಯ, ನಗನಾಣ್ಯ ಲೂಟಿ ಮಾಡುವುದು. ಅಡ್ಡಿಯಾದವರನ್ನು ಬೂಟಿನಿಂದ ಒದೆಯುವುದು. ದೇವರ ವಿಗ್ರಹಗಳನ್ನು ಒಡೆದು ಬೀದಿಗೆ ಎಸೆಯುವುದು. ಸ್ತ್ರೀಯರ ಮಾನ ಭಂಗ ಮಾಡುವುದು. ರೋಗರಹಿತರನ್ನು ಊರಾಚೆ ಅಟ್ಟುವುದು. ನರಳುವ ರೋಗಿಗಳನ್ನೂ ಹೆಣದ ಜತೆಗೇ ಸೇರಿಸಿ, ಇಡೀ ಮನೆಗೆ ಬೆಂಕಿ ಹಚ್ಚಿ ಆನಂದದಿಂದ ನೋಡುವುದು!

ಬಡ ಭಾರತೀಯರ ಬರಿಹೊಟ್ಟೆಯ ಮೇಲೆ ಬ್ರಿಟಿಷ್ ಘೋರಕ್ಕಸರ ಬೂಟುಕಾಲಿನ ನರ್ತನ! 1897ರ ಫೆಬ್ರವರಿಯಲ್ಲಿ ಪ್ಲೇಗ್ ತಡೆಗಟ್ಟಲು 'ಮಾರ್ಷಲ್ ಲಾ' ಘೋಷಣೆ! ಎಂಥ ವಿಡಂಬನೆ! ಫೆ. 17ರಂದು ರ್‍ಯಾಂಡ್ ಎಂಬ ದಬ್ಬಾಳಿಕೆಗಾರ ಪುಣೆಯ ಪ್ಲೇಗ್ ಕಮೀಶನರ್ ಆಗಿ ಅಧಿಕಾರ ವಹಿಸಿಕೊಂಡ. 'ರ್‍ಯಾಂಡ್ ಶಾಹಿ' ದುರಾಚಾರದಲ್ಲೂ ದಬ್ಬಾಳಿಕೆಯಲ್ಲೂ ಮೊಗಲ್ ಶಾಹಿಯನ್ನೂ ಮೀರಿಸಿತು. ತಿಲಕರು ಕೆರಳಿ, 'ಇಂಗ್ಲಿಷ್ ಠಾಮಿಗಳನ್ನು ಜನಗಳೇ ಯೋಗ್ಯವಾಗಿ ವಿಚಾರಿಸಿಕೊಳ್ಳಬೇಕು' ಎಂದು ಸೂಚನೆ ಇತ್ತರು. 'ಕಾಳ್' ಪತ್ರಿಕೆ ಸಂಪಾದಕ ಶಿವರಾಮಪಂತ ಪರಾಂಜಪೆಯವರು, 'ರಾಷ್ಟ್ರೀಯ ಅಪಮಾನಕ್ಕಿಂತಲೂ ಪ್ರಾಣ ದಾನವೇ ಮೇಲು' ಎಂದು ಸಾರಿದರು. ಒಂದು ಭಾಷಣದಲ್ಲಂತೂ ಲೋಕಮಾನ್ಯರು, 'ದೇಶ ಹಾಗೂ ಸಮಾಜದ ಸಾಮೂಹಿಕ ಹಿತಕ್ಕಾಗಿ ಶತ್ರುವನ್ನು ಕೊಲ್ಲುವುದು ಪಾಪವಲ್ಲ' ಎಂದು ಘೋಷಿಸಿದರು.

ಕಲ್ಲುಗಳೂ ಕದನಕ್ಕೇಳುವಂತೆ ಮಾಡುವ ಕೆಣಕುವಾಣಿ! ಇನ್ನು ಮಾನವರು ಸುಮ್ಮನಿದ್ದಾರೆಯೇ? ಚಾಫೇಕರ್ ಮನೆತನದ ದಾಮೋದರ ಮತ್ತು ಅವನ ತಮ್ಮ ಬಾಲಕೃಷ್ಣ ಪುಣ್ಯ ಸಂಪಾದನೆಗೆ ಮುಂದಾದರು. ಒಬ್ಬನ ವಯಸ್ಸು 27; ಇನ್ನೊಬ್ಬನದು 24. ಇಬ್ಬರೂ ವಿವಾಹಿತರು; ಒಂದೊಂದು ಮಗು ಇದ್ದವರು. ಆದರೆ ಸ್ವಜನ ಪ್ರೀತಿಗಿಂತ ಸ್ವದೇಶಪ್ರೀತಿ ಅವರಿಗೆ ಹೆಚ್ಚು. ಸ್ವಾರ್ಥಕ್ಕಿಂತಲೂ ಸ್ವಧರ್ಮಾಚರಣೆಯೇ ಅವರಿಗೆ ಪ್ರಿಯ. ಆ ಪಾರ್ಥಸದೃಶರ ಮನೋರಂಗದ ಕುರುಕ್ಷೇತ್ರದಲ್ಲಿ ತಿಲಕರ, ಪರಾಂಜಪೆಯವರ ಗೀತಾವಾಣಿ ಮೊಳಗಿತು. ಅವರು ಉತ್ಸಾಹಿ ಯುವಕರನ್ನು ಕೂಡಿಸಿ 'ಚಾಫೇಕರ್ ಕ್ಲಬ್' ಸ್ಥಾಪಿಸಿದರು. ಶಸ್ತ್ರಾಸ್ತ್ರ ಸಂಗ್ರಹಿಸಿದರು. ಅಸಹಾಯಕರ ಕಣ್ಣೀರು ಒರೆಸಲು, ಅಬಲೆಯರ ಪಾವಿತ್ರ್ಯ ಉಳಿಸಲು ಸಿದ್ಧರಾದರು.

1897 ಜೂನ್ 22 ಮಂಗಳವಾರ. ಅಂದು ವಿಕ್ಟೋರಿಯಾ ರಾಣಿಯ ಪಟ್ಟಾಭಿಷೇಕದ ವಜ್ರ ಮಹೋತ್ಸವ. ಅತ್ತ ದೇಶದಾದ್ಯಂತ ಕ್ಷಾಮದಿಂದ, ಪ್ಲೇಗಿನಿಂದ ನರಳುತ್ತಿದ್ದ ಪ್ರಜಾಕೋಟಿ; ಅವರ ಮೇಲೆ ಸೈನಿಕರ ಬೆದರಿಕೆ, ಅಧಿಕಾರಿಗಳ ದಬ್ಬಾಳಿಕೆ. ಇತ್ತ ಪುಣೆಯ ಸರಕಾರಿ ಭವನದಲ್ಲಿ ದೀಪೋತ್ಸವ; ಕುಡಿತ ಕುಣಿತಗಳ ಅಮಲೇರಿದ ಬ್ರಿಟಿಷ್ ಅಧಿಕಾರಿಗಳ ಮೇಜವಾನಿ!

ಚಾಫೇಕರರ ಮನೆಯೊಳಗೆ ಏನು ನಡೆದಿತ್ತು? ದಾಮೋದರ ದೇವಗೃಹದಲ್ಲಿ ಧ್ಯಾನಮಗ್ನರಾಗಿ ಕುಳಿತಿದ್ದ. ಇಡೀ ದಿನ ನಿರಶನ ಆಚರಿಸಿ ತನ್ನ ಕಾರ್ಯಸಿದ್ಧಿಗಾಗಿ ಪ್ರಾರ್ಥಿಸುತ್ತಿದ್ದ. ಕತ್ತಲಾಗುತ್ತಲೇ ಶಸ್ತ್ರಧಾರಿಯಾಗಿ ತಮ್ಮನೊಡನೆ ಹೊರಬಿದ್ದ.

ಸರಕಾರಿ ಭವನದಲ್ಲಿನ ಸಮಾರಂಭ ನಡುರಾತ್ರಿಗೆ ಮುಗಿಯಿತು. ರ್‍ಯಾಂಡ್ ಮತ್ತು ಲೆಫ್ಟಿನೆಂಟ್ ಐರ್ಸ್ಟ್ ಪತ್ನಿಸಮೇತರಾಗಿ ತಂತಮ್ಮ ಕೋಚು ಹತ್ತಿದರು. ಗಣೇಶ ಖಿಂಡಿ ದಾರಿಯಲ್ಲಿ ಮರಗಿಡಗಳು ಹೆಚ್ಚು, ಅವುಗಳ ನಡುವಿನಿಂದ ಚಾಫೇಕರ್ ಸೋದರರು ಸಿಂಹಗಳಂತೆ ಗಾಡಿಯೊಳಕ್ಕೆ ಹಾರಿದರು. ಆಂಗ್ಲ

ಅಧಿಕಾರಿಗಳಿಗೆ ಗುರಿಯಿಟ್ಟು ಗುಂಡು ಹಾರಿಸಿದರು. ರಾವಣ - ಕುಂಭಕರ್ಣರ ಅಂತ್ಯವಾಯಿತು.

ಗಣೇಶ ಶಂಕರ ದ್ರವಿಡ ಎಂಬ ದ್ರೋಹಿ ದಾಮೋದರನ ಬಂಧನಕ್ಕೆ ಕಾರಣನಾದ. ಆ ವೇಳೆಗಾಗಲೇ ಸರಕಾರ ತಿಲಕರನ್ನು ಬಂಧಿಸಿ 18 ತಿಂಗಳ ಶಿಕ್ಷೆ ವಿಧಿಸಿತ್ತು. ನ್ಯಾಯಾಲಯದಲ್ಲಿ ದಾಮೋದರ, 'ಹೌದು, ನಾನೇ ರ್‍ಯಾಂಡನನ್ನು ಸಂಹರಿಸಿದೆ. ನನ್ನ ಸ್ವಜನರ ಮೇಲಾದ ಅತ್ಯಾಚಾರದ ಸೇಡು ತೀರಿಸಿಕೊಂಡೆ' ಎಂದು ನಿರ್ಭಯವಾಗಿ ನುಡಿದ. ಅವನಿಗೆ ಫಾಸಿ ಶಿಕ್ಷೆ ಆಯಿತು. ತಿಲಕರು ಇದ್ದುದೂ ಅವನಿದ್ದ ಸೆರೆಮನೆಯಲ್ಲೇ. ಒಂದು ದಿನ ಅವನಿಗೆ ಅವರ ದರ್ಶನ ಲಭಿಸಿತು. ಅವನು ಲೋಕಮಾನ್ಯರಿಗೆ ನಮಸ್ಕರಿಸಿ ಪ್ರಾರ್ಥಿಸಿದ; 'ಸಾವಿನ ಸ್ವಾಗತಕ್ಕೆ ಸಿದ್ಧನಾಗುತ್ತಿದ್ದೇನೆ. ನಿಮ್ಮ ಬಳಿ ಇರುವ ಭಗವದ್ಗೀತೆಯನ್ನು ಕೊಟ್ಟರೆ ಧನ್ಯನಾಗುತ್ತೇನೆ.'

1898ರ ಏಪ್ರಿಲ್ 18ರಂದು ದಾಮೋದರನ ವೀರಮರಣದ ದಿನ. ಬೆಳಿಗ್ಗೆ ಎದ್ದು ಶುಚಿರ್ಭೂತನಾದ. ತಿಲಕರು ತಮ್ಮ ಸಹಿ ಹಾಕಿಕೊಟ್ಟಿದ್ದ ಗೀತಾ ಪುಸ್ತಕವನ್ನು ಕೈಯಲ್ಲಿ ಹಿಡಿದ.

**ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾಂತರಪ್ರಾಪ್ತಿಃ ಧೀರಸ್ತತ್ರನ ಮುಹ್ಯತಿ ॥**

*(ಮನುಷ್ಯರಿಗೆ ಬಾಲ್ಯ, ಯೌವನ, ಮುಪ್ಪುಗಳು ಬಂದು ಹೋಗುವಂತೆಯೇ ಮರಣವೂ ಬಂದು ಹೋಗುತ್ತದೆ; ಧೀರರು ಆದರಿಂದ ಎಂದೂ ವಿಚಲಿತರಾಗುವುದಿಲ್ಲ.)*

- ಎಂದು ಆನಂದದಿಂದ ಹಾಡುತ್ತಾ ಬಲಿವೇದಿಯ ಮೆಟ್ಟಲೇರಿದ!

ಪತ್ರಿಕೆಗಳಲ್ಲಿ ವಾರ್ತೆ ಬಂತು; ಓದಿದೆ. ಒಂದು ಬಾರಿ, ಎರಡು ಬಾರಿ, ಅನೇಕ ಬಾರಿ ಓದಿದೆ. ಶವಕ್ಕೂ ಮೈನವಿರೇಳಿಸುವ ವಾರ್ತೆ. ಎಂಥವರನ್ನೂ ಉತ್ತೇಜಿತಗೊಳಿಸುವ ರುದ್ರಮೋಹಕ ವೀರಗಾಥೆ. ನನಗಾದ ಅನುಭವದಲ್ಲಿ ಶತಾಂಶವನ್ನೂ ವರ್ಣಿಸಲಾರೆ. ಊಟ ಸೇರದೆ, ನಿದ್ರೆ ಹತ್ತದೆ ಪತ್ರಿಕೆಯ ಪುಟ ಪುಟವನ್ನೂ ಕಂಬನಿಯಿಂದ ತೋಯಿಸಿಬಿಟ್ಟೆ.

ನಾನಾಗ ಅನಾರೋಗ್ಯದ ನಂತರ ವಿಶ್ರಾಂತಿಗೆಂದು ನಮ್ಮ ಹಳ್ಳಿಯಾದ ಭಗೂರಿನಲ್ಲೇ ಇದ್ದೆ. ಅಲ್ಲಿ ಚಾಫೇಕರನ ಹೆಸರು ಉಚ್ಚರಿಸಲು ಸಹ ಯಾರಿಗೂ ಉಸಿರಿಲ್ಲ. ಆ ಶಬ್ದ ಕೇಳುತ್ತಲೇ ದೊಡ್ಡ ದೊಡ್ಡವರಿಗೂ ನಡುಕ! ಎಷ್ಟೋ ಪತ್ರಿಕೆಗಳು ಆತನನ್ನು ದೇಶಘಾತಕಿ ಎಂದವು; ಜಾತಿಗೆ ಕಲಂಕ ಎಂದವು. ತಲೆತಿರುಕ, ಬುದ್ಧಿಗೆಟ್ಟವನು ಎಂದೆಲ್ಲ ದೂಷಿಸಿದವು. ಒಂದೊಂದು ಕ್ಷಣ ದುಃಖದಿಂದ ನನ್ನ ಮನಸ್ಸು ಮುದುಡಿಹೋಗುತ್ತಿತ್ತು. ಮರುಕ್ಷಣವೆ ಕ್ರೋಧದಿಂದ ಭಗ್ಗನೆ ಉರಿದೇಳುತ್ತಿತ್ತು. ನೂರು ಸಲ, ಸಾವಿರ ಸಲ ಮನಸ್ಸಿನೊಳಗೇ ಹೇಳಿಕೊಂಡೆ:

ಚಾಫೇಕರ್! ಜನ ಹೇಳುವುದೆಲ್ಲ ಸುಳ್ಳು, ಶುದ್ಧ ಸುಳ್ಳು. ಅದನ್ನು ನಂಬಬೇಡ. ನೀನು ದೇಶವೀರ, ನೀನು ಧರ್ಮವೀರ! ನೀನು ಶಸ್ತ್ರವೀರ, ನೀನು ರಾಷ್ಟ್ರವೀರ! ನಿನ್ನನ್ನು ಹುಚ್ಚ ಎನ್ನುವವರು ನಿಜಕ್ಕೂ ಜೀವಚ್ಛವಗಳು. ರಾಷ್ಟ್ರದ ಶತ್ರುಗಳು ಶವಕ್ಕಿಂತ ಹೆಚ್ಚಾಗಿ ಹುಚ್ಚರಿಗೇ ಅಲ್ಲವೆ ಅಂಜುವುದು? "ನೀನು ಚಿಂತಿಸಬೇಡ, ತಪ್ಪು ತಿಳಿದುಕೊಳ್ಳಬೇಡ. ಎಂಥ ನೀಚರು ಈ ಜನ! ಇವರಿಗೆ ಭಯವಾದರೆ ಹೊಗಳುವುದು ಬೇಡ, ಸುಮ್ಮನಾದರೂ ಇರಬಹುದಲ್ಲ! ಬಯ್ಯಬೇಕೇಕೆ? ಇದೇ ಜನ ನೀನು ಮಾಡಿದಂತೆಯೇ ಮಾಡುವ ರಶಿಯನ್ನರನ್ನು, ಐರಿಷರನ್ನು ಹೊಗಳಿ ವೀರಪಟ್ಟಕ್ಕೇರಿಸುತ್ತಾರೆ! ಕಾರಣ, ಅದಾದರೆ ಸಲೀಸು ಕೆಲಸ; ಸ್ವಂತಕ್ಕೆ ಏನೂ ಹಾನಿಯಿಲ್ಲ; ಇದಾದರೆ ಇಂಡಿಯನ್ ಪೀನಲ್ ಕೋಡಿನ ಭಯ!

ಚಾಫೇಕರನನ್ನು ದೂಷಿಸುವುದು, ಖಂಡಿಸುವುದು ಎಂಥ ಮುಟ್ಠಾಳ ಕೆಲಸ! ಆದರಿಂದ ದೇಶದ

ಯುವಕರ ಸ್ಫೂರ್ತಿ ದಾರಿ ತಪ್ಪುವುದಿಲ್ಲವೆ? ಆರಿ ತಣ್ಣಗಾಗುವುದಿಲ್ಲವೆ? ಚಾಫೇಕರ್ ತನ್ನ ಪ್ರಾಣಜ್ಯೋತಿ ಉರಿಸಿ ಬೆಳಗಿದ ಶತ್ರುಂಜಯ ವೀರವೃತ್ತಿಯ ಜ್ವಾಲೆ ನಂದಿಹೋಗುವುದಿಲ್ಲವೆ ? ಆಮೇಲೆ ಅದನ್ನು ಹೊತ್ತಿಸುವುದು ಎಷ್ಟು ಕಷ್ಟ! ಚಾಫೇಕರ್ ಬೆಳಗಿಸಿದ ಯಜ್ಞಕುಂಡದಲ್ಲಿ ಒಂದಾದ ನಂತರ ಒಂದು ಸಮಿಧೆ ಅರ್ಪಿಸುತ್ತಾ ಅದನ್ನು ಕೊನೆಗೊಮ್ಮೆ ಪ್ರಚಂಡ ಸ್ವಾತಂತ್ರ್ಯ ಯುದ್ಧದ ಮಹಾಯಜ್ಞವಾಗಿ ಪರಿವರ್ತಿಸ ಬೇಕಾದರೆ, ಅದರಲ್ಲಿ ನನ್ನ ಪಾಲಿನದೂ ಜವಾಬ್ದಾರಿ ಇಲ್ಲವೆ? ಚಾಫೇಕರನ ಕಾರ್ಯವನ್ನು ಹೇಗಾದರೂ ಮುಂದುವರಿಸಲೇಬೇಕಲ್ಲವೆ? ಹಾಗಾದರೆ ನಾನೇ ಆ ಕೆಲಸ ಕೈಗೊಳ್ಳಬಾರದೇಕೆ? ನನ್ನ ಜೀವನಸಮಿಧೆ ಯಿಂದಲೇ ಆ ಹೋಮ ಜರುಗಿಸಬಾರದೇಕೆ?

ಕ್ಷಣಕ್ಷಣವೂ ತಳಮಳದಿಂದ ಚಡಪಡಿಸಿದೆ. ನಾಲ್ಕಾರು ದಿನ ಶಾಂತಿ ಸಮಾಧಾನಗಳಿಲ್ಲದೆ ಹಳ ಹಳಿಸಿದೆ. ಕಡೆಗೆ ನನ್ನ ಕೊಟ್ಟಕೊನೆಯ ಆಶ್ರಯದ ನೆನಪಾಯಿತು. ನನಗೆ ಸಮಾಧಾನ ನೀಡುವ ಶಕ್ತಿಯ ಜ್ಞಾಪಕವಾಯಿತು. ಯಾರ ಬಳಿ ನನ್ನೆಲ್ಲ ಸುಖದುಃಖ ತೋಡಿಕೊಳ್ಳುತ್ತಿದ್ದೆನೋ, ಯಾರು ನಗುಮೊಗ ದಿಂದ ಅದನ್ನೆಲ್ಲ ಶಾಂತವಾಗಿ ಕೇಳಿ ಸಾಂತ್ವನ ನೀಡಿ ಕಳುಹಿಸುತ್ತಿದ್ದಳೋ ಆ ನನ್ನ ತಾಯಿಯ ಬಳಿಗೆ - ಆ ನನ್ನ ಕುಲಸ್ವಾಮಿನಿಯ ಸನ್ನಿಧಿಗೆ ಧಾವಿಸಿ ಹೋದೆ.

ಆಗ ಯಾರ ಅಡ್ಡಿಯೂ ಇಲ್ಲ. ಮನೆಯವರಿಗೆಲ್ಲ ಸುಖ ನಿದ್ರೆ. ಊರಿಗೆಲ್ಲ, ಲೋಕಕ್ಕೆಲ್ಲ ನಟ್ಟಿರುಳ ನೀರವ ಮುದ್ರೆ. ನಮ್ಮ ಹೊಸ ಮನೆಯ ಚೊಕ್ಕವಾದ ಪೂಜಾಗೃಹ. ನೀಲಾಂಜನದಲ್ಲಿ ಮಂದಪ್ರಕಾಶದಿಂದ ಪ್ರಶಾಂತವಾಗಿ ಬೆಳಗುವ ತುಪ್ಪದ ದೀಪ. ತಂತಾನೆ ಸುಟ್ಟುಕೊಂಡು ಭಸ್ಮವಾಗುತ್ತಿದ್ದ ಅಗರುಬತ್ತಿಯ ಅವಶೇಷಗಳು. ಘಮಘಮಿಸುವ ಕೋಮಲ ಪುಷ್ಪಗಳ ಪರಿಮಳ ಹೊತ್ತ ಮಂದಾನಿಲ. ಅದರೊಡನೆ ಬೆರೆತು ಕರಗುತ್ತಿರುವ ಸುಗಂಧಿತ ಧೂಮದ ಉನ್ಮಾದಕ ಸುರಳಿಗಳು. ಒಂದೊಂದೂ ಸಂಜೆ ನಡೆದ ಪೂಜೆಗೆ ಸಾಕ್ಷಿಗಳು.

ಮಂದಾಸನದಲ್ಲಿ ದೇವಿ ಮಂಡಿಸಿದ್ದಳು. ಮಂದಹಾಸ ಬೀರುತ್ತಿದ್ದಳು. ಅವಳೆದುರು ಪದ್ಮಾಸನ ಹಾಕಿ ಕುಳಿತೆ. ಕಂಠ ಗದ್ಗದಿತವಾಗಿತ್ತು. ಮಾತು ಮೂಕವಾಗಿತ್ತು. ರೆಪ್ಪೆ ಮುಚ್ಚಿ ಧ್ಯಾನಿಸಿ ನೋಡಿದೆ; ರೆಪ್ಪೆ ಬಿಚ್ಚಿ ದೇವಿಯನ್ನೇ ದಿಟ್ಟಿಸಿ ನೋಡಿದೆ. ಇನ್ನೇನು ಮಾಡಬಲ್ಲೆ? ದೇವಿಯ ದೀಪಕ್ಕಾಗಿ ಪ್ರಾಣತೈಲ ಎರೆಯಲೆ? ಆಕೆಯ ಪಾದಕ್ಕಾಗಿ ಪ್ರಾಣಕಮಲ ತೆರೆಯಲೆ? ಊದುಬತ್ತಿಯಂತೆ ಬಾಳು ಸುಟ್ಟುಕೊಂಡು ಬೂದಿಯಾಗಿ ಹಾರಲೆ? ಸುತ್ತಮುತ್ತಲೆಲ್ಲ ಸುಗಂಧ ಬೀರಲೆ?

ಹಿಂದೊಮ್ಮೆ ನನ್ನ ಹೆತ್ತ ತಾಯಿಯನ್ನು ಕಿತ್ತುಕೊಂಡ ದೇವಿ ಇವಳು. ಆಗ ಒಂದು ವರ ಕೇಳಿದ್ದೆ: 'ದೇವಿ, ನನ್ನ ತಾಯಿಯನ್ನು ನನಗೆ ಕೊಡು, ಕೊಟ್ಟುಬಿಡು' ಎಂದು ತಿಂಗಳುಗಟ್ಟಲೆ ಗಂಟುಬಿದ್ದಿದ್ದೆ. ನನಗೆ ಸ್ವಲ್ಪ ತಿಳಿವಳಿಕೆ ಬಂದಾಗ ತಾಯಿ ವಾಪಸು ಬಂದಳು ; ನನ್ನ ಹೃದಯ ಸಿಂಹಾಸನದಲ್ಲೇ ನನ್ನ ತಾಯಿಯನ್ನು ಈ ದೇವಿ ತಂದಿಟ್ಟಳು! ಯಾವ ರೂಪದಲ್ಲಿ? ಅವರ್ಣನೀಯ ಭವ್ಯ ರೂಪದಲ್ಲಿ; ಅನಿ ರ್ವಚನೀಯ ಉನ್ನತಾಕಾರದಲ್ಲಿ. ಆದರೆ ಕಣ್ಣು ಕಾಂತಿಹೀನವಾಗಿತ್ತು! ಆಕೆಯ ದಿವ್ಯಾಭರಣಗಳೆಲ್ಲಿ? ಅದೇಕೆ ದಾಸ್ಯಶೃಂಖಲೆ, ಕೈಕಾಲುಗಳೆಲ್ಲಿ? 'ಸರಿ, ಗೊತ್ತಾಯಿತು. ಇವಳು ಭಾರತಮಾತೆ' ಎಂದುಕೊಂಡೆ.

ದೇವಿ ತನ್ನ ಪೀಠದಲ್ಲೆ ಕುಳಿತು ನಸುನಗುತ್ತಿದ್ದಳು. 'ಹೌದು' ಎನ್ನುತ್ತಿದ್ದಳು. 'ದೇವಿ, ನನ್ನ ಈ ತಾಯಿ ಯನ್ನು ಎಚ್ಚರಗೊಳಿಸು ; ದಾಸ್ಯ ಬಂಧನದಿಂದ ಬಿಡಿಸು' ಎಂದೆ. ದೇವಿ ಮಾತನ್ನೇ ಆಡಲಿಲ್ಲ. ಕೆರಳಿ ಕೇಳಿದೆ: 'ಅದಕ್ಕೆ ನನ್ನ ಜೀವನದ ಹವಿಸ್ಸು ಬೇಕೇನು ? ನನ್ನ ಆತ್ಮಾಹುತಿ ಆಗಬೇಕೇನು ?' ಪುನಃ ನಸು

ನಗೆಯೇ ಅವಳ ಉತ್ತರ! ಆ ಅಷ್ಟಪ್ರಹರಣಧಾರಿಣಿಯ ಪದತಲದಲ್ಲಿ ಸಾಷ್ಟಾಂಗ ಎರಗಿದೆ.

ಆಕೆಯ ಪಾದಗಳನ್ನು ಮುಟ್ಟುತ್ತಿದ್ದ ತೆಳುವಾದ ಕೈಬೆರಳುಗಳು ; ಅವಕ್ಕೆ ಆಧಾರವಾದ ಕೋಮಲ ಹಸ್ತಗಳು ; ಅವಕ್ಕೂ ಹಿಂದೆ ನೀಳವಾದ ಎಳೆಯ ಬಾಹುಗಳು ; ಆಮೇಲೆ ನತಮಸ್ತಕವಾಗಿ ಉದ್ದಕ್ಕೂ ಚಾಚಿದ ನನ್ನ ಹಸುಳೆದೇಹ! ಕಣ್ಣಿಂದ ಉರುಳುರುಳಿ ಬೀಳುತ್ತಿದ್ದ ಅಶ್ರುಬಿಂದುಗಳು. ಕೊರಳ ಸೆರೆಗಳು ಬಿಗಿದುಕೊಂಡಿದ್ದವು. ಬಿಕ್ಕಳಿಸಿ ನುಡಿಯುತ್ತಿದ್ದೆ : 'ದೇವಿ, ನೀನೇ ಸಾಕ್ಷಿ. ನನಗೆ ಅನುಮತಿ ನೀಡು ; ಆಶೀರ್ವಾದ ಮಾಡು. ಶಿವಾಜಿಯಂತೆ ವಿಜಯಿಯಾಗಿ ನನ್ನ ಭಾರತಮಾತೆಗೆ ಸ್ವರಾಜ್ಯದ ಕಿರೀಟವಿಟ್ಟು ರಾಜ್ಯಾಭಿಷೇಕವನ್ನಾದರೂ ಮಾಡುತ್ತೇನೆ ; ಇಲ್ಲವೆ ಶತ್ರುಗಳನ್ನು ಸಂಹರಿಸುತ್ತಾ ವೀರ ಚಾಫೇಕರನಂತೆ ಸಾವನ್ನಾದರೂ ಆಲಿಂಗಿಸುತ್ತೇನೆ. ದೇವಿ, ಅನುಗ್ರಹಿಸು. ಇನ್ನು ಮುಂದೆ ನಾನು ನನ್ನ ನಾಡಿನ ಸ್ವಾತಂತ್ರ್ಯ ಸಾಧಿಸಲು ಸಶಸ್ತ್ರ ಕ್ರಾಂತಿಯ ಧ್ವಜ ಕೈಗೆತ್ತಿಕೊಳ್ಳುತ್ತೇನೆ ; ಕಡೆಯುಸಿರಿನ ತನಕ ಕಾದಾಡುತ್ತೇನೆ. ಆಶೀರ್ವದಿಸು.'

ದೇವಿಯ ಲೋಹದ ಚರಣಗಳಲ್ಲೂ ರಕ್ತ ಮಿಡಿಯಿತು ; ಪ್ರಾಣ ಆಡಿತು. ನನ್ನ ಸೂಕ್ಷ್ಮ ಕೈಬೆರಳುಗಳಿಗೆ ಅದರ ಸ್ಪಂದನದ ಅನುಭವವಾಯಿತು. ವಿದ್ಯುತ್ ಲಹರಿಯಂತೆ ಆಕೆಯ ಕಾಲ್ಬೆರಳುಗಳಿಂದ ಚೈತನ್ಯದ ಸ್ರೋತವೊಂದು ಬಾಹುಗಳಿಗೆ ಹರಿದು ಬಂತು. ಶರೀರದಾದ್ಯಂತ ಸಂಚರಿಸಿ ಅಂತಃಕರಣವನ್ನು ಪುಲಕಿತಗೊಳಿಸಿತು.

ನನ್ನ ಶಪಥದ ವಾಣಿಯಿಂದ ಕೋಲ್ಮಿಂಚೊಂದು ಹುಟ್ಟಿ ಮರೆಯಾಯಿತು. ಆ ಅರೆಕ್ಷಣದ ಬೆಳಕಿನಲ್ಲೊಂದು ಅದ್ಭುತ ಗಾತ್ರದ ಕಾರ್ಮುಗಿಲು ಕಂಡಿತು. ಆ ಮೇಘ ರಕ್ಕಸಿಯ ಗರ್ಭದಲ್ಲಿ ಭೀಷಣ ಭವಿತವ್ಯದ ಭಾವಚಿತ್ರವೊಂದು ಕಂಡೂ ಕಾಣದಂತೆ ಅಡಗಿತ್ತು. ಮುಂದೆ ಸಿಡಿಯಲಿದ್ದ ಭೀಕರ ಕ್ರಾಂತಿಯ ಜ್ವಾಲೆ, ನಡೆಯಲಿದ್ದ ರಕ್ತಪಾತ, ಹೋರಾಟ, ವಧೆ, ಫಾಸಿ, ವನವಾಸ, ಚಿತ್ರಹಿಂಸೆ, ಯಶಾಪಯಶದ ಬೆಳಕು ಕತ್ತಲೆ, ಗುಡುಗು ಸಿಡಿಲಿನ ಪ್ರಲಯ, ತ್ಯಾಗ ಬಲಿದಾನಗಳ ವಿಲಯ – ಎಲ್ಲವನ್ನೂ ಆ ಮರಿಮಿಂಚು ಸೂಚಿಸಿಹೋಗಿತ್ತು! ಮುಂದೆ ಹಿಂದುಸ್ಥಾನದಾದ್ಯಂತ, ಜಗತ್ತಿನಾದ್ಯಂತ ಗರ್ಜನೆ ಸ್ಫೋಟಗಳನ್ನು ನಡೆಸಿದ ಕ್ರಾಂತಿಕಾರಿ ಸಂಸ್ಥೆ 'ಅಭಿನವ ಭಾರತ'ದ ಉಗಮ ಸ್ಥಾನವಾಯಿತು ಈ ಶಪಥ. ನಿಶ್ಚಿತವಾಯಿತು ನನ್ನ ಜೀವನಪಥ. ಆ ದಿನ, ಆ ಘಟನೆ, ಕೊರೆದಿಟ್ಟ ಶಿಲಾ ಶಾಸನದಂತೆ ನನ್ನ ಮನಸ್ಸಿನಲ್ಲಿ ಶಾಶ್ವತವಾಗಿ ತಳವೂರಿದವು. ಆಗ ನಾನು ಬರೆಯುತ್ತಿದ್ದ 'ದೇವಿದಾಸ ವಿಜಯ' ಗ್ರಂಥದಲ್ಲಿ ನಾನು ಕೈಗೊಂಡ ಶಪಥವನ್ನೂ ಅದರ ಸಾರ್ಥಕ ಯಶಸ್ಸಿಗಾಗಿ ಬಾಲ ಮನಸ್ಸಿನ ಕಳಕಳಿಯ ಪ್ರಾರ್ಥನೆಯನ್ನೂ ಪದ್ಯರೂಪದಲ್ಲಿ ರಚಿಸಿ ಸೇರಿಸಿದೆ.

ಇಷ್ಟಾದರೂ ಮನಸ್ಸಿಗೆ ಸಮಾಧಾನವಿಲ್ಲ. ಚಾಫೇಕರ ಸೋದರರ ಸಾಹಸದ ಸ್ಮರಣೆಯಿಂದ ಬಾಹು ಸ್ಫುರಣಗೊಳ್ಳುತ್ತಿತ್ತು. ಮರುಕ್ಷಣವೇ ದಾಮೋದರನ ಬಲಿದಾನದ ನೆನಪಾಗಿ ಕಣ್ಣೀರು ಚಿಮ್ಮುತ್ತಿತ್ತು. ಒಂದು ರಾತ್ರಿ ನಿದ್ದೆ ಬಾರದೆ ಎದ್ದು ಕುಳಿತೆ; ಬದಿಯಲ್ಲಿದ್ದ ಕಾಗದ, ಲೇಖನಿ ಕೈಗೆತ್ತಿಕೊಂಡೆ. 'ಚಾಫೇಕರರ ವೀರಗಾಥೆ' ಬರೆಯತೊಡಗಿದೆ. ನಾಲ್ಕು ಸಾಲು ಕವನ ಬರೆಯುವುದು ; ಮತ್ತೆ ಶೂನ್ಯವನ್ನೇ ದಿಟ್ಟಿಸುತ್ತಾ ಮುಂದಿನದನ್ನು ಯೋಚಿಸುವುದು. ಅದನ್ನು ಆವೇಶದಿಂದ ಹೇಳಿಕೊಳ್ಳುತ್ತಾ ಪುನಃ ಬರೆಯುವುದು. ಪುನಃ ಶೂನ್ಯ ದೃಷ್ಟಿ!

ನೀರವ ರಾತ್ರಿ. ಕಣ್ಣೀರು ಕೆನ್ನೆಯ ಮೇಲೆ ಹರಿದು ಕಾಗದದ ಮೇಲೆ ತೊಟ್ಟಿಡುತ್ತಿತ್ತು. ಅದರ ಟಪ್

ಟಪ್ ಶಬ್ದದ ಹೊರತು ಇನ್ನಾವ ಸ್ವರವೂ ಇಲ್ಲ. ತಟ್ಟನೆ ಯಾರೋ ಭುಜದ ಮೇಲೆ ಕೈಯಿಟ್ಟರು. ಬೆಚ್ಚಿ ತಿರುಗಿದೆ. ನಮ್ಮ ತಂದೆ ದಾಮೂ ಅಣ್ಣ! ಅವರು ಅಕಸ್ಮಾತ್ ಎಚ್ಚರಗೊಂಡಿದ್ದರು. ದೀಪದ ಬೆಳಕು ಕಂಡಿದ್ದರು. ಅದಕ್ಕಾಗಿ ಕುತೂಹಲದಿಂದ ಬಂದಿದ್ದರು. 'ತಾತ್ಯಾ, ಏನೋ ಇದು ?' ಎನ್ನುತ್ತಾ ಕಾಗದ ಎಳೆದುಕೊಂಡರು. ನೋಡಿದರೆ, ಚಾಫೇಕರರ ಗೀತೆ! ಅಣ್ಣ ಪಕ್ಕದಲ್ಲೆ ಕುಳಿತರು. ವಾತ್ಸಲ್ಯದಿಂದ ಕೆನ್ನೆ ನವರಿದರು. 'ತಾತ್ಯಾ ನಿನಗಿನ್ನೂ ಎಳೆಯ ವಯಸ್ಸು. ಹಸುಮಕ್ಕಳಂಥ ಮೃದು ಮೈ. ಈ ವಿಚಾರವಾದರೋ ಭಯಂಕರ; ಬಲು ಕಠೋರ. ಬುದ್ಧಿ ಚೆನ್ನಾಗಿ ಬಲಿಯುವವರೆಗೆ ಇದರ ಚಿಂತೆ ಹಚ್ಚಿಕೊಳ್ಳಬೇಡ. ಅದ ರಲ್ಲೂ, ನಮ್ಮ ಕುಟುಂಬದ ಆಸೆಯೆಲ್ಲ ನಿನ್ನ ಮೇಲೆ ಕಣೋ! ನನ್ನ ಸಂಸಾರಕ್ಕೆ ನೀನೇ ಆಧಾರ. ಮನೆ ಮುಂದಕ್ಕೆ ಬರುವುದಿದ್ದರೆ ಅದು ನಿನ್ನಿಂದಲೇ. ಅಂದ ಮೇಲೆ ಪ್ರಾಣವನ್ನು ಇಂಥ ಸಂಕಷ್ಟಕ್ಕೆ ಒಡ್ಡಬೇಡ. ಇದರ ಪರಿಣಾಮ ಎಷ್ಟು ಭಯಂಕರ ಅನ್ನುವ ತಿಳಿವಳಿಕೆ ನಿನಗಿಲ್ಲ. ಬೇರೆ ಎಷ್ಟೋ ವಿಷಯ ಇದೆ; ಅದರ ಮೇಲೆ ಪದ್ಯ ಬರಿ. ಓದಿ ಬರೆದು ದೊಡ್ಡವನಾಗು. ಆಮೇಲೆ ಬೇಕಾದ್ದು ಮಾಡುವೆಯಂತೆ!'

ನಾನು ತುಟಿ ಪಿಟಿಕ್ ಎನ್ನಲಿಲ್ಲ. ಮನಸ್ಸಿನಲ್ಲೆ ಹೇಳಿಕೊಂಡೆ : 'ಚಾಫೇಕರ್‌ಗೆ ಅದಕ್ಕಿಂತಲೂ ಭಯಂಕರ ಪರಿಣಾಮ ಏನಿದ್ದೀತು ? ಅಷ್ಟನ್ನು ಅನುಭವಿಸಲು ನಾನಂತೂ ಸಿದ್ಧವಾಗಿಯೇ ಇದ್ದೇನೆ!' ಅನಂತರ ನಾನು - ಆ ಕಡೆ ಲಕ್ಷ್ಯವೇ ಇಲ್ಲವೆಂಬಂತೆ - ಹಗಲೆಲ್ಲ ಅನ್ಯಾನ್ಯ ವಿಷಯ ಓದುವುದು, ಬರೆ ಯುವುದು, ಚರ್ಚಿಸುವುದು. ರಾತ್ರಿಯಾಗುತ್ತಲೇ, ಒಳಗೆ ಸೆಕೆ ಎಂದು ನೆಪ ಹೇಳಿ ಒಬ್ಬನೇ ಹಜಾರದ ಉಯ್ಯಾಲೆಯ ಮೇಲೆ ಮಲಗುವುದು. ತೂಕಡಿಕೆಯ ನಡುವೆ ಕೆಲವು ಸಾಲುಗಳು ಹೊಳೆಯುತ್ತಲೇ ಎದ್ದು ಕುಳಿತು ಅದನ್ನು ಕಂಠಪಾಠ ಮಾಡಿಬಿಡುವುದು. ಬರೆದಿಡುವ ಅಗತ್ಯವೇ ಇಲ್ಲ!

**ಸ್ವಜನಛಳಾತೇ ಐಕುನಿ ಹೋತೀ ತಪ್ತ ತರುಣ ತೇ ಅರುಣ ಜಸೇ**
**ದೇಶಾಸಾಠೀ ಪ್ರಾಣಾ ದೇತೀ ಧನ್ಯ ಧನ್ಯ ತ್ಯಾ ಕಾ ನ ಮ್ಹಣೇ ? ॥**

*(ಸ್ವದೇಶ ಬಾಂಧವರ ಮೇಲೆ ನಡೆಯುತ್ತಿದ್ದ ಹಿಂಸಾಚಾರ ಕೇಳಿ, ಕೋಪದಿಂದ ರಕ್ತ ಕುದಿದು, ದೇಶಕ್ಕಾಗಿ ಪ್ರಾಣ ನೀಡುವ ತರುಣರನ್ನು ಧನ್ಯರೆಂದು ಹೇಳಬಾರದೇಕೆ ?)*

- ಎಂದು ನಾನೇ ಪ್ರಶ್ನೆ ಹಾಕಿಕೊಳ್ಳುತ್ತಿದ್ದೆ.

**ಶತಾವಧೀ ತೇ ಜನ್ಮಾಯೇತೀ ಮರೋನಿ ಜಾತೀ ನಾ ಗಣತೀ**
**ದೇಶಾಸಾಠೀ ಮರತೀ ತ್ಯಾಂಸೀ ದೇಶಪಿತೇ ಕೀ ಬುಧ ಮ್ಹಣತೀ ॥**

*(ಲೆಕ್ಕವಿಲ್ಲದಷ್ಟು ಜನ ಹುಟ್ಟುತ್ತಾರೆ; ಲೆಕ್ಕಕ್ಕಿಲ್ಲದೆ ಸತ್ತುಹೋಗುತ್ತಾರೆ. ಆದರೆ ಯಾರು ದೇಶಕ್ಕಾಗಿ ಸಾಯುತ್ತಾರೋ ಅಂಥವರನ್ನು ವಿದ್ವಾಂಸರು, ಮಹಾಪುರುಷರ ಸಾಲಿಗೆ ಸೇರಿಸುತ್ತಾರೆ.)*

- ಎಂದು ನಾನೇ ಉತ್ತರ ಹೇಳಿಕೊಳ್ಳುತ್ತಿದ್ದೆ.





# ಹವಿಸ್ಸು ನಾಲ್ಕು

ಕಾಲಗತಿ ವಿಚಿತ್ರವಾಗಿತ್ತು. ದೇಶಭಕ್ತರಿಗೆ ಶಿಕ್ಷೆ ; ದೇಶದ್ರೋಹಿಗಳಿಗೆ ರಕ್ಷೆ ! ಚಾಫೇಕರ್‌ಗೆ ಮರಣದಂಡನೆ; ದ್ರವಿಡ ಸೋದರರಿಗೆ ಇಪ್ಪತ್ತು ಸಹಸ್ರ ರೂ. ಧನಸಂಭಾವನೆ! ಅದೃಶ್ಯನಾಗಿದ್ದ ಬಾಲಕೃಷ್ಣ ಚಾಫೇಕರ್ ಸಹ ಪೊಲೀಸರ ಕೈಗೆ ಸಿಕ್ಕಿಬಿದ್ದ.

ಆದರೆ, ಚಾಫೇಕರ್ ವಾಳಯದಲ್ಲಿ ಇನ್ನೂ ಒಂದು ಮರಿಸಿಂಹ ಉಳಿದಿತ್ತು. ಅದೊಮ್ಮೆ ಗುಹೆಯಲ್ಲಿ ಗುರುಗುಟ್ಟಿತು. ಹಿರಿಯಣ್ಣನ ಸಾವಿನ ಸೇಡು ತೀರಿಸಿಕೊಳ್ಳಲು ಹೊರಕ್ಕೆ ಹೆಜ್ಜೆ ಹಾಕಿತು! ದಿ. 8-2-1899ರ ರಾತ್ರಿ 9 ಘಂಟೆ. ಹದಿನೆಂದು ವರ್ಷ ವಯಸ್ಸಿನ ವಾಸುದೇವ ಚಾಫೇಕರ್ ಮತ್ತು ಅವನ ಸಹಕಾರಿ ರಾನಡೆ ದ್ರವಿಡರ ಮನೆಗೆ ಹೋದರು. ದ್ರೋಹಿಗಳಿಬ್ಬರನ್ನೂ ಬೀದಿಗೆ ಕರೆದು ಗುಂಡು ಹಾರಿಸಿ, ತೀರಿಸಿಬಿಟ್ಟರು. ವಿಶ್ವಾಸ ದ್ರೋಹಿಗಳಿಗೆ ವಿಧಿಸಬೇಕಾದ ಶಿಕ್ಷೆಯ ಉದ್ಘಾಟನೆ ಮಾಡಿದರು. ವಾಸು ಮತ್ತು ರಾನಡೆಯ ಬಂಧನವೂ ಆಯಿತು.

'ದ್ರವಿಡ ಸೋದರರು ನನ್ನ ಅಣ್ಣನಿಗೆ ವಿಶ್ವಾಸದ್ರೋಹ ಮಾಡಿದರು. ಅದರ ಸೇಡು ತೀರಿಸಿಕೊಳ್ಳಲು ನಾನು ಈ ಕೆಲಸ ಮಾಡಿದೆ' ಎಂದು ಸಾರಿದ, ವಾಸು. ಪೊಲೀಸ್ ಠಾಣೆಯಲ್ಲಿ ಗುಪ್ತಚರ ಖಾತೆಯ ಮುಖ್ಯಸ್ಥ ಬ್ರೂಯಿನ್ ಸಾಹೇಬನನ್ನು ಮುಗಿಸಲು ಚೀಲದಿಂದ ಪಿಸ್ತೂಲ ಹೊರತೆಗೆದ. ಆದರೆ ಪ್ರಯತ್ನ ಫಲಿಸಲಿಲ್ಲ. ಬಾಲಕೃಷ್ಣ, ವಾಸು ಮತ್ತು ರಾನಡೆ - ಮೂವರಿಗೂ ಮರಣದಂಡನೆ ವಿಧಿಸಲಾಯಿತು. ಆ ಸುದ್ದಿ ಪತ್ರಿಕೆಗಳಲ್ಲೂ ಪ್ರಕಟವಾಯಿತು.

ವಾಸುದೇವ ಚಾಫೇಕರ್! ಹೆಚ್ಚೆಂದರೆ ಆಗ ನನಗಿಂತ ಎರಡು ವರ್ಷ ದೊಡ್ಡವನಿರಬಹುದು. ಅವನ ಮುಖವನ್ನೇ ನಾನು ಕಂಡರಿಯೆ. ಆದರೂ ಅವನ ಬಗ್ಗೆ ಅವ್ಯಕ್ತ ಆತ್ಮೀಯತೆ. 1899ರ ಮೇ 7ರಂದು ನನ್ನ ಮನಸ್ಸು ಅಸ್ವಸ್ಥತೆಯಿಂದ ಚಡಪಡಿಸಿತು. ಮರುದಿನವೇ ವಾಸುದೇವನ ಶವ ಗಲ್ಲಿನ ಹಲಗೆಯ ಮೇಲೆ ತೂಗಾಡಲಿತ್ತು. ರಾತ್ರಿ ನಿದ್ರೆ ಹತ್ತದೆ ಹಾಸಿಗೆಯಲ್ಲೆ ಹೊರಳಿದೆ. ಮಲಗಿದ್ದವನು ಕುಳಿತೆ ; ಕುಳಿತಿದ್ದವನು ಎದ್ದು ನಿಂತೆ. ನನ್ನ ಕುಲಸ್ವಾಮಿನಿ ದೇವಿಯ ಎದುರಿಗೆ ಹೋದೆ. ಎದೆಯಲ್ಲಿ ದುಃಖದ ಉರಿ ; ಕಣ್ಣಲ್ಲಿ ನೀರಿನ ಝರಿ! 'ದೇವಿ ...' ಎಂದು ಏನೋ ಹೇಳಲು ಪ್ರಾರಂಭಿಸಿದೆ. ಆದರೆ ಏನನ್ನೂ ಹೇಳಿಕೊಳ್ಳಲಾರದೇ ಹೋದೆ. ಕಡೆಗೆ ಆಕೆಯನ್ನೇ ಸಾಕ್ಷಿಯಾಗಿಟ್ಟುಕೊಂಡು ಚಾಫೇಕರ ಸೋದರರಿಗೆ

ವಚನ ಕೊಟ್ಟೆ:

**ಕಾರ್ಯ ಸೋಡುನಿ ಅಪುರೇ ಪಡತಾ ಝುಂಜತ ? ಖಂತಿ ನಕೋ । ಪುಢೇ**

**ಕಾರ್ಯ ಚಾಲವೂ ಗಿರವಿತ ತುಮಚ್ಯಾ ಪರಾಕ್ರಮಾಚೇ ಅಮ್ಹೀ ಧಡೇ ॥**

*(ಕಾರ್ಯ ಪೂರೈಸುವ ಮೊದಲೇ ಹೋರಾಡುತ್ತಾ ಮಡಿದಿರಲ್ಲವೆ ? ಚಿಂತಿಸಬೇಡಿ ! ನಿಮ್ಮ ಪರಾಕ್ರಮದ ಆದರ್ಶವನ್ನೇ ಅನುಸರಿಸುತ್ತಾ ಕಾರ್ಯವನ್ನು ಮುಂದುವರಿಸುತ್ತೇವೆ.)*

ಮೇ 8ರಂದು ವಾಸುದೇವ; 10ರಂದು ರಾನಡೆ; 12ರಂದು ಬಾಲಕೃಷ್ಣ ; ಮೂವರೂ ನಗುನಗುತ್ತ ಅಗಲಿಹೋದರು. ಪತ್ರಿಕೆಗಳಲ್ಲಿ ಸುದ್ದಿ ಬಂತು : ಸಾವಿನ ಹಿಂದಿನ ರಾತ್ರಿ ಸುಖವಾಗಿ ನಿದ್ರಿಸಿದರು ; ಬೆಳಿಗ್ಗೆ ಹೊತ್ತಿಗೆ ಮುಂಚೆಯೇ ಎದ್ದರು ; ಪೂರ್ತಿಯಾಗಿ ಭಗವದ್ಗೀತೆ ಓದಿದರು ; ಪರಸ್ಪರ ನಗುಮೊಗದಿಂದ ಬೀಳ್ಕೊಂಡರು ! ಚಿಕ್ಕವನಾದ ವಾಸು ಮೊದಲು ಬಲಿಪೀಠಕ್ಕೆ ಹೊರಟುದನ್ನು ಕಂಡ ಬಾಲಕೃಷ್ಣನು, ತನಗಿಂತ ಅವನೇ ಧನ್ಯ ಎಂದುಕೊಂಡ. ಪ್ರತಿಯೊಬ್ಬರೂ

**ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ॥**
**ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ॥**

*(ಆತ್ಮವನ್ನು ಶಸ್ತ್ರಗಳು ಕತ್ತರಿಸಲಾರವು, ಬೆಂಕಿ ಸುಡಲಾರದು, ನೀರು ನೆನೆಸಲಾರದು, ಗಾಳಿ ಒಣಗಿಸಲಾರದು.)*

- ಎಂದು ಹಾಡುತ್ತಾ ನೇಣಿನ ಕುಣಿಕೆಗೆ ಗೋಣು ಕೊಟ್ಟರು.

ದಾಮೋದರನ ಬಲಿದಾನದ ನಂತರ ನನ್ನ ಮನಸ್ಸಿನಲ್ಲಿದ್ದ ಪ್ರಶ್ನೆಗಳೇ ಪುನಃ ಪುನಃ ಪ್ರತ್ಯಕ್ಷವಾದವು : 'ಚಾಫೇಕರ್ ಸೋದರರು, ರಾನಡೆ, ಸ್ವದೇಶದ ಸಂಕಟದ ಸೇಡು ತೀರಿಸಿ ಫಾಸಿಗೇರಿದರು. ಅವರ ಪ್ರಾಣಜ್ಯೋತಿ ಹೋಗಹೋಗುತ್ತಾ ಹೊತ್ತಿಸಿರುವ ಶತ್ರುಂಜಯ ವೃತ್ತಿಯ ಯಜ್ಞಕುಂಡದಲ್ಲಿ ಒಂದಾದ ಮೇಲೊಂದು ಹವಿಸ್ಸನ್ನು ಅರ್ಪಿಸುತ್ತಾ ಅದನ್ನು ಉರಿಸುತ್ತಲೇ ಇರಬೇಕಾದರೆ, ಮತ್ತು ಕೊನೆಗೆ ಒಮ್ಮೆ ಅದನ್ನು ಪ್ರಚಂಡ ಸ್ವಾತಂತ್ರ್ಯ ಯುದ್ಧದ ಮಹಾಜ್ವಾಲೆಯಾಗಿ ಪರಿವರ್ತಿಸಬೇಕಾದರೆ, ಅದರ ಹೊಣೆ ಗಾರಿಕೆ ನನಗೂ ಸೇರುವುದಿಲ್ಲವೆ ? ಅಂದಮೇಲೆ ಅದನ್ನು ನಾನೇ







**ದಾಮೋದರ ಚಾಫೇಕರ್**
**ಬಾಲಕೃಷ್ಣ ಚಾಫೇಕರ್**
**ವಾಸುದೇವ ಚಾಫೇಕರ್**

ನಡೆನಬಾರದೇಕೆ ? ನಾನೇ ಆ ಆತ್ಮಾ ಹುತಿಯನ್ನು ಸ್ವತಃ ನೀಡಬಾರದೇಕೆ ?' 'ನೀಡುತ್ತೇನೆ' ಎಂದು ಪುನಃ ಪುನಃ ಹೇಳಿಕೊಂಡೆ.

1899ರ ಪ್ರಾರಂಭದಲ್ಲಿ ಪುಣೆಗೆ ಹೋಗುವ ಸದವಕಾಶ ಸಿಕ್ಕಿತು. ಗೆಳೆಯರೊಡನೆ ಹೋದೆ. ಅಲ್ಲಿ ಉಳಿದೆಲ್ಲರಿಗೂ ಪಟ್ಟಣದ ಪೇಟೆ ಸುತ್ತುವ ಆಸೆ. ಅವರ ಗಮನವೆಲ್ಲ ಆ ಕಡೆಗೇ. ನನಗಾದರೋ ಶನಿವಾರವಾಡೆ; ಶಯಿಸ್ತೇಖಾನನು ತಂಗಿದ್ದ ಅರಮನೆ; ಅವನ ಶಾಸ್ತಿಗೆಂದು 'ರಾಜಗಢದ ಮೃಗರಾಜ' ಮೊದಲು ನುಗ್ಗಿದ ಪಾಕಶಾಲೆ; ಪೇಶ್ವೆಗಳ ಕಾಲದ ರಂಗಪಂಚಮಿ ಮಹೋತ್ಸವದ ರಸ್ತೆಗಳು; ಪುಸ್ತಕದಲ್ಲಿ ಓದಿದ್ದ ಇತರ ಐತಿಹಾಸಿಕ ಸ್ಥಳಗಳು, ಒಂದೆ, ಎರಡೆ! ನೂರಾರು ಜಾಗಗಳನ್ನು ನೋಡುವ ಉತ್ಸುಕತೆ. ನಾನು ಅವುಗಳ ರಮ್ಯ ಅದ್ಭುತ ಇತಿಹಾಸ ಹೇಳತೊಡಗಿದರೆ ಯಾರಿಗೂ ಬೇಕಿಲ್ಲ. ಎಲ್ಲರೂ, 'ನಡಿ, ನಡಿ' ಎಂದು ಆತುರಪಡಿಸುವವರೇ!

ಪುಣೆಯ ಜನ ನಿರ್ಭಯ ವೃತ್ತಿಯವರು; ತಿಲಕರ ಹಾಗೂ ಚಾಫೇಕರರ ಪ್ರಶಂಸೆ ಮಾಡುತ್ತಿರುತ್ತಾರೆ ಅಂದುಕೊಂಡಿದ್ದೆ ಮೊದಲು. ಆದರೆ ಪ್ರತ್ಯಕ್ಷ ಅಲ್ಲಿ ನೋಡಿದರೆ, ಎಲ್ಲರೂ ಭಯದಿಂದ ತಲೆ ತಗ್ಗಿಸಿ ಕೊಂಡು ಹೋಗುವವರೇ! ನನ್ನ ಬಾಲಮನಸ್ಸಿನ ಭವ್ಯ ಕಲ್ಪನೆಯೆಲ್ಲ ಕುಸಿದುಬಿತ್ತು. ಚಾಫೇಕರರನ್ನು ದೂಷಿಸುವವರನ್ನೂ ನಾನು ಪುಣೆಯಲ್ಲಿ ಕಂಡೆ. ದುಃಖ ಉಕ್ಕಿ ಗಂಟಲು ಬಿಗಿಯಿತು.

ಅಲ್ಲಿಂದ ಕರ್ಜತ್‌ಗೆ ಬಂದೆವು. ಅದರ ಪಕ್ಕದ ಊರಾದ ದಹಿವಲಿ ಎಂಬಲ್ಲಿ ಒಂದು ಭಾಷಣ ಸ್ಪರ್ಧೆ ಇತ್ತು. ನಿಯಮದಂತೆ ವಿಷಯದ ಬಗ್ಗೆ ಲೇಖನ ಬರೆದುಕೊಟ್ಟು ನಾನೂ ಭಾಗವಹಿಸಿದೆ. ಮೊದಲ ಸ್ಥಾನ ಗಿಟ್ಟಿಸಿದೆ. ಆದರೆ ಅಧ್ಯಕ್ಷರು, 'ಈ ವಯಸ್ಸಿನ ಹುಡುಗ ಇಷ್ಟು ಉತ್ತಮ ಶೈಲಿಯ ಲೇಖನ ಬರೆದಿರಲಾರ. ಯಾರೋ ಬೇರೆಯವರು ಬರೆದುಕೊಟ್ಟಿರಬೇಕು. ಆದರೂ ವಕ್ತೃತ್ವ ಶಕ್ತಿ ಉತ್ಕೃಷ್ಟವಾಗಿದೆ. ಆದ್ದರಿಂದ ಮೊದಲ ಬಹುಮಾನ ಇವನಿಗೇ ನೀಡುವುದು ಯೋಗ್ಯ' ಎಂದರು. ನಾನು ಕೂಡಲೇ ಎದ್ದುನಿಂತೆ. 'ಲೇಖನ ನನ್ನದಲ್ಲ ಅನ್ನಲು ಕಾರಣವೇನು? ನಾನು ಚಿಕ್ಕವನೆಂದೆ? ಹಾಗಾದರೆ ಜ್ಞಾನೇಶ್ವರನು ''ಜ್ಞಾನೇಶ್ವರಿ'' ಯನ್ನು ಬರೆದುದು ಸುಳ್ಳು ಎನ್ನಬೇಕಾದೀತು. ಗುಣಾಃ ಪೂಜಾಸ್ಥಾನಂ ಗುಣಿಷು ನ ಚ ಲಿಂಗಂ ನ ಚ ವಯಃ!' ಎಂದು ಹೇಳಿದೆ. ಇಡೀ ಸಭೆ ಸ್ತಬ್ಧವಾಯಿತು.

ಮೊದಲ ಬಹುಮಾನ ಎಂದರೆ, ಒಂದು ವರ್ಷ 'ಕಾಳ' ಪತ್ರಿಕೆ ದೊರೆಯುವ ಏರ್ಪಾಡು. ಎಲ್ಲ ಬಿಟ್ಟು ಆ ಪತ್ರಿಕೆಯನ್ನು ಬಹುಮಾನವಾಗಿ ಇಟ್ಟುದೇಕೆ? ಯಾರೋ ಘಾಟಿ ಯೋಜಕರೇ ಸೇರಿರಬೇಕು! ಅಂತೂ ಅಂದು ಪ್ರಾರಂಭವಾದ 'ಕಾಳ' ಪತ್ರಿಕೆಯ ಸಂಬಂಧ ಜನ್ಮಪೂರ್ತಿ ಬಿಡಲಿಲ್ಲ. ಅದೇ ಇಲ್ಲಿ ಮುಖ್ಯ. ಆ ಪತ್ರಿಕೆಯಲ್ಲಿ ಪ್ರಕಟವಾದ 'ಚಾಫೇಕರ್ ಮತ್ತು ರಾನಡೆ' ಎಂಬ ಲೇಖನವನ್ನಂತೂ ನಾನು ಹತ್ತಾರು ನಲ ಓದಿದೆ.

ಶ್ರಾವಣ ಮಾಸದಲ್ಲಿ ಪ್ಲೇಗು ಊರಿಂದೂರಿಗೆ ಹಬ್ಬುತ್ತಿತ್ತು. ನನ್ನ ತಂಗಿಯನ್ನು ಕೊಟ್ಟಿದ್ದ ತ್ರ್ಯಂಬಕೇಶ್ವರನಲ್ಲೂ ಅದು ತಲೆದೋರಿತು. ನಮ್ಮ ತಂದೆ ದಾಮೂ ಅಣ್ಣನಿಗೆ ಚಿಂತೆಯಾಯಿತು. ಮಗಳು - ಅಳಿಯನನ್ನು ಕರೆತರಲು ನಮ್ಮ ಅಣ್ಣ ಬಾಬಾನನ್ನು ಕಳುಹಿಸಿದರು. ಕಳುಹಿಸಿದರೇನೋ ಸರಿ, ಆದರೆ ಭಗೂರಿನಲ್ಲಿ ತಾನೆ ಏನು ? ಅವನು ಅತ್ತ ಹೋಗುತ್ತಲೇ ಪ್ಲೇಗು ಇತ್ತಲೂ ಬಂತು. ಮನೆಯಲ್ಲಿ ಇಲಿ ಸತ್ತರೂ ಯಾರೂ ಬಾಯಿಬಿಡಲೊಲ್ಲರು. ಕಾರಣ, ಪ್ಲೇಗಿಗಿಂತಲೂ ಭೀಷಣವಾದ ಸರಕಾರದ ಹಾವಳಿ! ಪೊಲೀಸರು ಬಂದು ಹೆಂಚು ಇಳಿಸುತ್ತಿದ್ದರು. ಮನೆಯವರನ್ನೆಲ್ಲ ಹೊರಗೆಳೆದು ಊರಾಚೆ ಅಟ್ಟುತ್ತಿದ್ದರು.

ಸಾಮಾನು ಸರಂಜಾಮುಗಳೆಲ್ಲ ಸಿಕ್ಕಿದವರ ಪಾಲು! ಹೀಗಾಗಿ ಮನುಷ್ಯರೇ ಸತ್ತರೂ, ಬೇರೆ ಯಾವುದೋ ರೋಗದಿಂದ ಸತ್ತರು ಎನ್ನುತ್ತಿದ್ದರು. ನಮ್ಮ ಮನೆಯಲ್ಲೂ ನಾಲ್ಕಾರು ಇಲಿಗಳು ಬಿದ್ದವು. ಆದರೆ ಅವು ಪ್ಲೇಗಿನವಲ್ಲ, ಒಳ್ಳೆಯ ಇಲಿಗಳು ಎಂದು ಹೇಳಿಕೊಂಡು ದಾಮೂ ಅಣ್ಣ ಗುಟ್ಟಾಗಿ ಎಸೆದುಬಿಟ್ಟರು! ಯಾರಿಗೂ ಹೇಳಬಾರದೆಂದು ಮಕ್ಕಳಿಗೆ ಕಟ್ಟು ಮಾಡಿದರು. ಅವರಂತೂ ಊರಿನವರ ನೆರವಿಗಾಗಿ ಹೊರಗೆ ಹೋಗಿಬರುತ್ತಲೇ ಇದ್ದರು.

ನನ್ನ ದೃಷ್ಟಿಗೆ ಮೊದಲು ಅಶುಭವೇ ಕಾಣುತ್ತದೆ. ಅದರಿಂದ ಜೀವನದಲ್ಲಿ ಉಪಯೋಗವೂ ಆಗಿದೆ ಎನ್ನಿ. ಈಗಲೂ ಹಾಗೆಯೇ ಯೋಚಿಸತೊಡಗಿದೆ. ಒಂದುವೇಳೆ ನನಗೆ ಪ್ಲೇಗು ಬಂದರೆ? ನಾನಂತೂ ಅಳುವುದಿಲ್ಲ. ನನ್ನ ಗ್ರಂಥ 'ದುರ್ಗಾದಾಸ ವಿಜಯ', ಕವನಗಳು, ನನ್ನ 'ಸರ್ವಸಾರ ಸಂಗ್ರಹ' ಪ್ರಕಟಿಸಬೇಕೆಂದೂ, ಅದೇ ನನ್ನ ಅಂತಿಮ ಇಚ್ಛೆಯೆಂದೂ ಹೇಳಿಬಿಡಬೇಕು! ಹೀಗೆ ಅನೇಕ ವಿಚಿತ್ರ ಯೋಚನೆಗಳು!

ಒಂದು ರಾತ್ರಿ ನಮ್ಮ ತಂದೆ, ದಾಮೂ ಅಣ್ಣ ಮನೆಗೆ ಕುಂಟುತ್ತಾ ಬಂದರು. ಏನಾಯಿತು ಎಂದು ಕೇಳಿದ್ದಕ್ಕೆ, ಸ್ವಲ್ಪ ಉಳುಕಿದೆ ಅಷ್ಟೆ, ಎಂದರು. ನಿಜ ಹೇಳಿದರೆ ಹುಡುಗರು ಗಾಬರಿಗೊಂಡಾರೆಂದು ಅವರಿಗೆ ಹೆದರಿಕೆ! ಮರುದಿನ ಬೆಳಗಾಯಿತು; ಮಧ್ಯಾಹ್ನವೂ ಆಯಿತು. ದಿನವೂ ಊಟದ ನಂತರ ನನ್ನ ತಮ್ಮ ಬಾಳಾ ತಂದೆಯ ಪಕ್ಕದಲ್ಲೇ ಮಹಡಿಯಲ್ಲಿ ಮಲಗುತ್ತಿದ್ದ. ಪಾಪ, ತಾಯಿ ಸತ್ತಾಗಿನಿಂದ ಅವನಿಗೆ ತಂದೆಯೇ ಸರ್ವಸ್ವ. ಇಂದೇಕೋ ನಮ್ಮ ತಂದೆ ದಾಮೂ ಅಣ್ಣ ಒಬ್ಬರೇ ಮೇಲೆ ಹೋದರು. ನನ್ನ ಹೆಸರು ಹಿಡಿದು ಕೂಗಿದರು.

ನಾನು ಮೇಲೆ ಹೋದಾಗ ದಾಮೂ ಅಣ್ಣ ಅಳುತ್ತಿದ್ದರು! ನನ್ನನ್ನು ಅಪ್ಪಿಕೊಂಡು ಹೇಳಿದರು: 'ಮಗು, ನನಗೆ ಪ್ಲೇಗ್ ತಗುಲಿದೆ! ಇನ್ನು ನನ್ನ ಮಕ್ಕಳು ಮರಿಯ ಗತಿ ಏನು?' ನನ್ನ ಎದೆ ಧಸ್ ಎಂದಿತು. ಆದರೆ ಎಳೆತನದಿಂದಲೂ ನನ್ನದೊಂದು ವೈಶಿಷ್ಟ್ಯ. ವಿಪತ್ತು ಕಾಣುತ್ತಲೇ ಮನಸ್ಸು ಕಲ್ಲಾಗಿ, ಕರ್ತೃತ್ವದ ಹುರುಪು ಹುಟ್ಟುತ್ತಿತ್ತು. 'ಅಣ್ಣ, ಯೋಚಿಸಬೇಡಿ, ವೈದ್ಯರನ್ನು ಕರೆತರುತ್ತೇನೆ' ಎಂದೆ. 'ಛೇ ಛೇ, ಈ ಸುದ್ದಿ ಕೆಳಗಿರುವ ಮಕ್ಕಳಿಗೂ ಹೇಳಬೇಡ. ಪೊಲೀಸರು ಬಂದುಬಿಟ್ಟಾರು!' ಎಂದರು.

ನಾನು ಇನ್ನೇನು ಮಾಡಲಿ? ವರ್ತಮಾನ ಪತ್ರಿಕೆಯಲ್ಲಿ ಒಂದು 'ರಾಮಬಾಣ' ಔಷಧಿಯ ಬಗ್ಗೆ ವಿವರ ಓದಿದ್ದೆ. 'ಅದನ್ನು ಮಾಡಲೆ?' ಎಂದೆ. 'ಹುಂ' ಎಂದರು. ಸದ್ದಿಲ್ಲದೆ ನನ್ನ ಸ್ನೇಹಿತ ತ್ರ್ಯಂಬಕನ ಮನೆಗೆ ಹೋಗಿ ಎರಡು ಕೋಳಿಮೊಟ್ಟೆ ತಂದೆ. ಸಿಂಧೂರದಲ್ಲಿ ಅದನ್ನು ಕಲಸಿ ಪ್ಲೇಗಿನ ಗಡ್ಡೆಗೆ ಪಟ್ಟು ಹಾಕಿ, ಹಿಂದಿನ ಮಹಡಿಯಲ್ಲಿ ಅಣ್ಣನನ್ನು ಮಲಗಿಸಿದೆ.

ಅತ್ತಿಗೆಯ ವಯಸ್ಸು ಆಗ ಹದಿನೈದು. ನನಗಿಂತಲೂ ಕೆಲವು ತಿಂಗಳು ಚಿಕ್ಕವಳು. ವಿಧಿಯಿಲ್ಲದೆ ಅವಳಿಗೆ, ಇದ್ದ ಸಂಗತಿ ತಿಳಿಸಿದೆ. ನನ್ನ ತಮ್ಮ ಬಾಳಾ ಅಣ್ಣನ ಬಳಿ ಹೋಗಲು ಹಟ ಹಿಡಿದ. 'ಹುಷ್', ಸುಮ್ಮನಿರು. ಅಣ್ಣಂಗೆ ಹುಷಾರಿಲ್ಲ. ಯಾರಿಗೂ ತಿಳಿಯಬಾರದು' ಎಂದೆ. ತತ್‌ಕ್ಷಣವೇ ಜಾಣನಂತೆ ಅಳು ನಿಲ್ಲಿಸಿದ. ಅಷ್ಟು ಮಾತ್ರವಲ್ಲ, ಮೇಲಕ್ಕೆ ಹಾಲು, ನೀರು, ಗಂಜಿ ತೆಗೆದುಕೊಂಡು ಹೋಗಲು ನನಗೆ ರಾತ್ರಿಯಿಡೀ ಸಹಾಯ ಮಾಡಿದ. ಬೆಳಿಗ್ಗೆ ದಾಮೂ ಅಣ್ಣನ ನರಳಿಕೆ ಜೋರಾಯಿತು. ನೆರೆಹೊರೆಯಲ್ಲಿ ಗುಜುಗುಜು ಪ್ರಾರಂಭವಾಗಿ ನಮ್ಮ ದೊಡ್ಡಪ್ಪ ಬಾಪೂಕಾಕಾನಿಗೂ ತಿಳಿಯಿತು. ಮನಸ್ಸಿಗೆ ಗಾಬರಿ ಯಾದರೂ ಅವರು ಮನೆಯ ಬಾಗಿಲಿಗೆ ಬರಲಿಲ್ಲ, ಆದರೆ ಪೊಲೀಸರು ಬರದಂತೆ ನೋಡಿಕೊಂಡರು.

ಮಧ್ಯಾಹ್ನ ದಾಮೂ ಅಣ್ಣನ ಸಂಕಟ ಇನ್ನೂ ಹೆಚ್ಚಿತು. ತಮ್ಮನಿಗೆ ಹೇಳಿದೆ: 'ಬಾಳಾ, ಕೆಳಗೆ ಮುಂದಿನ ಅಂಗಳದಲ್ಲಿ ಕೂತಿರು. ಯಾರಾದರೂ ಬಂದರೆ ಮನೆಯಲ್ಲಿ ಯಾರೂ ಇಲ್ಲ ಅಂತ ಹೇಳಿಕಳಿಸು.' ನಾನು ಔಷಧಿಗೆಂದು ಹತ್ತಿ ಗಿಡದ ಕಾಯಿ ತರಲು ಹಿತ್ತಲಿನ ತೋಟಕ್ಕೆ ಹೋದೆ. ಅಷ್ಟರಲ್ಲೆ ಬಾಳಾ ಅಲ್ಲಿಗೆ ಬಂದ. ನನಗೆ ರೇಗಿತು. 'ಹೇಳಿದ ಕೆಲಸ ಬಿಟ್ಟು ಇಲ್ಲೇಕೋ ಬಂದೆ? ಹೊರಡು ಮೊದಲು' ಎಂದೆ. ಅವನು ನಿಧಾನವಾಗಿ ಹಿಂದಕ್ಕೆ ಕಾಲೆಳೆದುಕೊಂಡು ಹೊರಟ. ಅವನ ಕಣ್ಣಲ್ಲಿ ನೀರು ಕಾಣಿಸಿತು. ಬಹುಶಃ ಅಣ್ಣನ ಬಳಿ ಹೋಗಲು ಅಳುತ್ತಿರಬಹುದೆ? ನಾನು ಹತ್ತಿರ ಹೋಗಿ ಸಮಾಧಾನ ಹೇಳತೊಡಗಿದೆ. ಆಗ ಸಂಕೋಚದಿಂದ ಆ ಬಡಪಾಯಿ ತಮ್ಮ ಬಾಯಿಬಿಟ್ಟ: 'ತಾತ್ಯಾ, ಕೋಪ ಮಾಡಿಕೊಳ್ಳದಿದ್ದರೆ ನಿನಗೆ ಒಂದು ಮಾತು ಹೇಳ್ತೀನಿ.' ಆಗಲಿ, ಹೇಳು ಎಂದೆ.

'ದಾಮೂ ಅಣ್ಣನ ಸಲುವಾಗಿ ನೀನು ಮೊದಲೇ ತುಂಬ ತೊಂದರೆ ಪಡುತ್ತಿದ್ದೀ. ಅದಕ್ಕೇ ನಾನು ಬೆಳಗಿನಿಂದ ಹೇಳದೇ ತಡೆದುಕೊಂಡಿದ್ದೆ. ಆದರೆ ಇನ್ನು ನನ್ನಿಂದ ಸಹಿಸೋದಕ್ಕೆ ಸಾಧ್ಯವಿಲ್ಲಪ್ಪ. ನನ್ನ ತೊಡೆ ತುಂಬ ನೋಯುತ್ತಿದೆ' ಎನ್ನುತ್ತಾ ಒಂದೇ ಸಮನೆ ಬಿಕ್ಕಳಿಸತೊಡಗಿದ. ಎಷ್ಟು ವಿವೇಕ, ಎಂಥ ಸಹನೆ! ಅಷ್ಟು ಚಿಕ್ಕವನು, ನನಗೆ ಕಷ್ಟವಾದೀತೆಂದು ಬೆಳಗಿನಿಂದ ನೋವು ತಡೆದುಕೊಂಡಿದ್ದ, ಪಾಪ! ನನಗೆ ದುಃಖ ಉಮ್ಮಳಿಸಿತು. ಭವಿಷ್ಯ ನೆನೆದು ನಿಂತ ನೆಲವೇ ಕುಸಿದಂತೆ ಆಯಿತು. ಆದರೂ ಧೈರ್ಯವಾಗಿ ಹೇಳಿದೆ: 'ಅಷ್ಟೆ ತಾನೆ? ನಡಿ, ನಾನು ಔಷಧಿ ಹಾಕುತ್ತೇನೆ. ಅಣ್ಣನಿಗೆ ಮಾತ್ರ ಹೇಳಬೇಡ, ಆಂ! ಅಣ್ಣನ ಹತ್ತಿರ ಹೋಗೋದಿಲ್ಲ ತಾನೆ?' 'ಇಲ್ಲ ತಾತ್ಯಾ, ಹೋಗೋದೇ ಇಲ್ಲ. ಅವರಿಗೆ ಆತಂಕವಾಗುತ್ತೆ. ನನಗೆ ಗೊತ್ತಿಲ್ಲವೆ?'

ಮನೆಯ ಮುಂದಿನ ಕೋಣೆಯಲ್ಲಿ ಬಾಳನನ್ನು ಮಲಗಿಸಿ, ಅತ್ತಿಗೆಗೆ ಹೇಳಿದೆ: 'ನೀನು ಬಾಳನನ್ನು ನೋಡಿಕೋ; ನಾನು ದಾಮೂ ಅಣ್ಣನ್ನ ನೋಡಿಕೊಳ್ಳುತ್ತೇನೆ. ಯಾರಿಗೂ ಏನೂ ಹೇಳಬಾರದು, ಗೊತ್ತಾಯಿತೆ?' ಪಾಪ, ಯೇಸೂವಹಿನಿ! ನಾನು ಹೇಳಿದ್ದೇ ಅವಳಿಗೆ ವೇದವಾಕ್ಯ. ಪಶ್ಚಿಮವನ್ನೇ ಪೂರ್ವ ಎಂದರೂ ನಂಬುವಂಥ ಮುಗ್ಧೆ! ಅವಳು ಚಿಕ್ಕವಳೇನೋ ನಿಜ; ಆದರೆ ಎಷ್ಟು ಧೈರ್ಯವಂತೆ! ನೇರವಾಗಿ ಹೋಗಿ ಬಾಳನ ಮಗ್ಗುಲಲ್ಲಿ ಕುಳಿತಳು.

ರೋಗಿಗಳ ಉಸಿರು ತಾಗಿದರೆ ಸಾಕು, ಪ್ಲೇಗು ಹತ್ತಿಕೊಳ್ಳುತ್ತದೆ ಎಂದು ಪಾಠದಲ್ಲಿ ಓದಿದ್ದೆ. ಆದ್ದರಿಂದ, ಆಗಿಂದಾಗ್ಗೆ ನನ್ನ ತೊಡೆಯನ್ನೂ ಮುಟ್ಟಿ ಮುಟ್ಟಿ ನೋಡಿಕೊಳ್ಳುತ್ತಿದ್ದೆ – ನೋಯುತ್ತಿದೆಯೇನೋ ಎಂದು! ಅತ್ತಿಗೆಯನ್ನು ಮೇಲಿಂದ ಮೇಲೆ ಕೇಳುತ್ತಿದ್ದೆ; 'ವಹಿನೀ, ನಿನಗೆ ತಲೆನೋವು ಅಥವಾ ಇನ್ನೆಂಥದಾದರೂ ನೋವು ಇಲ್ಲ ತಾನೆ? ಇದ್ದರೆ ಈಗಲೇ ಹೇಳಿಬಿಡು, ವಹಿನಿ! ಹೇಳದೆ ಇರಬೇಡ, ತಿಳಿಯಿತೆ?' ಪ್ಲೇಗ್ ನಿರೋಧಕ ಔಷಧಿ ಅತ್ತಿಗೆಗೂ ಕೊಟ್ಟು ನಾನೂ ತೆಗೆದುಕೊಂಡೆ. ತಂಗಿಯನ್ನೂ, ಭಾವನನ್ನೂ ಕರೆತರಲು ಹೋದ ನಮ್ಮ ಅಣ್ಣ ಬಾಬಾನ ದಾರಿ ನೋಡುತ್ತಾ ಕುಳಿತುಕೊಂಡೆ.

ಅಮಾವಾಸ್ಯೆಯ ಹಿಂದಿನ ಘೋರ ರಾತ್ರಿ. ಇತ್ತ ಮುಂದಿನ ಕೊಠಡಿಯಲ್ಲಿ ತಮ್ಮನಾದ ಬಾಳಾ; ಅತ್ತ ಹಿಂದಿನ ಮಹಡಿಯಲ್ಲಿ ತಂದೆಯಾದ ದಾಮೂ ಅಣ್ಣ. ಕತ್ತಲಾಗುತ್ತಲೇ ಎರಡೂ ಕಡೆಯಿಂದ ನರಳಾಟ; ಚೀರಾಟ. 'ತಾತ್ಯಾ, ಬಾಳಾ! ಯಾರಾದ್ರೂ ಬನ್ರೋ! ಅರೇ, ನೀರು ತನ್ರೋ! ತಾತ್ಯಾ, ಬಾಳಾ....' ಎಂದು ಅಣ್ಣ ಚೀತ್ಕರಿಸುತ್ತಿದ್ದರು. ನಾನು ಮೇಲೆ ಹೋದೆ. ಪ್ಲೇಗ್ ಬಂದವರಿಗೆ ಬಾಯಾರಿಕೆ ಹೆಚ್ಚು;

ಆದರೆ ನೀರು ಕೊಡಬಾರದಂತೆ. ದಾಮೂ ಅಣ್ಣನಿಗೆ ಭಯಂಕರ ಜ್ವರದ ಆವೇಶ. ನೀರು ಕೊಡದಿದ್ದುದಕ್ಕೆ ರೋಷ. ಒಮ್ಮೆಗೇ ಮೇಲೆದ್ದರು ; ನೆಲಕ್ಕೆ ಬಿದ್ದರು. ಪುನಃ ಓಡತೊಡಗಿದರು. ಅಷ್ಟರಲ್ಲೆ ದೀಪವೂ ಕೆಳಗೆ ಬಿದ್ದು ಆರಿಹೋಯಿತು. ಅವರು ಹೊಡೆಯುತ್ತಾರೇನೋ ಎಂದು ಭಯವಾಗಿ ಕೆಳಗೆ ಓಡಿಬಂದೆ. ಅತ್ತಿಗೆಯೂ ನಾನೂ ದೀಪ ತೆಗೆದುಕೊಂಡು ಹೆದರುತ್ತಾ ಮತ್ತೆ ಹೋದೆವು ಬೆಳಕು ಕಾಣುತ್ತಲೇ ಪುನಃ ಅವರು ಎದ್ದು ಮೆಟ್ಟಿಲ ಕಡೆ ಬರತೊಡಗಿದರು. ಎಲ್ಲಿಗೆ ಕೆಳಗೆ ಬಿದ್ದುಬಿಡುತ್ತಾರೋ ಅನ್ನುವ ಭಯ ನನಗೆ. ಸ್ವಲ್ಪ ನೀರು ಕೊಟ್ಟೆ. ಅವರು ಕುಡಿಯುವಷ್ಟರಲ್ಲಿ ಹೊರಗಿನಿಂದ ಬಾಗಿಲ ಅಗುಳಿ ಹಾಕಿಕೊಂಡುಬಿಟ್ಟೆ. ಏಕೆಂದರೆ, ಸಣ್ಣವರಾದ ನಮ್ಮಿಬ್ಬರಿಂದ ಅವರನ್ನು ತಡೆದು ನಿಲ್ಲಿಸುವುದು ಅಸಾಧ್ಯವಾಗಿತ್ತು.

ಇತ್ತ ಬಾಳನ ನರಳಿಕೆಯೂ ಭೀಕರವೇ. ಇನ್ನೂ ಸಣ್ಣ ಹುಡುಗ. ಜ್ವರದ ತಾಪದಿಂದ ಸೀದುಹೋಗುತ್ತಿದ್ದ. ನೀರಿಗಾಗಿ ಚಡಪಡಿಸುತ್ತಿದ್ದ. 'ಬಾಳಾ, ಕೂಗಬೇಡ ; ಅಣ್ಣನಿಗೆ ಗೊತ್ತಾಗಿ ಹೋಗುತ್ತೆ' ಎಂದರೆ, ಆ ಅರಿಯದ ಹಸುಳೆ, ಅರೆಜ್ಞಾನದಲ್ಲೂ ಸ್ವಲ್ಪಹೊತ್ತು ಸುಮ್ಮನಾಗುತ್ತಿದ್ದ.

ಅಷ್ಟರಲ್ಲೆ ಅತ್ತಿಗೆಯ ಕಣ್ಣಲ್ಲೂ ನೀರು! ಅಷ್ಟು ಹೊತ್ತೂ ಎಷ್ಟೋ ದಿಟ್ಟವಾಗಿದ್ದ ಯೇಸೂವಹಿನಿಗೂ ಅಳು ! ಕಂಡವರ ಮನೆಯ ಹೆಣ್ಣುಮಗಳಿಗೆ ಎಂಥ ದುರವಸ್ಥೆ! ನನ್ನ ಮನಸ್ಸು ಅಳುಕಿತು – ಇವಳಿಗೂ ಏನಾದರೂ ಆಯಿತೋ ? ಬೆನ್ನು ಸವರಿ ಕೇಳಿದೆ : ವಹಿನೀ, ಏನಾಯಿತು ?' 'ನನಗೇನಾದೀತು ? ನಿನ್ನ ಅವಸ್ಥೆ ಕಂಡು ಚಿಂತೆಯಾಗಿದೆ, ಅಷ್ಟೆ. ಸ್ವಲ್ಪ ಹೊತ್ತಾದರೂ ನೀನು ಮಲಗಿ ನಿದ್ದೆ ಮಾಡು' ಎಂದಳು. 'ವಹಿನೀ, ಈಗ ಅತ್ತರೆ ಏನಾದೀತು ? ಧೈರ್ಯವಾಗಿ ಕಷ್ಟ ಎದುರಿಸಬೇಕು' ಎಂದೆ.

ಹಿಂದಿನ ಮಹಡಿಯಿಂದ ಅಣ್ಣನ ಚೀತ್ಕಾರ ಹೃದಯ ಇರಿಯುತ್ತಿತ್ತು. ಕರುಳು ಕೊರೆಯುತ್ತಿತ್ತು. 'ತಾತ್ಯಾ, ಬಾಳಾ.... ನೀರು, ನೀರು !' ನನ್ನನ್ನು ಅತಿಶಯವಾಗಿ ಪ್ರೀತಿಸಿದ ನಮ್ಮ ತಂದೆ ದಾಮೂ ಅಣ್ಣ ಒಂದು ಹನಿ ನೀರಿಗಾಗಿ ಸಂಕಟಪಡುತ್ತಿದ್ದರು. ನಾನು ನಿರುಪಾಯನಾಗಿ ಕಲ್ಲಿನಂತೆ ಕುಳಿತುಬಿಟ್ಟಿದ್ದೆ. ಮುಂದೆ ಎಷ್ಟೋ ವರುಷಗಳು ಉರುಳಿದ ನಂತರ ಸಹ ಲಂಡನ್ನಿನಲ್ಲಿ, ಅಂದಮಾನಿನಲ್ಲಿ ನನ್ನ ಕಿವಿಗೂ ದಾಮೂ ಅಣ್ಣನ ಆ ಕೂಗು ಕೇಳಿಬರುತ್ತಿತ್ತು. 'ಓ, ಬಂದೆ' ಎನ್ನುತ್ತಾ ಓಡಿಹೋಗಲೇ ಎನಿಸುತ್ತಿತ್ತು. ಆದರೆ ಹೋಗಬಹುದಾಗಿತ್ತಾದರೂ ಎಲ್ಲಿಗೆ ?

ಬೆಳಿಗ್ಗೆ ಬಾಬಾ ಬಂದ. ಅವನ ಜತೆಗೆ ಬಂದ ಭಾವನನ್ನೂ, ತಂಗಿಯನ್ನೂ ಹಾಗೆಯೇ ಹಿಂದಕ್ಕೆ ಕಳಿಸಿದ್ದಾಯಿತು. ಆ ದಿನವನ್ನೂ ಹೇಗೋ ತಳ್ಳಿದೆವು. ಬೆಳಗಿನ ಜಾವ ನಾನು ಮತ್ತು ಬಾಬಾ ಮೇಲೆ ಹೋಗಿ ನೋಡಿದಾಗ ಅಣ್ಣ ಶಾಂತವಾಗಿ ನೆಲದ ಮೇಲೆ ಬಿದ್ದಿದ್ದರು. ಪ್ರಾಣಪಕ್ಷಿ ಹಾರಿಹೋಗಿತ್ತು. ಯಾವಾಗ ಸತ್ತರೆಂಬುದೂ ಗೊತ್ತಿಲ್ಲ ! ಎಲ್ಲೋ ಅದೃಶ್ಯರಾಗಿದ್ದ ನಮ್ಮ ದೊಡ್ಡಪ್ಪ, ಬಾಪೂಕಾಕಾ ಆಗ ಬಂದರು. ಊರಿನ ನಾಲ್ಕು ಜನ ಸೇರಿ ಹೇಗೋ ಶವಸಂಸ್ಕಾರ ಪೂರೈಸಿದರು.

ಇತ್ತ ತಮ್ಮನಾದ ಬಾಳನ ಕುತ್ತಿಗೆಯೂ ಜೋತುಬಿದ್ದಿತ್ತು. ಬಾಯಿಂದ ರಕ್ತ ಹರಿಯುತ್ತಿತ್ತು. ಇನ್ನು ಜೀವ ಹೋಗುವುದೊಂದು ಬಾಕಿ. 'ಈಗಲೋ ಇನ್ನೊಂದು ಕ್ಷಣವೋ! ಇನ್ನು ಇವನ ಆಸೆ ಬಿಟ್ಟುಬಿಡಿ. ನೀವು ಮೂವರಾದರೂ ಕೋಠೂರಿಗೆ ಹೊರಡಿ, ಈಗಲೇ ಹೊರಡಿ' ಎಂದರು, ನಮ್ಮ ಸೋದರಮಾವ. ಆದರೆ ಬಾಬಾ ಪಟ್ಟು ಹಿಡಿದ – 'ಬಾಳನನ್ನು ಬಿಟ್ಟು ನಾವು ಯಾರೂ ಇಲ್ಲಿಂದ ಕದಲುವುದಿಲ್ಲ.' ಮಾವ ಸಿಟ್ಟಿನಿಂದ ಹೊರಟುಬಿಟ್ಟರು.

ನಾವು ಇನ್ನು ಮನೆಯಲ್ಲಿ ನಿಲ್ಲುವಂತಿರಲಿಲ್ಲ. ಪೊಲೀಸರ ತಕರಾರು ಶುರುವಾಯಿತು. ನಾನು, ಅತ್ತಿಗೆ,

ಬಾಬಾ ಮತ್ತು ಅವನ ಹೆಗಲ ಮೇಲೆ ಮೂರ್ಛಾವಸ್ಥೆಯಲ್ಲಿದ್ದ ಬಾಳಾ - ಊರಾಚೆ ಹೊರಟೆವು. ಎರಡು ಫರ್ಲಾಂಗ್ ದೂರದಲ್ಲಿ ಮಹಾದೇವ ದೇವಸ್ಥಾನವಿತ್ತು. ಅದರ ಪಕ್ಕದಲ್ಲೆ ಗಣಪತಿಯ ಗುಡಿ. ಅಲ್ಲಿ ಬಾಳನನ್ನು ಮಲಗಿಸಿದೆವು. ಅಷ್ಟರಲ್ಲಿ ನಮಗೆ ಆಸರೆಯಾಗಲೆಂದು ಬಂದ ದೊಡ್ಡಪ್ಪ ಬಾಪೂಕಾಕಾನಿಗೂ ಜ್ವರ ಹಿಡಿಯಿತು. ರಾತ್ರಿಯಾಗುತ್ತಲೇ ನಾಯಿಗಳು ಊಳಿಡುವ ವಿಕಾರ ಸ್ವರ; ಗೂಬೆ, ಬಾವಲಿಗಳ ಅಪ ಶಕುನದ ಸದ್ದು. ನಾಲ್ಕು ದಿನ ನಾಲ್ಕು ಯುಗವಾಗಿ ಕಳೆಯಿತು. ಒಂದೆಡೆ ಮಹಾದೇವನ ಸನ್ನಿಧಿಯಲ್ಲಿ ಬಾಪೂಕಾಕಾ; ಇನ್ನೊಂದೆಡೆ ಗಣಪತಿಯ ಸನ್ನಿಧಿಯಲ್ಲಿ ಬಾಳಾ! ಇನ್ನು ನಾವು ಮೂವರು ಉಳಿದಿದ್ದೆವು. ಮುಂದೆ ಯಾರ ಪಾಳಿಯೋ ? ಏನೇ ಆದರೂ ನನಗೆ ಅಳು ಬರಲಿಲ್ಲ; ಕಣ್ಣಿನಲ್ಲೂ ನೀರಿಲ್ಲ! ನಾನು ಹೀಗೇಕಾದೆ ಎಂದು ಚಿಂತೆ ಹತ್ತಿಕೊಂಡಿತು! ಪ್ಲೇಗಿನ ಸ್ವಾಗತಕ್ಕೂ ಸಿದ್ಧನಾದೆ. ಅದರ ದಾರಿ ನೋಡುತ್ತಾ ಕುಳಿತೆ.

ಅನಿರೀಕ್ಷಿತವಾಗಿ ಬಂತು - ಬಾಬಾನ ಗೆಳೆಯರ ತಂಡ. ನಮ್ಮ ಶೋಚನೀಯ ಸ್ಥಿತಿ ತಿಳಿದು ನಾಸಿಕದಿಂದ ರಾಮಭಾವು ದಾತಾರ್ ಮತ್ತು ಇತರರು ಧಾವಿಸಿ ಬಂದರು. ಅವರ ಒತ್ತಾಯದ ಮೇರೆಗೆ ಗಾಡಿಯಲ್ಲಿ ಬಾಳನನ್ನೂ, ಬಾಪುವನ್ನೂ ಸಾಗಿಸಿಕೊಂಡು ನಾಸಿಕಕ್ಕೆ ಹೊರಟೆವು. ಭಗೂರಿನ ಮನೆಯ ಋಣ ಅಲ್ಲಿಗೆ ತೀರಿತು.

ಆಗ ನಾಸಿಕದಲ್ಲಿ ಊರಿನೊಳಕ್ಕೆ ರೋಗಿಗಳಿಗೆ ಪ್ರವೇಶವಿಲ್ಲ. ರೋಗಿಗಳನ್ನು ಮನೆಯಲ್ಲೂ ಇಟ್ಟುಕೊಳ್ಳುವಂತಿಲ್ಲ. ಆದರೆ ರಾಮಭಾವುವಿನ ಧೈರ್ಯವೇ ಧೈರ್ಯ. ಗುಟ್ಟಾಗಿ ಅವರ ಮನೆಗೆ ಹೋಗಿ ಸೇರಿಕೊಂಡೆವು. ಒಂದೇ ದಿನದಲ್ಲಿ ಬಾಪೂಕಾಕಾ ನಮ್ಮನ್ನು ಸದಾಕಾಲಕ್ಕೂ ಅಗಲಿಹೋದರು. ಹೆಂಡತಿಯಿಲ್ಲ, ಮಕ್ಕಳಿಲ್ಲ; ಮಕ್ಕಳಂತೆಯೇ ಇದ್ದ ನಮ್ಮ ಮೇಲೂ ಅವರಿಗೆ ನಂಬಿಕೆಯಿಲ್ಲ. ಹೀಗಾಗಿ ಅವರು ಒಬ್ಬ ವಕೀಲರ ಹತ್ತಿರ ಇಟ್ಟಿದ್ದ ಸಹಸ್ರಾರು ರೂಪಾಯಿ ಧನ ನಮ್ಮ ಭಾಗ್ಯಕ್ಕಂತೂ ಮುಳುಗಿ ಹೋಯಿತು. ತಂದೆಯ ಹಣವೂ ನಮಗೆ ದಕ್ಕಲಿಲ್ಲ; ದಾಮೂ ಅಣ್ಣ ಬದುಕಿದ್ದಾಗಲೇ ಒಂದು ರಾತ್ರಿ ದರೋಡೆಕೋರರು ಮನೆಗೆ ನುಗ್ಗಿ ಹಣವನ್ನೆಲ್ಲಾ ಹೊತ್ತುಹಾಕಿದ್ದರು. ಅನಂತರ ನಾವು ದೇವಸ್ಥಾನ ದಲ್ಲಿದ್ದಾಗ, ಕಳ್ಳರು ಅಳಿದುಳಿದ ಪಾತ್ರೆ ಪದಾರ್ಥಗಳನ್ನೂ ದೋಚಿಕೊಂಡು ಹೋಗಿದ್ದರು. ನಮ್ಮ ಅನನು ಭವ ಹಾಗೂ ಅಸಹಾಯಕತೆಯ ಲಾಭ ಯಥಾಶಕ್ತಿ ಎಲ್ಲರಿಗೂ ದೊರೆಯಿತು! ಗದ್ದೆ, ತೋಟಗಳನ್ನು ಅಲ್ಲಲ್ಲಿನ ಕುಳಗಳೇ ಆಕ್ರಮಿಸಿಕೊಂಡು ಕುಳಿತರು. ಶ್ರೀಮಂತ ಜಮೀನುದಾರರ ಮಕ್ಕಳಾಗಿದ್ದ ನಾವು ಕೇವಲ ಒಂದು ವಾರದೊಳಗೆ ಮನೆಯ ಹಿರಿಯರನ್ನೂ, ವಂಶದ ಸಂಪತ್ತನ್ನೂ ಕಳೆದುಕೊಂಡು ಅನಾಥ ರಾಗಿದ್ದೆವು; ಬೀದಿಯ ಭಿಕಾರಿಗಳಾಗಿದ್ದೆವು!

ಬಾಳನ ಉಳಿವಿನ ಭರವಸೆ ಎಳ್ಳಷ್ಟೂ ಉಳಿಯಲಿಲ್ಲ. ಊರಿನ ಹೊರಗಿದ್ದ ಪ್ಲೇಗ್ ಋಗ್ಣಾಲಯಕ್ಕೆ ಅವನನ್ನು ಸೇರಿಸುವನಿರ್ಧಾರವಾಯಿತು. ಆದರೆ, ಆ ಹಸುಳೆಯನ್ನು ಒಂಟಿಯಾಗಿ ಬಿಟ್ಟಿರಲು ಬಾಬಾನಿಗೆ ಇಷ್ಟವಿಲ್ಲ. ಬಾಳನ ಶುಶ್ರೂಷೆಗಾಗಿ ತಾನೂ ಅಲ್ಲಿಯೇ ನಿಲ್ಲಲು ನಿಶ್ಚಯಿಸಿದ. 'ಅದರಿಂದ ಒಬ್ಬರ ಬದಲು ಇಬ್ಬರೂ ಸಾಯಬೇಕಾದೀತು' ಎಂಬ ಇಷ್ಟಮಿತ್ರರ ಹಿತನುಡಿ, ಎಚ್ಚರಿಕೆ, ಒತ್ತಾಯ ಯಾವುದನ್ನೂ ಬಾಬಾ ಲೆಕ್ಕಿಸಲಿಲ್ಲ. ಆ ಆಸ್ಪತ್ರೆ ಸೇರಿದ ಮೇಲೆ ಹೊರಗೆ ಬರುವ ಪ್ರಶ್ನೆಯೇ ಇಲ್ಲ. ಪೂರ್ತಿ ಹೆಣವಾಗಬೇಕು, ಆಗಲೇ ಬಿಡುಗಡೆ! ಅಣ್ಣನೂ, ತಮ್ಮನೂ ಅಲ್ಲಿಗೆ ಹೋದರು. ನಾನೂ, ಅತ್ತಿಗೆಯೂ ದಾತಾರರ ಮನೆಯ ಮಹಡಿಯ ಕೋಣೆಯಲ್ಲಿ ಉಳಿದೆವು. ನಿತ್ಯವೂ ಬಾಬಾನಿಗೆ ಊಟ, ಬಟ್ಟೆ ತೆಗೆದುಕೊಂಡು ಹೋಗಿ

ಕೊಡುವ ಕೆಲಸ ನಾನು ವಹಿಸಿಕೊಂಡೆ

ಪ್ಲೇಗ್ ಆಸ್ಪತ್ರೆಯಂತಹ ನರಕ ಇನ್ನೊಂದಿಲ್ಲ. 24 ತಾಸೂ ರೋಗಿಗಳ ಚೀರಾಟ, ನರಳಾಟ ; ಗೋಳುಕರೆ, ಆಕ್ರಂದನ, ಅಸಹ್ಯ, ಕೊಳಕು ದೃಶ್ಯಗಳು ; ಕರಾಳ ಮೃತ್ಯುಛಾಯೆ. ಸಾವಿನ ಹಿಡಿತದಲ್ಲಿ ಒದರಾಡುವವರ ಎದೆ ನಡುಗಿಸುವ ಚೀತ್ಕಾರ. ನಾನಾ ವಯಸ್ಸಿನ ರೋಗಿಗಳು ಗದ್ದಲ ಎಬ್ಬಿಸುತ್ತಾ ಬರುತ್ತಾರೆ ; ಅನಂತರ ಸದ್ದು ಮಾಡದೇ ಹೋಗುತ್ತಾರೆ ! ನಾನಾ ದಿಕ್ಕುಗಳಿಂದ ಬರುತ್ತಾರೆ ; ಒಂದೇ ದಿಕ್ಕು ಹಿಡಿದು ಹಿಡಿದು ಸಾಗುತ್ತಾರೆ ! ಇಷ್ಟರ ಮೇಲೆ ಅದು ಸಾಂಕ್ರಾಮಿಕ ವ್ಯಾಧಿ. ಬಾಬಾನ ಎದೆಗಾರಿಕೆ, ಸಹನಶಕ್ತಿ ನಿಜಕ್ಕೂ ಅದ್ಭುತ. ಬಾಳನ ಮಗ್ಗಲು ಬಿಟ್ಟೇಳಲಿಲ್ಲ ಅವನು. ಯಮದೂತರನ್ನು ಹೊಡೆದೋಡಿಸಲು ನಿಯುಕ್ತನಾದ ದೇವದೂತನೋ ಅನ್ನುವಂತೆ ಅವನು ಅಲ್ಲಿ ಪೀಠ ಊರಿದ್ದ !

ಅತ್ತಿಗೆ ಎಡಗೈಲಿ ಜೀವ ಹಿಡಿದುಕೊಂಡು ಮನೆಗೆಲಸ ಮಾಡುತ್ತಿದ್ದಳು. ನನಗೆ ನಿತ್ಯವೂ ಬಾಬಾನ ಯೋಚನೆಯೇ. ಅವನಿಗೂ ಪ್ಲೇಗು ಬಂದರೆ ? ದಿನವೂ ಆಸ್ಪತ್ರೆಗೆ ಹೋಗುವಾಗ, ಎಲ್ಲಿ ಆ ಅನಿಷ್ಟ ವಾರ್ತೆ ಕೇಳಬೇಕಾದೀತೋ ಎಂದು ಜೀವ ಡವಗುಟ್ಟುತ್ತಿತ್ತು. ಊಟದ ಬುತ್ತಿ ಹೊರಗೆ ಇಟ್ಟು ಹಿಂದೆ ಸರಿದು ನಿಲ್ಲುತ್ತಿದ್ದೆ. ಬಾಳಾ ಬದುಕಿದ್ದಾನೊ ಇಲ್ಲವೊ, ಬಾಬಾ ಬರುತ್ತಾನೊ ಇಲ್ಲವೊ ಎಂಬುದೇ ಚಿಂತೆ. ಸ್ವಲ್ಪ ಹೊತ್ತಿಗೆ ಬಾಬಾ ಬಾಗಿಲಲ್ಲಿ ಕಣ್ಣಿಗೆ ಬಿದ್ದ ಎಂದರೆ, 'ಸದ್ಯ, ಇವತ್ತಿಗೆ ಗೆದ್ದೆ' ಅಂದುಕೊಳ್ಳುತ್ತಿದ್ದೆ.

ನಾಸಿಕದ ಬೀದಿಗಳ ಭೀಷಣತೆಯಂತೂ ಅವರ್ಣನೀಯ. ರಾತ್ರಿಯ ಹೊತ್ತು ಊಟ ತಲುಪಿಸಿ ಹಿಂದಿರುವಾಗ ಎಂಥ ಭಯಾನಕ ದೃಶ್ಯಗಳು ! ಉದ್ದಕ್ಕೂ ಶವೋತ್ಸವಗಳು ; ಕೊಳ್ಳಿ ದೆವ್ವಗಳಂತೆ ಬೆಂಕಿ ಹಿಡಿದು ಬರುವವರು ; 'ರಾಮ್ ಬೋಲೋ ಭಾಯಿ ರಾಮ್' ಎಂದು ರಾವಣ ಸ್ವರದಲ್ಲಿ ಗರ್ಜಿಸುತ್ತಾ ಸಾಗುವ ಶವವಾಹಕರು ! ಭಯಕ್ಕೆ ರಕ್ಷಣೆ ಆ ಘೋಷಣೆ ! ಒಂದು ತಂಡ ಹೋಯಿತು ಅನ್ನುವುದರೊಳಗೆ ಮತ್ತೊಂದು ! ಹೆಚ್ಚು ಹೊತ್ತು ಆ ದೃಶ್ಯ ಕಾಣದೆ, ಆ ಭೀಕರ ಸ್ವರ ಕೇಳದೆ ಹೋದಾಗಲಂತೂ, ದಾರಿಯ ನೀರವತೆ ಇನ್ನಷ್ಟು ಭಯಾನಕ ! ಹೆಜ್ಜೆಹೆಜ್ಜೆಗೂ ಪ್ಲೇಗಿನ ನಿರೀಕ್ಷಣೆ ; ಬಾಬಾ ಸಹ ಸತ್ತರೆ ಮುಂದೆ ಏನು ಮಾಡಬೇಕೆಂಬ ನಿರ್ಣಯ ಆಲೋಚನೆ !

ಒಂದು ದಿನ ಆಸ್ಪತ್ರೆಯ ಎದುರು ಕಾದು ನಿಂತೆ. ಬಾಬಾ ಹೊರಗೆ ಬರಲಿಲ್ಲ. ಎದೆಬಡಿತ ಜೋರಾಯಿತು. ಆಸ್ಪತ್ರೆಯ ನೌಕರನೊಬ್ಬ ಹೊರಬಂದು ಮರುಕದ ದನಿಯಲ್ಲಿ ಹೇಳಿದ : 'ನಿಮ್ಮ ಅಣ್ಣನಿಗೂ ಜ್ವರ ಬಂದಿದೆ. ಅವರು ಹೊರಬರುವಂತಿಲ್ಲ.' ನಾಲಗೆ ಒಣಗಿ ಹೋಗುತ್ತಿದ್ದರೂ – ಉತ್ತರ ಗೊತ್ತಿದ್ದರೂ – ಹೆದರುತ್ತಾ ಕೇಳಿದೆ : 'ಎಂಥ ಜ್ವರ ?', ಆತ 'ಪ್ಲೇಗಿನ ಜ್ವರ' ಎಂದ, ಸಹಾನುಭೂತಿಯಿಂದ. ರೋಗಿಯಾಗದೆ ಒಳಕ್ಕೆ ಪ್ರವೇಶವಿಲ್ಲ. ಇನ್ನು ಬಾಬಾನ ಮುಖ ನೋಡುವಂತಿಲ್ಲ. ನನಗೂ ಹಾಳು ಪ್ಲೇಗು ಬರಬಾರದೆ ಅನ್ನಿಸಿತು ! ಕಷ್ಟದಿಂದ ಕಾಲು ಎಳೆದುಕೊಂಡು ಹೊರಟೆ.

ಮನೆಗೆ ಹೋಗುತ್ತಲೇ, ನಿತ್ಯದಂತೆ ಅತ್ತಿಗೆ ಕಾದಿರುತ್ತಾಳೆ. 'ಭಾವುಜೀ, ಬಾಳನಿಗೆ ಮೇಲು ತಾನೆ ?' ಎನ್ನುತ್ತಾಳೆ. ಗಂಡನ ಬಗ್ಗೆ ಅವಳು ಕೇಳುವುದಿಲ್ಲ. ಆದರೆ ಉತ್ತರವನ್ನಂತೂ ಉತ್ಸುಕತೆಯಿಂದ ನಿರೀಕ್ಷಿಸುತ್ತಾಳೆ. ನಿರ್ಭಾಗ್ಯ ಯೇಸೂವಹಿನಿಗೆ ಏನು ಹೇಳಲಿ ? ಮನೆಗೇ ಹೋಗದಿದ್ದರೆ ? ಹೋಗದಿದ್ದರೆ, ಅವಳು ಇನ್ನೂ ಹೆಚ್ಚಿನ ಅಮಂಗಳವನ್ನೇ ನೆನೆದಾಳು ! ಮನೆಗೆ ಹೋದೆ. ಆದರೆ ಆ ವಿಷಯ ಏನೂ ಹೇಳಲಿಲ್ಲ. ರಾಮಭಾವುವಿಗೆ ಮಾತ್ರ ಗುಟ್ಟಾಗಿ ತಿಳಿಸಿದೆ. ಅತ್ತಿಗೆಗೆ ನಿಧಾನವಾಗಿಯೇ ಆದರೂ ತಿಳಿಯದೆ ಇರಲಿಲ್ಲ. ಅವಳ ತುಳಸಿಪೂಜೆ, ಸಾವಿತ್ರಿ ಕಥೆಯ ಪಾರಾಯಣ ಮೊದಲಿಗಿಂತ ಹೆಚ್ಚು

ಹೊತ್ತು ತೆಗೆದು ಕೊಳ್ಳತೊಡಗಿತು !

ಹಾಗೂ ಹೀಗೂ ನಾಲ್ಕೈದು ದಿನ ತಳ್ಳಿದೆವು. ಬಾಳಾ ಸ್ವಲ್ಪ ಸ್ವಲ್ಪವಾಗಿ ಚೇತರಿಸಿಕೊಂಡು ಎದ್ದು ಬಂದ. ನಾವಿನೊಡನೆ ಸೆಣಸುತ್ತಿದ್ದ ಬಾಬಾ ಸಹ ಗೆದ್ದು ಬಂದ. ಇಬ್ಬರೂ ಜೀವಸಹಿತ ಮನೆ ಸೇರಿದರು ಮರಣದಿರುಳಿನ ಪ್ರವಾತ ಕಳೆಯಿತು. ಜೀವನದರಳಿನ ಪ್ರಭಾತ ಬೆಳಗಿತು. ನಾವು ನಾಲ್ವರ ಸಂಸಾರಶಕಟ ನಿಧಾನವಾಗಿ ಚಲಿಸಿತು.

ಅಂತೂ, ಎಂಥ ಭಯಾನಕ ಗಂಡಾಂತರದಿಂದ ಪಾರಾಗಿದ್ದೆವು! ನೆನಸಿಕೊಂಡರೆ ಮೈ ಜುಂ ಎನ್ನುತ್ತದೆ. ಮೃತ್ಯು ಹತ್ತಿರ ಹತ್ತಿರ ನಮ್ಮೆಲ್ಲರ ಕುತ್ತಿಗೆಯವರೆಗೂ ಬಂದು ಹೋಗಿತ್ತು. ಅದರ ಕರಾಳ ಹಸ್ತ ನಮ್ಮ ಅಣ್ಣ ಬಾಬಾ ಮತ್ತು ತಮ್ಮ ಬಾಳನ ಪ್ರಾಣಕ್ಕೂ ಇನ್ನೇನು ಸಂಚಕಾರ ತರುವುದರಲ್ಲಿತ್ತು. ನನಗೂ ಅತ್ತಿಗೆಗೂ ಯಾವ ಕ್ಷಣದಲ್ಲಾದರೂ ಪ್ಲೇಗು ತಾಗಬಹುದಾಗಿತ್ತು. ಆದರೂ, ಹಾಗಾಗಲಿಲ್ಲ. ಬಹುಶಃ ಯಾವುದೋ ಮಹತ್ಕಾರ್ಯವನ್ನು ಸಾಧಿಸುವ ಸಲುವಾಗಿ ವಿಧಿ ನಮ್ಮನ್ನು ಪಾರುಮಾಡಿತ್ತು!





# ಹವಿಸ್ಸು ಐದು

ಆ ಕಾಲದಲ್ಲಿ ನಾಸಿಕ ಒಂದು ಹಿಂದುಳಿದ ಊರು ಸಾರ್ವಜನಿಕ ಜೀವನದಲ್ಲಿ ಉತ್ಸಾಹವಾಗಲಿ, ರಾಜಕಾರಣ ಜಾಗೃತಿಯಾಗಲಿ ಎಳ್ಳಷ್ಟೂ ಇಲ್ಲ. ಯಾತ್ರಾಸ್ಥಳವಾದುದರಿಂದ ಎಲ್ಲೆಲ್ಲೂ ಕಸಬುದಾರ ಭಟ್ಟರು, ಭಿಕ್ಷುಕರು , ಹರಟೆ, ಕುಚೇಷ್ಟೆಗಳಲ್ಲಿ ತೊಡಗಿದ ಉಢಾಳ ಯುವಕರು ; ತಂತಮ್ಮ ತೊಂದರೆ ತಾಪತ್ರಯಗಳಲ್ಲೇ ಮುಳುಗಿದ ಗೃಹಸ್ಥರು. ಇಕ್ಕಟ್ಟಾದ ಹೊಲಸು ಬೀದಿಗಳು ನಾವಿದ್ದ ತಿಲಭಾಂಡೇಶ್ವರ ಗಲ್ಲಿಯಂತೂ ಇವೆಲ್ಲದರ ಸಾಕ್ಷಾತ್ ಪ್ರತಿರೂಪ

ನಮ್ಮ ಅಣ್ಣ ಬಾಬಾನಿಗೆ ಬಾಲ್ಯದಿಂದಲೂ ಆಧ್ಯಾತ್ಮದ ಹುಚ್ಚು ಭಸ್ಮ - ಜಟೆ - ಕಾವಿ ಕಣ್ಣಿಗೆ ಬಿದ್ದರೆ ನಾಕು, ಇವನು ಬೆನ್ನುಹತ್ತಿದ ಎಂತಲೇ ಲೆಕ್ಕ !. 'ಛೂಮಂತ್ರ' ದಿಂದ ಹಿಡಿದು ಅಷ್ಟಸಿದ್ಧಿ, ಆತ್ಮಸಾಕ್ಷಾತ್ಕಾರದವರೆಗೆ ಎಲ್ಲವನ್ನೂ ಸಾಧಿಸಿಬಿಡಬೇಕೆಂಬ ಹಂಬಲ ಬೈರಾಗಿಗಳ ದರ್ಶನ ತನ್ನ ಭಾಗ್ಯವೆಂದೇ ಅವನ ನಂಬಿಕೆ. ಆದರೆ ನಿಜಕ್ಕೂ ಭಾಗ್ಯೋದಯ ಆಗುತ್ತಿದ್ದುದು ಆ ಬೈರಾಗಿಗಳಿಗೇ. ಸೇರುಗಟ್ಟಲೆ ಹಾಲೇನು, ಹಣ್ಣೇನು, ಏನು ಸೇವೆ, ಏನು ಭಕ್ತಿ ! ಮನೆಯವರಿಗೆ ಇಲ್ಲದಿದ್ದರೂ ಅವರಿಗೆ ಸಲ್ಲುತ್ತಿತ್ತು. ಅವರ ಬಾಯಿಂದ ಬ್ರಹ್ಮ, ಮಾಯೆ ಇತ್ಯಾದಿ ನಾಲ್ಕಾರು ಶಬ್ದಗಳು ಹೊರಡುತ್ತಲೇ ಬಾಬಾನ ಶ್ರದ್ಧೆ ಇಮ್ಮಡಿಸುತ್ತಿತ್ತು. ಅವನ ಸರಳ ಸ್ವಭಾವದ ದುರುಪಯೋಗ ಪಡೆದು, ತಿಂದು ತೇಗಿ ಕೈಬಿಟ್ಟವರು ಎಷ್ಟೋ. ನಾನು ಅವನನ್ನು ಛೇಡಿಸಿ ಹಾಸ್ಯ ಮಾಡುತ್ತಿದ್ದೆ. ಪ್ರತಿಸಲವೂ 'ಮೋಸ ಹೋದೆ' ಎಂದು ಅವನೂ ಒಪ್ಪಿಕೊಳ್ಳುತ್ತಿದ್ದ ಆದರೆ ಪುನಃ ಕಾವಿ, ಜಟೆ ಕಾಣುತ್ತಲೇ ಮತ್ತೆ ಅವರ ಸೇವೆಗೆ ಸಿದ್ಧ ! ನನಗೂ ಹೇಳುತ್ತಿದ್ದ: 'ತಾತ್ಯಾ, ಹಿಂದಿನದು ಬಿಡು ಆದರೆ ಇವರು ಮಾತ್ರ ಸಿದ್ಧಪುರುಷರು ಒಂದು ಸಲ ಬಂದು ನೋಡು, ತಿಳಿಯುತ್ತದೆ.'

ಊರಾಚೆ ಗೋದಾವರಿಯ ದಡದಲ್ಲಿ ಪುರಾಣಪ್ರಸಿದ್ಧ ಪಂಚವಟಿ ಇದೆ. ಅಲ್ಲಿನ ಧರ್ಮಶಾಲೆಯಲ್ಲಿ ಕಾವಿಧಾರಿಯೊಬ್ಬರಿದ್ದರು. ಬಾಬಾನ ಗುರುಪಟ್ಟದ ಭಾಗ್ಯ ಬಹುದಿನ ಅವರಿಗೆ ಲಭಿಸಿತ್ತು 'ಇವರಂತೂ ಅರ್ವಾಚೀನ ರಾಮದಾಸರೇ ಸೈ ಅಂತರ್ಜ್ಞಾನದಿಂದ ನೀನು ಮಹಾಪುರುಷ ಆಗುವೆಯೆಂದು ಅರಿತು, ಕರೆತರುವಂತೆ ಬಹಳ ಒತ್ತಾಯಿಸಿದ್ದಾರೆ' ಎಂದು ಬಾಬಾ ಬಾರಿಬಾರಿ ನನ್ನನ್ನು ಒತ್ತಾಯಿಸಿದ. ಹೋಗುತ್ತಲೇ ಅವರು ಪ್ರಶಂಸೆ ಪ್ರಾರಂಭಿಸಿದರು : 'ಒಳ್ಳೆ ಶುಭಲಕ್ಷಣಗಳಿವೆ ಈ ಹುಡುಗ ಹೇಗಾದರೂ ದೊಡ್ಡವ

ನಾಗುತ್ತಾನೆ... ' ಇತ್ಯಾದಿ.

ನಾನು, 'ಇಂಗ್ಲಿಷರನ್ನು ಭಾರತದಿಂದ ಓಡಿಸಲು ಸಶಸ್ತ್ರಯುದ್ಧ ಬಿಟ್ಟು ಅನ್ಯಮಾರ್ಗ ಇಲ್ಲ ಅಲ್ಲವೆ?' ಎಂದು ಎರಡುಮೂರು ಬಾರಿ ಪ್ರಶ್ನಿಸಿದೆ. ನನ್ನ ನೇರಪ್ರಶ್ನೆ ಆ 'ಸರ್ವಸಂಗ ಪರಿತ್ಯಾಗಿ'ಯನ್ನು ನಡುಗಿಸಿರಬೇಕು! ಮೆಲ್ಲಗೆ ಅಂದರು: 'ನೀನೇ ಮುಂದಾಗಿ ಹೋಗಬಾರದು. ಮೊದಲು ''ಇಲ್ಲಿ'' ಭಗವಂತನ ಅನುಗ್ರಹ ಸಂಪಾದಿಸಬೇಕು' ಎಂದರೆ, ಅವರ ಸೇವೆಗೆ ನಿಲ್ಲಬೇಕು ಎಂಬುದೇ ಸಾರಾಂಶ ! ನನ್ನನ್ನು ಶಿವಾಜಿಯನ್ನಾಗಿ ಮಾಡುವ ರಾಮದಾಸತ್ವ ಅವರಲ್ಲಿ ಲವಲೇಶವೂ ಕಾಣಲಿಲ್ಲ. ಯಾವ ಸಂನ್ಯಾಸಿಯ ಬಳಿ ಹೋದರೂ ಅಷ್ಟೆ. ಧರ್ಮ ಹಾಗೂ ದೇಶದ ಜ್ಞಾನ ಎಳ್ಳಷ್ಟೂ ಇಲ್ಲ. ಇಂಗ್ಲಿಷರ ಮಾತೆತ್ತಿದರೆ ಬೆಚ್ಚುತ್ತಾರೆ ; ಅಂಥ ಪುಕ್ಕಲರ ಬಾಯಲ್ಲಿ ದೊಡ್ಡದಾಗಿ ದೈವಾನುಗ್ರಹದ ಮಾತು ! ಕೆಲವರಂತೂ, 'ಎಲ್ಲವೂ ದೈವೇಚ್ಛೆ ; ಅದರಂತೆ ನಡೆಯುತ್ತದೆ' ಎನ್ನುತ್ತಿದ್ದರು. ಹಾಗಾದರೆ ಕಳ್ಳರ ರಾಜ್ಯ ನಡೆಯಬೇಕೆಂಬುದು ದೇವರ ಇಚ್ಛೆಯೆ ? ಅದನ್ನು ಕಿತ್ತೆಸೆಯಬೇಕೆಂಬ ದೇಶಭಕ್ತರ ಬಯಕೆ ರಾಕ್ಷಸ ಇಚ್ಛೆಯೆ ? ಎಲ್ಲವನ್ನೂ ದೇವರೇ ಮಾಡುತ್ತಾನೆ ಎನ್ನುವುದಾದರೆ, ನಮ್ಮಲ್ಲಿ ಸ್ವಾತಂತ್ರ್ಯದ ಬಯಕೆ ಹುಟ್ಟಿಸಿದವನೂ ದೇವರೇ ಅಲ್ಲವೆ ?

ಬಾಬಾನಿಗೆ ಭಸ್ಮ ಅಂಜನಗಳಲ್ಲಿ ನಂಬಿಕೆ ಹೆಚ್ಚು. ಅದನ್ನು ಹಚ್ಚಿಕೊಂಡವರ ಬಳಿಗೆ ಯಮದೂತರು ಸುಳಿಯುವುದಿಲ್ಲ ಎಂದು ಯಾವುದೋ ಪುಸ್ತಕದಲ್ಲಿ ಇದ್ದಿತಂತೆ. ನನಗೂ ಆ ರಹಸ್ಯ ಒಮ್ಮೆ ಹೇಳಿದ. ವಾದವಿವಾದ ಶುರುವಾಯಿತು.

'ಅದೆಲ್ಲ ಶುದ್ಧ ಬೊಗಳೆ. ಅಚ್ಚಾದ ಮಾತ್ರಕ್ಕೆ ಅದು ಸತ್ಯವಲ್ಲ' ಎಂದೆ.

'ಹಾಗೆ ಹೇಳಬೇಡ. ಅದಕ್ಕೆ ಎಷ್ಟೋ ಉದಾಹರಣೆಗಳಿವೆ.'

'ಅವೂ ಕಟ್ಟುಕಥೆಗಳೇ. ಹಾಗಿಲ್ಲದಿದ್ದಲ್ಲಿ ಗುರು ಗೋವಿಂದ ಸಿಂಹ ಏಕೆ ಸಾಯಬೇಕಾಗಿತ್ತು ? ಶಿವಾಜಿ ಏಕೆ ಬದುಕಿರಬಾರದಾಗಿತ್ತು ? ಪಾನೀಪತದಲ್ಲಿ ಸದಾಶಿವ ಭಾವು ಏಕೆ ಗೆಲ್ಲಬಾರದಾಗಿತ್ತು ? ವಾಸುದೇವ ಫಡಕೆ ಏಕೆ ನರಳಬೇಕಾಗಿತ್ತು ? ಅವರಿಗೆಲ್ಲ ಅಂಜನದ ವಿಷಯ ಗೊತ್ತಿರಲಿಲ್ಲವೇನು ?

'ಗೊತ್ತಿದ್ದರೆ ಸಾಲದು, ಜತೆಗೆ ದೈವಾನುಗ್ರಹವೂ ಬೇಕು' ಎಂದು ಬಾಬಾ ಮಾತು ತಿರುಗಿಸಿದ.

'ದೈವಾನುಗ್ರಹ ಎಂದಿದ್ದರೂ ಕೃತಿಶೂರರ ಸ್ವತ್ತು. ಜಟೆ - ಭಸ್ಮಗಳ ಡಾಂಭಿಕರದಲ್ಲ.'

'ಅರೇ ತಾತ್ಯಾ, ಈ ನಾಸ್ತಿಕತೆ ಒಳ್ಳೆಯದಲ್ಲ, ನೋಡು.'

'ಅರೇ ಬಾಬಾ, ನಿನ್ನ ಕುರುಡು ಆಸ್ತಿಕತೆಯೂ ಒಳ್ಳೆಯದಲ್ಲ, ನೆನಪಿಡು'

ಅಲ್ಲಿಗೆ ಮಾತು ಮುಗಿದಂತೆ. ಪುನಃ ಊರಿಗೆ ಯಾರಾದರೂ ಮೊಳೆ ನುಂಗುವವರೋ, ಬೆಂಕಿ ಮೇಲೆ ನಡೆಯುವವರೋ, ಯಕ್ಷಿಣಿಯವರೋ ಬಂದರೆ ಸಾಕು, ಬಾಬಾನಿಗೆ ಆನೆಬಲ ಬಂದುಬಿಡುತ್ತಿತ್ತು. 'ನೋಡಿದೆಯೋ, ಯೋಗದ ಮಹಿಮೆ ಹೇಗಿದೆ ?' ಎನ್ನುತ್ತಿದ್ದ.

'ಹಾಗಾದರೆ ಅವರು ತಮ್ಮ ಶಕ್ತಿಯನ್ನು ಬ್ರಿಟಿಷರ ವಿರುದ್ಧ ಏಕೆ ಬಳಸಬಾರದು ? ದೇಶದ ದಾಸ್ಯ ಏಕೆ ಅಳಿಸಬಾರದು ? ಏಕೆ ಸ್ವಾತಂತ್ರ್ಯ ಗಳಿಸಬಾರದು ? ಸತ್ತ ದೇಶಭಕ್ತರನ್ನು ಮೇಲೇಳಿಸಬಾರದು ? ಬ್ರಿಟಿಷ್ ಸಿಪಾಯಿಗಳು ಸ್ವಜನರನ್ನು ಬೂಟುಕಾಲಿನಿಂದ ತುಳಿಯುವಾಗ, ಗುಂಡಿಟ್ಟು ಕೊಲ್ಲುವಾಗ, ಮಹಿಳೆಯರ ಮೇಲೆ ಅತ್ಯಾಚಾರ ನಡೆಸುವಾಗ, ಮನೆಗಳಿಗೆ ಬೆಂಕಿ ಹಚ್ಚುವಾಗ ಎಲ್ಲಿ ಹೋಗಿರುತ್ತದೆ ಆ ಯೋಗಶಕ್ತಿ ? ಸ್ವದೇಶ ಸೇವೆಗೆ ಅದರಿಂದ ಬಿಡಿಕಾಸಿನಷ್ಟೂ ಉಪಯೋಗವಿಲ್ಲ. ಎಂದಮೇಲೆ ಅದು

ನನಗೆ ಬೇಕಾಗಿಲ್ಲ' ಎಂದು ನಿಷ್ಠುರವಾಗಿ ನುಡಿಯುತ್ತಿದ್ದೆ.

ಮನೆಯಲ್ಲಿ ದಟ್ಟದಾರಿದ್ರ್ಯ. ಬಾಬಾ ಅಲ್ಲಿ ಇಲ್ಲಿ ನೌಕರಿಗೆ ಸೇರುತ್ತಿದ್ದ. ಆದರೆ ಎರಡು ತಿಂಗಳೂ ನೆಟ್ಟಗಿರುತ್ತಿರಲಿಲ್ಲ. ದಿನಬೆಳಗಾದರೆ ನಾಲಗಾರರ ಕಾಟ. ಅತ್ತಿಗೆ ತೌರಿನಿಂದ ತಂದಿದ್ದ ಒಡವೆಗಳನ್ನೂ ನಮಗಾಗಿ ವಿನಿಯೋಗಿಸಿ ಬಿಟ್ಟಳು. ಅವಳ ಮಂಗಳಸೂತ್ರ ಉಳಿದದ್ದೇ ಒಂದು ಪುಣ್ಯ. ಬಾಬಾನಿಗೆ ದಿನವೂ ಅರೆಹೊಟ್ಟೆ; ಹರಕಲು ಬಟ್ಟೆ. ಆದರೆ ತಮ್ಮಂದಿರಿಗೆ ಬಡತನದ ಬೇಗೆ ತಟ್ಟಲು ಬಿಡಲಿಲ್ಲ. 'ನಮ್ಮ ತಾತ್ಯಾ ಮುಂದೆ ಮಹಾಪುರುಷ ಆಗುತ್ತಾನೆ. ಅವನಿಂದ ದೊಡ್ಡ ಕಾರ್ಯ ಆಗುವುದಿದೆ' ಎಂದು ಹೆಮ್ಮೆಯಿಂದ ಹೇಳಿಕೊಳ್ಳುವುದರಲ್ಲೇ ಅವನಿಗೆ ಸಮಾಧಾನ!

ಇವೆಲ್ಲದರ ನಡುವೆ ತೊಂದರೆ ಅನುಭವಿಸುತ್ತಿದ್ದವಳೆಂದರೆ ನಮ್ಮ ಅತ್ತಿಗೆ. ಒಂದೇ ಒಂದು ಸೀರೆಯಲ್ಲಿ ಅವಳು ವರ್ಷವೆಲ್ಲಾ ತಳ್ಳುತ್ತಿದ್ದಳು; ಅದೂ ಹರಕಲು ಸೀರೆ. ಆದರೆ ಆ ಸಾಧ್ವಿ ತನಗಾಗಿ ಬಾಯಿ ಬಿಟ್ಟು ಏನೂ ಕೇಳಿದವಳಲ್ಲ. 'ಮನೆಯ ತಾಪತ್ರಯ ಹುಡುಗರ ಹತ್ತಿರ ಹೇಳಬೇಡ' ಎಂದು ಬಾಬಾ ಅವಳಿಗೆ ಕಟ್ಟುಮಾಡಿದ್ದ. ಹರಿದು ಜೂಲಾದ ಅವನ ಬಟ್ಟೆ ನೋಡುವುದಕ್ಕಾಗದು. ಅದನ್ನು ತೆಗೆದು ನಾನು ಹೊರಗೆ ಎಸೆದಾಗಲೇ ಅವನಿಗೆ ಹೊಸ ಬಟ್ಟೆಯ ಯೋಚನೆ.

ನಮ್ಮ ಅತ್ತಿಗೆಗೆ ಒಂದು ಗಂಡುಮಗುವಾಯಿತು. ಆದರೆ ಬಾಣಂತಿಯ ಆರೈಕೆಗೆ ಬಾಬಾನ ಹತ್ತಿರ ಬಿಡಿಗಾಸೂ ಇಲ್ಲ. ನಮ್ಮ ದಾರಿದ್ರ್ಯ ಕಂಡು ಆ ಕೂಸಿಗೂ ಕರುಣೆ ಹುಟ್ಟಿರಬೇಕು. ಅದು ಒಂದು ತಿಂಗಳೂ ಬದುಕಲಿಲ್ಲ! ಅತ್ತಿಗೆಯ ದೇಹಾರೋಗ್ಯವೂ ಹದಗೆಟ್ಟಿತು. ಆಗ ಅವಳನ್ನು ಸಂತೈಸುವ ಅಧಿಕಾರವಾಗಲಿ, ನಾಲಗೆಯಾಗಲಿ ನಮಗೆ ಎಲ್ಲಿತ್ತು? ಆದರೂ ನಮ್ಮ ಸುಖಕ್ಕಾಗಿ ಅವಳು ಜೀವ ತೇದಳು. ಅದರಲ್ಲೇ ಆ ಸಾಧ್ವಿ ತನ್ನ ಸಮಸ್ತ ಸುಖವನ್ನೂ ಕಂಡುಕೊಂಡಳು. ಅವಳನ್ನು 'ಶ್ರೇಷ್ಠಳು, ಸಾಧ್ವಿ' ಎಂದೆಲ್ಲ ಬಣ್ಣಿಸಿದ ಮಾತ್ರಕ್ಕೆ ಆಕೆಯ ಋಣ ತೀರುವುದಿಲ್ಲವೆಂದು ನಾನು ಬಲ್ಲೆ. ಆದರೆ ಈಗ ಅದಕ್ಕಿಂತ ಹೆಚ್ಚಾಗಿ ಏನು ತಾನೆ ಮಾಡಬಲ್ಲೆ?

ನಿತ್ಯದ ಶಾಲಾ ಪಾಠಗಳಲ್ಲಿ ನನ್ನ ಆಸಕ್ತಿ ಅಷ್ಟಕ್ಕಷ್ಟೆ! ವರ್ತಮಾನ ಪತ್ರಿಕೆ ಹಾಗೂ ಪಠ್ಯೇತರ ಗ್ರಂಥಗಳ ವಾಚನ, ರಾಷ್ಟ್ರೀಯ ವಿಚಾರಗಳ ಚರ್ಚೆ, ಸಾರ್ವಜನಿಕ ಕಾರ್ಯಕ್ರಮಗಳು - ಇತ್ಯಾದಿಗಳಲ್ಲೆ ಶಾಲೆಯ ಹೊರಗಿನ ಸಮಯವೆಲ್ಲ ಕಳೆದುಹೋಗುತ್ತಿತ್ತು. ಶಿಕ್ಷಕರು ಸಿಕ್ಕಿದಾಗಲೆಲ್ಲ, 'ಏನೇ ಆಗಲಿ, ನೀನು ಈ ವರ್ಷ ತೇರ್ಗಡೆಯಾಗುವುದಿಲ್ಲ' ಎಂದು ಕೆಟ್ಟ ಭವಿಷ್ಯ ನುಡಿಯುತ್ತಿದ್ದರು. ಆದರೆ, ಪರೀಕ್ಷೆ ಸಮೀಪಿಸುತ್ತಿದ್ದಂತೆ ನನ್ನ ದಿನಚರಿ ಬದಲಾಗುತ್ತಿತ್ತು. ಒಂದೆರಡು ತಿಂಗಳು ಪಟ್ಟಾಗಿ ಕುಳಿತು ಮೊದಲಿನಿಂದ ಕೊನೆಯತನಕ ಓದಿ ಮುಗಿಸುತ್ತಿದ್ದೆ. ವರ್ಷವರ್ಷವೂ ಇದೇ ನನ್ನ ಪದ್ಧತಿ. ಬಾರಿಬಾರಿ ಅಪಯಶದ ಅಪಶಕುನ ಪಲಕುತ್ತಿದ್ದ ಶಿಕ್ಷಕರಿಗೆಲ್ಲ ಫಲಿತಾಂಶ ಹೊರಬೀಳುತ್ತಲೇ ಅಚ್ಚರಿ. ನಮ್ಮ ಬಾಬಾನಿಗಂತೂ ಹಿಡಿಸಲಾಗದಷ್ಟು ಹಿಗ್ಗು. ಬೇಡ, ಬೇಡ ಎನ್ನುತ್ತಿದ್ದರೂ ನೆರೆಹೊರೆಗೆಲ್ಲ ಪೇಡ ಹಂಚಿಬಿಡುತ್ತಿದ್ದ. 'ಭೇಷ್, ಭೇಷ್, ಜಯಭೇರಿ ಹೊಡೆದೆ ಬಿಡು' ಎಂದು ಅಭಿಮಾನದಿಂದ ಬೆನ್ನುತಟ್ಟುತ್ತಿದ್ದ. ನನ್ನ ಬಿ.ಎ. ಪರೀಕ್ಷೆಯವರೆಗೂ ಅವನ ಈ ಶ್ರಮ ತಪ್ಪಿದ್ದಿಲ್ಲ. ಅವನ ಕೈಲಿ ಹಾಗೆ ಬೆನ್ನುತಟ್ಟಿಸಿಕೊಳ್ಳುವ ಸಲುವಾಗಿ ಬಿ.ಎ. ವರೆಗೆ 10- 12 ಪರೀಕ್ಷೆಗಳ ಬದಲು 25 ಪರೀಕ್ಷೆಗಳಿದ್ದರೂ, ನಗುನಗುತ್ತಾ ಜಯಭೇರಿ ಬಾರಿಸಲು ಸಿದ್ಧನಿದ್ದೆ!

ಮನೆಯೊಳಗೆ ನಾನು ಇರುತ್ತಿದ್ದುದು ಸ್ವಲ್ಪ ಹೊತ್ತು ಮಾತ್ರ. ಆದರೆ ಅಷ್ಟರಲ್ಲೆ ಅಡಿಗೆ ಮನೆ

ಯವರೆಗೂ ಗದ್ದಲ ಎಬ್ಬಿಸುತ್ತಿದ್ದೆ. ಆ ಬಗ್ಗೆ ಅತ್ತಿಗೆಯ ವಿವರಣೆ ಸ್ವಲ್ಪ ಕೇಳಿ :

'ನಾನು ಭಾವೋಜೀ ಎಂದು ಕರೆದರೆ ಅವನಿಗಾಗದು. ತಾತ್ಯಾ ಅನ್ನಬೇಕು. ಥಾಲಿಪೀಠ್ ಎಂದರೆ ಅವನಿಗೆ ಪ್ರಾಣ. ನಾನು ಕಾವಲಿಯ ಮೇಲಿಂದ ಇಳಿಸುತ್ತಿದ್ದಂತೆಯೇ ಸರಸರನೆ ಬಾಯಿಗೆ ತುರುಕಿ ಕೊಳ್ಳುತ್ತಾನೆ. ಅವನ ಕೈಯಿಂದ ತತ್‌ಕ್ಷಣ ಕಿತ್ತುಕೊಂಡರೆ, ''ವಹಿನೀ, ನೀನು ಬಹಳ ಒಳ್ಳೆಯವಳು. ನೀನು ಎಷ್ಟು ಕೊಟ್ಟರೆ ಅಷ್ಟೇ ಸಾಕು'' ಎನ್ನುತ್ತಾನೆ. ಆದರೆ ಅದೆಲ್ಲ ಶುದ್ಧ ಠಕ್ಕು! ಕಡೆಗೆ ನಾನು ಕೊಡೆ, ಅವನು ಬಿಡ. ಎಳೆದಾಟ, ಕೂಗಾಟ ನಡೆಯುತ್ತಿತ್ತು. ಕೋಟು, ಟೋಪಿ ಹಾಕಿಕೊಂಡೇ ತಿನ್ನುತ್ತಾನೆ ; ಸ್ವಲ್ಪವೂ ಎಗ್ಗಿಲ್ಲ. ಅವರು (ಬಾಬಾ) ತುಂಬ ಮಡಿ-ಮೈಲಿಗೆ ಪಾಲಿಸುತ್ತಾರೆ. ಒಮ್ಮೆ ತಾತ್ಯಾ ತಾನು ಹೊರಗಿನಿಂದ ಬಂದವನೇ, ಥಾಲಿಪೀಠ್ ಕಂಡ. ಅದೇ ಬಟ್ಟೆಯಲ್ಲೇ ಗಪಗಪನೆ ತಿನ್ನತೊಡಗಿದ. ಅಷ್ಟರಲ್ಲಿ ಅವರು ಹೊರಗಿನಿಂದ ಬರುವ ಸದ್ದಾಯಿತು. ಕೈಲಿದ್ದುದನ್ನು ಮುಚ್ಚಿಕೊಂಡು ಪಕ್ಕದ ಮನೆಗೆ ಓಡಿಬಿಟ್ಟ. ವರ್ಷ ಗಟ್ಟಲೆ ಒಗೆಯದಿರುವ ರೇಶ್ಮೆ ವಸ್ತ್ರಕ್ಕಿಂತಲೂ ನಿತ್ಯವೂ ಒಗೆಯುವ ಸಾದಾ ಬಟ್ಟೆಯೇ ನಿಜವಾದ ಮಡಿ ಎಂಬುದು ಅವನ ವಾದ.

'ಮಾವಿನ ಹುಳಿಯ ಪಾನಕ ಅವನಿಗೆ ಬಲು ಇಷ್ಟ. ''ನಿನಗೆ ಸಹಾಯ ಮಾಡುತ್ತೇನೆ ; ಸಿಹಿ ಸಾಕೋ ಸಾಲದೋ ನೋಡುತ್ತೇನೆ'' ಎನ್ನುತ್ತಾ ಸ್ವಲ್ಪ ಸ್ವಲ್ಪವಾಗಿ ಕುಡಿದು ಮಾಡಿದಷ್ಟನ್ನೂ ಮುಗಿಸಿಬಿಡುತ್ತಾನೆ. ಮನೆಗೆ ಹಸಿಯ ಕಡಲೆ ತಂದರೆ ನಾನು ಎಲ್ಲೇ ಮುಚ್ಚಿಟ್ಟಿರಲಿ, ಪತ್ತೆಹಚ್ಚುತ್ತಾನೆ. ಅದರ ಕಾಳು ಬಿಡಿಸಿ ಬಾಯಿಗೆ ಹಾಕಿಕೊಳ್ಳುತ್ತಾ ಓದುವುದು ಅವನ ರೂಢಿ. ಒಂದು ವೇಳೆ ನಾನು ತಿನ್ನತೊಡಗಿದರೆ, ''ಮಂಗನ ಹಾಗೆ ಅದೇನು ತಿನ್ನುತ್ತೀ? ನೀನೇನು ಕೋತಿಯೆ? ಅದನ್ನು ಹೆಚ್ಚು ತಿನ್ನುವುದು ಒಳ್ಳೆಯದಲ್ಲ. ಇನ್ನು ಮೇಲೆ ನಾನೂ ಜಾಸ್ತಿ ತಿನ್ನುವುದಿಲ್ಲ'' ಎನ್ನುತ್ತಾನೆ. ನಾನು ಒಳಗೆ ತೆಗೆದಿಡುತ್ತೇನೆ ; ಆಗ ಯಾರಿಗೂ ಗೊತ್ತಾಗದಂತೆ ಬಂದು ಮುಗಿಸಿಬಿಡುತ್ತಾನೆ ! ಸಭೆ, ಭಾಷಣ, ಸ್ನೇಹಿತರ ಮನೆ ಅಂತ ಸದಾ ಊರು ಸುತ್ತುತ್ತಾನೆ. ಕವನ, ಲೇಖನ, ಹಾಸ್ಯ, ಹರಟೆ, ಚೇಷ್ಟೆ ಏನಾದರೊಂದು ಮಾಡುತ್ತಲೇ ಇರುತ್ತಾನೆ.'

ತಂದೆ ಸತ್ತಮೇಲೆ ತಿಲಭಾಂಡೇಶ್ವರ ಬೀದಿಯಲ್ಲಿ ವಸತಿ ಹೂಡಿದಾಗ ನನ್ನ ವಯಸ್ಸು ಹದಿನಾರು. ಆಗ ಯಾರದೇ ಅಂಕೆ, ಶಿಕ್ಷೆ ಇಲ್ಲ, ಮಾರ್ಗದರ್ಶನವಿಲ್ಲ. ಉಚ್ಛೃಂಕಲತೆಯ ಕಡೆಗೆ ಹೊರಳಲು ಮುಕ್ತ ಅವಕಾಶವಿದ್ದ ಕಿಶೋರಾವಸ್ಥೆ. ಬಹುಬೇಗ ದುಸ್ಸಂಗಕ್ಕೆ ಬಲಿಯಾಗಬಹುದಾದ ಜಾರಿಕೆಯ ಮೆಟ್ಟಲು ಅದು. ಅಷ್ಟು ಸಾಲದೆಂಬಂತೆ, ಶಾಲೆಯನ್ನೆ ಬಂದಿಶಾಲೆಯಾಗಿ ಎಣಿಸುವ ಬಾಬಾನ ಸ್ನೇಹಿತರ ಗಮನಾ ಗಮನ. ದಿನವೂ ನಾಟಕ, ತಂಬಾಕು, ಇಸ್ಪೀಟು, ಹರಟೆಗಳಲ್ಲಿ ಹೊತ್ತು ಕಳೆಯುವ ಅವರ ನಿಕಟ ದರ್ಶನ. ಅವರ ಕಲ್ಪನೆಯಲ್ಲಿ, ಓದುತ್ತಲೋ ಬರೆಯುತ್ತಲೋ ಕುಳಿತಿರುತ್ತಿದ್ದ ನಾನೊಂದು 'ಪುಸ್ತಕ ಕೀಟ' ; ಕೆಲಸಕ್ಕೆ ಬಾರದ ತುಚ್ಛವಸ್ತು! ವಿದ್ಯಾರ್ಜನೆ ಹಾಗೂ ರಾಷ್ಟ್ರೀಯ ಮಹತ್ವಾಕಾಂಕ್ಷೆಗಳು ಅಮಾನುಷ ದುರ್ಗುಣಗಳು ಎಂಬುದು ಅವರ ನಂಬಿಕೆ. ಹೀಗಿದ್ದೂ ನಾನು ಅವರ ದಾರಿ ಹಿಡಿಯದೆ, ಅವರ ಹಾಗೆ ನಡೆಯದೆ ಉಳಿದು ಕೊಂಡದ್ದು ನಿಜಕ್ಕೂ ಸುದೈವ ಅನ್ನಬೇಕು. ಅವರ ಸಹವಾಸದಿಂದ ನನ್ನ ವ್ಯಕ್ತಿತ್ವಕ್ಕೆ ಧಕ್ಕೆಯಾಗುವ ಬದಲು, ಅವರ ದುರ್ಗುಣಗಳಿಗೇ ಧಕ್ಕೆ ತಗುಲಿತು. ನನ್ನ ವಿದ್ಯಾರ್ಜನೆ ನಿಲ್ಲುವ ಬದಲು, ನಿಂತುಹೋಗಿದ್ದ ಅವರ ವಿದ್ಯಾರ್ಜನೆ ಮುಂದುವರಿಯುವಂತೆ ಆಯಿತು. ಅವರೆಲ್ಲರ ಜೀವನದ ಹುಚ್ಚು ಪ್ರವಾಹಕ್ಕೆ ಹೊಸ ತಿರುವು ದೊರೆತು, ಗಂಭೀರ ಸ್ವರೂಪ ಪ್ರಾಪ್ತವಾಯಿತು.

ನಾವಿದ್ದ ದಾತಾರರ ಮನೆಯ ರಾಮಭಾವು ಮತ್ತು ನಮ್ಮ ಅಣ್ಣ ಬಾಬಾ ಸಹಪಾಠಿಗಳು. ಕಿರಿಯನಾದ

ವಾಮನ ನನ್ನ ವಯಸ್ಸಿನವ, ಪೋಲಿ ಪಟಾಲಂ ಸೇರಿದ್ದ. ಕ್ರಮೇಣ ನನ್ನ ಸ್ನೇಹ ಬೆಳೆದಂತೆ ಅವನಿಗೂ ಓದಿನಲ್ಲಿ ಆಸಕ್ತಿ ಹುಟ್ಟಿತು. ಆದರ್ಶ ನಡೆನುಡಿ ಹೇಗಿರಬೇಕೆಂಬುದನ್ನು ಹೆಜ್ಜೆಹೆಜ್ಜೆಗೂ ಹೇಳಿಕೊಟ್ಟೆ. ಅವನ ಹಳೆಯ ಗೆಳೆಯರು, 'ನೆನ್ನೆ ಮೊನ್ನೆ ಬಂದ ಸಾವರಕರ್ ನಿನಗೆ ನಮಗಿಂತ ಹೆಚ್ಚಿನವನಾದನೋ?' ಎಂದು ಮತ್ಸರದಿಂದ ಹಂಗಿಸುತ್ತಿದ್ದರು. ಆದರೆ ಆ ವೇಳೆಗಾಗಲೇ ವಾಮನನ ವಿವೇಕ ಎಚ್ಚೆತ್ತಿತ್ತು; ಕರ್ತೃತ್ವ ವಿಕಾಸಗೊಂಡಿತ್ತು. ಆದ್ದರಿಂದ ನನ್ನ ಚಟುವಟಿಕೆಗಳಲ್ಲಿ ಉತ್ತಮ ಸಹಕಾರಿಯಾಗಿ ನೆರವಾದ.

ಪಕ್ಕದ 'ವರ್ತಕ್' ಮನೆಯ ನಾನಾ ಮತ್ತು ತ್ರ್ಯಂಬಕ ಸಹ ನನಗೆ ಆತ್ಮೀಯರು. ಅವರ ತಾಯಿಗೆ ನನ್ನ ಮೇಲೆ ಬಲು ಪ್ರೀತಿ. ತ್ರ್ಯಂಬಕ ಸದ್ಗುಣಿ. ನನ್ನ ಸಹವಾಸದಿಂದ, ಆಗಿನ ವಾತಾವರಣದಲ್ಲಿ ದುರ್ಲಭವಾಗಿದ್ದ ದೇಶಭಕ್ತಿ, ಹಿರಿಯ ಆಕಾಂಕ್ಷೆ, ಧ್ಯೇಯವಾದ - ಇವು ಅವನಲ್ಲೂ ಅರಳಿದವು.

ವರ್ತಕ ಮತ್ತು ದಾತಾರರ ಮನೆಗಳ ನಡುವೆ ಗೋವಿಂದ ದರೇಕರ್ ಇದ್ದ. ನನಗಿಂತ ಎಂಟು ವರ್ಷ ದೊಡ್ಡವನು. ಅವನಿಗೆ ಕಾಲುಗಳೆರಡೂ ಊನ. ಎಲ್ಲರೂ ಅವನ~~ನ್ನು ಆಬಾಪಾಂಗಳೆ ಎನ್ನುತ್ತಿದ್ದರು.~~ ಅವನು ಕೈ ಹಾಗೂ ಮಂಡಿ ಊರಿಕೊಂಡು ಆ ಗಲ್ಲಿಯಲ್ಲಿ ಮೃಗರಾಜನಂತೆ ವಿಹರಿಸುತ್ತಿದ್ದ. ಆಬಾನ ತಾಯಿ ಆನಂದಿಬಾಯಿ ನೆರೆಹೊರೆಯ ಮನೆಗಳಲ್ಲಿ ಕಸಮುಸರೆ ಕೆಲಸ ಮಾಡುತ್ತಿದ್ದಳು. ಆಬಾ ಕಾಗದದ ಸಾಮಾನು, ಬಣ್ಣದ ತೋರಣ ತಯಾರಿಸಿ ಪುಡಿಗಾಸು ಸಂಪಾದಿಸುತ್ತಿದ್ದ. ಪದ್ಯ, ಲಾವಣಿ, ನಾಟಕ ರಚಿಸುತ್ತಿದ್ದ. ಅವನಲ್ಲಿ ನಾಯಕತ್ವದ ಗುಣ ವಿಪುಲವಾಗಿತ್ತು. ಗಂಗಾರಾಮ, ಗಣಪತಿ, ಶ್ರೀಪತಿ, ಸಖಾರಾಮ, ಕಾಶೀನಾಥ ಮುಂತಾದ ಲೆಕ್ಕವಿಲ್ಲದಷ್ಟು ಅಶಿಕ್ಷಿತ ಯುವಕರಿಗೆ ಅವನು ಅಧಿನಾಯಕ. ಈ ದಳಪತಿಗಳು ಎಂದೂ ಆಬಾಪಾಂಗಳೆಯ ಮಾತು ಮೀರುತ್ತಿರಲಿಲ್ಲ. ಬೀದಿಯಲ್ಲಿ ಹೋಗಿ ಬರುವ ಸ್ತ್ರೀಪುರುಷರನ್ನು ರೇಗಿಸುವುದು ; ಹುಚ್ಚುಹುಚ್ಚಾಗಿ ನಗುತ್ತಾ ಗದ್ದಲ ಎಬ್ಬಿಸುವುದು ; ಹೊಸ ಹೊಸ ಕುಚೇಷ್ಟೆ, ಸಭ್ಯರ ಕೀಟಲೆ - ಇವೇ ಅವರ ಕಸಬು.



ಆಬಾ ದರೇಕರ್

'ಸಾವರಕರ್ ಹೈದ ಪದ್ಯ ಬರೆಯುತ್ತಾನಂತೆ! ನಮ್ಮ ಆಬಾನ ಕಾವ್ಯದ ಮುಂದೆ ಅದೊಂದು ಲೆಕ್ಕವೆ?' ಎಂದು ನನ್ನ ಬಗ್ಗೆ ಅಸೂಯೆಯಿಂದ ಆಡಿಕೊಳ್ಳುತ್ತಿದ್ದರು. ಆದರೆ ಆಬಾಪಾಂಗಳೆಯ ಮನಸ್ಸು ಒಳ್ಳೆಯದು ; ಗುಣಗ್ರಾಹಿ ವ್ಯಕ್ತಿ. ನನ್ನ ಕವನ ನೋಡಲೆಂದು ಒಮ್ಮೆ ತಾನಾಗಿ ವರ್ತಕನ ಕೊಠಡಿಗೆ ಬಂದ. ನನ್ನ ನಡೆನುಡಿ, ಪ್ರೀತಿ ಅವನ ಮೇಲೆ ಅಚ್ಚಳಿಯದ ಪ್ರಭಾವ ಬೀರಿತು. ಹೋಗುವಾಗ ಹೆಳವನಾದ ಅವನನ್ನು ನನ್ನ ಬೆನ್ನಿನ ಮೇಲೆ ಕೂರಿಸಿಕೊಂಡು ಹೋಗಿ ಮನೆಗೆ ಬಿಟ್ಟೆ. ಇಬ್ಬರೂ ಪ್ರಾಣ ಸ್ನೇಹಿತರಾದೆವು. ನನ್ನ ಬಗ್ಗೆ ಭಕ್ತಿ, ನಿಷ್ಠೆ ಅವನಲ್ಲಿ ಬೆಳೆಯಿತು. ಅವನು ಅಶಿಕ್ಷಿತನಾದರೂ ಹುಟ್ಟುಕವಿ. ದೇಶಭಕ್ತಿ ಹಾಗೂ ಸ್ವಾತಂತ್ರ್ಯದ ಧ್ಯೇಯದರ್ಶನದಿಂದ ಅವನ ಜೀವನ ಉನ್ನತಗೊಂಡಿತು. ಸುಪ್ತಗುಣಗಳು ಮತ್ತಷ್ಟು ವಿಕಾಸಗೊಂಡವು. ಅಜ್ಞಾತ ಹೆಳವನೊಬ್ಬ ಮಹಾರಾಷ್ಟ್ರದ ಅತ್ಯುಜ್ವಲ ದೇಶಭಕ್ತ ಮಾತ್ರವಲ್ಲದೆ ಪ್ರಥಮ ಶ್ರೇಣಿಯ ಸ್ವಾತಂತ್ರ್ಯ ಗೀತೆಗಳ ನಿರ್ಮಾತನೂ ಆದ; 'ಸ್ವಾತಂತ್ರ್ಯ ಕವಿ ಗೋವಿಂದ' ಎಂದು ಬಿರುದಾಂಕಿತನಾದ.

ಅನೇಕ ವರ್ಷಗಳ ನಂತರ ನಮ್ಮ ವಾಮನ ರಚಿಸಿದ ಆಬಾ ದರೇಕರನ ಕವಿಚರಿತ್ರೆಯಲ್ಲಿ ಹೀಗಿದೆ:

'ವಿಶೇಷವಾಗಿ, ವಿನಾಯಕರಾವ್ ಸಾವರಕರ್ ಆ ಗಲ್ಲಿಯಲ್ಲಿ ವಾಸಕ್ಕೆ ಬಂದ ನಂತರ ಅಲ್ಲಿಂದ ಅವರ ಓರಿಗೆಯ ಹುಡುಗರ ಮನಸ್ಸಿನಲ್ಲಿ ಮಹತ್ವಾಕಾಂಕ್ಷೆಗಳು ಹೊಮ್ಮತೊಡಗಿದವು. ಆ ಕಾಲದಲ್ಲಿ ಸಾವರಕರರ ವಯಸ್ಸು ಕಿರಿದಾದರೂ ಅವರ ಬೌದ್ಧಿಕ ಪ್ರತಿಭೆ ಕೌತುಕವೆನಿಸುವಷ್ಟು ಅದ್ಭುತ. ಅವರ ಆಕರ್ಷಕ ಮುಖದಲ್ಲಿ ಎದ್ದುಕಾಣುತ್ತಿದ್ದ ಬುದ್ಧಿಯ ಮೆರುಗು, ಚುರುಕುತನ ಹಾಗೂ ಅವರ ಅವಿಶ್ರಾಂತ ಕಾರ್ಯ ಚಟುವಟಿಕೆಯಿಂದ ನೆರೆಹೊರೆಯ ವಿದ್ಯಾರ್ಥಿಗಳೆಲ್ಲರೂ ಪ್ರಭಾವಿತರಾದರು. ಆಗ ಸಾವರಕರ್ 'ಜಗದ್ಧಿತೇಚ್ಛು' ಪತ್ರಿಕೆಗೆ ವರದಿಗಳನ್ನೂ ಬರೆಯುತ್ತಿದ್ದರು. ಅವರನ್ನು ಕಂಡು ಕೆಲವರಿಗೆ ಮತ್ಸರ, ಕೆಲವರಿಗೆ ಕೌತುಕ ; ಕೆಲವರಿಗೆ ಮಹತ್ವಾಕಾಂಕ್ಷೆಯ ಸ್ಫೂರ್ತಿ ; ಇನ್ನು ಕೆಲವರಿಗೆ ಪ್ರೀತಿ. ಅದರಿಂದ ಪ್ರತಿಯೊಬ್ಬರ ಬುದ್ಧಿಗೂ ಚಾಲನೆ ದೊರೆತು, ಹೃದಯದಲ್ಲಿ ಚೈತನ್ಯ ಸಂಚರಿಸಿ, ಜೀವನಕ್ಕೆ ಹೊಸ ದಿಕ್ಕು ಸಿಕ್ಕಿತು.'

ಮನೆಯ ದಾರಿದ್ರ್ಯ ಹಾಗೂ ಕಾಹಿಲೆಯ ಕೋಟಲೆಗಳಲ್ಲೂ ನಾನು ನನ್ನ ಪ್ರತಿಜ್ಞೆ ಮರೆತಿರಲಿಲ್ಲ. ತ್ರ್ಯಂಬಕರಾವ್ ಮಸ್ಕರ್ ಮತ್ತು ರಾವಜಿ ಕೃಷ್ಣಪಾಗೆ ನಾಸಿಕದ ಉತ್ಸಾಹಿ ತರುಣರು. ಇಬ್ಬರೂ ಸರಕಾರಿ ನೌಕರರು. ಊರಿನ ಎಲ್ಲ ಸಾರ್ವಜನಿಕ ಚಟುವಟಿಕೆಗಳಲ್ಲೂ ಮುಂದಾಗಿದ್ದವರು. ದೇಶಭಕ್ತಿಯ ಅರ್ಥ ತಿಳಿದಿದ್ದವರು. ನಿಃಸ್ವಾರ್ಥ ಸೇವೆಯಲ್ಲಿ ಆಸಕ್ತಿ ತಳೆದಿದ್ದವರು. ಇಡೀ ಊರಿಗೆ ಹಾಗೂ ಊರಿನ ಗಣ್ಯರಿಗೆ ಅವರ ಪರಿಚಯವಿತ್ತು. ಮಸ್ಕರ್ ಮೃದುಭಾಷಿ, ಮಿತಭಾಷಿ ಹಾಗೂ ಪ್ರಸಿದ್ಧಿ ಪರಾಙ್ಮುಖ ವ್ಯಕ್ತಿ. ಪಾಗೆ ಮಾತಿನ ಮಲ್ಲ; ನಾಲ್ಕು ಜನರ ಮುಂದೆ ಮುನ್ನುಗ್ಗಿ ಹೋಗಬಲ್ಲ; ಎಲ್ಲಿದ್ದರೂ ಅನುಯಾಯಿಗಳನ್ನು ಕೂಡಿಸಿಕೊಳ್ಳಬಲ್ಲ. ಸ್ವಭಾವದಲ್ಲಿ ಸಂಕೋಚ ಎಂಬುದೇ ಇಲ್ಲ. ಮಸ್ಕರ್ ಮತ್ತು ಪಾಗೆ ಇಬ್ಬರ ಗುಣಗಳೂ ಪರಸ್ಪರ ಪೂರಕ. ಇಬ್ಬರದೂ ಲೋಕಸಂಗ್ರಾಹಕ ಬುದ್ಧಿ. ಸಾರ್ವಜನಿಕ ಕಾರ್ಯಕ್ಕೆ ಹೇಳಿ ಮಾಡಿಸಿದಂಥ ಜೋಡಿ ಅವರು.

1899ರ ನವೆಂಬರ್ ಕೊನೆಯ ವಾರ. ಆಗೊಂದು ದಿನ ಮಸ್ಕರ್, ಪಾಗೆ ಮತ್ತು ನಾನು ಒಂದು ಗುಪ್ತ ಸಂಸ್ಥೆ ಸ್ಥಾಪಿಸಿದೆವು. ಮೂವರೂ ದೇಶದ ಸ್ವಾತಂತ್ರ್ಯಕ್ಕಾಗಿ ಸಶಸ್ತ್ರ ಹೋರಾಟ ನಡೆಸುವ ಪ್ರತಿಜ್ಞೆ ಸ್ವೀಕರಿಸಿದೆವು. ಸಂಸ್ಥೆಯ ಹೆಸರು 'ರಾಷ್ಟ್ರಭಕ್ತ ಸಮೂಹ.' ಅದರ ಮೊದಲ ಮತ್ತು ಕೊನೆಯ ಅಕ್ಷರ ತೆಗೆದುಕೊಂಡು, ಸ್ವಲ್ಪ ಧಾರ್ಮಿಕ ಭಾಷೆಯೂ ಬರುವಂತೆ 'ರಾಮಹರಿ' ಎಂಬ ಸಾಂಕೇತಿಕ ನಾಮ ರೂಢಿಗೆ ತಂದೆವು. ಮಾತುಕತೆಯಲ್ಲಿ, ಕಾಗದಪತ್ರಗಳಲ್ಲಿ - 'ಇಂದು ರಾಮಹರಿ ಇಂಥ ಸ್ಥಳದಲ್ಲಿ ಸಿಕ್ಕುತ್ತಾನೆ' (ಗುಪ್ತಸಂಸ್ಥೆಯ ಸಭೆ ಇಂಥ ಸ್ಥಳದಲ್ಲಿ ಇದೆ), 'ರಾಮಹರಿ ಹೀಗೆ ಹೇಳಿದ್ದಾನೆ' (ಗುಪ್ತಸಂಸ್ಥೆಯ ನಿರ್ಣಯ ಇದು) - ಎಂಬ ಪ್ರಯೋಗಗಳು ಪ್ರಾರಂಭವಾದವು.

ನಾವು ಗುಪ್ತಸಂಸ್ಥೆಯ ವಿಚಾರ ಜಾಣತನದಿಂದ ಪ್ರಸಾರ ಮಾಡಬೇಕಾಗಿತ್ತು. ಯುವಕರನ್ನು ಆಕರ್ಷಿಸಲು ಒಂದು ಬಹಿರಂಗ ಸಾರ್ವಜನಿಕ ಸಂಸ್ಥೆಯ ಅಗತ್ಯವಿತ್ತು. ಅದಕ್ಕಾಗಿ ನೂತನ ಶತಮಾನದ ಪ್ರಥಮ ದಿನ 1-1-1900ರಂದು ನವಕ್ರಾಂತಿಯ ದ್ಯೋತಕವಾಗಿ 'ಮಿತ್ರಮೇಳ' ಸ್ಥಾಪಿಸಿದೆವು. ಅದರ ಉದ್ದೇಶ ಹೀಗೆ : ಸಾರ್ವಜನಿಕ ರಾಷ್ಟ್ರೀಯ ಕಾರ್ಯಕ್ರಮಗಳನ್ನು ಹೊಸ ರೀತಿಯಲ್ಲಿ ನಡೆಸುವುದು. ನಾಸಿಕದ ಎಲ್ಲ ಸಂಘಸಂಸ್ಥೆಗಳ ವೇದಿಕೆಗಳಿಂದ ರಾಷ್ಟ್ರೀಯ ವಿಚಾರ ಸಾರುವುದು. ಇಷ್ಟೆಲ್ಲ ಚಟುವಟಿಕೆಗಳಲ್ಲಿ ನಿಷ್ಠಾವಂತರೂ ವಿಶ್ವಾಸಪಾತ್ರರೂ ಆಗಿ ಕಂಡುಬಂದವರನ್ನು ಆರಿಸಿ, ಚೆನ್ನಾಗಿ ಪರೀಕ್ಷಿಸಿ, ಕ್ರಮೇಣ ಗುಪ್ತಸಂಸ್ಥೆಗೆ ಸೇರಿಸಿಕೊಳ್ಳುವುದು.

ಮಿತ್ರಮೇಳ ಪ್ರಾರಂಭವಾದ ಒಂದೆರಡು ತಿಂಗಳಲ್ಲೇ ದಾತಾರ ಮತ್ತು ವರ್ತಕ ಸೋದರರು, ಭಿಡೆ,

ದಾತೆ, ನಮ್ಮ ಅಣ್ಣ ಬಾಬಾ, ಆಬಾ ದರೇಕರ್ ಮತ್ತು ಅವನ ಪ್ರಚಂಡ ತಂಡ ಮುಂತಾದವರೆಲ್ಲ ಅದರಲ್ಲಿ ಸೇರಿದರು. ಪ್ರತಿ ಶನಿವಾರ ಮತ್ತು ಭಾನುವಾರ ಸದಸ್ಯರ ಸಭೆ. ದರೇಕರ್ ಇದ್ದ ಮಹಡಿಯ ಕೋಣೆಯೇ ಅದಕ್ಕೆ ಸ್ಥಳ. ಗುಪ್ತಸಂಸ್ಥೆಗೆ ಶಾಸ್ತ್ರೋಕ್ತವಾಗಿ ಹೇಳಿಮಾಡಿಸಿದಂತಿತ್ತು ಆ ಜಾಗ. ಯಾರ ಕಣ್ಣಿಗೂ ಬೀಳದಂಥ ರಹಸ್ಯವಾಗಿದ್ದ 'ಸರ್ವಾಂಗಸುಂದರ' ಗುಹೆ ಅದು. ಅದಕ್ಕೆ 'ಒಳಸಂಚಿನ' ಶೃಂಗಾರವೊಂದು ಬಾಕಿ ಉಳಿದಿತ್ತು. ಅದನ್ನು ನಾವು ಪೂರೈಸಿದೆವು.

ನಾನಾಸಾಹೇಬ್, ಝಾನ್ಸಿರಾಣಿ, ತಾತ್ಯಾಟೋಪೆ, ಫಡಕೆ, ಚಾಫೇಕರ್, ರಾನಡೆ ಮುಂತಾದ ಸ್ಫೂರ್ತಿದಾತರ ಚಿತ್ರಗಳಿಂದ ಗೋಡೆ ಅಲಂಕರಿಸಿದವು. ಅಲ್ಲಿನ ಉಗ್ರ ರಾಜಕೀಯ ಬಣ್ಣವನ್ನು ಸೌಮ್ಯ ಗೊಳಿಸಲು ನಡುನಡುವೆ ಕೆಲವು ದೇವರ ಪಟಗಳನ್ನು ತೂಗಾಡಿಸಿದೆವು. ಸದಸ್ಯರೆಲ್ಲರನ್ನೂ ತಿಳಿವಳಿಕಸ್ತ ರನ್ನಾಗಿ ಮಾಡುವುದೇ ಅಲ್ಲಿನ ಬೈಠಕ್‌ಗಳ ಉದ್ದೇಶ. ವ್ಯಾಪಾರ, ವ್ಯಾಯಾಮ, ಶಿಕ್ಷಣ, ವೇದಾಂತ, ಸ್ವದೇಶಿ, ಸಾಹಿತ್ಯ ಇತ್ಯಾದಿ ವಿಷಯಗಳ ಬಗ್ಗೆ ಸದಸ್ಯರು ಲೇಖನ ಬರೆದು ತರಬೇಕಾಗಿತ್ತು ಮತ್ತು ಭಾಷಣವನ್ನೂ ಮಾಡಬೇಕಾಗಿತ್ತು. ಮೊದಲು ಸುಮಾರು 20-25 ಆರಿಸಿದ ಗ್ರಂಥಗಳನ್ನು ಕೂಡಿಟ್ಟಿದ್ದೆವು. ಪ್ರತಿಯೊಬ್ಬ ಸದಸ್ಯನೂ ಕನಿಷ್ಠಪಕ್ಷ ಅಷ್ಟನ್ನಾದರೂ ಓದಲೇಬೇಕಾಗಿತ್ತು. ಓದಿದರೋ ಇಲ್ಲವೋ ಎಂಬ ಬಗ್ಗೆ ಪರೀಕ್ಷೆ ಯೂ ನಡೆಯುತ್ತಿತ್ತು.

ಚರ್ಚೆಗೆ ಯಾವುದಾದರೊಂದು ವಿಷಯ ತೆಗೆದುಕೊಳ್ಳುವುದು. ಅದರ ಬಗ್ಗೆ ಒಬ್ಬರಿಂದ ಮುಖ್ಯ ಭಾಷಣ. ಆಮೇಲೆ ಉಳಿದವರಿಂದ ಅಭಿಪ್ರಾಯ ಪ್ರಕಟಣೆ. ವಿಷಯ ಮೇಲುನೋಟಕ್ಕೆ ಸರ್ವಸಾಧಾರಣ ವಾಗಿರುತ್ತಿತ್ತು. ಆದರೆ ಕೊನೆಗೆ ನಾನು ಉಪಾಯವಾಗಿ ಅದನ್ನು ರಾಜಕಾರಣಕ್ಕೆ ಹೊರಳಿಸುತ್ತಿದ್ದೆ. ಒಮ್ಮೆ ಆ ಸೂತ್ರ ಸಿಕ್ಕುತ್ತಲೇ ರಾಜ್ಯಕ್ರಾಂತಿಯ ಕಡೆಗೆ ನನ್ನ ಭಾಷಣ ಶರವೇಗದಿಂದ ಧಾವಿಸುತ್ತಿತ್ತು.

ಇನ್ನು ದಾಸ್ಯವನ್ನು ಸಹಿಸಲು ಸಾಧ್ಯವಿಲ್ಲ. ವಿಷವೃಕ್ಷದ ಮೂಲಕ್ಕೇ ಕೊಡಲಿ ಇಡಬೇಕು. ಅದಂತೂ ನಿಶ್ಚಿತ. ಹಾಗಾದರೆ ಅದನ್ನು ಇಂದೇ ಪ್ರಾರಂಭಿಸಬಾರದೇಕೆ ? ನಮ್ಮ ಪ್ರಾಣವನ್ನೇ ಬೆಲೆ ತೆರಬಾರದೇಕೆ? ಆ ವೃಕ್ಷದ ಕೊಂಬೆ ಮಾತ್ರ ಕೆಟ್ಟದ್ದು, ಬುಡ ಒಳ್ಳೆಯದು ಎನ್ನುತ್ತದೆ - 'ರಾಷ್ಟ್ರೀಯ ಪಕ್ಷ'. ಮರಕ್ಕೆ ಎಳ್ಳಷ್ಟೂ ಕೇಡುಮಾಡದೆ ಬೇಡಿಕೆಗಳ ಹಾಲು, ಬೆಣ್ಣೆ ಹಚ್ಚುತ್ತಿದ್ದರೆ ಅದು ತಾನಾಗಿ ಅಮೃತ ವೃಕ್ಷವಾಗಿಬಿಡುತ್ತದೆ ಎನ್ನುತ್ತಾರೆ, ಮಂದಗಾಮಿಗಳು. ಆದರೆ ಆಮೂಲಾಗ್ರ ಬ್ರಿಟಿಷ್ ಸತ್ತೆಯೇ ನಮ್ಮ ಕಣ್ಣುರಿ ; ಬುಡಸಹಿತ ಅದನ್ನು ತೊಡೆದುಹಾಕುವುದೇ ನಮ್ಮ ಗುರಿ! ಈ ಸತ್ಯವನ್ನು ಉರಿನಾಲಗೆಯಿಂದ ಸಾರಬೇಕು. ಸೆರೆಮನೆಯ ಸರಳಿನ ಸಂದುಗಳಿಂದ, ನೇಣುಗಂಬದ ಕುಣಿಕೆಗಳಿಂದ ಗರ್ಜಿಸಿ ಹೇಳಬೇಕು. ಹಾಗಿಲ್ಲದೆ ಜನರ ಕ್ಲೈಬ್ಯ ಕಳೆಯುವುದಿಲ್ಲ. ಧ್ಯೇಯ ದೇವತೆಯ ಸುತ್ತ ತ್ಯಾಗ ಪರಾಕ್ರಮಗಳ ಪ್ರಭಾವಳಿಯ ಹೊಳಪು ಮಿಂಚದೆ ಜನರ ಕಣ್ಣನ್ನು ಅದು ಸೆಳೆಯುವುದಿಲ್ಲ. ದಿವ್ಯಧ್ಯೇಯದ ಪ್ರೇಮದಿಂದ ಉನ್ಮತ್ತರಾದ ಹೊರತು, ಯಾರೂ ತಮ್ಮ ಸ್ವಾರ್ಥದ ಗೂಡುಗಳನ್ನು ಬಿಟ್ಟು ಹೊರಬರುವುದಿಲ್ಲ. ಇಂದು ನಾವು ಮುನ್ನುಗ್ಗಿ ಹೊರಟರೆ, ನೂರು ವರ್ಷಗಳ ನಂತರವಾದರೂ ಯಶಸ್ವಿಗಳಾದೇವು. ಆದರೆ ಆರಂಭಿಸುವುದೇ ತಡವಾದರೆ, ಯಶಸ್ಸೂ ದೂರ ಓಡುತ್ತದೆ. ಆದ್ದರಿಂದ ಸಂಪೂರ್ಣ ಸ್ವಾತಂತ್ರ್ಯವೇ ನಮ್ಮ ಗುರಿ. ಅದೇ ನಮ್ಮ ರಾಜಕೀಯ ಧರ್ಮ. ನಮ್ಮ ದೇವದೇವತೆಗಳೆಲ್ಲವೂ ಅದೇ. ನಮ್ಮ ಐಹಿಕ ಉನ್ನತಿ, ಪಾರಮಾರ್ಥಿಕ ಮೋಕ್ಷ ಎಲ್ಲವೂ ಅದೇ!

ಇನ್ನು ಅದಕ್ಕೆ ಮಾರ್ಗ ಯಾವುದು ? ಸಶಸ್ತ್ರ ಕ್ರಾಂತಿಯಲ್ಲದೆ ಇನ್ನಾವುದಿರಬಲ್ಲದು ? ಅರ್ಜಿ, ವಿನಂತಿ ಗಳ ಮೊಂಡು 'ತಗಡು' ನಮಗೆ ಬೇಡಿ. ಅದರಿಂದ ತಯಾರಾದ ಅಸಂತೋಷದ 'ಒರೆ' ಹಿಡಿದವರು

ಹಾಗೆಯೇ ನಿಂತಿರಲಿ ಬಿಡಿ. ನಾವಿಂದು ಅದರಿಂದ ಕ್ರಾಂತಿಯ ಖಡ್ಗ ಹಿರಿಯೋಣ. ಹಾಗಿಲ್ಲದೆ ಪೂರ್ಣ ಸ್ವಾತಂತ್ರ್ಯ - ಮಾತೆಯ ಆ ಸಿಂಹಾಸನ, ಆ ಶಿರೋಭೂಷಣ - ಎಟುಕಲಾರದು. ಅರ್ಥಾತ್ ಸ್ವಾತಂತ್ರ್ಯವೇ ಧ್ಯೇಯ ; ಸಶಸ್ತ್ರ ಕ್ರಾಂತಿಯೇ ಸಾಧನ !


ಮಿತ್ರ ಮೇಳದ ಸ್ಥಾಪಕ

ಮಿತ್ರಮೇಳದ ವಾರದ ಸಭೆಯಲ್ಲಿ - ಸ್ವಭಾಷೆ, ಸಾಹಿತ್ಯ, ಇತಿಹಾಸ, ಗೋರಕ್ಷಣೆ, ವೇದಾಂತ - ಏನೇ ವಿಷಯ ಬರಲಿ, ಇದೊಂದೇ ನನ್ನ ನಿಷ್ಕರ್ಷೆ. ರಾಜಕೀಯ ಸ್ವಾತಂತ್ರ್ಯವಿಲ್ಲದೆ ರಾಷ್ಟ್ರೀಯ ಜೀವನದ ಅಂಗಗಳಿಂದ ಇವಾವುದಕ್ಕೂ ಅಸ್ತಿತ್ವವೇ ಸಾಧ್ಯವಿಲ್ಲ. ಇನ್ನು ಅವುಗಳ ಬೆಳವಣಿಗೆಯ ಪ್ರಶ್ನೆ ಎಲ್ಲಿ ಬಂತು?

ಮಿತ್ರಮೇಳ ಭರದಿಂದ ಬೆಳೆಯಿತು. ನನ್ನ ನಿಕಟ ಸ್ನೇಹಿತರ ಸಂಖ್ಯೆಯೂ ಬೆಳೆಯುತ್ತಾ ಹೋಯಿತು. ಮನೆಮನೆಯಲ್ಲೂ ಬೀದಿಬೀದಿಯಲ್ಲೂ ನೂರಾರು ಆತ್ಮೀಯ ಮಿತ್ರರು ದೊರೆತರು. ಎಲ್ಲೇ ಹೋಗಲಿ, ನನ್ನ ಗಮನವೆಲ್ಲ ನನ್ನ ವಿಚಾರದ ಪ್ರಚಾರದ ಕಡೆಗೇ. ಯಾರಾದರೂ ಸ್ನೇಹಕ್ಕೆ ಸಿಕ್ಕಿದರೆಂದರೆ, ಸ್ವದೇಶಾಭಿಮಾನ, ಸ್ವಾತಂತ್ರ್ಯದ ತಳಮಳ ಅವರಲ್ಲಿ ಶುರುವಾಯಿತೆಂದೇ ಅರ್ಥ. ಅದರ ಮುಂದಿನ ಮೆಟ್ಟಲೇ ಮಿತ್ರಮೇಳದ ಸದಸ್ಯತ್ವ. ಸದಸ್ಯರೆಲ್ಲರೂ ಆಪ್ತಮಿತ್ರರೇ, ಆಪ್ತಮಿತ್ರರೆಲ್ಲರೂ ಸದಸ್ಯರೇ, ಎನ್ನುವಂತಾಯಿತು. ವ್ಯಕ್ತಿಯ ವೈಚಾರಿಕಪ್ರಗತಿಯೇ ನನ್ನ ಗೆಳೆತನದ ಕುರುಹು. ಮುಂದೆ ನನ್ನ ಮೇಲೆ ಆಂಗ್ಲ ಸರಕಾರದ ಕೋಪ ತಾಪಗಳು ಎರಗಿದಾಗ, ನನ್ನನ್ನು ಅಕ್ಕರಾಸ್ತೆಯಿಂದ ಕಾಣುತ್ತಿದ್ದ ಅನೇಕ ಮನೆಗಳ ಆತ್ಮೀಯ ಸಂಬಂಧವನ್ನು ನಾನಾಗಿ ಕಡಿದುಕೊಳ್ಳಬೇಕಾಯಿತು. ಅದಕ್ಕಾಗಿ ದುಃಖವೂ ಆಯಿತು. ಆದರೆ ವೈಯಕ್ತಿಕ ಪ್ರೇಮ ತ್ಯಜಿಸಿದೆನೇ ಹೊರತು, ರಾಷ್ಟ್ರೀಯ ಕರ್ತವ್ಯ ತ್ಯಜಿಸಲಿಲ್ಲ.

ನಮ್ಮ ವಾರದ ಬೈಠಕ್‌ಗಳಿಗೆ ಅನೇಕರು ತಲೆತಪ್ಪಿಸಿಕೊಳ್ಳುತ್ತಿದ್ದರು. ನಮ್ಮ ಅಣ್ಣ ಬಾಬಾ, ರಾಮಭಾವು ಮುಖ ತೋರಿಸುತ್ತಿದ್ದುದೇ ಅಪರೂಪ. ಕೆಲವೊಮ್ಮೆ ನೋವಿನ ನೆವ ಹೇಳಿ, ನಾಟಕ ನೋಡಿ ಬರುತ್ತಿದ್ದರು. ಆಗ ವಿಚಾರಿಸಿದರೆ ಅವರ ಸ್ವಾಭಿಮಾನ ಕೆರಳುತ್ತಿತ್ತು : 'ಈ ಬೈಠಕ್ ಗಿಯ್‌ಠಕ್ ಎಲ್ಲಾ ನಿನಗೆ ಬಿಟ್ಟದ್ದು. ಏನಾದರೂ ವಿಶೇಷವೋ ಪ್ರತ್ಯಕ್ಷ ಕಾರ್ಯವೋ ಇದ್ದರೆ ಹೇಳು, ಖಂಡಿತ ಬರುತ್ತೇನೆ' ಎನ್ನುತ್ತಿದ್ದರು. ಯಾರಾದರೂ ದೊಡ್ಡ ಮನುಷ್ಯರ ಭೇಟಿ, ಸಾರ್ವಜನಿಕ ಸಭೆ - ಮೆರವಣಿಗೆ - ಗಲಾಟೆಯ ಪ್ರಸಂಗ ಬಂದರೆ ಸಾಕು, ಇವರೆಲ್ಲರೂ ಹಾಜರು ! ನಿಯಮಿತವಾಗಿ ಸೇರಿ ಚಿಂತನೆ - ಮನನ - ಜ್ಞಾನಾರ್ಜನೆ ಮಾಡುವುದರ ಕಡೆ ಅವರಿಗೆ ಲಕ್ಷ್ಯವೇ ಇಲ್ಲ.

ನನ್ನ ದೃಷ್ಟಿಯಲ್ಲಿ, ನಿಯಮಿತ ಸಾಧನೆಗೆ ಪೂರಾ ಮಹತ್ವ. ರಾಮಾಯಣ, ಭಾಗವತಗಳಂತೆಯೇ ಸ್ವಾತಂತ್ರ್ಯ ಲಕ್ಷ್ಮಿಯ ಇತಿಹಾಸ ಪುರಾಣಗಳನ್ನು ಪಾರಾಯಣ ಮಾಡುವುದು ಅಗತ್ಯ. ಧಾರ್ಮಿಕ ಸಂಧ್ಯಾವಂದನೆ ಹೇಗೋ ಹಾಗೆ ಇದು ರಾಷ್ಟ್ರೀಯ ಸಂಧ್ಯಾವಂದನೆ. ಅದರ ಮೂಲಕವೇ ಹೊಸದಾಗಿ ಸೇರಿದವರಿಗೆ ಹಳಬರಿಂದ ಸಂಸ್ಕಾರಗಳು ತಲುಪಲು ಸಾಧ್ಯ. ಎಲ್ಲಿಯವರೆಗೆ ಬಹಿರಂಗವಾಗಿ ಸ್ವಾತಂತ್ರ್ಯ ಗಳಿಕೆಯ ಪ್ರಚಾರ ಸಾಧ್ಯವಿಲ್ಲವೋ ಅಲ್ಲಿಯವರೆಗೆ ಅದರ ರಹಸ್ಯ ಪ್ರಚಾರ ಅತ್ಯಗತ್ಯ. ನಮ್ಮ ರಾಷ್ಟ್ರೀಯ

ಸ್ವಾತಂತ್ರ್ಯದ ಗಾಯತ್ರಿಯನ್ನೂ ಗುಪ್ತವಾಗಿಯೇ ಜಪಿಸಬೇಕು, ಉಪದೇಶಿಸಬೇಕು ಎನ್ನುತ್ತಿದ್ದೆ!

ಹೀಗೆ ಪ್ರಖರ ನಿಷ್ಠೆ ಹಾಗೂ ಧಾರ್ಮಿಕ ಕರ್ತವ್ಯವೆಂಬ ಭಾವನೆಯಿಂದ ನಾನು, ಆಬಾ ದರೇಕರ್ ಮತ್ತಿತರ ಮಿತ್ರರು ಪ್ರತಿ ವಾರ ಸೇರುತ್ತಿದ್ದೆವು. ಕ್ರಮೇಣ, ತಪ್ಪಿಸಿಕೊಳ್ಳುತ್ತಿದ್ದವರೂ ಸರಿದಾರಿಗೆ ಬಂದರು. ತಮ್ಮ ಸಂಸ್ಕಾರದ ಬಲದಿಂದ ಅವರು ಮುಂದೆ ಸಾಧಿಸಿ ತೋರಿಸಿದ ಪವಾಡವನ್ನು ಇಡೀ ಲೋಕ ನಿಬ್ಬೆರಗಾಗಿ ನೋಡಿತು. ನಮ್ಮ ಅಣ್ಣ ಬಾಬಾನಂತೂ ಸ್ವಾತಂತ್ರ್ಯ ಸಮರದ ಯಜ್ಞಕುಂಡಕ್ಕೆ ನಮ್ಮೆಲ್ಲರಿಗಿಂತ ಮೊದಲೇ ತನ್ನ ಜೀವನ ಒಡ್ಡಿದ. ಹಿಂದುಸ್ಥಾನದ ಅರ್ವಾಚೀನ ಸ್ವಾತಂತ್ರ್ಯ ಸಾಧನೆಗಾಗಿ ಆ ದೇಶವೀರ ಅಂದಮಾನಿನ ಆಜನ್ಮ ಕಾರಾವಾಸದ ನರಕಯಾತನೆಗೂ ಹಿಮಾಲಯದಂತೆ ಎದೆಗೊಟ್ಟು ನಿಂತ. ಭೀಷಣ ನೇಣಿನ ಕುಣಿಕೆಗಾಗಲಿ, ಪೊಲೀಸರ ಅಸಹ್ಯ ಚಿತ್ರಹಿಂಸೆಗಾಗಲಿ, ಹಲ್ಲುಕಟೆಯುತ್ತಿದ್ದ ರೋಗರುಜಿನಗಳ ಯಮ ದವಡೆಗಾಗಲಿ ಆ ಗಂಡುಗಲಿ ವಿಚಲಿತಗೊಳ್ಳಲಿಲ್ಲ. ಹಿಂದಿನ ಇತಿಹಾಸದಲ್ಲಿ ಸ್ವಾತಂತ್ರ್ಯವೀರರು ಯಾವ ಯಾವ ಅಮಾನುಷ ಹಿಂಸೆಗಳನ್ನು ಸಹಿಸಿದ್ದರೆಂದು ನಾವು ಕೇವಲ ಓದಿದ್ದೆವೋ ಅದನ್ನು ನಮ್ಮ ಪೈಕಿ ಮೊದಲು ಸಹಿಸಿ ತೋರಿಸಿದ ಧೀರ ಆತ. ಆದರಿಂದಾಗಿ, ಅಂಥ ಕಷ್ಟ ಸಹಿಷ್ಣುತೆಗೆ, ತ್ಯಾಗಕ್ಕೆ ಮುಂದಾಗುವ ಸಾಮರ್ಥ್ಯ ಇಂದಿಗೂ ಭಾರತೀಯರ ರಕ್ತದಲ್ಲಿ ಅಡಗಿದೆ ಎಂಬುದು ಇಡೀ ರಾಷ್ಟ್ರಕ್ಕೇ ಅರಿವಾಯಿತು. ಆ ಆತ್ಮವಿಶ್ವಾಸದ ಬೆಳಕಿನಲ್ಲೆ ಭಾರತದ ಮೂಲೆ ಮೂಲೆಗಳಿಂದ ನಾ ಮುಂದು ತಾ ಮುಂದು ಎಂದು ನೂರಾರು ತರುಣರು ಬಲಿದಾನಕ್ಕಾಗಿ ಮುಂದೆಬಂದರು.





# ಹವಿಸ್ಸು ಆರು

ಮಿತ್ರಮೇಳ ಸಾರ್ವಜನಿಕ ರಂಗಕ್ಕೆ ಪ್ರವೇಶಿಸಿತು. ನಿಷ್ಠಾವಂತ ತರುಣರು, ಕಿಶೋರರು ಸ್ಫೂರ್ತಿ ನಡಗರಗಳಿಂದ ಓಡಾಡತೊಡಗಿದರು ದೊಡ್ಡಸ್ತಿಕೆಯ ಸೋಗಿನಿಂದ ಅಡ್ಡಾಡುತ್ತಿದ್ದ ಹಳೆಯ ಪುಢಾರಿಗಳು ಮೂಲೆ ಪಾಲಾದರು. ಸ್ವಾಭಿಮಾನದ ನವೋದಿತ ವಿಚಾರ ಮುಕ್ತವಾಗಿ ಪ್ರವಹಿಸತೊಡಗಿತು

ಮೊದಲ ಕಾರ್ಯಕ್ರಮ ಶಿವಾಜಿ ಜಯಂತಿ ಊರಿನ ಹಿರಿಯರು ಅದನ್ನು ತೀರ ಸಪ್ಪೆಯಾಗಿ ಆಚರಿಸುತ್ತಿದ್ದರು. ನಾವು ಆಮೂಲಾಗ್ರವಾಗಿ ಅದರ ಸ್ವರೂಪವನ್ನೇ ಬದಲಾಯಿಸಿದೆವು ನಮಗೂ ಸಮಸ್ಯೆಗಳು ಬಾರದೆ ಇರಲಿಲ್ಲ ಇದ್ದವರೆಲ್ಲರೂ 15-20 ವಯಸ್ಸಿನ ಹುಡುಗರೇ. ಮೆರವಣಿಗೆ ಹೊರಟಾಗ ಪಲ್ಲಕ್ಕಿಯ ಜತೆಗಾದರೂ ಒಬ್ಬರು ಹಿರಿಯರಿಲ್ಲದಿದ್ದರೆ ಏನು ಚೆನ್ನ ? ಕೊನೆಗೆ ಗೆಳೆಯ ನಾನಾ ವರ್ತಕ ನಮ್ಮ ಸಮಸ್ಯೆ ಬಗೆಹರಿಸಿದ ಅವನದು ಗಜರಾಜನಂತೆ ಬೀಗುವ ದೊಡ್ಡ ದೇಹ; ಹುಲುಸಾಗಿ ಬೆಳೆದ ಮೀಸೆ; ಹಿರಿತನದ ಕುರುಹಾಗಿ ಎದ್ದುಕಾಣುವ ಹೊಟ್ಟೆ; ತಾನೊಬ್ಬ ಬಹುದೊಡ್ಡ ಮನುಷ್ಯ ಎಂಬಂತೆ ಮಾತನಾಡುವ ವರಸೆ, ನಡೆಯುವ ಠೀವಿ! ಅವನ ತಲೆಗೇ ಪೇಟ ಇಟ್ಟೆವು ಅಂಗ್ಯೆ ಅಗಲ ಜರತಾರಿಯ ರೇಶ್ಮೆ ಧೋತರ ಹೊದಿಸಿದೆವು ಪಲ್ಲಕ್ಕಿಯ ಪಕ್ಕದಲ್ಲೆ ನಡೆದುಬರುವ - ಊರಿನ ಮುಖಂಡರಿಗೆ ಮಾತ್ರ ಸಲ್ಲುವ - ಪಾತ್ರ ವಹಿಸಿ ಕೊಟ್ಟೆವು ಆಗ ಅವನ ಶ್ರೀಮದ್ಗಾಂಭೀರ್ಯವೇನು, ಜಗತ್ತನ್ನೆ ತುಚ್ಛೀಕರಿಸುವ ಕಡೆಗಣ್ಣೋಟವೇನು! ಅಂದಿನಿಂದ ಆ ಅಧಿಕಾರ ಅವನಿಗೇ ಶಾಶ್ವತ ಮಿತ್ರಮೇಳದ ಯಾವುದೇ ಕಾರ್ಯಕ್ರಮ ಜರುಗಲಿ, ಅಗತ್ಯವೋ ಅನಗತ್ಯವೋ, ಅಂತೂ ಪೇಟ- ಧೋತರ ಹವಣಿಸಿಕೊಂಡು ಅವನು ಸಿದ್ಧ!

ಶಿವಜಯಂತ್ಯುತ್ಸವದ ಮೆರವಣಿಗೆಯ ಉದ್ದಕ್ಕೂ ಯುವಕರ ಉತ್ಸಾಹ, ಆವೇಶ ಎದ್ದು ತೋರುತ್ತಿತ್ತು ಅದನ್ನು ಕಂಡು ಪುರಜನರಿಗೆ ಆನಂದವೇ ಆನಂದ. ಕೊನೆಗೆ ಮುಖ್ಯ ಭಾಷಣ ಹಿಂದಿನ ಕಲ್ಪನೆಗಳನ್ನೆಲ್ಲ ತಲೆಕೆಳಗು ಮಾಡುತ್ತಾ ನಾನು ಹೇಳಿದೆ: ''ಇದುವರೆಗೆ ಎಲ್ಲರೂ ಶಿವೋತ್ಸವ ಶುದ್ಧ ಐತಿಹಾಸಿಕ ಪ್ರಸಂಗ ಎಂದೂ, ರಾಜಕೀಯಕ್ಕೂ ಇದಕ್ಕೂ ಸಂಬಂಧ ಇಲ್ಲವೆಂದೂ ಹೇಳುತ್ತಿದ್ದರು ಆದರೆ ನಾವು ಇಂದು ಶುದ್ಧ ರಾಜಕಾರಣಕ್ಕಾಗಿಯೇ ಇದನ್ನು ಆಚರಿಸುತ್ತಿದ್ದೇವೆ ಬ್ರಿಟಿಷರ ಸಂಕೋಲೆಗಳನ್ನು ಕಳಚಿ ಸ್ವದೇಶವನ್ನು ಸ್ವತಂತ್ರಗೊಳಿಸುವ ಸ್ಫೂರ್ತಿ ಪಡೆಯುವ ಸಲುವಾಗಿ ಆಚರಿಸುತ್ತಿದ್ದೇವೆ ಗುಲಾಮಿತನದಲ್ಲೇ ಸಮಾಧಾನ ಪಡೆಯುವುದಿದ್ದರೆ, ಕೈತುಂಬ ಸಂಬಳ ಬೇಕಾಗಿದ್ದರೆ, ಪರಕೀಯರ ಹೊಗಳುಭಟ್ಟರಾಗಿ ಭಿಕ್ಷೆ ಬೇಡು

ವುದಷ್ಟೇ ಧ್ಯೇಯವಾಗಿದ್ದರೆ, ಶಿವೋತ್ಸವದ ಬದಲು ಕೊನೆಯ ಬಾಜೀರಾಯನ ಉತ್ಸವ ಮಾಡುವುದೇ ಮೇಲು ಜೀವನಾಂಶ ಬೇಕು, ಹೊಟ್ಟೆತುಂಬಿದರೆ ಸಾಕು ಎನ್ನುವಷ್ಟೇ ಆಸೆ ಇದ್ದವರಿಗೆ ಆ ಬ್ರಹ್ಮಾವರ್ತದ ಬಾಜೀರಾಯ ಸಹಾಯ ಮಾಡಬಲ್ಲನೇ ಹೊರತು, ರಾಯಗಡದ ಶಿವಾಜಿಯಲ್ಲ. ಶಿವಛತ್ರಪತಿ ಯಾದರೋ ಸಾಕ್ಷಾತ್ ಸ್ವಾತಂತ್ರ್ಯದ ಸ್ಫೂರ್ತಿದೈವ. ಇಂದು ಆತ ನಮ್ಮ ಅಂಗಾಂಗಗಳಲ್ಲಿ ಅವತರಿಸಿ ಬರಲಿ; ಸ್ವಾತಂತ್ರ್ಯದ ಹೋರಾಟದಲ್ಲಿ ಗೆಲ್ಲುವ ಸಾಮರ್ಥ್ಯ ನೀಡಲಿ - ಎಂದು ಕೇಳಲು ನಾವಿಲ್ಲಿ ಸೇರಿದ್ದೇವೆ. ಪರಿಸ್ಥಿತಿಗೆ ಅನುಗುಣವಾಗಿ ಸಾಧನಗಳು ಬದಲಾಗಬಹುದು. ಆದರೆ ಧ್ಯೇಯ ಅದೇ! ಬಾಣಗಳನ್ನು ಬದಲಾಯಿಸಬಹುದು, ಆದರೆ ಗುರಿ ಅದೇ!'

ಸಭೆ ಮುಗಿಯುತ್ತಲೇ ವೈಚಾರಿಕ ಅಲ್ಲೋಲಕಲ್ಲೋಲ ಪ್ರಾರಂಭವಾಯಿತು. 8- 10 ದಿನಗಳು ಊರಿನ ತುಂಬ ಅದೇ ಮಾತು, ಅದೇ ಚರ್ಚೆ. ಅನಂತರನಾಲ್ಕು ತಿಂಗಳಿಗೆ ಗಣಪತಿ ಹಬ್ಬದ ಸಡಗರ. ಮಿತ್ರಮೇಳದಿಂದ ಗಣಪತಿ ಪ್ರತಿಷ್ಠಾಪಿಸಿ ಉತ್ಸವ ಪ್ರಾರಂಭಿಸಿದೆವು. ನಮ್ಮ ಕಾರ್ಯಕ್ರಮದಲ್ಲಿ ಬೆಳಗುತ್ತಿದ್ದ ಹೊಸ ತೇಜಸ್ಸು, ಚೈತನ್ಯ ಸಹಸ್ರಾವಧಿ ನಾಗರಿಕರನ್ನು ಆಕರ್ಷಿಸಿತು. ಈ ಉತ್ಸವದ ನಿಮಿತ್ತ ಆಬಾ ದರೇಕರ್ ಮೊದಲ ಬಾರಿಗೆ ಸ್ವದೇಶಭಕ್ತಿಯ ಲಾವಣಿಗಳನ್ನು ರಚಿಸಿದ. ಆ ಹಾಡುಗಳಲ್ಲಿ, ಭಾಷಣಗಳಲ್ಲಿ, ಮೆರವಣಿಗೆಯಲ್ಲಿ ಸ್ವಾತಂತ್ರ್ಯದ ಸಂದೇಶ ಬಿಟ್ಟು ಬೇರೆ ಮಾತೇ ಇಲ್ಲ. ನಾವು 'ಸ್ವಾತಂತ್ರ್ಯ ಲಕ್ಷ್ಮೀ ಕೀ ಜಯ್' ಎಂಬ ನೂತನ ಘೋಷಣೆಯನ್ನು ಪ್ರಾರಂಭಿಸಿದ್ದೂ ಇದೇ ವರ್ಷವೇ - 1900ರಲ್ಲಿ. ನಾಸಿಕದ ರಸ್ತೆ ರಸ್ತೆಗಳಲ್ಲಿ ಆ ಜಯಕಾರ ಒಂದಕ್ಕೆ ಹತ್ತಾಗಿ, ಸಾವಿರವಾಗಿ ಪ್ರತಿಧ್ವನಿಸತೊಡಗಿತು. ಮುಂದೆ ಇಡೀ ಭಾರತಕ್ಕೆ ಅದು ಪಸರಿಸಿತು.

ಗಣೇಶೋತ್ಸವದ ನಂತರ ಮುಂದೇನು ಕಾರ್ಯಕ್ರಮ? ಪ್ರಶ್ನೆ ಏಳುತ್ತಿದ್ದಂತೆಯೇ, ಪ್ಲೇಗಿನ ವಾರ್ಷಿಕ ಸವಾರಿ ಚಿತ್ತೈಸಿತು. ನಾಗರಿಕರಿಗೆ ನೆರವು, ರೋಗಿಗಳ ಆರೈಕೆ ಪ್ರಾರಂಭಿಸಿದೆವು. ಸತ್ತವರ ಹೆಣ ಹೊತ್ತು ಸಾಗಿಸಿ, ಬೆಂಕಿ ಕೊಡುವ ಕೆಲಸವೂ ಮಿತ್ರಮೇಳದ ಪಾಲಿಗೇ ಬಂತು. ಮಸ್ಕರ್, ನಮ್ಮ ಅಣ್ಣ ಬಾಬಾ ಮತ್ತು ರಾಮಭಾವು ಅದಕ್ಕೆ ಮುಂದಾಳುಗಳು. ಸ್ವಂತ ಜೀವದ ಆಸೆ ಹಚ್ಚಿಕೊಳ್ಳುವಷ್ಟು ವ್ಯವಧಾನ ನಮ್ಮಲ್ಲಿ ಯಾರಿಗೂ ಇರಲಿಲ್ಲ. ಆಗ ಜೀವಂತರಾಗಿದ್ದ ನಮಗೂ ದಿನನಿತ್ಯ ಸ್ಮಶಾನಯಾತ್ರೆ ಆಗುತ್ತಿತ್ತು! ನಡುರಾತ್ರಿಯಾದರೂ ನಮಗೆ ಭಯವೆಂಬುದೇ ಇಲ್ಲ. ಸ್ಮಶಾನವೊಂದು ಸಭಾ ಮಂಟಪವೋ ಎಂಬಷ್ಟು ಬಳಕೆಯ ಜಾಗವಾಯಿತು. ಹೆಣ ಹೊತ್ತವರು ಒಬ್ಬರಾಗುತ್ತಲೇ ಮತ್ತೊಬ್ಬರು ಲಾವಣಿ, ಸ್ವಾತಂತ್ರ್ಯ ಗೀತೆ ಪ್ರಾರಂಭಿಸುತ್ತಿದ್ದರು.

ಒಂದು ರಾತ್ರಿ ಅಜ್ಞಾತ ಪ್ರೇತವೊಂದನ್ನು ಚಿತೆಗೇರಿಸಿ ಉರಿ ಹೊತ್ತಿಸಿದ್ದಾಯಿತು. ಎಲ್ಲರೂ ರುದ್ರಭೂಮಿಯ ಪಕ್ಕದಲ್ಲೆ ಇದ್ದ ಧರ್ಮಶಾಲೆಯ ಜಗುಲಿ ಏರಿ ಕುಳಿತೆವು. ರಾಮಭಾವು ಸ್ಮಶಾನದ ವರ್ಣನೆಯಿದ್ದ ಯಾವುದೋ ನಾಟಕದ ಪದ ಹಾಡತೊಡಗಿದ. ಇನ್ನೊಬ್ಬ ಎರಡು ಕಟ್ಟಿಗೆಯ ತುಂಡು ತಂದು ತಾಳ ಹಾಕತೊಡಗಿದ. ಸ್ವಲ್ಪ ದೂರದಲ್ಲೇ ಚಿತೆ ಧಗಧಗಿಸುತ್ತಿತ್ತು. ಪಾಪ! ಸ್ಮಶಾನದ ಭೂತ ಪ್ರೇತಗಳಿಗೂ ಅಂಜಿಕೆ ಹುಟ್ಟಿಸುವ ದೃಶ್ಯ!

ಧರ್ಮಶಾಲೆಯ ಮುಂದೆ ಜಾಜಿ ಬಳ್ಳಿಯೊಂದು ಹಬ್ಬಿತ್ತು. ಅದರ ತುಂಬ ಅಚ್ಚ ಬಿಳಿಯ ಹೂಗಳು. ಅದನ್ನೇ ದಿಟ್ಟಿಸುತ್ತಾ ನಾನು ಕುಳಿತಿದ್ದೆ. ಕಿವಿಯಲ್ಲಿ ಹಾಡಿನ ಝೇಂಕಾರ; ಮೂಗಿನಲ್ಲಿ ಹೂಗಳ ಸೌರಭ ಸಂಚಾರ! ಕಣ್ಣಿಗೆ ತೂಕಡಿಕೆ ಹತ್ತುವುದು ತಡವಾಗಲಿಲ್ಲ. ಎಷ್ಟೋ ಹೊತ್ತಿನವರೆಗೆ ಗಾಢವಾಗಿ ನಿದ್ರಿಸುತ್ತಾ

ಮಲಗಿಬಿಟ್ಟೆ. ಅನಂತರ ಜಾಜಿಯ ಹೂ ಎಲ್ಲಿ ಕಣ್ಣಿಗೆ ಬಿದ್ದರೂ ಸರಿ, ಅಂದಿನ ಸ್ಮಶಾನದ ಹೂಗಳ ನೆನಪೂ ಮನದಾಳದಲ್ಲಿ ಅರಳಿ ಘಮಘಮಿಸುತ್ತದೆ!

ಕೆಲ ದಿನಗಳ ನಂತರ ಕೋತೂರಿಗೆ ಹೋಗಿ ಅಲ್ಲೊಂದು ಮಿತ್ರಮೇಳದ ಶಾಖೆ ಪ್ರಾರಂಭಿಸಿದೆ. ಸ್ವಾತಂತ್ರ್ಯಗಳಿಕೆಗಾಗಿ ಅಗತ್ಯವೆನಿಸಿದರೆ ಸಶಸ್ತ್ರ ಹೋರಾಟಕ್ಕೂ, ಪ್ರಾಣತ್ಯಾಗಕ್ಕೂ ಸಿದ್ಧರಿರುವುದಾಗಿ ಅಲ್ಲಿನ ಸದಸ್ಯರೆಲ್ಲರೂ ಶಪಥ ತೊಟ್ಟರು.

ನಾಸಿಕಕ್ಕೆ ಹಿಂದಿರುಗುತ್ತಿದ್ದಂತೆ ಹೊಸದೊಂದು ಸಮಸ್ಯೆ ಉದ್ಭವಿಸಿತು. 1901ರ ಜನವರಿ 22ರಂದು ಇಂಗ್ಲೆಂಡಿನ ವಿಕ್ಟೋರಿಯಾ ರಾಣಿಯು ಕ್ರಿಸ್ತವಾಸಿಯಾದಳು! ಅದಕ್ಕಾಗಿ ಹಿಂದುಸ್ಥಾನದಾದ್ಯಂತ ಶೋಕಸಭೆಗಳು, ರಾಜನಿಷ್ಠೆಯ ಪ್ರದರ್ಶನ ಪ್ರಾರಂಭವಾಯಿತು. ಮಿತ್ರಮೇಳ ಸಹ ರಾಣಿಗೆ ಶ್ರದ್ಧಾಂಜಲಿ ಅರ್ಪಿಸಬೇಕೆಂದು ಮಸ್ಕರ್ ಮತ್ತು ಪಾಗೆ ಒತ್ತಾಯಿಸತೊಡಗಿದರು. ಅದರಿಂದ ಸಂಸ್ಥೆಯ ಮೇಲೆ ಪೊಲೀಸರ ಸಂಶಯ ನಿವಾರಿಸಿದಂತೆ ಆಗುವುದೆಂದು ಅವರ ಅಭಿಪ್ರಾಯ.

ಅದುವರೆಗಿನ ಮಿತ್ರಮೇಳದ ಘೋಷಣೆಗಳಲ್ಲಿ 'ಸುರಾಜ್ಯವಲ್ಲ, ಸ್ವರಾಜ್ಯ ನಮ್ಮ ಧ್ಯೇಯ' ಎಂದು ಸ್ಪಷ್ಟವಾಗಿ ಸಾರಿದ್ದೆವು. ಯಾವ ಯಾವುದೋ ಉತ್ಸವದ ನೆಪದಲ್ಲಿ ಸ್ವಾತಂತ್ರ್ಯಕ್ಕೆ ಸಶಸ್ತ್ರ ಕ್ರಾಂತಿಯೇ ಏಕ ಮಾರ್ಗ ಎಂದು ಬಹಿರಂಗವಾಗಿ ಡಂಗುರ ಹೊಡೆದಿದ್ದೆವು. ಇಷ್ಟಾದ ಮೇಲೂ ಪೊಲೀಸರಿಗೆ ಸಂಶಯ ಉಳಿದಿದ್ದರೆ ನಿಜಕ್ಕೂ ಆಶ್ಚರ್ಯವೇ ಸರಿ! ಸಂಶಯದ ಹಂತವನ್ನು ನಾವು ಎಂದೋ ದಾಟಿದ್ದೆವು. ಆದ್ದರಿಂದ ನಾನು ಅವರ ಮಾತಿಗೆ ಒಪ್ಪಲಿಲ್ಲ.

'ಸಂಸ್ಥೆಯ ಹಿತದೃಷ್ಟಿಯಿಂದಲೇ ಅಂಥ ಸೋಗು ಅಗತ್ಯ' ಎಂದ ಮಸ್ಕರ್. ಸದಸ್ಯರ ಬೈಠಕ್‌ನಲ್ಲೇ ಅವನು ವಿಷಯ ಮಂಡಿಸಿದ್ದ. ಆಗ ನಾನು ಸ್ಪಷ್ಟ ವಿಚಾರ ತಿಳಿಸಲೇಬೇಕಾಯಿತು :

'ಸಂದರ್ಭ ಬಂದಾಗ ಶಿವಾಜಿಯಂತೆ ರಾಜಕೀಯ ಗತ್ತುಗಾರಿಕೆ ಅವಲಂಬಿಸೋಣ. ಆದರೆ ಈಗ ಅಂಥ ವಿಕಟ ಪರಿಸ್ಥಿತಿ ಬಂದಿಲ್ಲ. ಅಂದಮೇಲೆ ಏತಕ್ಕಾಗಿ ಶೋಕಸಭೆ ನಡೆಸಬೇಕು? ಇಂಗ್ಲಿಷರ ರಾಜತ್ವ ಒಪ್ಪಿಕೊಳ್ಳುವುದಕ್ಕಾಗೇನು? ಅಂಥ ರಾಷ್ಟ್ರೀಯ ಪಾಪಕರ್ಮ ನಾವಾಗಿ ಏಕೆ ಮಾಡೋಣ? ಸತ್ತವಳು ಇಂಗ್ಲೆಂಡಿನ ರಾಣಿ; ನಮ್ಮ ರಾಣಿಯಲ್ಲ. ಅವರು ಬೇಕಾದರೆ ಅಳಲಿ.'

'ವಿಕ್ಟೋರಿಯಾ ವ್ಯಕ್ತಿಶಃ ಉತ್ತಮ ಮಹಿಳೆ ಆಗಿದ್ದಳು ಎಂದು ಅಷ್ಟಾದರೂ ನಿರ್ಣಯ ಮಾಡೋಣ' ಎಂದು ಹಟ ಹಿಡಿದ, ಮಸ್ಕರ್.

'ಅವಳು ಸತ್ತ ದಿನವೇ, ಅವಳಿಗಿಂತ ಒಳ್ಳೆಯ ಎಷ್ಟೋ ಸ್ತ್ರೀ ಪುರುಷರು ಸತ್ತಿದ್ದಾರಲ್ಲ, ಅವರ ಉಲ್ಲೇಖ ಏಕಿಲ್ಲ? ಹೀಗೆ ಸೋಗುಹಾಕಲು ಹೋಗಿ ನಮ್ಮ ಕಣ್ಣಿಗೆ ನಾವೇ ಮಣ್ಣುಹಾಕಿಕೊಳ್ಳುವುದು ಸರಿಯಲ್ಲ. ಅವಳ ಕಾಲದಲ್ಲಿ ನಮ್ಮ ದೇಶಕ್ಕೆ ಆಗಿರುವ ಹಾನಿಗೆ ಲೆಕ್ಕವಿಲ್ಲ. ಕೋಹಿನೂರು ರತ್ನ ಕಿತ್ತುಕೊಳ್ಳಲಿಲ್ಲವೆ ಅವಳು? ಪ್ರಾಂತಪ್ರಾಂತಗಳನ್ನೇ ನುಂಗಿಹಾಕಲಿಲ್ಲವೆ? ಅಂಥ 'ಸಾಧ್ವಿ ಮಹಿಳೆ' ಯಾಗಿದ್ದರೆ, 1857ರ ಸ್ವಾತಂತ್ರ್ಯ ಸಮರದಲ್ಲಿ ಲಕ್ಷಾಂತರ ಹಿಂದುಗಳ ರಕ್ತದಿಂದ ತೊಯ್ದ ಕಿರೀಟವನ್ನು ನಗುನಗುತ್ತಾ ಹೇಗೆ ತಲೆಗೇರಿಸಿಕೊಂಡಳು? ಆಕೆ ಇಂಗ್ಲಿಷರ, ಅಂದರೆ ಶತ್ರುಗಳ ರಾಣಿ; ದರೋಡೆಕೋರರ ಸರದಾರಿಣಿ! ಅಂಥವಳ ಬಗ್ಗೆ ಶೋಕ, ರಾಜನಿಷ್ಠೆ ಪ್ರಕಟಿಸಬೇಕೆ? ಅದೂ, ಕಾರಣವಿಲ್ಲದೆ?

'ಅದರ ಬದಲು, ಮಿತ್ರಮೇಳ ಈಗ ಮಾಡಬಹುದಾದ ವಿಶಿಷ್ಟ ಕರ್ತವ್ಯ ಒಂದಿದೆ. ಇಡೀ ರಾಷ್ಟ್ರ ನಿರ್ಲಜ್ಜೆಯಿಂದ ರಾಜನಿಷ್ಠೆ ತೋರಿಸುತ್ತಿರಬೇಕಾದರೆ, ನಾವು ಮನೆ ಮನೆಗೂ ಹೋಗಿ ಹೇಳಬೇಕು –

''ಎಲ್ಲಿಯ ರಾಣಿ, ಎಲ್ಲಿಯ ರಾಜನಿಷ್ಠೆ? ರಾಜನಿಷ್ಠೆಯಲ್ಲ, ಗುಲಾಮಗಿರಿಯ ಗೀತೆ ಇದು. ನಮ್ಮ ರಾಜ ಎಂದರೆ ನಮ್ಮ ರಾಷ್ಟ್ರ. ಬೇರೆ ಒಂದೂ ನಮಗೆ ಗೊತ್ತಿಲ್ಲ!'' ಹೀಗೆ ನತ್ಯ ನುಡಿಯುವ ಒಂದಾದರೂ ಸಂಸ್ಥೆ ಇದೆಯೆಂಬುದನ್ನು ಜನಗಳಿಗೆ ಈಗ ತೋರಿಸಿಕೊಡಬೇಕು ಭವಿಷ್ಯದ ಪ್ರವಾದಿಗಳಾಗುವ ಸದ್ಭಾಗ್ಯ ನಮಗೀಗ ಒದಗಿದೆ ; ಅದನ್ನು ಹೇಡಿತನದಿಂದ ಕಳೆದುಕೊಳ್ಳದಿರೋಣ. ಇದರಿಂದ ಸಂಸ್ಥೆ ಸತ್ತರೂ ಅದರ ಜನ್ಮ ಸಾರ್ಥಕವಾದಂತೆ. ನೂರು ಬಾರಿ ಹಿಂದೆ ಮುಂದೆ ನೋಡಿಕೊಂಡು ಲೇಖನ ಬರೆಯುವ ದೊಡ್ಡ ದೊಡ್ಡವರೇ ಜೈಲಿಗೆ ಹೋಗುತ್ತಾರಂತೆ, ಇನ್ನು ನಮ್ಮದೇನು ಮಹಾ ?

'ನೋಡಿ, ನಮಗೆ ಕೆಲವರು ಗಲ್ಲಿನ ಬೆದರಿಕೆ ಹಾಕುತ್ತಾರೆ. ಅದರ ವಿಷಯ ಅವರಿಗಿಂತಲೂ ನನಗೇ ಚೆನ್ನಾಗಿ ಗೊತ್ತು. ನಾನು ಹುಟ್ಟಿದ್ದೇ ಚಾಫೇಕರರ ಫಾಸಿಯಿಂದ! ಈಗ ನನಗೆ ಫಾಸಿಯಾದರೆ ಅದರಿಂದ ಇನ್ನೊಬ್ಬ ಹುಟ್ಟಿಕೊಳ್ಳುತ್ತಾನೆ ; ಕ್ರಾಂತಿಯ ಕುಲ ಬೆಳೆಸುತ್ತಾನೆ. ಪ್ರಾಣವೋ, ಸ್ವಾತಂತ್ರ್ಯವೋ ಎನ್ನುವ ಪ್ರಶ್ನೆ ಹಾಕಿಕೊಂಡೇ, ''ಸ್ವಾತಂತ್ರ್ಯ! ಸ್ವಾತಂತ್ರ್ಯ! ಪ್ರಾಣ ಹೋದರೆ ಅಷ್ಟೇ ಹೋಯಿತು, ಮೊದಲು ಸ್ವಾತಂತ್ರ್ಯ!'' - ಅನ್ನುವ ಶಪಥ ಮಾಡಿಕೊಂಡೇ ನಾವು ಇಲ್ಲಿಗೆ ಕಾಲಿಟ್ಟಿದ್ದೇವಲ್ಲವೆ ? ಪ್ಲೇಗು, ಕ್ಷಾಮಗಳಿಂದ ಕ್ರಿಮಿಕೀಟಗಳಂತೆ ಸಾಯುವ ಬದಲಿಗೆ ದೇಶಕ್ಕಾಗಿ ಫಾಸಿಗೇರುವುದೇ ಶ್ರೇಯಸ್ಕರವಲ್ಲವೆ?'

ಎಲ್ಲರ ಜತೆಗೆ ಮಸ್ಕರನೂ ಒಪ್ಪಲೇಬೇಕಾಯಿತು !

ಇದೇ ಸಮಯಕ್ಕೆ ಅತ್ತಿಗೆಯನ್ನು ತೌರುಮನೆಯಲ್ಲಿ ಬಿಟ್ಟು ಬರಬೇಕಾಯಿತು. ಅದಕ್ಕೆ ನಾನೇ ಮುಂದಾದೆ. ಆಗ ನನ್ನ ವಯಸ್ಸಿನಲ್ಲಿದ್ದ ಮುಖ್ಯ ಕಾರಣವೇ ಬೇರೆ. ತ್ರ್ಯಂಬಕದಲ್ಲಿ ಅತ್ತಿಗೆಯ ಅಣ್ಣ ಅಣ್ಣಾರಾವ್ ಫಡಕೆಯ ನಿಕಟ ಸ್ನೇಹವಾಯಿತು. ನಾಲ್ಕಾರು ದಿನಗಳಲ್ಲೆ ಅವನಿಗೆ ಮಿತ್ರಮೇಳದ ಪ್ರತಿಜ್ಞೆ ಕೊಟ್ಟೆ! ಆ ಊರು ಸಂಸ್ಕೃತ ವಿದ್ಯೆಗೆ ಹೆಸರುವಾಸಿ. ಆದರೆ ಅಲ್ಲಿನ ಘನ ವಿದ್ವಾಂಸರಿಗೆ ಸ್ವದೇಶದ ಪರಿಜ್ಞಾನ ಸೊನ್ನೆ! ಆಂಗ್ಲ ದೊರೆಯನ್ನು ದೇವಾಂಶಸಂಭೂತನೆಂದು ವರ್ಣಿಸುವ ಜನ! 'ನಾವಿಷ್ಣುಃ ಪೃಥಿವೀಪತಿಃ' ಎಂದು ವಾದಿಸಿ, ಅದಕ್ಕೆ ಶಾಸ್ತ್ರಪುರಾಣಗಳ ಆಧಾರ ತೋರಿಸುತ್ತಿದ್ದರು. ಅಂಥವರೊಬ್ಬರು ತಾವು ರಚಿಸಿದ್ದ ಕೆಲವು ಶ್ಲೋಕಗಳನ್ನು ಡೌಲಿನಿಂದ ನನ್ನ ಕೈಗಿತ್ತು, 'ಓದು' ಎಂದರು. ಅದರಲ್ಲಿ ಕಾವ್ಯಗುಣದ ಜತೆಗೆ, ಆಂಗ್ಲ ಸರಕಾರವನ್ನು 'ತಾಯಿ ತಂದೆ', ಆಂಗ್ಲ ದೊರೆಯನ್ನು 'ದೇವಾಧಿದೇವ, ಪೃಥ್ವೀಪತಿ' ಎನ್ನುವ ಹೊಗಳಿಕೆಯಿತ್ತು! 'ಹೇಗಿದೆ ?' ಎಂದರು. 'ನಿಜಕ್ಕೂ ಇವು ಮುತ್ತುರತ್ನಗಳಂತಿವೆ. ಆದರೆ ಇವನ್ನು ಹಂದಿಯ ಮುಂದೆ ಚೆಲ್ಲಿದ್ದೀರಿ' *(Truly these are pearls, but they are thrown before swine)* - ಎಂದೆ.

ಅಲ್ಲಿದ್ದ ವಿದ್ವನ್ಮಣಿಗಳೆಲ್ಲ ದಿಗ್ಭ್ರಾಂತರಾದರು. ವಾಗ್ವಾದ ಶುರುವಾಯಿತು. ಊರಿನ ಹಿರಿಯರು, ತರುಣರು ಜಮಾಯಿಸಿದರು. ನಾನೂ ಧ್ವನಿ ಏರಿಸಿ ಸಂಸ್ಕೃತ ಶ್ಲೋಕಗಳನ್ನು ಹೇಳತೊಡಗಿದೆ. 'ಪರನಾಡಿನ ಮೇಲೆ ಶಸ್ತ್ರಬಲದಿಂದ ದಬ್ಬಾಳಿಕೆ ನಡೆಸುವವನು ರಾಜನಾಗಲಾರ, ಇನ್ನು ದೇವತೆ ಹೇಗಾದಾನು ? ''ರಾಜಾ ಪ್ರಕೃತಿರಂಜನಾತ್'' ಎಂದೆ. ಎಲ್ಲರೂ 'ಹೌದು, ಹೌದು' ಎಂದರು. 'ಇನ್ನು ಮುಂದಾದರೂ ನಿಮ್ಮ ಸಂಸ್ಕೃತ ಪಾಂಡಿತ್ಯ ಸಂಪತ್ತನ್ನು ಪರಪ್ರಭುವಿನ ಸ್ತುತಿಗಾಗಿ ದಯವಿಟ್ಟು ವ್ಯರ್ಥಗೊಳಿಸಬೇಡಿ' ಎಂದು ಆ ವಿದ್ವಾಂಸರನ್ನು ಪ್ರಾರ್ಥಿಸಿಕೊಂಡೆ. ಅವರ ಬಾಯಿ ಕಟ್ಟಿಹೋಯಿತು! ನನ್ನ ವಾಗ್ಧೋರಣೆ ಊರಿನಲ್ಲಿ ಒಳ್ಳೆ ಪ್ರಭಾವ ಬೀರಿತು. ಯುವಕರ ತಂಡ ನನ್ನ ಸುತ್ತಲೂ ಸೇರಿತು. ಒಂದೆರಡು ಸಾರ್ವಜನಿಕ ಭಾಷಣಗಳೂ ಏರ್ಪಟ್ಟವು. ಅಂದಮೇಲೆ ಮಿತ್ರಮೇಳದ ಶಾಖೆ ಆರಂಭವಾಗಲು ತಡವಾಗಲಿಲ್ಲ. ನಾನು ಹೋದ

ಉದ್ದೇಶ ಸಫಲವಾಯಿತು.

ಅಲ್ಲಿದ್ದಾಗಿನದೇ ಇನ್ನೊಂದು ಪ್ರಸಂಗ. ಸರಕಾರಿ ಅಧಿಕಾರಿಗಳು ಎಡ್ವರ್ಡ್ ರಾಜನಿಗೆ ರಾಜನಿಷ್ಠೆ ಪ್ರದರ್ಶಿಸಲು ಸಮಾರಂಭ ಏರ್ಪಡಿಸಿದರು. ಅಧಿಕಾರಿಗಳು ಹೇಳಿದ್ದೇ ತಡ, ಊರಿನ ಮುಂದಾಳುಗಳು ಊರನ್ನೆಲ್ಲ ಅಲಂಕರಿಸಿಬಿಟ್ಟರು. ರಾಷ್ಟ್ರದ ಪರಿಸ್ಥಿತಿಯ ಗಂಧಗಾಳಿಯಿಲ್ಲದ ಭಟ್ಟರೂ, ಪುರೋಹಿತರೂ ಸಂಭ್ರಮದಿಂದ ದೊರೆಗೆ ಆಯುರಾರೋಗ್ಯ ಕೋರಿ ಪೂಜೆ, ಪ್ರಾರ್ಥನೆ, ಮಂಗಳಾರತಿ, ಅಭಿಷೇಕ ಕೈಗೊಂಡರು ! ಅಂದು ರಾತ್ರಿ ದೀಪೋತ್ಸವ ಬೇರೆ ! ನಮ್ಮ ತರುಣ ಸಮೂಹಕ್ಕೆ ಇದೆಲ್ಲ ಅಸಹನೀಯ ವಾಗಿತ್ತು. ಅದರ ಪರಿಣಾಮವಾಗಿ, ಸಮಾರಂಭದ ದಿನ ಬೆಳಿಗ್ಗೆ ಏಳುತ್ತಿದ್ದಂತೆಯೇ ಅಪಶಕುನ ಕಾಣಿಸಿ ಕೊಂಡಿತು. ಊರಿನ ತುಂಬ ಭಿತ್ತಿಪತ್ರಗಳು; 'ನಿಮ್ಮ ರಾಷ್ಟ್ರಮಾತೆಯನ್ನು ದಾಸಿಯಾಗಿ ಮಾಡಿಕೊಂಡಿರುವ ರಾಜನ ಉತ್ಸವ ಎಂದರೆ ನಿಮ್ಮ ಸ್ವಾತಂತ್ರ್ಯದ ಶ್ರಾದ್ಧ ಆಚರಿಸಿದಂತೆ! ಪರರಾಜನಿಗೆ ನಿಷ್ಠೆ ಎಂದರೆ ಸ್ವರಾಷ್ಟ್ರಕ್ಕೆ ದ್ರೋಹ !' ಇತ್ಯಾದಿ ಕ್ರಾಂತಿವಾಕ್ಯಗಳು ! ಆ ಊರಿನವರು ತಮ್ಮ ತಾತ ಮುತ್ತಾತನ ಕಾಲದಿಂದಲೂ ಅಂಥ ವಾಕ್ಯಗಳನ್ನು ಒಂದಾದರೂ ಓದಿರಲಿಲ್ಲ.

ದೊಡ್ಡ ಕೋಲಾಹಲವೇ ಎದ್ದಿತು. ಕೆಲವು ಪೊಲೀಸರೂ ವ್ಯರ್ಥವಾಗಿ ಓಡಾಡಿದರು. ಸಂಜೆ ಸಭೆಯಲ್ಲಿ ಕಳೆಯೇ ಇಲ್ಲ. ರಾತ್ರಿ ದೀಪೋತ್ಸವಕ್ಕೆಂದು ಊರಿನ ಪ್ರಮುಖ ಭಾಗಗಳಲ್ಲಿ ಹಣತೆಗಳನ್ನೂ, ಅಲಂಕಾರ ಸಾಮಗ್ರಿಗಳನ್ನೂ ಸಿದ್ಧಪಡಿಸಲಾಗಿತ್ತು. ನಮ್ಮ ವಾನರಸೇನೆ ಸದ್ದಿಲ್ಲದೆ ಹೋಗಿ ಅದೆಲ್ಲವನ್ನೂ ನೀರಿನಲ್ಲಿ ಮುಳುಗಿಸಿಬಿಟ್ಟಿತು ! ಸಂಜೆಯ ಸಭೆಯಲ್ಲಿ ಅಧ್ಯಕ್ಷರು, 'ಎಡ್ವರ್ಡ್ ಪ್ರಭುಗಳು ಸಾಕ್ಷಾತ್ ನಮ್ಮ ತಂದೆ' ಎಂದು ಘೋಷಿಸಿದ್ದರು. ಮರುದಿನ ಬೆಳಕು ಹರಿಯುತ್ತಲೇ ಊರಿನ ಗೋಡೆಗಳ ಮೇಲೆ ಪುನಃ ಭಿತ್ತಿಪತ್ರಗಳು. ಅವುಗಳಲ್ಲಿ ಅಧ್ಯಕ್ಷರಿಗೆ ಪ್ರಶ್ನೆ: 'ಎಡ್ವರ್ಡ್ ನಿಮ್ಮ ತಂದೆಯಾದರೆ, ನಿಮ್ಮ ಇಲ್ಲಿನ ಅಪ್ಪನಿಗೂ ನಿಮಗೂ ಏನು ಸಂಬಂಧ?' ಅದುವರೆಗೆ ಮಬ್ಬು ಕವಿದು ಉಸಿರಿಲ್ಲದೆ ಬಿದ್ದಿದ್ದ ಊರಿನ ಜನಜೀವನದಲ್ಲಿ ಜಾಗೃತಿ ಮೂಡಿತು ; ವಿಚಾರ ಪರಿವರ್ತನೆಯ ಪರ್ವ ಮೊದಲಾಯಿತು.

ಕೆಲವೇ ದಿನಗಳಲ್ಲಿ ಭಗೂರು ಮತ್ತು ನಾಸಿಕದ ಸುತ್ತಮುತ್ತಲ ಸ್ಥಳಗಳಲ್ಲೂ ವ್ಯವಸ್ಥಿತವಾಗಿ ಮಿತ್ರ ಮೇಳದ ಶಾಖೆಗಳನ್ನು ಸ್ಥಾಪಿಸಿದೆವು.

1901ರ ಫಾಲ್ಗುಣದಲ್ಲಿ ನಾಸಿಕದಲ್ಲಿ ನನ್ನ ವಿವಾಹ ಜರುಗಿತು. ನಮ್ಮ ಮಾವ ಭಾವೂರಾವ್ ಚಿಪಳೂಣಕರ್ ಉನ್ನತ ಹುದ್ದೆಯಲ್ಲಿ - ಜವ್ಹರ್ ಸಂಸ್ಥಾನದ ಕಾರಭಾರಿಯಾಗಿ - ಇದ್ದರು. ಮದುವೆಗೆ ಮೊದಲು, 'ಅವರು ನನ್ನ ಕಾಲೇಜು ಶಿಕ್ಷಣದ ಭಾರ ಹೊರುವುದಾದರೆ, ಸ್ಪಷ್ಟವಾಗಿ ಹಾಗೆ ಮಾತುಕೊಟ್ಟರೆ, ಆಗಬಹುದು' ಎಂದಿದ್ದೆ, ನಾನು. ಅದಕ್ಕೆ ಅವರು ನಕ್ಕು ಹೇಳಿದರಂತೆ : 'ನಮ್ಮ ತಾತ್ಯಾನ ಶಿಕ್ಷಣ ತಾನೆ ? ನನ್ನ ಸ್ವಂತ ಮಕ್ಕಳಂತೆಯೇ ಓದಿಸುತ್ತೇನೆ. ಮಕ್ಕಳಿಗೆ ಎಂಥ ವಚನ ಕೊಡುವುದು ? ನನ್ನ ಆದ್ಯ ಕರ್ತವ್ಯ ಅದು.'

ಆ ವರ್ಷ ಏಪ್ರಿಲ್‌ನಲ್ಲಿ ಶಿವೋತ್ಸವವನ್ನು ಭಾರಿ ಅದ್ದೂರಿಯಿಂದ ಆಚರಿಸಿದೆವು. ಗಣೇಶೋತ್ಸವ ವನ್ನೂ ವೈಭವದಿಂದ ನಡೆಸಲು ಸಿದ್ಧತೆ ಮಾಡಿದೆವು. ಮಸ್ಕರ್, ತ್ರ್ಯಂಬಕ, ವಾಮನ, ಶಂಕರ ಮುಂತಾದ ಸಹಕಾರಿಗಳು ಅವಿಶ್ರಾಂತವಾಗಿ ಶ್ರಮಿಸಿದರು. ಪ್ರತಿಯೊಬ್ಬ ಸದಸ್ಯನ ವ್ಯಕ್ತಿತ್ವಶಕ್ತಿ ಹಾಗೂ ಕರ್ತೃತ್ವ ಶಕ್ತಿ ಅಚ್ಚರಿಯೆನಿಸುವಂತೆ ಬೆಳೆಯತೊಡಗಿತ್ತು. ಸಮಾರಂಭದಲ್ಲಿ ಹಾಡಲು ನಮ್ಮ ಆಬಾಪಾಂಗಳೆ ಸ್ವತಂತ್ರ ಪದ್ಯಗಳನ್ನು ಬರೆದ. 'ಗೋವಿಂದಕವಿ' ಎಂಬುದು ಅವನ ಕಾವ್ಯನಾಮ. ದೇಶ ಸ್ವಾತಂತ್ರ್ಯದ ಕರುಣಾದ್ರ್ರ

ಕರೆ ಮಿಡಿಯುವ 'ಪ್ರಭುರಾಯಾಚೀ ಪ್ರಾರ್ಥನಾ' ಅವನು ಅದೇ ವರ್ಷವೇ ರಚಿಸಿದ್ದು.

**ಹೇ ಪಕ್ಷಿ ತರುವರಿ ಗಾತಿ ಸ್ವಚ್ಛಂದೇ**
**ಕಾನನೀ ತ್ಯಾಪರೀ ರಮತೀ ಮೃಗವೃಂದೇ**
**ಸ್ವಾತಂತ್ರ್ಯ ಸೌಖ್ಯ ಸೇವೀತೀ ಆನಂದೇ**
**ಮಗ ಅಮ್ಹಾಲಾಚ ಕಾ ಪಾರತಂತ್ರ್ಯಪಂಜರೀ ಕೋಂಡಿಲೇ ರಾಮ**
**ಹೇ ಘನಶ್ಯಾಮ - ಶ್ರೀರಾಮ - ಮದಾತ್ಮಾರಾಮ ॥**

..............................

**ಪಾಂಡವ ರಾಜ್ಯ ದಿಧಲೇ ತ್ವಾಂ ಗೋವಿಂದೇ**
**ಮಗ ಅಮ್ಹಾವರಿಚ ಕಾ ದಯಾ ನ ಕರಿಶೀ ಮುನೀಂದ್ರ ಜನವಿಶ್ರಾಮ ॥**

*(ಪಕ್ಷಿಗಳು ಮರಗಳ ಮೇಲೆ ಸ್ವಚ್ಛಂದವಾಗಿ ಹಾಡುತ್ತವೆ ; ಅದೇ ರೀತಿ ಕಾಡಿನಲ್ಲಿ ಮೃಗಗಳು ಓಡಾಡುತ್ತವೆ; ಸ್ವಾತಂತ್ರ್ಯದ ಸುಖ ಅನುಭವಿಸುತ್ತದೆ. ಆದರೆ, ಹೇ ಶ್ರೀರಾಮ ! ನಮ್ಮನ್ನು ಮಾತ್ರ ಏಕೆ ದಾಸ್ಯದ ಪಂಜರದಲ್ಲಿ ಕೂಡಿಟ್ಟಿರುವೆ ? .... .... ಪಾಂಡವರಿಗೆ ನೀನು ರಾಜ್ಯ ಕೊಡಿಸಿದೆ. ಆದರೆ ನಮ್ಮ ಮೇಲೆ ಮಾತ್ರ ನನಗೆ ಏಕೆ ದಯೆಯಿಲ್ಲ ?)*

- ಎಂದು ಆ ಗೀತೆಯನ್ನು ಮನೆಮನೆಗಳಲ್ಲೂ ಹೆಣ್ಣುಮಕ್ಕಳು ಹಾಡತೊಡಗಿದ್ದು ಅದೇ ವರ್ಷವೇ. ನಮ್ಮ ಆಬಾ ವಾರದ ಬೈಠಕ್‌ಗಳಲ್ಲಿ ದೇಶಭಕ್ತಿಯ ಗೀತೆಗಳನ್ನು ರಚಿಸಿಬಿಡುತ್ತಿದ್ದ. ಆ ತೇಜಸ್ವಿ ಗೀತೆಗಳನ್ನು ಮೋಹಕವಾಗಿ ಹಾಡುವ ಬಾಲಕರೂ ಇದ್ದರು. ಅದರಿಂದ ಆ ವರ್ಷ ಗಣೇಶೋತ್ಸವದಲ್ಲಿ ಒಂದು ಮೇಳ ಪ್ರದರ್ಶನವನ್ನೂ ಏರ್ಪಡಿಸಿದೆವು. ಅದರಲ್ಲಿ ರಾಮ - ರಾವಣರ ಸಂವಾದ ಕೇಳಿ ಸಹಸ್ರಾವಧಿ ಪ್ರೇಕ್ಷಕರ ಬಾಹುಗಳು ಸ್ಫುರಣಗೊಳ್ಳುತ್ತಿದ್ದವು.

'ನೀನು ನನ್ನ ದ್ವೀಪಕ್ಕೆ ಕಾಲಿಟ್ಟದ್ದೇಕೆ ? ಇದು ಶುದ್ಧ ಅನ್ಯಾಯ ಎಂಬುದು ತಿಳಿಯದೇನೋ ನರಹುಳುವೆ ?' ಎಂದು ಗರ್ವದಿಂದ ಗರ್ಜಿಸುತ್ತಾನೆ ರಾವಣ.

ಕೋದಂಡಧಾರಿಯಾದ ಶ್ರೀರಾಮ ಘನಗಂಭೀರ ಧೀರೋದಾತ್ತ ಸ್ವರದಲ್ಲಿ ಹೇಳುತ್ತಾನೆ : 'ದುಷ್ಟ ದ್ವೀಪಾಧಿಪತಿ ! ನಿನಗೂ ನ್ಯಾಯ - ಅನ್ಯಾಯಗಳ ಪರಿವು ಉಂಟೇನು ? ಎಂದಿನಿಂದಾಯಿತು ನಿನಗೆ ಅದರ ಜ್ಞಾನೋದಯ ?'

'ನಿನ್ನ ಕಾಡುಹರಟೆ ಕೇಳಲು ನನಗೆ ಹೊತ್ತಿಲ್ಲ. ನನ್ನ ವಶದಲ್ಲಿರುವ ಸಮಸ್ತವೂ ನನ್ನ ಸ್ವತ್ತು. ಹೀಗಿಂದ ಹೀಗೇ ಕಾಲುತೆಗೆಯುವೆಯೋ ಇಲ್ಲವೋ ?'

'ಕುಟಿಲತೆಯಿಂದ ಪರರ ರಾಜ್ಯ ಪ್ರವೇಶಿಸುವುದು ; ಪರರ ಸ್ವತ್ತು ಅಪಹರಿಸುವುದು ; ಜತೆಗೆ ಅದನ್ನು ತನ್ನದೆಂದೇ ಹೇಳುವುದು - ಒಂದಕ್ಕಿಂತ ಒಂದು ಭಯಂಕರ ಅಪರಾಧಗಳು. ಇದಕ್ಕೆ ತಕ್ಕ ಪ್ರಾಯಶ್ಚಿತ್ತ ನೀನು ಅನುಭವಿಸಲೇಬೇಕು. ನನ್ನದು ಸತ್ಯದ ಪಕ್ಷ, ನ್ಯಾಯದ ಪಕ್ಷ, ಧರ್ಮದ ಪಕ್ಷ.'

ಆರ್ಭಟಿಸುತ್ತಾ ಆಂಜನೇಯ ಪ್ರವೇಶಿಸುತ್ತಾನೆ ; ಅವನ ಹಿಂದೆಯೇ ಹೂಂಕರಿಸುತ್ತಾ ವಾನರ ಸೇನೆ ಬರುತ್ತದೆ. ಘನಘೋರ ಯುದ್ಧವಾಗುತ್ತದೆ. ಉನ್ಮತ್ತ ರಾವಣನ ಹತ್ತು ತಲೆಗಳೂ ಕತ್ತರಿಸಿ ಬಿದ್ದು, 'ಸ್ವಾತಂತ್ರ್ಯ ಲಕ್ಷ್ಮೀ ಕೀ ಜಯ್' ಎಂಬ ಘೋಷಣೆ ಮುಗಿಲುಮುಟ್ಟುತ್ತದೆ.

**ದಂಡುನಿ ದಶಾನನ ತೇವ್ಹಾ ಕೋದಂಡೇ**

**ಸುರವೃಂದ ರಕ್ಷಿಲಾ ದೇವಾ ಆನಂದೇ**
**ಮಗ ಅಮ್ಹಾವರಿಚ ಕಾ ದಯಾ ನ ಕರಿಶೀ ಮುನೀಂದ್ರ, ಜನವಿಶ್ರಾಮ**
**ಹೇ ಘನಶ್ಯಾಮ – ಶ್ರೀರಾಮ – ಮದಾತ್ಮಾರಾಮ ॥**

*(ರಾವಣನನ್ನು ಆಗ ಕೋದಂಡದಿಂದ ಶಿಕ್ಷಿಸಿ ದೇವತೆಗಳನ್ನು ರಕ್ಷಿಸಿದೆ, ದೇವ! ಆದರೆ ನಮ್ಮ ಮೇಲೆ ಮಾತ್ರ ನಿನಗೇಕೆ ದಯೆ ಬರುತ್ತಿಲ್ಲ ?)*

– ಎಂಬ ಕರುಣಾದ್ರ್ರ ಪ್ರಾರ್ಥನೆಯೂ ಕೇಳಿಬರುತ್ತದೆ.

ದ್ವೀಪಾಧಿಪತಿ ಎಂದರೆ ಇಂಗ್ಲಿಷರು ; ಸೀತೆಯೇ ಭಾರತದ ಸ್ವಾತಂತ್ರ್ಯ ಲಕ್ಷ್ಮಿ ; ಶಸ್ತ್ರಯುದ್ಧವೊಂದೇ ಸ್ವಾತಂತ್ರ್ಯ ಸಂಪಾದನೆಯ ದಾರಿ! ನೇರವಾಗಿ ಹೇಳದಿದ್ದರೂ ಪ್ರೇಕ್ಷಕರಿಗೆ ತಾನಾಗಿ ಅರ್ಥವಾಗುತ್ತಿತ್ತು. ಪಾತ್ರಧಾರಿಗಳೆಲ್ಲ ಕೇವಲ 13– 14 ವರ್ಷದ ಹುಡುಗರಾದರೂ ಅವರ ತನ್ಮಯತೆ ಹಾಗೂ ಆವೇಶಪೂರ್ಣ ಅಭಿನಯ ಇಡೀ ಮಹಾರಾಷ್ಟ್ರದಲ್ಲೆ ಪ್ರಸಿದ್ಧವಾಯಿತು. ಆಗ ಪ್ರಮುಖಪಾತ್ರ ವಹಿಸುತ್ತಿದ್ದವರೆಂದರೆ ನನ್ನ ತಮ್ಮ ಬಾಳಾ, ಕೇತಕರರ ದತ್ತು, ಜೋಶಿಯವರ ಬಾಪು ಮತ್ತು ವರ್ತಕರ ಶ್ರೀಧರ. ಇದೇ ಹುಡುಗರು ಅನಂತರನಾನು ಬರೆದ 'ಸಿಂಹಗಡದ ಲಾವಣಿ', 'ಬಾಜೀಪ್ರಭುವಿನ ಲಾವಣಿ', ಗೋವಿಂದಕವಿಯ 'ಅಫಜಲಖಾನನ ವಧೆ' ಇತ್ಯಾದಿಗಳನ್ನೂ ಹಾಡಿ– ಆಡಿದರು. ಅದು ಅವರಿಗಾಗಿಯೇ ರಚಿಸಿದ್ದು. ಅವರು ಅದಕ್ಕಾಗಿಯೇ ಹುಟ್ಟಿದವರು – ಎಂಬಷ್ಟು ಸಹಜಶೋಭೆ ಕಾಣಿಸಿಕೊಂಡಿತು. ನಾಲ್ಕಾರು ವರ್ಷ ಬಿಡುವಾದಾಗಲೆಲ್ಲ ಅವರು ಪ್ರಾಂತದಾದ್ಯಂತ ಪ್ರದರ್ಶನ ನಡೆಸಿ, ಸಹಸ್ರಾರು ಜನರ ಹೃದಯದಲ್ಲಿ ದೇಶಭಕ್ತಿ ಹಾಗೂ ಸ್ವಾತಂತ್ರ್ಯದ ಜ್ಯೋತಿ ಬೆಳಗಿಸಿದರು. ಪುಣೆಯಲ್ಲಿ ತಿಲಕರಿಂದಲೂ 'ಭೇಷ್' ಅನ್ನಿಸಿಕೊಂಡರು. ಅನೇಕ ಯುವಕರು ನಾಟಕ ಕಂಡು ಕ್ರಾಂತಿಯ ದಳಕ್ಕೂ ಇಳಿದುಬಂದರು.

ಕೊನೆಗೆ ಆಂಗ್ಲ ಸರಕಾರದ ಕಾಕದೃಷ್ಟಿ ಅದಕ್ಕೂ ತಾಗಿತು ; ಪೊಲೀಸರು ಪ್ರದರ್ಶನ ನಿಷೇಧಿಸಿದರು ; ಹಾಡು ಹಾಗೂ ಸಂಭಾಷಣೆಯ ಹಸ್ತಪ್ರತಿಗಳನ್ನು ವಶಪಡಿಸಿಕೊಂಡರು. ಆದರೆ ಆ ವೇಳೆಗಾಗಲೇ ಬೀದಿಬೀದಿಯ ಹುಡುಗರ ಬಾಯಲ್ಲೂ ರಾಮ – ರಾವಣರ ಸಂಭಾಷಣೆ ಮೊಳಗುತ್ತಿತ್ತು. 'ಸ್ವಾತಂತ್ರ್ಯ ಲಕ್ಷ್ಮೀ ಕೀ ಜಯ್' ಘೋಷಣೆ ಏಳುತ್ತಿತ್ತು !

ಗಣೇಶೋತ್ಸವದ ಸಂತೋಷದ ಜತೆಗೇ ದುಃಖವೂ ಕೂಡಿಕೊಂಡು ಬಂತು. ಮಸ್ಕರ್ ವರ್ಷವರ್ಷವೂ ಹಗಲಿರುಳೆನ್ನದೆ ಪ್ಲೇಗ್ ರೋಗಿಗಳ ಶುಶ್ರೂಷೆ ಮಾಡುತ್ತಿದ್ದ. ಅವನೆಂದರೆ ಒಂದು 'ಪ್ಲೇಗ್ ಕವಚ' (ಪ್ಲೇಗ್ ಪ್ರೂಫ್) ಇದ್ದಂತೆ ! ಆದರೆ ಅಂತಹವನನ್ನೂ ಆ ಪಾಪಿ ರೋಗ ಬಿಡಲಿಲ್ಲ. ಬಿಡುವಿಲ್ಲದ ಓಡಾಟದಿಂದ ಮೊದಲೇ ದೇಹ ದಣಿದಿತ್ತು ; ಉತ್ಸವ ಮುಗಿಯುತ್ತಿದ್ದಂತೆ ಜ್ವರ ಏರಿತು. ನಮ್ಮಿಂದ ಸಾಧ್ಯವಿದ್ದಷ್ಟೂ ಔಷಧೋಪಚಾರ ನಡೆಸಿದೆವು. ರಾತ್ರಿಯಿಡೀ ಎಚ್ಚರವಾಗಿ ಸುತ್ತಲೂ ಕುಳಿತಿದ್ದೆವು. ಕೊನೆಗೆ, ಅವನಿಗೆ ಉನ್ಮಾದ ಹತ್ತಿತು. ಆದರೆ ಎಂಥ ಉನ್ಮಾದ ಎನ್ನುತ್ತೀರಿ ! ರಾಷ್ಟ್ರೋನ್ಮಾದ, ಸ್ವಾತಂತ್ರ್ಯದ ಉನ್ಮಾದ ! ಜ್ವರದ ತಾಪದಲ್ಲೆ ಎದ್ದು ಬಿದ್ದು ಇಂಗ್ಲಿಷರೊಡನೆ ಯುದ್ಧ ಮಾಡುವವನಂತೆ ಕೈಕಾಲು ಝಾಡಿಸತೊಡಗಿದ. 'ಸ್ವಾತಂತ್ರ್ಯ ಲಕ್ಷ್ಮೀ ಕೀ ಜಯ್' ಎನ್ನುತ್ತಾ ಹೊರಗೆ ಓಡಲೆತ್ನಿಸುತ್ತಿದ್ದ. ಪ್ರತ್ಯಕ್ಷ ಸಮರಾಂಗಣದಲ್ಲಿ ಹೋರಾಡುತ್ತಾ ಮಡಿಯುವ ತನ್ನ ಶಪಥವನ್ನು ಅವನು ಪೂರೈಸುತ್ತಿದ್ದ ! ಕಾರಣ ನಮಗೆ ಭ್ರಮೆಯಂತೆ ಕಾಣುತ್ತಿದ್ದುದು ಅವನಿಗೆ ಸತ್ಯವಾಗಿಯೇ ತೋರುತ್ತಿತ್ತು.

'ಎಲ್ಲಿ, ಎಲ್ಲಿ ನನ್ನ ಖಡ್ಗ ? ಕಣ್ತೆರೆದು ಏಳಿ. ಜಯಘೋಷ ಹೇಳಿ – ಮಾರೋ ಫಿರಂಗೀಕೋ !

ಹರಹರ ಮಹದೇವ್' ಎಂಬ ಅವನ ಹೂಂಕಾರ ನಡುರಾತ್ರಿಯ ಭೀಷಣ ನೀರವತೆಗೂ ನಡುಕ ಹುಟ್ಟಿಸುತ್ತಿತ್ತು. ಅವನನ್ನು ಹಿಡಿದು ಹಾಸಿಗೆಯ ಮೇಲೆ ಕೂರಿಸುವುದೇ ನಮಗೆ ಕಷ್ಟವಾಗಿತ್ತು. ಕಡೆಗೊಂದು ದೀರ್ಘ ಘೋಷಣೆ ಹಾಗೂ ಭಯಾನಕ ಚೀತ್ಕಾರದೊಡನೆ ಅವನು ಕುಸಿದುಬಿದ್ದ. ಮಿತ್ರಮೇಳದ ಮೊದಲ ಸೈನಿಕ ಕೆಳಗೆ ಬಿದ್ದ. 'ಅಂತೇ ಮತಿಃ ಸಾ ಗತಿಃ' ಎನ್ನುತ್ತಾರೆ. ವೀರ ಸ್ವಾತಂತ್ರ್ಯ ಯೋಧರಿಗೆ ಸಲ್ಲುವ ದಿವ್ಯಗತಿಯೇ ಮಸ್ಕರನಿಗೂ ಸಂದಿರುವುದರಲ್ಲಿ ಸಂದೇಹವೇನು ? ಸಮಾಧಾನ ತಂದುಕೊಂಡು ನಾವು ಅವನ ಶವಕ್ಕೆ ಹೆಗಲು ಕೊಟ್ಟೆವು. ಚಿತೆಗೂ ಬೆಂಕಿ ಕೊಟ್ಟು, ಅಗ್ನಿಜ್ವಾಲೆಗಳ ಸೇತುವೆಯ ಮೂಲಕ ಅವನನ್ನು ಆಚೆಯ ದಡಕ್ಕೆ ತಲಪಿಸಿಬಿಟ್ಟೆವು.

ಈ ಲೋಕದ ಕಣ್ಣಿಗೆ ಕುಕ್ಕುವಂತೆ ಯಾವ ಪ್ರಸಿದ್ಧ ಕಾರ್ಯವನ್ನೂ ಅವನು ಮಾಡಲಿಲ್ಲ ; ಮಾತೃಭೂಮಿಯ ಚರಣಕ್ಕೆ ಸಮರ್ಪಿಸಲು ಆ ಬಡಪಾಯಿಯ ಅಂಥ ಐಹಿಕ ಐಶ್ವರ್ಯ ಏನೂ ಇರಲಿಲ್ಲ. ಆದರೆ ನಮ್ಮಲ್ಲಿ ಏನಿಲ್ಲವೋ ಅದರ ಬಗ್ಗೆ ಚಿಂತಿಸದೆ, ಇದ್ದುದನ್ನೇ ಪೂರ್ತಿಯಾಗಿ ಸಮರ್ಪಿಸುವುದೇ ಸರ್ವಸ್ವಾರ್ಪಣೆಯ ಲಕ್ಷಣ. ಮಸ್ಕರ್ ಮನಃಪೂರ್ವಕವಾಗಿ ಅನನ್ಯನಿಷ್ಠೆಯಿಂದ ತನ್ನ ಜೀವನ ಸರ್ವಸ್ವವನ್ನೂ ಒಂದು ತುಳಸಿ ದಳದಂತೆ ಭಾರತಮಾತೆಯ ಚರಣಕ್ಕೆ ಅರ್ಪಿಸಿಬಿಟ್ಟ. ನೂರಾರು ತೋರಿಕೆಯ ಕೆಲಸಗಳಿಗಿಂತಲೂ ಅವನು ಮಾಡಿದ ಈ ಒಂದು ಕೆಲಸವೇ ಸಹಸ್ರಪಾಲು ಜ್ಯೇಷ್ಠವಾಗಿತ್ತು, ಶ್ರೇಷ್ಠವಾಗಿತ್ತು. ಸ್ವದೇಶವೇ ಅವನ ಮನೆ, ಸಮಾಜವೇ ಅವನ ಪರಿವಾರ ಆಗಿತ್ತು. ಆ ಅಜ್ಞಾತ ದೇಶಭಕ್ತನ ಸ್ಮೃತಿಗೆ ನನ್ನ ಆಗಾಗಿನ ಕಾಣಿಕೆ - ಒಂದೋ ಎರಡೋ ಕೃತಜ್ಞತೆಯ ಕಂಬನಿ!





# ಹವಿಸ್ಸು ಏಳು

ಮಿತ್ರಮೇಳಕ್ಕೆ ಸೇರಿದವರೆಲ್ಲರೂ 'ರಾಮಹರಿ' ಯ ಪ್ರತಿಜ್ಞೆ ಸ್ವೀಕರಿಸುತ್ತಿದ್ದುದರಿಂದ, ಕ್ರಮೇಣ 'ರಾಷ್ಟ್ರಭಕ್ತ ಸಮೂಹ' ದ ಹೆಸರಿನ ಬಳಕೆ ನಿಂತುಹೋಯಿತು. ಮಿತ್ರಮೇಳದಲ್ಲಿ ನೀತಿನಿರ್ಧಾರಗಳನ್ನು ಕೈಗೊಳ್ಳುತ್ತಿದ್ದ ಅಂತರಂಗದ ಸದಸ್ಯರದೇ ಪ್ರತ್ಯೇಕ ಗುಂಪು ಎಳೆಯರಿಗಾಗಿ ಒಂದು 'ಕಿಶೋರ ಮಂಡಲಿ' ಯನ್ನೂ ಸ್ಥಾಪಿಸಿದೆವು. ನಮ್ಮ ಬಾಳಾ, ಶ್ರೀಧರ, ದತ್ತು ಅದರ ಹೊಣೆಗಾರಿಕೆ ವಹಿಸಿಕೊಂಡರು. ಈ ಮೂವರೂ ನಮ್ಮ ಅಖಾಡದಲ್ಲಿ ಪಳಗಿ ಮಿತ್ರಮೇಳದ ಸಂಪ್ರದಾಯಗಳನ್ನು ಮೈಗೂಡಿಸಿಕೊಂಡಿದ್ದವರೇ. ಅವರು ತಾವೇ ಸಾಪ್ತಾಹಿಕ ಬೈಠಕ್ ನಡೆಸುತ್ತಿದ್ದರು ಲೇಖನ - ಭಾಷಣ ಏರ್ಪಡಿಸುತ್ತಿದ್ದರು ವ್ಯಾಯಾಮ ಕಲಿಸುತ್ತಿದ್ದರು. ಹೀಗೆ ನೂರಾರು ಕಿಶೋರರ ಹೃದಯದಲ್ಲಿ ದೇಶಭಕ್ತಿ ಮಾತ್ರವಲ್ಲ, ದೇಶವೀರತ್ವದ ಜ್ಯೋತಿಯನ್ನೂ ಹಚ್ಚಿಟ್ಟರು

ಬೆಳದಿಂಗಳ ರಾತ್ರಿಗಳು ಬಂತೆಂದರೆ ಗೋದಾವರಿಯ ತೀರದಲ್ಲಿ ನಮ್ಮ ವಿಹಾರ ಒಣಮರಳಿನಲ್ಲೊ, ದೇವಸ್ಥಾನದ ಕಟ್ಟೆಯ ಮೇಲೊ ಗುಂಪುಗೂಡುತ್ತಿದ್ದೆವು ನಡುವೆ ಕಡಲೆಪುರಿ, ಚೌಚೌ ಇತ್ಯಾದಿಗಳ ರಾಶಿ. ಎಲ್ಲ ಜಾತಿಗಳವರೂ ಒಟ್ಟಾಗಿ ಹರಟೆ ಕೊಚ್ಚುತ್ತಾ ತಿಂದು ಮುಗಿಸುತ್ತಿದ್ದೆವು ನಮ್ಮ ಬಾಬಾ, ನಾನಾ ಮತ್ತಿತರ ಒಬ್ಬಿಬ್ಬ ಮಹನೀಯರು ಮೊದಮೊದಲು ದೂರ ಕುಳಿತು ತಮ್ಮ ಪಾಲಿನದನ್ನು ತಿನ್ನುತ್ತಿದ್ದರು. ಆದರೆ ಕ್ರಮೇಣ ಅವರೂ ನಮ್ಮ ಮಾರ್ಗಕ್ಕೇ ತಿರುಗಿದರು ಚೈತ್ರ ವೈಶಾಖಿಗಳ ಹುಣ್ಣಿಮೆ ಬಂತೆಂದರೆ ನದಿತೀರದಲ್ಲಿ ಆಪ್ತರೊಡನೆ ಸೇರುವುದು, ಕೆಂಪು ಕಲ್ಲಂಗಡಿ ಹಣ್ಣಿನ ಹೋಳುಗಳನ್ನು ಬಾಯಿಗೆ ಹಾಕಿಕೊಳ್ಳುತ್ತಾ ಮಾತುಕತೆಯಾಡುವುದು ನನಗೆ ತುಂಬ ಇಷ್ಟ ಆಗ ಹಾಸ್ಯ, ಟೀಕೆ, ಅಣಕ, ಪದ್ಯ, ಲಾವಣಿ, ಚರಿತ್ರೆ ಇತ್ಯಾದಿಗಳಲ್ಲಿ ಗಂಟೆಗಟ್ಟಲೆ ಆನಂದವಾಗಿ ಕಳೆಯುತ್ತಿದ್ದೆವು ನಡುನಡುವೆ ಪುರಾಣೇತಿಹಾಸಗಳ ರಮ್ಯಾದ್ಭುತ ಪ್ರಸಂಗಗಳನ್ನೂ ನಾನು ವರ್ಣಿಸುತ್ತಿದ್ದೆ. ಆದರೆ ಅದರ ಕೇಂದ್ರಬಿಂದು ರಾಜಕಾರಣ ! ಸ್ವದೇಶದ ಸ್ವಾತಂತ್ರ್ಯಕ್ಕಾಗಿ ಹೃದಯ ತಳಮಳಿಸುವಂತೆ ಮಾಡುವ ರಾಜಕಾರಣ !

ಆಗಿಂದಾಗ್ಗೆ ನನಗೆ ಏಕಾಂತದ ಗೀಳೂ ಹತ್ತಿಕೊಳ್ಳುತ್ತಿತ್ತು ನಿರ್ಜನ ಸ್ಥಳ ಹುಡುಕಿಕೊಂಡು ಒಬ್ಬನೇ ಕುಳಿತುಬಿಡುತ್ತಿದ್ದೆ. ಇಂಥ ಬಹುತೇಕ ಏಕಾಂತಗಳು ಆತ್ಮನಿರೀಕ್ಷಣೆಗೆ ಮೀಸಲು. ನನ್ನ ಗುಣ - ಅವಗುಣಗಳನ್ನು, ಸರಿ-ತಪ್ಪುಗಳನ್ನೂ ಜಗತ್ತಿನ ನಿಜ-ಸುಳ್ಳುಗಳನ್ನೂ ಸಮಭಾವದಿಂದ ಆಲೋಚಿಸುತ್ತಿದ್ದೆ

ಅದಕ್ಕೆ 'ಮನಸ್ಸಿನ ಪಂಚಸಭೆ' ಎಂಬುದು ನನ್ನ ನಾಮಕರಣ. ವಿವೇಕವೇ ಅಲ್ಲಿನ ನ್ಯಾಯಾಧೀಶ. ಅಲ್ಲಿ ಜಟಿಲವಾದ ವಿವಾದಗಳು ಜರುಗುತ್ತಿದ್ದವು ; ನಿಷ್ಪಕ್ಷಪಾತವಾದ ತೀರ್ಪುಗಳು ಹೊರಬೀಳುತ್ತಿದ್ದವು !

ನನ್ನ ದೃಷ್ಟಿಯಲ್ಲಿ ವ್ಯಾಯಾಮ ಒಂದು ರಾಷ್ಟ್ರೀಯ ಕರ್ತವ್ಯ. ಅದನ್ನು ಸ್ವತಃ ಆಚರಿಸದೆ, ಇತರರಿಗೆ ಹೇಳಿದರೆ ಯಾರು ಕೇಳುತ್ತಾರೆ? ಆದ್ದರಿಂದ ಎಲ್ಲರಿಗಿಂತ ಮೊದಲು ನಾನೇ ಅಂಗಸಾಧನೆ ಮಾಡುತ್ತಿದ್ದೆ. ಅದರ ಬಗ್ಗೆ ನಮಗಿದ್ದುದು ಕೇವಲ ಶಾರೀರಿಕ ದೃಷ್ಟಿಕೋನ ಮಾತ್ರವಲ್ಲ, ರಾಜ್ಯಕ್ರಾಂತಿಯ ಭೀಕರ ಅಗ್ನಿಪರೀಕ್ಷೆಗೆ ನಾವು ನಮ್ಮ ಜೀವನವನ್ನು ಒಡ್ಡುವವರಿದ್ದೆವು. ಆಗ ಸಹಿಸಬೇಕಾಗಿಬರುವ ಕಷ್ಟ, ಹಿಂಸೆಗಳಿಗೆ ನಾವು ಸಿದ್ಧಗೊಳ್ಳಬೇಕಾಗಿತ್ತು. ಉಪವಾಸ, ವನವಾಸ, ಜೈಲುವಾಸ, ಚಿತ್ರಹಿಂಸೆ ಇತ್ಯಾದಿಗಳನ್ನು ನಾವು ಎದುರಿಸಬೇಕಾಗಿತ್ತು. ಅದಕ್ಕಾಗಿ ಮನಸ್ಸಿನ ಜತೆಗೆ ದೇಹವೂ ಶ್ರಮಸಹಿಷ್ಣು ಹಾಗೂ ಸಮರ್ಥ ವಾಗಬೇಕಾಗಿತ್ತು.

ಈಜುವ ಕಲೆಗೆ ನಮ್ಮ ತಂಡದ ಶಿಕ್ಷಣಸ್ಥಾನ ಗೋದಾವರಿಯ ರಾಮಕುಂಡ. ದಿನವೂ ಅಲ್ಲಿ ಹೋಗುವುದು, ತೆಂಗಿನ ಕೊಬ್ಬರಿ ಕಲ್ಲಿನ ಮೇಲೆ ತೇದು, ಅದನ್ನು ಒಬ್ಬರಿಗೊಬ್ಬರು ಮೈಗೆ ಹಚ್ಚುವುದು. ಎತ್ತರದಿಂದ ನೀರಿಗೆ ಧುಮುಕುವುದು ; ತರತರದ ಲಾಗ ಹಾಕುವುದು ; ಗಂಟೆಗಟ್ಟಲೆ ನೀರಿನಲ್ಲಿ ಈಜು ವುದು ! ಅಲ್ಲಿ ಮಾಡದಿದ್ದ ಸಾಹಸವೇ ಇಲ್ಲ. ಅದರಿಂದಲೇ ಮುಂದೆ ಸಮುದ್ರವನ್ನೂ ಒಂದು ಕೈ ನೋಡಿ ಯೇ ಬಿಡುವ ಧೈರ್ಯ ಹುಟ್ಟಿತು ! ಈಜುವುದರ ಜೊತೆಗೆ ಓಡುವುದು, ನಿರಶನ, ಬಯಲಿನಲ್ಲಿ ನೆಲದ ಮೇಲೆ ಮಲಗುವುದು, ಕಾಡುಮೇಡು ಸುತ್ತುವುದು, ವೇಗವಾಗಿ ಬೆಟ್ಟಗುಡ್ಡ ಏರುವುದು, ಎತ್ತರದಿಂದ ಹಾರುವುದು ಇತ್ಯಾದಿ ಪ್ರಯೋಗಗಳೂ ನಡೆಯುತ್ತಿದ್ದವು.

ಇವೆಲ್ಲವೂ ಸ್ವಾತಂತ್ರ್ಯ ಹೋರಾಟದ ಸಿದ್ಧತೆಗಳು ಎಂಬುದನ್ನು ನೆನಪಿನಲ್ಲಿ ಇಟ್ಟುಕೊಂಡೇ ಮಾಡು ತ್ತಿದ್ದೆವು. ನನ್ನ ಮಟ್ಟಿಗಂತೂ ಇವೆಲ್ಲದರಲ್ಲೂ ಆಸಕ್ತಿಯಿಂದ ಭಾಗವಹಿಸುತ್ತಿದ್ದೆ ಮಾತ್ರವಲ್ಲ, ಈ ಅನುಭವ ಮುಂದೆ ಅಂದಮಾನಿನ ನರಕಯಾತನೆ ಅನುಭವಿಸುವ ಸಮಯದಲ್ಲಿ ಉಪಯೋಗಕ್ಕೂ ಬಂತು.

ಇನ್ನು ಆಗಿನ ದೇಶದ ರಾಜಕಾರಣ ಪರಿಸ್ಥಿತಿ ಒಂದಷ್ಟು ನೋಡೋಣ. ಆಗಿನ ಮಹಾ ಮಹಾ ನಾಮಾಂಕಿತ ನಾಯಕರೂ ಕೇವಲ ಕಾನೂನುಬದ್ಧ (ಲೀಗಲ್) ಸಾಧನಗಳ ಮೂಲಕ ರಾಜ್ಯ ಸುಧಾರಣೆಯ ಮಾತನಾಡುತ್ತಿದ್ದರು. ನ್ಯಾಯಬದ್ಧ (ಲೆಜಿಟಿಮೇಟ್) ಸಾಧನಗಳ ಉಚ್ಚಾರಕ್ಕೂ ಅವರು ಹೆದರುತ್ತಿದ್ದರು. ಸ್ಥಾನಿಕ ಸ್ವರಾಜ್ಯದ (ಹೋಂ ರೂಲ್) ತೀರ ಸಪ್ಪೆ ಕಲ್ಪನೆ ಸಹ ಅವರಿಗೆ ಭಯಾನಕವಾಗಿ ಕಾಣುತ್ತಿತ್ತು. ಇನ್ನು 'ಪೂರ್ಣ ಸ್ವರಾಜ್ಯ' 'ಸಶಸ್ತ್ರ ಕ್ರಾಂತಿ'ಗಳ ಕೃತಿ ಹಾಗಿರಲಿ, ಮಾತು ಸಹ ಅವರಿಗೆ ಕಲ್ಪನಾತೀತ.

ಬ್ರಿಟಿಷರು ದೇವಾಂಶಸಂಭೂತರೆಂದು ಅವರೆಲ್ಲರ ನಂಬಿಕೆ. ಅದೊಂದು ಪರಿಸ್ಥಿತಿಯ ಅನಿವಾರ್ಯತೆ ಎಂದು ಅವರಿಗನಿಸಲಿಲ್ಲ. ಆಳರಸರ ಬಗ್ಗೆ ಅವರ ಮನಸ್ಸಿನಲ್ಲಿ ಪ್ರಾಮಾಣಿಕ ಶ್ರದ್ಧಾಭಕ್ತಿಗಳು ನೆಲಸಿದ್ದವು! ತಮ್ಮ ಸ್ವಂತ ಧರ್ಮಬಾಂಧವರಾದ ಹಿಂದುಗಳನ್ನೇ 'ಮೈಲಿಗೆ, ಮೈಲಿಗೆ' ಎನ್ನುತ್ತಾ ಮೈಲಿಯಷ್ಟು ದೂರ ಹಾರುತ್ತಿದ್ದ ಕಾಶಿಯ ಮಡಿವಂತ ಪಂಡಿತರು, ಆಂಗ್ಲ ವೈಸ್‌ರಾಯ್ ಲಾರ್ಡ್ ರಿಪ್ಪನ್ನನ ಗಾಡಿಯನ್ನು ದನಗಳಂತೆ ತಾವೇ ಎಳೆದರು – ಸ್ವಸಂತೋಷದಿಂದ, ಧನ್ಯತೆಯ ಭಾವನೆಯಿಂದ! ಇಂಗ್ಲಿಷರಿಂದ ನಮಗೆ ಲಾಭವಾಗಿದೆ ಎನ್ನುವಷ್ಟರಿಂದಲೇ ಅವರಿಗೆ ತೃಪ್ತಿಯಿಲ್ಲ ; ನಮ್ಮ ಹಿತ ಸಾಧನೆಗಾಗಿಯೇ, ತಮ್ಮ ಸ್ವಂತ ಹಿತಕ್ಕೆ ಹಾನಿ ಮಾಡಿಕೊಂಡು ಇಂಗ್ಲಿಷರು ದಯಾರ್ದ್ರ ಬುದ್ಧಿಯಿಂದ ನಮಗಾಗಿ ಉಪಕಾರ

ಮಾಡುತ್ತಿದ್ದಾರೆ; ಅವರ ರಾಜ್ಯ ನಮಗೊಂದು ದೈವೀ ವರಪ್ರಸಾದ - ಇದೇ ಅವರ ಹೃತ್ಪೂರ್ವಕ ಶ್ರದ್ಧೆ. ಇಂಥ ಅನುಕೂಲ ಹಿನ್ನೆಲೆಯಲ್ಲೆ, ಹಿಂದುಸ್ಥಾನದಲ್ಲಿ ರಾಜ್ಯಕ್ರಾಂತಿಯ ಇಚ್ಛೆಯನ್ನೇ ಕೊಲೆಗೈದು ರಾಜ್ಯ ಸುಧಾರಣೆಯ ಅಕ್ಕಿಹಿಟ್ಟಿನ ನೀರನ್ನೇ ಅಪ್ಪಟ ಹಾಲೆಂದು ಸದಾಕಾಲ ಕುಡಿಸುವ ಉದ್ದೇಶದಿಂದ ಎ. ಓ ಹ್ಯೂಮ್, ಹೆನ್ರಿ ಕಾಟನ್ ಪ್ರಭೃತಿಗಳು 1885ರಲ್ಲಿ 'ರಾಷ್ಟ್ರೀಯ ಕಾಂಗ್ರೆಸ್' ಪ್ರಾರಂಭಿಸಿದರು. ಸ್ವತಃ ವೈಸ್‌ರಾಯ್ ಸಾಹೇಬರೇ ಅದರ ಪರೋಕ್ಷ ನಿರ್ದೇಶಕರು ! ಆಗ 'ದೇವಿ ವಿಕ್ಟೋರಿಯಾ ಸಾರ್ವಭೌಮಿನಿ' ಎನ್ನುವುದೇ ಕಾಂಗ್ರೆಸ್ಸಿನ ಸ್ತೋತ್ರ; 'ಗಾಡ್ ಸೇವ್ ದಿ ಕಿಂಗ್' ಎನ್ನುವುದೇ ಪ್ರಾರ್ಥನೆ!

ಅಂತಹ ಸನ್ನಿವೇಶದಲ್ಲಿ ಸಂಪೂರ್ಣ ಸ್ವಾತಂತ್ರ್ಯದ ಘೋಷಣೆ ; ಸಶಸ್ತ್ರ ಕ್ರಾಂತಿ ಅಪರಿಹಾರ್ಯ ಎನ್ನುವ ದಿಟ್ಟತನ; ಆ ಮೂಲಕ ಶತ್ರುವಿನ ಹಾಗೂ ತಮ್ಮ ಪ್ರಾಣಗಳನ್ನು ಒಟ್ಟಿಗೆ ಗಂಡಾಂತರಕ್ಕೆ ಒಡ್ಡಿದ ಹಿಡಿಯಷ್ಟು ತರುಣರು ! 'ರಾಜದ್ರೋಹಿಗಳು, ಬಂಡುಕೋರರು' ಎಂದಿತ್ತು ರಾಜಸತ್ತೆ. ಹುಚ್ಚರು, ಮೂರ್ಖರು ಎಂದರು ತಥಾಕಥಿತ ಬುದ್ಧಿವಂತರು. ಇದು ಅನಿಷ್ಟ, ಆತ್ಮಘಾತಕ ಎಂದು ರಟ್ಟೆಹಿಡಿದು ಹಿಂದಕ್ಕೆಳೆಯತೊಡಗಿದರು, ನಮ್ಮ ಹಿತಚಿಂತಕರು! ಆದರೆ ಇದಾವುದನ್ನೂ ನಾವು ಲೆಕ್ಕಿಸಲಿಲ್ಲ; ನಮಗೆ ಮೈಮೇಲೆ ಪ್ರಜ್ಞೆ ಇರಲಿಲ್ಲ. ಇದಾವುದೂ ನಮಗೆ ಕೇಳಿಸಲಿಲ್ಲ. ನಮ್ಮ ಕಿವಿಗಳಿಗೆ ಬೀಳುತ್ತಿದ್ದ ಶಬ್ದಗಳೇ ಬೇರೆ - ಶ್ರೀಕೃಷ್ಣನದು, ಶಿವಾಜಿಯದು ; ಮ್ಯಾಟ್ಸಿನಿಯದು, ಗರಿಬಾಲ್ಡಿಯದು ! ಆ ಭೂತಕಾಲದ ವೀರವಾಕ್ಕುಗಳು ; 'ನೀವೇ ಧನ್ಯರು, ಧನ್ಯರು' ಎಂದೆನ್ನುವ ಅಜ್ಞಾತ ಭವಿಷ್ಯಕಾಲದ ಸ್ವಾಗತ ನುಡಿಗಳು! ಅದರ ಗುಂಗಿನಲ್ಲಿ ನಾವು ಮೈಮರೆತಿದ್ದೆವು.

'ಅರೆ, ಭಾವುರೇ ! ಏನು ಹುಡುಗಾಟ ? ಹುಚ್ಚು ಹಿಡಿಯಿತೇನು ? ಸಿಪಾಯಿ ಎಳೆದುಕೊಂಡು ಹೋಗುತ್ತಾನೆ; ನಾಲ್ಕು ಕಪಾಳಕ್ಕೆ ಬಿಗಿಯುತ್ತಾನೆ' ಎಂದು ದೊಡ್ಡ ಮನುಷ್ಯರು ಹೆದರಿಸುತ್ತಿದ್ದರು. ಅವರಿಗೆ ಮಿತ್ರಮೇಳದ ಹುಚ್ಚಾಸ್ಪತ್ರೆಯ ಉನ್ಮತ್ತ ರೋಗಿಗಳಾದ ನಾವೆನ್ನುತ್ತಿದ್ದೆವು : 'ಹುಚ್ಚು ಎಂದಿರಾ ? ನಿಜ, ನಿಜ !'

'ಬಂಧುಗಳೇ ! ಶ್ರೀಕೃಷ್ಣನಂತೆ, ಶ್ರೀರಾಮನಂತೆ ನನಗೂ ಸ್ವಾತಂತ್ರ್ಯದ ದಿವ್ಯ ಹುಚ್ಚು ಹಿಡಿದಿದೆ, ನಿಜ. ನಾನೀಗ ಉನ್ಮತ್ತನಾಗಿದ್ದೇನೆ; ಸ್ವದೇಶದ ಶತ್ರುಗಳ ರಕ್ತಕ್ಕಾಗಿ ಬಾಯಾರಿದ್ದೇನೆ. ಅದೇ ನನ್ನ ಅಮೃತ; ಅದನ್ನು ಕುಡಿದಾಗಲೇ ನಾನು ತೃಪ್ತ. ಸ್ವಾತಂತ್ರ್ಯದ ಕೈದಿ ನಾನು ; ನನ್ನನ್ನು ಕೂಡಿಟ್ಟರೂ ಚಿಂತೆಯಿಲ್ಲ, ಭಾರತದಲ್ಲಿ ಭಗವಾಧ್ವಜ ವಿಮುಕ್ತವಾಗಿ ಹಾರಾಡುವಂತಾಗಲಿ' ಎಂಬ ಅರ್ಥದ 'ಗೋವಿಂದ ಕವಿ'ಯ ಹಾಡನ್ನು ನಾವು ಹೇಳುತ್ತಿದ್ದೆವು.

ನಮಗೆ ಸ್ವಾತಂತ್ರ್ಯದ ಹುಚ್ಚು ಹಿಡಿದಿತ್ತು ನಿಜ, ಆದರೆ ಅದೇನು ರಕ್ತ ಪಿಪಾಸುವಾದ ಅನೈತಿಕ, ಅಧಾರ್ಮಿಕ, ರಾಕ್ಷಸೀ ಸ್ವಾತಂತ್ರ್ಯವೆ? ಎಂದಿಗೂ ಅಲ್ಲ. ದೇಶಾಭಿಮಾನ ಅತಿರೇಕವಾದರೆ ಅದೂ ಒಂದು ಅನೈತಿಕ ದುರ್ಗುಣ ಎಂಬುದು ನಿಚ್ಚಳವಾಗಿ ನಮಗೆ ಗೊತ್ತಿತ್ತು. ಹಿಂಸೆ- ಅಹಿಂಸೆ, ಸತ್ಯ- ಅಸತ್ಯ, ರಾಷ್ಟ್ರಹಿತ - ಲೋಕಹಿತ ಇವುಗಳಲ್ಲಿ ಯಾವುದೊಂದನ್ನೂ ನಾವು ಚರ್ಚಿಸದೆ ಬಿಟ್ಟಿರಲಿಲ್ಲ. ನಮ್ಮ ಸದಸ್ಯರ ಪೈಕಿ ಧರ್ಮ ಹಾಗೂ ವೇದಾಂತದ ಭಕ್ತರೂ ಇದ್ದರು. ಅವರಿಗೆ ಮೊದಮೊದಲು ಗುಪ್ತಸಂಸ್ಥೆ, ಶಸ್ತ್ರಯುದ್ಧ ಇತ್ಯಾದಿ ಶಬ್ದಗಳಲ್ಲೇ ಪಾಪದ ವಾಸನೆ ಹೊಡೆಯುತ್ತಿತ್ತು ! ಭಗವದನುಗ್ರಹ, ದೈವೀ ಅಧಿಷ್ಠಾನ ಜಪತಪ ಸಾಧನಗಳ ಮೂಲಕ ಪಾರಮಾರ್ಥಿಕ ಮುಕ್ತಿ ಗಳಿಸುವುದೇ ನಿಜವಾದ ಸ್ವಾತಂತ್ರ್ಯ ಎಂಬುದು ಅವರ ವಾದ. ಆದರೆ ಅದಕ್ಕೆ ನನ್ನ ಉತ್ತರ ಸಿದ್ಧವಾಗಿತ್ತು. ಮನುಷ್ಯಜಾತಿಯ ಹಿತವೇ ಸಮಸ್ತ ಒಳಿತರ ಒರೆಗಲ್ಲು.

ಯಾವ ಸತ್ಯದಿಂದ ಜನಹಿತ ಆಗುತ್ತದೋ ಅದೇ ಸತ್ಯ, ಧರ್ಮ, ಸದ್ಗುಣ. ಆದರೆ ಯಾವ ಸತ್ಯದಿಂದ ಕಳ್ಳನಿಗೆ ರಕ್ಷಣೆಯಾಗಿ, ಸಂನ್ಯಾಸಿಗೆ ಶಿಕ್ಷೆಯಾಗುತ್ತದೋ ಅದು ಅಸತ್ಯ, ಅಧರ್ಮ, ದುರ್ಗುಣ.

ದುಷ್ಟಶಕ್ತಿಯು ಸತ್ಯದ ಪಕ್ಷವನ್ನು ಮೆಟ್ಟಿ ನಿಂತಾಗ, ವಾಕ್ ಸ್ವಾತಂತ್ರ್ಯವನ್ನು ಕಿತ್ತುಕೊಂಡಾಗ, ಸದಾಚಾರಗಳನ್ನೇ ಅಪರಾಧವೆಂದು ಗಣಿಸುವಾಗ, ಅದನ್ನು ಹತ್ತಿಕ್ಕಲು ಅಗತ್ಯಬಿದ್ದರೆ ರಹಸ್ಯವಾಗಿಯೇ ನ್ಯಾಯದ ಪಕ್ಷ ಒಂದುಗೂಡಬೇಕು ; ಸಂಘಟಿತವಾಗಬೇಕು. ಅದೇ ಧರ್ಮ. ಶ್ರೀಕೃಷ್ಣನು ನಂದಗೋಕುಲ ದಲ್ಲಿ ಗುಪ್ತವಾಗಿಯೇ ಬೆಳೆದನಲ್ಲವೆ ? ಆ ಸತ್ಯವನ್ನು ನಂದನೊ, ವಾಸುದೇವನೊ ಕಂಸನಿಗೆ ತಿಳಿಸಿದ್ದರೆ, ಅದು ಅಕ್ಷಮ್ಯ ಅಧರ್ಮ ಆಗುತ್ತಿತ್ತು. ಆದ್ದರಿಂದ ಆ ಸಂದರ್ಭದಲ್ಲಿ ಗುಪ್ತತೆಯೇ ಸರಿಯಾದ ನೀತಿ, ಸರಿಯಾದ ಧರ್ಮ. ಗುಪ್ತತೆ ಎನ್ನುವುದು ದುರ್ಗುಣವೂ ಅಲ್ಲ, ಸದ್ಗುಣವೂ ಅಲ್ಲ. ಅದರ ಉಪಯೋಗ ಲೋಕಹಿತಕ್ಕೋ ಲೋಕನಾಶಕ್ಕೋ ಎನ್ನುವುದರ ಮೇಲೆಯೇ ಅದರ ಒಳಿತು - ಕೆಡುಕುಗಳು ನಿಂತಿವೆ.

ಶಸ್ತ್ರಯುದ್ಧದ ವಿಚಾರವೂ ಅಷ್ಟೆ. ರಾವಣ, ಕಂಸರ ಕೈಯಲ್ಲಿ ರಕ್ತದಾಹಿಯಾಗಿದ್ದ ಶಸ್ತ್ರಗಳು ರಾಮ, ಕೃಷ್ಣರ ಕೈಯಲ್ಲಿ ಪಾವನವಾಗಿ ಪೂಜಾರ್ಹವಾಗಿದ್ದವು. ದೇಶಾಭಿಮಾನವೂ ಅಷ್ಟೆ. ಅಧಿಕಾಧಿಕ ಜನಹಿತ ಕ್ಕಾಗಿ, ರಾಷ್ಟ್ರೀಯ ಅಧಿಕಾರಗಳ ರಕ್ಷಣೆ ಹಾಗೂ ವಿಕಾಸಕ್ಕಾಗಿ ಹೋರಾಡಲು ಪ್ರೇರಣೆ ನೀಡುವ ದೇಶಾಭಿ ಮಾನ ನಿಜಕ್ಕೂ ಧರ್ಮಸಮ್ಮತ, ಪ್ರಶಂಸನೀಯ. ಪರದೇಶಗಳನ್ನು ಆಕ್ರಮಿಸಿ ಜನಕ್ಷೋಭೆ ನಿರ್ಮಿಸುವ, ಶೋಷಣೆ ನಡೆಸುವ ದೇಶಾಭಿಮಾನ ಅಧರ್ಮ, ದಂಡನೀಯ.

ದೇವಾಸುರರ, ಇಂದ್ರ - ವೃತ್ರಾಸುರರ, ರಾಮ - ರಾವಣರ ಸಂಘರ್ಷಗಳಿಂದ ಮೊದಲುಗೊಂಡು ಜಗತ್ತಿನ ಸಮಸ್ತ ದೇಶಗಳ ಪ್ರಾಚೀನ, ಅರ್ವಾಚೀನ ಸ್ವಾತಂತ್ರ್ಯ ಹೋರಾಟಗಳವರೆಗೂ ಇತಿಹಾಸದ ಪುಟವನ್ನೂ ನಾನು ತಿರುವಿಹಾಕಿ ದಣಿದೆ. ಆದರೆ ಬೇರೆ ದಾರಿ ಕಾಣಲಿಲ್ಲ. ಅವೆಲ್ಲದರ ನಿಷ್ಕರ್ಷೆ ಒಂದೇ ಒಂದು - ಧರ್ಮಕ್ಕಾಗಿ ಸಾಯುವುದು ಹಿರಿದಲ್ಲ ; ಧರ್ಮಕ್ಕಾಗಿ ಗೆಲ್ಲುವುದೇ ಶ್ರೇಷ್ಠ ! ಅದಕ್ಕಿರುವ ಭಯಂಕರ, ಆದರೆ ಅಪರಿಹಾರ್ಯ ಮಾರ್ಗ - ಸಶಸ್ತ್ರ ಹೋರಾಟ. ಕುರುಡರಂತೆ, ಕಿವುಡರಂತೆ, ಹುಡು ಗಾಟಿಕೆಯಿಂದ ನಾವು ಕೈಗೊಂಡ ನಿರ್ಧಾರ ಇದಲ್ಲ. ಕ್ರಾಂತಿಯಜ್ಞದಲ್ಲಿ ಜೀವನದ ಹವಿಸ್ಸು ಅರ್ಪಿಸಲು ನಾವು ಸುಮ್ಮಸುಮ್ಮನೆ ಸಿದ್ಧರಾಗಲಿಲ್ಲ. ಐತಿಹಾಸಿಕ ಹಾಗೂ ನೈಸರ್ಗಿಕ ದೃಷ್ಟಿಯಿಂದ ಯುಕ್ತಾಯುಕ್ತತೆ ಗಳನ್ನು ಯೋಚಿಸಿ ನಿಶ್ಚಿತ ಮಾಡಿಕೊಂಡೇ ಹೆಜ್ಜೆ ಇಟ್ಟೆವು. ಏನೋ ನಮ್ಮ ಖುಷಿಗಾಗಿ, ತಾತ್ಕಾಲಿಕ ಮನಸ್ಸಿ ನಿಂದ ಅಲ್ಲ ; ಬುದ್ಧಿಪೂರ್ವಕವಾಗಿ ! ಇನ್ನು ಬೇರೆ ಮಾರ್ಗವಿಲ್ಲ ಎಂಬುದಕ್ಕಾಗಿ !

ರಾಜಕೀಯ ದಾಸ್ಯದ ನೆರಳಲ್ಲಿ ಆತ್ಮೋನ್ನತಿಯಾಗಲಿ, ಧರ್ಮೋನ್ನತಿಯಾಗಲಿ ಸಾಧ್ಯವಲ್ಲದ ಮಾತು. ಬಲವಿಲ್ಲದ ತತ್ವ, ಶಕ್ತಿಯಿಲ್ಲದ ನ್ಯಾಯ, ಪ್ರಯತ್ನವಿಲ್ಲದ ದೈವ, ಭೌತಿಕವಿಲ್ಲದ ಆತ್ಮಿಕ, ಐಹಿಕವಿಲ್ಲದ ಪಾರಮಾರ್ಥಿಕ ಅಪೂರ್ಣ ಮತ್ತು ಅನರ್ಥಕಾರಿ.

ನಾವು ಪೂಜಿಸಹೊರಟಿದ್ದ ಸ್ವಾತಂತ್ರ್ಯ ಲಕ್ಷ್ಮಿಯ ಸ್ವರೂಪವಾದರೂ ಎಂಥದು ? ವ್ಯಕ್ತಿ, ರಾಷ್ಟ್ರ ಹಾಗೂ ಮಾನವತೆಯ ಐಹಿಕ ಹಾಗೂ ಪಾರಲೌಕಿಕ ಕರ್ತವ್ಯಗಳ ಸಹಜ ಸಮನ್ವಯ ಹಾಗೂ ಸುಂದರ ಪರಿಪೂರ್ಣ ಸ್ವರೂಪವೇ ಸ್ವಾತಂತ್ರ್ಯ. ಅತ್ಯುದಾತ್ತ ಹಾಗೂ ಅತ್ಯಂತ ವ್ಯಾಪಕ ಅರ್ಥವನ್ನೊಳಗೊಂಡದ್ದು ಅದು. ಸ್ವಾತಂತ್ರ್ಯ ಲಕ್ಷ್ಮಿಯನ್ನು ಕುರಿತು ನಾನು ರಚಿಸಿದ ಹಾಗೂ ನಾವೆಲ್ಲರೂ ಹಾಡುತ್ತಿದ್ದ ಸ್ತೋತ್ರವೇ ಅದಕ್ಕೆ ಸಾಕ್ಷಿ.

**- ಶ್ರೀಮಹನ್ಮಂಗಳೆ ಶುಭಗುಣಸನ್ನುತಳೆ ಜಯ ನಿನಗೆ**

ಯಶೋವನಿತೆ ಸ್ವಾತಂತ್ರ್ಯ ಭಗವತಿಯೆ ನಮೋ ನಿನ್ನಡಿಗೆ
ನೀತಿಸಂಪನ್ನೆ ರಾಷ್ಟ್ರೀಯ ಚೇತನದ ಮೂರ್ತಿ ಹೇ
ಸ್ವಾತಂತ್ರ್ಯ ಭಗವತಿಯೆ ಸನ್ಮತಿಯೆ ಸಾಮ್ರಾಜ್ಞಿರೂಪೆ !
ಅವುದಾವುದುತ್ತಮ ಉದಾತ್ತ ಮಹನ್ಮಧುರವೋ
ಸ್ವಾತಂತ್ರ್ಯ ಭಗವತಿಯೆ ನಿನ್ನದಹುದದ್ದು ಪರಿವಾರವು
ಯೋಗಿಜನ ಘೋಷಿಸುವ ಮೋಕ್ಷ ಮುಕ್ತಿಗಳೆಲ್ಲವು
ಸ್ವಾತಂತ್ರ್ಯ ಭಗವತಿಯೆ ನೀನೆ ; ನೀ ಪರಬ್ರಹ್ಮವು !

ಹೇ ಶತ್ರುರಕ್ತರಂಜಿತೆ ! ಸುಜನ ಪೂಜಿತೆ ! ಶ್ರೀ ಸ್ವತಂತ್ರತೆ
ನಿನಗಾಗಿ ಮರಣವದುವೆ ಜನನ
ನೀನಿರದ ಜನ್ಮವಹುದು ಮರಣ
ನಿನಗಿದೀ ಜೀವನ ಸಮರ್ಪಣ
ಬಾಹು ನೀಡಿ ಭರತಭೂಮಿಯನು ಬಿಡದಾಲಿಂಗಿಸು
ಸ್ವಾತಂತ್ರ್ಯ ಭಗವತಿಯೆ ಸಾಷ್ಟಾಂಗ ನಮನ ಸ್ವೀಕರಿಸು !

ಇಂಗ್ಲಿಷರನ್ನೂ ಒಳಗೊಂಡೇ ಅಖಿಲ ಮಾನವತೆಯ ಹಿತ, ಮನುಷ್ಯತ್ವದ ಪರಮ ವಿಕಾಸ ಆಗಲಿ ಎಂಬುದಕ್ಕಾಗಿ ನಮಗೆ ಸ್ವಾತಂತ್ರ್ಯ ಬೇಕಾಗಿತ್ತು. ಮನುಷ್ಯನ ಆತ್ಮಿಕ ಉನ್ನತಿ ಮಾತ್ರವಲ್ಲ, ಮಾನಸಿಕ ಹಾಗೂ ನೈತಿಕ ಉನ್ನತಿ ಸಹ ರಾಜಕೀಯ ಸ್ವಾತಂತ್ರ್ಯದಲ್ಲಿ ಮೊಟಕಾಗುತ್ತದೆ ; ಹಾಗಾಗದಿರಲಿ ಎಂಬುದಕ್ಕಾಗಿ ನಮಗೆ ಸ್ವಾತಂತ್ರ್ಯ ಬೇಕಾಗಿತ್ತು. ಮೂವತ್ತು ಕೋಟಿ ಮಾನವರ ಮಾನಸಿಕ ವಿಕಾಸವನ್ನು ಹತ್ತಿಕ್ಕುವ ಭಾರತದ ದಾಸ್ಯತೆ ಇಡೀ ಮನುಷ್ಯ ಜಾತಿಯ ಅಧಃಪತನಕ್ಕೆ ಕಾರಣ ಎಂಬುದಕ್ಕಾಗಿ ಆ ದಾಸ್ಯರಕ್ಕಸನ ಶಿರಶ್ಛೇದ ಮಾಡುವುದು - ರಾಮನಿಗೆ ರಾವಣನ ಶಿರಶ್ಛೇದವು ಕರ್ತವ್ಯ ಎನಿಸಿದಂತೆ, ಕೃಷ್ಣನಿಗೆ ಕಂಸನ ಶಿರಶ್ಛೇದವು ಕರ್ತವ್ಯ ಎನಿಸಿದಂತೆ - ನಮಗೂ ರಾಜಕೀಯ ಹಾಗೂ ಧಾರ್ಮಿಕ ಕರ್ತವ್ಯ ಎನಿಸಿತ್ತು. ಅದಕ್ಕಾಗಿ ಸ್ವಾತಂತ್ರ್ಯವನ್ನು ಶುದ್ಧ ದೈವೀ ಸುಸ್ವರೂಪದಲ್ಲಿ ನಾವು ಕಂಡೆವು. ಯಾವ ಗರ್ಜನೆ ಕೇಳಿಯೇ ಭಾರಿ ಭಾರಿ ಪುಢಾರಿಗಳೂ ಭೀತಿಯಿಂದ ನೆಲಕ್ಕೆ ಕುಸಿದು ಬೀಳುತ್ತಿದ್ದರೋ ಆ 'ಸ್ವಾತಂತ್ರ್ಯ ಲಕ್ಷ್ಮೀ ಕೀ ಜಯ್' ಘೋಷಣೆಯನ್ನು ಹಿಂದುಸ್ಥಾನದ ಮೂಲೆ ಮೂಲೆಗಳಲ್ಲೂ ಪ್ರತಿಧ್ವನಿಸುವಂತೆ ಮಾಡಿದೆವು. ಆ ಮಂತ್ರೋಚ್ಚಾರ ಮಾಡುತ್ತಾ ಸೆರೆಮನೆ ನೇರಿದೆವು; ಫಾಸಿಯ ಹಲಗೆಯನ್ನೇರಿದೆವು; ಕ್ಷುದ್ರ ವೈಯಕ್ತಿಕ ಸ್ವಾರ್ಥ ಮೋಹಗಳೆಲ್ಲವನ್ನೂ ನಗುನಗುತ್ತಾ ಗಾಳಿಗೆ ತೂರಿದೆವು.

1901ರ ಜನವರಿ 19ರಂದು ಮೆಟ್ರಿಕ್ ಫಲಿತಾಂಶ ಬಂತು. ನಾನು ತೇರ್ಗಡೆಯಾಗಿದ್ದೆ. ಅದನ್ನು ಕೇಳುತ್ತಲೇ ಅಣ್ಣ ಮತ್ತು ಅತ್ತಿಗೆಗೆ ಮಾತ್ರವಲ್ಲ, ಇಡೀ ಮಿತ್ರಮೇಳಕ್ಕೇ ಆನಂದ. ಆ ಸಂಸ್ಥೆಯ ಸದಸ್ಯರ ಪೈಕಿ ಮೆಟ್ರಿಕ್ ಆದವರಲ್ಲಿ ನಾನೇ ಮೊದಲಿಗ ! ಅದೂ ಮೊದಲ ಸಲಕ್ಕೆ ! ಅದರ ದೂರಗಾಮಿ ಪರಿಣಾಮಗಳೂ ಅವರ್ಣನೀಯ. ನಮ್ಮ ಸಂಸ್ಥೆಯ ರಾಜಕಾರಣದ ಹುಚ್ಚಿನಿಂದ ವಿದ್ಯಾರ್ಥಿಗಳ ಓದು ಹಾಳಾಗುತ್ತದೆ ಎಂದು ದಿನಬೆಳಗಾದರೆ ದೂರುತ್ತಿದ್ದ ಶಿಕ್ಷಕರು, ಪಾಲಕಪೋಷಕರು, ಮನೆಯ ಹಾಗೂ ಊರಿನ ಹಿರಿಯರು, ಎಲ್ಲರೂ ಒಂದೇ ಹೊಡೆತಕ್ಕೆ ಬಾಯಿ ಮುಚ್ಚಿಕೊಂಡರು ! ಅದರಲ್ಲೂ, ನಾನು

ಮೂರು ಹೊತ್ತೂ ರಾಜಕೀಯ ಓಡಾಟದಲ್ಲಿದ್ದವನು ; ಪ್ರಮುಖ ಮುಂದಾಳು ; ಎಲ್ಲರ ಕಣ್ಣೂ ನನ್ನ ಮೇಲೇ ! ಅಕಸ್ಮಾತ್ ನಾನೇ ಮೊದಲಿಗೆ ನಾಪಾಸಾಗಿ ಹೋಗಿದ್ದರೆ, ಊರಿನ ಸಮಸ್ತರೂ ಸಂಸ್ಥೆಯ ಘನತೆಯನ್ನು ಧೂಳೀಪಟ ಮಾಡದೇ ಬಿಡುತ್ತಿರಲಿಲ್ಲ. ಜತೆಗೆ, ಪಾಲಕರಂತೂ ವಿದ್ಯಾರ್ಥಿಗಳಿಗೆ ಮಿತ್ರ ಮೇಳದ ಸಂಬಂಧ ತಪ್ಪಿಸಲು, ಆಕಾಶವೇ ಕಳಚಿಬಿದ್ದಷ್ಟು ಅವಾಂತರ ಎಬ್ಬಿಸಿ, ನಮ್ಮೆಲ್ಲರನ್ನೂ ನುಂಗಿ ನೀರು ಕುಡಿಯಲು ಬಾಯಿ ತೆರೆದೇ ಬಿಡುತ್ತಿದ್ದರು. ಸದ್ಯ, ಅಷ್ಟೆಲ್ಲ ಅನರ್ಥ ತಪ್ಪಿತು.

ನನ್ನ ಯಶಸ್ಸಿನಲ್ಲಿ ವಿಶೇಷ ಮಹತ್ವದ ಸಂಗತಿಯೂ ಒಂದಿತ್ತು. ನಾನು ಕಾಲೇಜಿಗೆ ಸೇರುವವನಿದ್ದೆ. ನಾನು ಕಾಲೇಜು ಮೆಟ್ಟಿಲು ಹತ್ತಿದೆ ಎಂದರೆ, ಮಿತ್ರಮೇಳದ ತತ್ವವೂ ಹತ್ತಿತು ಎಂತಲೇ ಲೆಕ್ಕ. ನಾನು ಅದಕ್ಕೆ ತಕ್ಕ ಯೋಜನೆಯನ್ನು ತಯಾರಿಸಿಕೊಂಡಿದ್ದೆ. ನಾಸಿಕ ಕೇವಲ ಜಿಲ್ಲಾ ಕೇಂದ್ರ. ಅಲ್ಲಿಂದ ಆ ಜಿಲ್ಲೆಗೆ ಮಾತ್ರ ಕ್ರಾಂತಿತತ್ವ ಹರಡಬಹುದಾಗಿತ್ತು. ಎರಡು ವರ್ಷಗಳಲ್ಲಿ ಆ ಕೆಲಸ ಪೂರೈಸಿದ್ದೆವು. ಈಗ ಮಹಾ ರಾಷ್ಟ್ರದ ಎಲ್ಲ ಜಿಲ್ಲೆಗಳಿಗೂ ಕಾರ್ಯ ಹಬ್ಬಿಸಬೇಕಾಗಿತ್ತು. ಆದರೆ ಅದಕ್ಕಾಗಿ ಇಡೀ ಪ್ರಾಂತ ಸುತ್ತುವ ದ್ರಾವಿಡ ಪ್ರಾಣಾಯಾಮ ಯಾರು ಮಾಡುತ್ತಾರೆ ? ಇಡೀ ಪ್ರಾಂತದ ಬುದ್ಧಿವಂತ ಯುವಕವರ್ಗ ಕಾಲೇಜುಗಳಿರುವ ಸ್ಥಾನದಲ್ಲಿ ಒಟ್ಟಿಗೆ ಕೈಗೆ ಸಿಕ್ಕುತ್ತದೆ. ಅವರಿಗೆ ಕ್ರಾಂತಿಯ ಕಿಡಿ ತಾಗಿಸಿಬಿಟ್ಟರೆ ಆಯಿತು. ಅದನ್ನು ಪ್ರಾಂತದಾದ್ಯಂತ ಇರುವ ತಂತಮ್ಮ ಊರುಗಳಿಗೆ ಅವರು ಕೊಂಡೊಯ್ಯುತ್ತಾರೆ. ವಿಶೇಷವಾಗಿ, ಮುಂದೆ ಪದವಿ ಪಡೆದ ಮೇಲೆ ಆಯಾ ಸ್ಥಾನದಲ್ಲಿ ನಾಯಕರೂ, ಗಣ್ಯರೂ ಆಗುವವರೆಂದರೆ ಈ ಜನರೇ. ಅದರಿಂದ ಎಲ್ಲ ಜಿಲ್ಲೆಗಳಲ್ಲೂ ಕ್ರಾಂತಿಸಂಸ್ಥೆ ಹಾಗೂ ಅದರ ವಿಚಾರ ಚೆನ್ನಾಗಿ ಬೇರುಬಿಟ್ಟು, ಆಯಾ ಸ್ಥಳಗಳ ನೇತೃತ್ವ ಸಹಜವಾಗಿ ಕ್ರಾಂತಿಪಕ್ಷದ ವಶವಾಗುತ್ತದೆ. ಅದರಿಂದ ಸಂಸ್ಥೆಯ ಘನತೆ ಗೌರವಗಳು ಹೆಚ್ಚಿ, ನಾಲ್ಕಾರು ವರ್ಷಗಳೊಳಗೆ ಇಡೀ ಪ್ರಾಂತದಲ್ಲಿನ ರಾಜಕಾರಣದ ಸ್ವರೂಪವನ್ನೇ ಪರಿವರ್ತಿಸ ಬಹುದು. ನನಗೆ ಕಾಲೇಜು ಪ್ರವೇಶಿಸುವ ಅರ್ಹತೆ ಬಂದಿತು ಎಂದರೆ, ನಮ್ಮ ಸಂಸ್ಥೆಗೂ ಒಂದು ಜಿಲ್ಲೆಯ ಸೀಮಿತ ಆವರಣ ಬಿಟ್ಟು, ಪ್ರಾಂತಮಟ್ಟದ ರಾಜಕಾರಣಕ್ಕೆ ಪ್ರವೇಶಿಸುವ ಅರ್ಹತೆ ದೊರೆಯಿತು ಎಂತಲೇ ಅರ್ಥ !

ನಾಸಿಕದ ಮಿತ್ರಮೇಳದ ಆಶ್ರಯದಲ್ಲಿ ಒಂದು ವಿಶೇಷ ಬೈಠಕ್ ಏರ್ಪಟ್ಟಿತು. ಅದೊಂದು ಆತ್ಮೀಯ ಅಭಿನಂದನೆ ಹಾಗೂ ಬೀಳ್ಕೊಡುಗೆಯ ಪ್ರಸಂಗ. ಶಪಥಬದ್ಧ ಸದಸ್ಯರ ಜತೆಗೆ ಪ್ರತ್ಯಕ್ಷ - ಪರೋಕ್ಷವಾಗಿ ಸಹಕಾರ, ಪ್ರೋತ್ಸಾಹ ನೀಡುತ್ತಿದ್ದ ವಕೀಲರು, ಪತ್ರಿಕಾ ಸಂಪಾದಕರು ಮುಂತಾದ ಊರಿನ ಹಿರಿಯರೂ ಆಗಮಿಸಿದ್ದರು. ಆ ಸಭೆಯಲ್ಲಿ ನಾನು ಮಿತ್ರಮೇಳದ ಧ್ಯೇಯ ಧೋರಣೆಗಳನ್ನೂ, ಸಾಧನತಂತ್ರಗಳನ್ನೂ ವಿಶದವಾಗಿ, ಆವೇಶ ಪೂರ್ಣವಾಗಿ ಮುಂದಿರಿಸಿದೆ. ಸರ್ವರಿಂದಲೂ ಅಭಿನಂದನೆ ಸಂದಿತು. ಸರ್ವ ರಿಂದಲೂ ಬೀಳ್ಕೊಂಡಾಯಿತು. 1902ರ ಜನವರಿ 24ರಂದು ಪುಣೆಯ ಫರ್ಗುಸನ್ ಕಾಲೇಜಿನ ವಿದ್ಯಾರ್ಥಿ ಯಾಗಿ ಸೇರಿದೆ.





# ಹವಿಸ್ಸು ಎಂಟು

ಪುಣೆಯ ಫರ್ಗುಸನ್ ಕಾಲೇಜು ದೇಶಭಕ್ತ ವಿದ್ಯಾರ್ಥಿಗಳ ಆಕರ್ಷಣೆಯ ಕೇಂದ್ರವಾಗಿತ್ತು. ಏಕೆಂದರೆ ಲೋಕಮಾನ್ಯ ತಿಲಕರು ಸೇವೆ ಸಲ್ಲಿಸಿದ ಸಂಸ್ಥೆ ಅದು. ಆಗಿನ ಮಹಾರಾಷ್ಟ್ರ, ಮಧ್ಯಪ್ರಾಂತ, ವರ್ಹಾಡ್ ಹಾಗೂ ಕರ್ನಾಟಕದಿಂದ ಪ್ರತಿಭಾವಂತ ತರುಣರು ಶಿಕ್ಷಣಕ್ಕಾಗಿ ಅಲ್ಲಿಗೆ ಬರುತ್ತಿದ್ದರು.

ನಾನು ಕ್ರಾಂತಿಕಾರಿ. ನನ್ನ ಬದುಕು ಸದಾ ಸಂಘರ್ಷಮಯ. ಅದರಿಂದ ಕಾಲೇಜಿನಲ್ಲೂ ವಸತಿ ಗೃಹದಲ್ಲೂ ನನ್ನ ಚಟುವಟಿಕೆಗಳಿಗೆ ಕಳೆಯೇರಿತು. ವಸತಿಗೃಹದ ಉತ್ತರ ಭಾಗದ ಕೊಠಡಿಗಳು ಹೆಚ್ಚು ಸೌಕರ್ಯಗಳಿಂದ ಕೂಡಿದ್ದವು. ಆದರೆ ದೊಡ್ಡ ತರಗತಿಗಳ ಒರಟು ವಿದ್ಯಾರ್ಥಿಗಳೇ ಅವನ್ನು ಆಕ್ರಮಿಸಿ ಕೊಳ್ಳುವುದು ಮಾಮೂಲಾಗಿಹೋಗಿತ್ತು. ಅವರನ್ನು ಎದುರಿಸುವ ಧೈರ್ಯ ಯಾರಿಗೂ ಇರಲಿಲ್ಲ. ಆ ಅನ್ಯಾಯದ ವಿರುದ್ಧ ನಾನು ಧ್ವನಿ ಎತ್ತಿದೆ. ಅವರಿಗೆ ನನ್ನ ಮೊದಲ ಅಸ್ತ್ರ 'ನಾರ್ತ್‌ವಿಂಗ್ ಅರಿಸ್ಟೋಕ್ರಸಿ' (ಉತ್ತರ ಭಾಗದ ಸಾಹುಕಾರ ವರ್ಗ) ಎಂಬ ಅಡ್ಡ ಹೆಸರು. ಇಡೀ ವಿದ್ಯಾರ್ಥಿವರ್ಗದಲ್ಲಿ ಅದು ಪ್ರಚಾರ ವಾಗಿ ಹೋಯಿತು. ಹೊಸದಾಗಿ ಬಂದವನೊಬ್ಬ ಇಷ್ಟು ಧೈರ್ಯ ಮಾಡಿದನಲ್ಲ ಎಂದು ಆ ಹಳೆಯ ಹುಲಿಗಳಿಗೆಲ್ಲ ಕಣ್ಣುರಿ, ಹೊಟ್ಟೆಯುರಿ! ನಾಲ್ಕಾರು ಬಾರಿ ಅವರು ಬೆದರಿಕೆ ಹಾಕಿದ್ದೂ ಉಂಟು. ಆದರೆ ಅದಕ್ಕಿಂತ ಹೆಚ್ಚು ಮುಂದುವರಿಯಲಿಲ್ಲ. ತಮ್ಮ ಪ್ರತಿಪಕ್ಷದವರೆಲ್ಲ ಮಂಚದ ಕೆಳಗೆ ಕಲ್ಲಿನ ರಾಶಿ ಕೂಡಿಟ್ಟು ಕೊಂಡು ಕಾಯುತ್ತಿದ್ದ ಸುದ್ದಿ ಅವರಿಗೆ ಗೊತ್ತಿತ್ತು! 'ಈ ಸಂಚಿನಲ್ಲಿ ಸಾವರಕರ್ ಕೈವಾಡ ಇಲ್ಲವೆಂದು ಹೇಳುವುದಕ್ಕೆ ಆಗುವುದಿಲ್ಲ' ಎಂದು ತಮ್ಮಲ್ಲೇ ಮಾತಾಡಿಕೊಳ್ಳುತ್ತಿದ್ದರು. ಪಾಪ, ನೇರವಾಗಿ ಆರೋಪಿ ಸಲೂ ಅವರಿಗೆ ಹೆದರಿಕೆ!

ಕಾಲೇಜಿನ ಕ್ರೀಡಾಸಂಘದಲ್ಲೂ ಅವ್ಯವಸ್ಥೆ ಇತ್ತು. ಚುನಾವಣೆಗೆ ನಿಲ್ಲುವವರೂ ಗೆಲ್ಲುವವರೂ ಮೇಲಿನ ತರಗತಿಗಳ ವಿದ್ಯಾರ್ಥಿಗಳೇ. ಬೇರೆಯವರನ್ನು ಅವರು ಸಹಿಸರು. ಅವರ ಬೆದರಿಕೆಯೆದುರು ಕಿರಿಯ ಕ್ರೀಡಾಪಟುಗಳು ತಲೆಯೆತ್ತುವಂತಿರಲಿಲ್ಲ. ಅದರ ವಿರುದ್ಧವೂ ಬಂಡಾಯ ಪ್ರಾರಂಭಿಸಿದೆ; ಜಯಭೇರಿ ಬಾರಿಸಿದೆ. ಹಳಬರ ಪಾಳೆಯಗಾರಿಕೆಗೆ ಆ ವರ್ಷವೇ ಇತಿಶ್ರೀ ಆಯಿತು. ವಾರ್ಷಿಕ ಸಮ್ಮೇಳನ, ನಾಟಕ ಪ್ರದರ್ಶನ ಇತ್ಯಾದಿಗಳಲ್ಲೂ ನನ್ನ ಪ್ರಮುಖ ಪಾತ್ರ ಇರುತ್ತಿತ್ತು.

ವಸತಿಗೃಹದ ವಿದ್ಯಾರ್ಥಿಗಳಿಗಾಗಿ ನಾಲ್ಕೈದು ಭೋಜನಶಾಲೆ (ಕ್ಲಬ್) ಗಳ ವ್ಯವಸ್ಥೆ ಇತ್ತು. ನಾನು

ಮೊದಲು ಸೇರಿದ್ದು ಮಹಾರಾಷ್ಟ್ರ ಪದ್ಧತಿಯ ಊಟ ಇದ್ದ ಒಂದನೆ ಕ್ಲಬ್‌ಗೆ. ಅಲ್ಲೊಂದು ಛತ್ರಪತಿ ಶಿವಾಜಿ ಮಹಾರಾಜರ ಭಾವಚಿತ್ರ ಇತ್ತು; ಪ್ರತಿ ಶುಕ್ರವಾರ ಅದಕ್ಕೆ ಸಾಮೂಹಿಕ ಪೂಜೆ ನಲ್ಲಿಸುವ ವ್ಯವಸ್ಥೆ ಜಾರಿಗೆ ತಂದೆ. ಸಾಮೂಹಿಕ ಹಾಡು ಇಲ್ಲದೆ ಪೂಜೆಗೆ ಶೋಭೆಯಿಲ್ಲ. ಅದಕ್ಕಾಗಿ 1902ರ ಫೆಬ್ರವರಿ ತಿಂಗಳಲ್ಲಿ ಒಂದು ಗೀತೆಯನ್ನೂ ರಚಿಸಿಕೊಟ್ಟೆ.

**ಆರ್ಯಾಂಚಾ ದೇಶಾವರಿ ಮ್ಲೇಂಛಾಚಾ ಘಾಲಾ । ಆಲಾ ಆಲಾ ಸಾವಧ ಹೋ ಶಿವಭೂಪಾಲಾ**
**ಸದ್ಗದಿತಾ ಭೂಮಾತಾ ದೇ ತುಜ ಹಾಂಕೇಲಾ । ಕರುಣಾರವ ಭೇದುನಿ ತವ ಹೃದಯ ನ ಕಾ ಗೇಲಾ?**
**ಜಯದೇವ ಜಯದೇವ ಜಯಜಯ ಶಿವರಾಯಾ । ಯಾ ಯಾ ಅನನ್ಯ ಶರಣಾ ಆರ್ಯಾ ತಾರಾಯಾ॥**

*(ಆರ್ಯ ದೇಶದ ಮೇಲೆ ಮ್ಲೇಚ್ಛರು ದಂಡೆತ್ತಿ ಬರುತ್ತಿದ್ದಾರೆ; ಓ ಶಿವಛತ್ರಪತಿ, ಜಾಗೃತನಾಗು ! ಭೂಮಾತೆ ನಿನ್ನನ್ನು ಗದ್ಗದ ಕಂಠದಿಂದ ಕರೆಯುತ್ತಿದ್ದಾಳೆ; ಆ ಕರುಣಾರವ ಇನ್ನೂ ನಿನ್ನ ಹೃದಯವನ್ನು ಮುಟ್ಟಿಲ್ಲವೇಕೆ? ನಿನ್ನ ಆಶ್ರಿತರಾದ ಆರ್ಯರನ್ನು ರಕ್ಷಿಸಲು ಬಾ.)*

- ಎಂಬ ಸಾಲುಗಳು ಭಾವಪೂರ್ಣ ಕಂಠದಿಂದ ಕೇಳಿಬರತೊಡಗಿದವು.

ನಮ್ಮ ಕ್ಲಬ್‌ನಲ್ಲಿ ಒಂದು ಬರಹಗಾರರ ಗುಂಪು ಕೂಡಿಸಿದ್ದಾಯಿತು. ಒಂದು ಹಸ್ತಲಿಖಿತ ವಾರಪತ್ರಿಕೆ ಪ್ರಾರಂಭಿಸಿದೆವು. ದೇಶಾಭಿಮಾನ ಹೊಮ್ಮಿಸುವ ಲೇಖನಗಳೂ ಕವನಗಳೂ ಅದರಲ್ಲಿ ಬರತೊಡಗಿದವು. ಓದುಗರ ತರುಣ ಹೃದಯಗಳು ದೇಶಪ್ರೇಮದಿಂದ ಅರಳತೊಡಗಿದವು ; ದಾಸ್ಯದ ವಿರುದ್ಧ ಕೆರಳತೊಡಗಿದವು. ಗುಣಾಢ್ಯರೂ, ಉತ್ಸಾಹಿಗಳೂ ನನ್ನ ನಿಕಟ ಸ್ನೇಹವಲಯ ಪ್ರವೇಶಿಸಿದರು. ದಾಜಿ ನಾಗೇಶ ಆಪ್ಟೆ, ಜೋಗಳೇಕರ್, ರಾನಡೆ, ಓಕ್, ಪಾನಸೆ... . ಒಬ್ಬೊಬ್ಬರಾಗಿ ಮಿತ್ರಮೇಳದ ಸದಸ್ಯರಾದರು. ಶಸ್ತ್ರಕ್ರಾಂತಿಯ ಶಪಥ ಸ್ವೀಕರಿಸಿದರು. ಪುಣೆಯ ಶಾಖೆ ಆರಂಭವಾಗಿಯೇ ಬಿಟ್ಟಿತು. ಸೆಪ್ಟೆಂಬರ್ ಹೊತ್ತಿಗೆ ನಮ್ಮ ಕ್ಲಬ್‌ನ ಮೇಲ್ವಿಚಾರಣೆಯ ಜವಾಬ್ದಾರಿಯೂ ನನ್ನ ಪಾಲಿಗೆ ಬಂತು.

ಆಗ ಕಾಲೇಜಿನ ಆಡಳಿತ ವರ್ಗದವರೆಲ್ಲ ಸೌಮ್ಯವಾದಿಗಳು. ಉಗ್ರ ರಾಜಕಾರಣಕ್ಕೆ ಅಂಜುತ್ತಿದ್ದರು. ಇನ್ನು ಕಾಲೇಜಿನ ಆವರಣದಲ್ಲೇ ಕ್ರಾಂತಿಯ ಸ್ವರ ಹೇಗೆ ಸಹಿಸಿಯಾರು ? ನಮ್ಮ ಹಸ್ತಲಿಖಿತ ಮಾಸಪತ್ರಿಕೆ 'ಆರ್ಯನ್ ವೀಕ್ಲಿ' ಯಲ್ಲಿನ ನನ್ನ ಲೇಖನಗಳು ಪ್ರಿನ್ಸಿಪಾಲರ ನಿದ್ದೆ ಕೆಡಿಸಿದ್ದವು. ಅವರಿಗೆ ಇದೊಂದು ಹೊಸ ಸಮಸ್ಯೆ. ಏನು ಕ್ರಮ ಕೈಗೊಳ್ಳಬೇಕೆಂದು ಯೋಚಿಸುತ್ತಿದ್ದರು.

ನಮ್ಮ ಲೇಖಕರ ಗುಂಪಿನಲ್ಲಿ ಮೋಹನಿರಾಜ ಎಂಬವನಿದ್ದ. ಅವನೊಮ್ಮೆ, 'ಸಮುದ್ರವನ್ನು ದಾಟಲು ಸಾಧನವೆಂದರೆ ಸೋರೆ ಬುರುಡೆ' ಎಂಬ ಅರ್ಥದ ಪದ್ಯ ಬರೆದ. 'ಸೋರೆ ಬುರುಡೆ ಅಲ್ಲ, ಬಾಹುಬಲ' ಎಂದು ನಾನು ಸವಾಲು ಹಾಕಿದೆ. ಅವನು ಎದುರಿಗೆ ಸಿಕ್ಕಿದರೆ ಸಾಕು, ಅದೇ ವಾಗ್ವಾದ. ವಿಜಯದಶಮಿಯ ದಿನ ಊಟಕ್ಕೆ ಕುಳಿತಾಗಲೂ ಅದೇ ಮಾತುಕತೆ. ಕೊನೆಗೆ, 'ಬುರುಡೆಯನ್ನು ನಂಬಬಾರದು ! ಸ್ವಂತ ಬಾಹುಬಲದ ಮೇಲೆ ಭರವಸೆ ಇಡಬೇಕು' ಎಂದು ಆವೇಶದಿಂದ ಗರ್ಜಿಸಿದೆ. ಅವನು ಆಗಲೂ ಒಪ್ಪಲಿಲ್ಲ. ನಾನು ಅರ್ಧ ಊಟದಲ್ಲೇ ಎದ್ದು ಹೋಗಿ ಅವನ ಎಲೆಯ ಮುಂದೆಯೇ ಕುಳಿತೆ. 'ಸತ್ಯಸಂಗತಿ ಒಪ್ಪುವವರೆಗೂ ನಿನಗೆ ಇವತ್ತು ಮುಕ್ತಿಯಿಲ್ಲ' ಎಂದೆ. ಆ ಹೆಣ್ಣಿಗ ರಾಮನ ಕಣ್ಣಲ್ಲಿ ದಳದಳನೆ ನೀರು ಸುರಿಯತೊಡಗಿತು. ಹಬ್ಬದ ದಿನ ಕ್ಲಬ್ಬಿನವರೆಲ್ಲರ ಬಾಯಲ್ಲೂ ಇದೇ ಮಾತು. ಪ್ರಿನ್ಸಿಪಾಲರವರೆಗೂ ದೂರು ಹೋಯಿತು. ಮೊದಲೇ 'ಸಾವರಕರ್' ಮೇಲೆ ಅವರ ಕಣ್ಣು ಬಿದ್ದಿತ್ತು. ಇನ್ನು ಈಗ ಕೇಳಬೇಕೆ?

ತನಿಖೆ ಶುರುವಾಯಿತು

ನಾನಿದ್ದ ಒಂದನೇ ಕ್ಲಬ್‌ನಲ್ಲಿ ಕ್ರಾಂತಿಯ ವಿಚಾರ ಸಾಕಷ್ಟು ಪ್ರಚಾರವಾಗಿತ್ತು. ಉಳಿದ ಕ್ಲಬ್‌ಗಳಿಗೂ ಅದು ಪ್ರವೇಶಿಸಬೇಕಾಗಿತ್ತು. ಆ ಬಗ್ಗೆ ಯೋಚಿಸುತ್ತಿದ್ದಂತೆಯೇ ಈ ತನಿಖೆಯ ಪ್ರಕರಣ ಎದುರಾಯಿತು. ಆಗ, ನಾಲ್ಕನೆ ಕ್ಲಬ್‌ನಲ್ಲಿ ಕರ್ಣಾಟಕದವರು ಹೆಚ್ಚು. ಧಾರವಾಡದ ಆಲೂರು ವೆಂಕಟರಾಯರು ಅದರ ಮೇಲ್ವಿಚಾರಕರು. ಅವರ ಬಳಿ ಹೋಗಿ, 'ಒಂದನೆ ಕ್ಲಬ್ ಸ್ನೇಹಿತರೊಡನೆ ಸ್ವಲ್ಪ ತಿಕ್ಕಾಟ ಹುಟ್ಟಿದೆ. ಆದ್ದರಿಂದ ನಾನೂ ನನ್ನ ಕೆಲವು ಸ್ನೇಹಿತರೂ ನಿಮ್ಮ ಕ್ಲಬ್ ಸೇರುತ್ತೇವೆ' ಎಂದು ನಿವೇದಿಸಿಕೊಂಡೆ. ಅವರು ಕೂಡಲೆ ಒಪ್ಪಿದರು. ಅಂದಿನಿಂದ ನಾವಿಬ್ಬರೂ ಆಪ್ತಮಿತ್ರರಾದೆವು.

ಕಾಲೇಜಿನಲ್ಲೂ, ವಸತಿಗೃಹದಲ್ಲೂ ಎಷ್ಟೋ ಕೆಲಸಗಳ ಗಡಿಬಿಡಿ. ಅದರ ನಡುವೆಯೂ ನಾನು ನಿತ್ಯನಿಯಮಿತವಾಗಿ ಗಮನ ಕೊಡುತ್ತಿದ್ದ ಸಂಗತಿಗಳೂ ಕೆಲವಿದ್ದವು. ಅವುಗಳಲ್ಲಿ ಮೊದಲ ಪ್ರಾಶಸ್ತ್ಯ ಶಾರೀರಿಕ ಹಾಗೂ ಬೌದ್ಧಿಕ ವಿಕಾಸಕ್ಕೆ. ದಿನವೂ ವ್ಯಾಯಾಮ ಶಾಲೆಗೆ ಹೋಗಿ 300-300 ದಂಡ-ಬೈಠಕ್, ಡಂಬೆಲ್ಸ್ ಮಾಡುವ ರೂಢಿಯಿತ್ತು. ಅದರ ಜತೆಗೆ ಕ್ರಾಂತಿಕಾರಿ ಜೀವನಕ್ಕೆ ಸಹಾಯಕವೆಂದು, ಗೆಳೆಯರೊಡನೆ ಈಜುವುದು, ಓಡುವುದು, ಪುಣೆಗೆ ಸಮೀಪದ ಬೆಟ್ಟಗಳ ಕಡಿದಾದ ಭಾಗಗಳನ್ನು ಹತ್ತಿ ಇಳಿಯುವುದು ನಡೆದಿತ್ತು.

ಬೇರೆಯವರು ತಿರುಗಾಟ, ಮನೋರಂಜನೆಗಾಗಿ ವ್ಯಯಿಸುತ್ತಿದ್ದ ಹೊತ್ತನ್ನು ನಾನು ಜ್ಞಾನಾರ್ಜನೆಗಾಗಿ ಬಳಸುತ್ತಿದ್ದೆ. ಗೆಳೆಯರ ವಿಶಾಲ ಬಳಗವಿದ್ದ ನನ್ನಂಥ ಸಮಾಜಪ್ರಿಯ ವ್ಯಕ್ತಿಗೆ ಇದು ನಿಜಕ್ಕೂ ಕಷ್ಟಸಾಧ್ಯವಾಗಿತ್ತು. ಆದರೂ ಬೇರೆ ಮಾರ್ಗವಿರಲಿಲ್ಲ. ವೃತ್ತಪತ್ರಿಕೆಗಳು, ಪ್ರಸಿದ್ಧ ಇತಿಹಾಸ ಗ್ರಂಥಗಳು, ಇಂಗ್ಲಿಷ್ ಹಾಗೂ ಸಂಸ್ಕೃತ ಮಹಾಕಾವ್ಯಗಳು, ದೇಶ ವಿದೇಶಗಳ ಸ್ವಾತಂತ್ರ್ಯ ಸಮರಗಳು ಎಲ್ಲವನ್ನೂ ಆ ಸಮಯದಲ್ಲೇ ನಾನು ಓದಿ ಮುಗಿಸಿದ್ದು. ಕಾಲೇಜಿನ ವಕ್ತೃತ್ವಸಭೆಯಲ್ಲಿ ನಾನೊಮ್ಮೆ ಇಟಲಿಯ ಇತಿಹಾಸದ ಬಗ್ಗೆ ಮಾತನಾಡಿದೆ. ಆಗ ಮುಂದಿಟ್ಟ ಅನೇಕ ವಿಚಾರಗಳನ್ನು ಕೇಳಿ ಪ್ರಿನ್ಸಿಪಾಲರು ಮೂಗಿನ ಮೇಲೆ ಬೆರಳಿಟ್ಟುಕೊಂಡರು. ಆದರೆ ನಮ್ಮ ದೇಶದ ಪ್ರಚಲಿತ ರಾಜಕಾರಣದೊಂದಿಗೆ ಅದನ್ನು ಜೋಡಿಸಿ ಹೇಳಿದ್ದು ಅವರಿಗೆ ಏಕೋ ರುಚಿಸಲಿಲ್ಲ. 'ಇನ್ನು ಮುಂದೆ ಕಾಲೇಜಿನ ಆವರಣದಲ್ಲಿ ಈ ತರಹದ ಭಾಷಣ ಆಗುವುದನ್ನು ನಾನು ಸಹಿಸುವುದಿಲ್ಲ' ಎಂದು ಎಚ್ಚರಿಕೆ ಕೊಟ್ಟರು!

1903ರಲ್ಲಿ ಕಾಲೇಜು ಪುನರಾರಂಭೋತ್ಸವದ ಸಭೆಗೆ ಪ್ರೊಫೆಸರ್ ಸಿ ಜಿ. ಭಾನು ಅಧ್ಯಕ್ಷರು. ವಿದ್ಯಾರ್ಥಿಗಳ ಪ್ರಚಂಡ ಕರತಾಡನಗಳೊಡನೆ ನಾನು ಭಾಷಣಕ್ಕೆ ನಿಂತೆ. ಭಾಷಣದ ಕೊನೆಗೆ ಪ್ರತಿಯೊಬ್ಬರ ಹೃದಯವೂ ಸ್ವದೇಶಭಕ್ತಿಯಿಂದ ತಳಮಳಿಸುತ್ತಿತ್ತು. ಸ್ವಾತಂತ್ರ್ಯದ ಕಿಚ್ಚಿನಿಂದ ಧಗ ಧಗಿಸುತ್ತಿತ್ತು. ಭಾವೋದ್ವೇಗ ತಡೆಯಲಾರದೆ ಅನೇಕರ ಕಣ್ಣು ಒದ್ದೆಯಾಯಿತು. ಇವೆಲ್ಲದರಿಂದ ಗಾಬರಿಗೊಂಡು ಅಧ್ಯಕ್ಷರು ತಮ್ಮ ಭಾಷಣದಲ್ಲಿ ಹೇಳಿದರು : 'ತರುಣರೆ, ಸಾವರಕರನ ಮಾತನ್ನು ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ಅವನೊಂದು ದೆವ್ವ!' ಲೋಕಮಾನ್ಯ ತಿಲಕರಿಗೆ ಸಹ ವಿದ್ಯಾರ್ಥಿ ದೆಸೆಯಲ್ಲಿ 'ದೆವ್ವ' ಎಂದೇ ಬಿರುದಿತ್ತು! ಪಾಪ, ಪ್ರೊಫೆಸರರ ಪುಸ್ತಕ ಜ್ಞಾನವು ದೆವ್ವಕ್ಕೂ ದೇವರಿಗೂ ವ್ಯತ್ಯಾಸ ಕಾಣದಷ್ಟು ಕುರುಡಾಗಿತ್ತು.

ಪ್ರಿನ್ಸಿಪಾಲರಾಗಿದ್ದ ರ್‍ಯಾಂಗ್ಲರ್ ಪರಾಂಜಪೆಯವರಿಗೂ ನನ್ನ ಮೇಲೆ ಬಹಳ ಸಿಟ್ಟು. ಬಾಯಿಗೆ ಬಂದಂತೆ ಶಾಪ ಹಾಕುತ್ತಿದ್ದರು. ಆದರೆ ವಿಧಿಯ ನೇಡು ವಿಚಿತ್ರ! 38 ವರ್ಷಗಳ ನಂತರ ನನ್ನ ಷಷ್ಟ್ಯಬ್ಧ

ಪೂರ್ತಿ ಸಮಾರಂಭಕ್ಕೆ ಅವರೇ ಅಧ್ಯಕ್ಷರಾಗಿ ಬಂದರು! 'ಸಣ್ಣ ವಯಸ್ಸಿನಲ್ಲೆ ಸಾವರಕರ್ ತೀಕ್ಷ್ಣ ಬುದ್ಧಿ, ಪ್ರಖರ ವಾಕ್ಪಟುತ್ವ, ಉತ್ತಮ ಲೇಖನಶಕ್ತಿ ಹಾಗೂ ಆಕರ್ಷಕ ವ್ಯಕ್ತಿತ್ವ ಹೊಂದಿದ್ದರು. ಉಜ್ವಲ ದೇಶ ಭಕ್ತರಾಗಿದ್ದರೇನೋ ಸರಿ ; ಆದರೆ ಯುವಕರಿಗೆ ಸಹಜವಾಗಿರುವಂತೆ, ಅವರ ದೇಶಭಕ್ತಿಯು ವಿವೇಚನೆಯ ನಿಯಂತ್ರಣವಿಲ್ಲದ ಭಾವಾವೇಶದಿಂದ ಕೂಡಿತ್ತು' ಎಂದರು.

ಪಾಪ, ಆ ಗಣಿತ ಪಂಡಿತರಿಗೇನು ಗೊತ್ತು - ದೇಶಭಕ್ತಿಯು ತಮ್ಮ ಅಂಕಿಗಳ, ಪ್ರಮೇಯಗಳ ಸೂತ್ರಕ್ಕೆ ಒಳಪಡುವುದಿಲ್ಲವೆಂದು - ಯೋಗ್ಯ ಭಾವಾವೇಶವಿಲ್ಲದ ವಿವೇಚನೆ ರೆಕ್ಕೆಯಿಲ್ಲದ ಹಕ್ಕಿಯಂತೆ ಎಂದು!

ನಮ್ಮ ಕಾಲೇಜು ಮೈದಾನದ ಆಚೆಗೊಂದು ಗುಡ್ಡ. ಅದರ ಮೇಲೆ ಹತ್ತಿದ ನಂತರ ಅಲ್ಲೊಂದು ಭಾರಿ ಹಳ್ಳ. ಆ ಹಳ್ಳದೊಳಗೆ ನಮ್ಮ ಮಿತ್ರಮೇಳದ ಸಾಪ್ತಾಹಿಕ ಬೈಠಕ್ ನಡೆಯುತ್ತಿತ್ತು. ಒಂದೊಂದು ಸಲ ಪರ್ವತಿ ಗುಡ್ಡದ ಮೇಲೂ ಸೇರುತ್ತಿದ್ದೆವು. ಮಳೆಗಾಲವಾದರೆ, ವಸತಿಗೃಹದಲ್ಲೆ ಯಾರಾವರೂ ಸದಸ್ಯರ ಕೋಣೆಯಲ್ಲಿ ಸಭೆ. ದಿನವೂ ರಾತ್ರಿ ಊಟವಾದ ಮೇಲೆ ಹರಟೆಗೆ ಕೂರುವುದೂ ರೂಢಿ. ಆಗ ಹೊತ್ತುಗೊತ್ತಿನ ಪರಿವೆ ಯಾರಿಗೂ ಇಲ್ಲ. ಆವೇಶದ ಮಾತುಗಳು ; ನಗುವಿನ ಸದ್ದು ; ನಿಷ್ಠೆಯಿಂದ ಓದುತ್ತಿದ್ದವರ ಕಿವಿಗೆ ಗುದ್ದುತ್ತಿದ್ದವು. ಪಾಪ, ಅವರು ಅನ್ನಲಾರರು, ಅನುಭವಿಸಲಾರರು! ನಮ್ಮ ಕೊಠಡಿಯ ಮೇಲ್ಭಾಗದಲ್ಲೆ ಹಿರಿಯ ವಿದ್ಯಾರ್ಥಿ ರಾಮಭಾವು ಕಾನಿಟಕರರ ಕೊಠಡಿ. ಅವರು ಆಗಾಗ್ಗೆ 'ಸದ್ದಿನ ಮದ್ದು' ತುಂಬಿದ ನಮ್ಮ ಕೋಣೆಯವರೆಗೂ ಬಂದು - ಕಾಡುಹರಟೆ ನಿಲ್ಲಿಸುವಂತೆ ಅಥವಾ ಕೊನೆಯ ಪಕ್ಷ ಮಾತಿನ ಆವೇಶವನ್ನಾದರೂ ತಗ್ಗಿಸುವಂತೆ - ಸೌಮ್ಯವಾಗಿ ಸೂಚನೆ ಕೊಟ್ಟು ಹೋಗುತ್ತಿದ್ದರು. ನಮ್ಮ ಪೈಕಿ ಯಾರಾದರೂ ಬಾಯಿಬಿಡದೆ ಸುಮ್ಮನೆ ಕುಳಿತಿದ್ದರೆ, ಅಥವಾ ಯಾರದಾದರೂ ಮಾತು ಅತಿಯಾದರೆ, ಅವರ ವಿರುದ್ಧವೇ ಉಳಿದೆಲ್ಲರ ಹಾಸ್ಯದ ಚಟಾಕಿ ಹಾರುತ್ತಿತ್ತು! ವಿಶೇಷ ಪತ್ರಿಕಾ ಸುದ್ದಿಗಳಿದ್ದರೆ ಸಾಮೂಹಿಕವಾಗಿ ಓದುತ್ತಿದ್ದೆವು. ರಾತ್ರಿ 1-2 ಗಂಟೆಯವರೆಗೂ ಅದರ ಸಾಧಕಬಾಧಕಗಳ ಬಗ್ಗೆ ಚರ್ಚಿಸುತ್ತಿದ್ದೆವು.

ಪುಣೆ ನಗರದೊಳಗೂ ನಾನು ಮಾತುಕತೆಗಾಗಿ ಹೋಗುತ್ತಿದ್ದ ಕೆಲವು ಸ್ಥಾನಗಳಿದ್ದವು ಆ ಪೈಕಿ ಶನಿವಾರವಾಡೆ ಎದುರಿಗಿದ್ದ 'ಕಾಳ' ಪತ್ರಕರ್ತ ಶಿವರಾಮ ಪರಾಂಜಪೆಯವರ ಮನೆಯೇ ಮುಖ್ಯ. ಅವರ ಪತ್ರಿಕೆಗೆ ನಾನು ಕಳಿಸುತ್ತಿದ್ದ ಕವನ, ಲೇಖನಗಳನ್ನು ಅವರು ಚೆನ್ನಾಗಿ ಮೆಚ್ಚಿಕೊಂಡಿದ್ದರು. ದೇಶ, ಧರ್ಮ, ಸಾಹಿತ್ಯ, ಸಶಸ್ತ್ರ ಕ್ರಾಂತಿ ಇತ್ಯಾದಿ ನಾನಾ ವಿಷಯಗಳ ಬಗ್ಗೆ ನಮ್ಮಿಬ್ಬರಿಗೂ ಗಂಭೀರ ಸಂಭಾಷಣೆ ನಡೆಯುತ್ತಿತ್ತು. ನಡು ನಡುವೆ ಹಾಸ್ಯ ಹರಟೆಗಳ ಸ್ವಾರಸ್ಯವೂ ಇಲ್ಲದಿರುತ್ತಿರಲಿಲ್ಲ. ಕೆಲವೊಮ್ಮೆ ರಾತ್ರಿ ಮುಗಿಯುತ್ತ ಬಂದರೂ ನಮ್ಮ ಮಾತು ಮುಗಿಯುತ್ತಿರಲಿಲ್ಲ.

ವಿಂಚೂರಕರವಾಡೆಯಲ್ಲಿದ್ದ ಲೋಕಮಾನ್ಯ ತಿಲಕರ ಮನೆಗೂ ನಾನು ಆಗಾಗ ಹೋಗಿಬರುತ್ತಿದ್ದೆ. ಆದರೆ ಗಂಟೆಗಟ್ಟಲೆ ಹರಟೆ ಹೊಡೆಯುವಷ್ಟು ನನಗೆ ಸಲಿಗೆಯಾಗಲಿ, ಅವರಿಗೆ ಸಮಯವಾಗಲಿ ಇರಲಿಲ್ಲ. ವಿಶೇಷ ವಿಷಯಗಳಿಗಷ್ಟೆ ನಮ್ಮ ಮಾತುಕತೆ ಸೀಮಿತ. ನಗರದಲ್ಲಿ ನಡೆಯುತ್ತಿದ್ದ ಗಣೇಶೋತ್ಸವ, ಶಿವಾಜಿ ಉತ್ಸವ ಇತ್ಯಾದಿಗಳಲ್ಲೂ ನನ್ನ ಓಡಾಟ ಇರುತ್ತಿತ್ತು. ವಿದ್ಯಾರ್ಥಿ ಪ್ರತಿನಿಧಿಯಾಗಿ ಅಲ್ಲಿ ಭಾಷಣಕ್ಕೂ ನಿಲ್ಲುತ್ತಿದ್ದೆ.

ನ್ಯಾಯಾಲಯದಲ್ಲಿ ತಿಲಕರ ವಾದ ಅಥವಾ ಅವರ ವಿಚಾರಣೆ ಇದ್ದಾಗ ನಮ್ಮ ಗುಂಪು ತಪ್ಪಿಸಿಕೊಳ್ಳುತ್ತಿರಲಿಲ್ಲ. ಒಮ್ಮೆ ನಾವು ಉತ್ಸಾಹದಿಂದ ಹೋದೆವು. ಆದರೆ ಬಾಗಿಲಲ್ಲೆ ಸಿಪಾಯಿ ತಡೆದು ನಿಲ್ಲಿಸಿಬಿಟ್ಟ!

ಯಾರನ್ನೂ ಒಳಕ್ಕೆ ಬಿಡುತ್ತಿರಲಿಲ್ಲ. ಮುಂದೇನು ? ಆ ಕಾವಲುಗಾರನ ಪಕ್ಕದಲ್ಲೆ ಕೆಲ ನಿಮಿಷಗಳು ಯೋಚಿಸುತ್ತಾ ನಿಂತೆ. ಅನಂತರತಟ್ಟನೆ ಅವನ ಪಕ್ಕದಲ್ಲೆ ಬಾಗಿಲೊಳಗೆ ನುಸುಳಿಕೊಂಡು ಒಳಗಿದ್ದ ಅಧಿಕಾರಿಯೊಬ್ಬನ ಬಳಿ ಹೋದೆ. 'ನಾವು ಕಾಲೇಜಿನಲ್ಲಿ ಓದುತ್ತಿರುವ ಜವಾಬ್ದಾರಿಯುತ ವಿದ್ಯಾರ್ಥಿಗಳು. ನ್ಯಾಯಾಲಯದ ಕಾರ್ಯಕಲಾಪಗಳನ್ನು ಅಧ್ಯಯನ ಮಾಡುವ ದೃಷ್ಟಿಯಿಂದ ಬಂದಿದ್ದೇವೆ' ಎಂದು ಭಾರಿ ಭಾರಿ ಇಂಗ್ಲಿಷ್ ಶಬ್ದ ಉಪಯೋಗಿಸಿ ಹೇಳಿದೆ. ಒಳಗೆ ಹೋಗಲು ನಮ್ಮೆಲ್ಲರಿಗೂ ಅನುಮತಿ ಸಿಕ್ಕಿತು ! ಕೋರ್ಟಿನ ಜನಕ್ಕೆ ಏನಾದರೊಂದು 'ವಾದಸರಣಿ' ಕಿವಿಗೆ ಬಿದ್ದರೇ ಸಮಾಧಾನವೋ ಏನೊ !

ಲೇಖನ ಕಲೆ ನಮ್ಮಲ್ಲಿ ಹೆಚ್ಚು ಜನರಿಗೆ ರೂಢಿಯಾಗಲು ಮತ್ತು ಕ್ರಾಂತಿ ವಿಚಾರ ಹೊರಗಿನವರಿಗೆ ಮುಟ್ಟಲು ನಾಲ್ಕನೆ ಕ್ಲಬ್‌ನಲ್ಲೂ ಒಂದು ಹಸ್ತಲಿಖಿತ ವಾರಪತ್ರಿಕೆ ಆರಂಭಿಸಿದೆವು. ನಮ್ಮ ಭಾವೂ ( ವಿಷ್ಣು ಮಹಾದೇವ ಭಟ್) ಮತ್ತು ದಾ.ನಾ. ಆವಟೆ ಅದರ ಜವಾಬ್ದಾರಿ ವಹಿಸಿದರು. ಇದೇ ಸಮಯ 'ಕಾಳ' ಸಂಪಾದಕರ ಮಗ ಶ್ರೀಕೃಷ್ಣ ಪರಾಂಜಪೆ, ಕಾಕಾ ಕಾಲೇಲ್ಕರ್, ಪಾಟಣಕರ್ ಮುಂತಾದ ಹತ್ತಾರು ಪ್ರತಿಭಾವಂತರು ಮಿತ್ರಮೇಳದ ಸದಸ್ಯರಾಗಿ ಸೇರಿದರು. ಅನೇಕರು ರಜೆಯಲ್ಲಿ ತಂತಮ್ಮ ಊರಿಗೆ ಹೋದಾಗ ಅಲ್ಲಿ ಹೊಸ ಶಾಖೆಗಳನ್ನು ಸ್ಥಾಪಿಸಿ ಬರುತ್ತಿದ್ದರು. ಮೊದಲ ವರ್ಷ ರಜೆಯಲ್ಲಿ ನಾನು ನಾಸಿಕಕ್ಕೆ ಹೋಗುವ ವೇಳೆಗೆ ನಾವಿದ್ದ ಮನೆಗೆ 'ದೇಶಭಕ್ತರ ಧರ್ಮಶಾಲೆ' ಎಂಬುದು ರೂಢಿಯ ಹೆಸರಾಗಿ ಹೋಗಿತ್ತು.

ಪುಣೆಯಲ್ಲಿ ಮಿತ್ರಮೇಳಕ್ಕೆ ಸೇರಬಯಸುವ ಹೊಸಬರಿಗಾಗಿ 'ಶಪಥ ವಿಧಿ' ನಡೆಸುತ್ತಿದ್ದೆವು. ಅದರ ವರ್ಣನೆಯನ್ನು ಓರ್ವ ಸದಸ್ಯರ ಬಾಯಲ್ಲೆ ಕೇಳಿ. ಮಸೂರಿನ ಬಾ.ನಾ. ಬುಧಕರ್ ಹೀಗೆನ್ನುತ್ತಾರೆ : 'ನಾನೂ ನನ್ನ ಮಿತ್ರರೂ ಜನ್ಮತಃ ತಂಟೆಕೋರರು. 1904ರಲ್ಲಿ ಸಾವರಕರರ ತೇಜಸ್ವಿ ಭಾಷಣಗಳನ್ನು ಕೇಳಿ ವಿಷಯ ಮನಸ್ಸಿಗೆ ನಾಟಿತು. ಸರಿ ಯೌವನದ ಹುರುಪಿನಲ್ಲಿದ್ದ ನಾನು, ಕಳಂಬೆ, ದತ್ತೋಪಂತ ಚಿಂಚಾಳಕರ್, ಬಾಳಾಸಾಹೇಬ ಪರಾಂಜಪೆ, ಸಾವರಕರರ ಭೇಟಿಗೆ ಹೊರಟೆವು. ಆ ದಿನವೂ ನನಗೆ ನೆನಪಿದೆ. ಸೋಮವಾರ ಭಾದ್ರಪದ ಶುದ್ಧ ದ್ವಾದಶಿ ಅಥವಾ ತ್ರಯೋದಶಿ. ಎಲ್ಲರೂ ನಮಸ್ಕಾರ ಮಾಡಿ ಕುಳಿತೆವು. ಸಾವರಕರ್ ತನ್ಮಯತೆಯಿಂದ ಬರೆಯುತ್ತಿದ್ದರು. ನಾಸಿಕದಲ್ಲಿ ''ಕಾಳ'' ಪತ್ರಿಕೆಯ ಸಂಪಾದಕರಾದ ಪರಾಂಜಪೆಯವರ ಭಾಷಣವಾಗಿತ್ತು. ಅದರ ಸಾರಾಂಶವನ್ನು ಅವರು ತುರ್ತಾಗಿ ''ಕೇಸರಿ''ಗೆ ಕಳುಹಿಸಬೇಕಾಗಿತ್ತು. ಅದು ಮುಗಿಯುತ್ತಲೇ ಸಾವರಕರ್ ನಗುಮುಖದಿಂದ ನಮ್ಮ ಕ್ಷೇಮ ಸಮಾಚಾರ ವಿಚಾರಿಸಿದರು. ನಾವು ಬಂದ ಉದ್ದೇಶವನ್ನೂ ಗಂಭೀರವಾಗಿ ಕೇಳಿದರು. ''ಇದರ ಆಗುಹೋಗುಗಳೆಲ್ಲವನ್ನೂ ಪೂರ್ತಿಯಾಗಿ ಆಲೋಚಿಸಿರುವಿರಲ್ಲವೆ ? ಭಾವನೆಯ ಆವೇಗ ಇದ್ದರೆ ಸಾಲದು; ಧೀರ ಮನಸ್ಸಿನಿಂದ ಆಲೋಚಿಸಲೂ ಬೇಕು'' ಎಂದರು. ಅನಂತರ ನಮ್ಮನ್ನು ಸಭಾಸದರನ್ನಾಗಿ ಮಾಡಿಕೊಳ್ಳಲು ಒಪ್ಪಿದರು.

'ಮರುದಿನ ತಾಂಬೆಯವರ ಮನೆಯಲ್ಲಿ ಪ್ರತಿಜ್ಞೆಯ ಕಾರ್ಯಕ್ರಮ. ಅದು ಬಹಳ ಚಿತ್ತಾಕರ್ಷಕ. ಎದುರಿಗೆ ಶ್ರೀಕೃಷ್ಣ ಮತ್ತು ಶಿವಛತ್ರಪತಿಯ ಭಾವಚಿತ್ರ. ನಾವು ಒಬ್ಬೊಬ್ಬರಾಗಿ ಮುಂದೆ ಹೋಗಿ ಕೈಬೆರಳಿನಿಂದ ರಕ್ತ ಕೆಳಕ್ಕೆ ಬೀಳಿಸುತ್ತಾ, ''ದೇಶದ ಸ್ವಾತಂತ್ರ್ಯಕ್ಕಾಗಿ ಸರ್ವಸ್ವವನ್ನೂ ಆಹುತಿ ನೀಡುತ್ತೇವೆ'' ಎಂದು ಪ್ರತಿಜ್ಞೆ ಮಾಡುತ್ತಿದ್ದೆವು. ಈ ದೀಕ್ಷಾ ಸಮಾರಂಭದ ಸಮಯದಲ್ಲಿ ಸಾವರಕರರ ಮುಖಭಾವ ಯಾವುದೋ ಭವಿತವ್ಯದ ಗಹನ ವಿಚಾರದಲ್ಲಿ ಮುಳುಗಿದಂತಿತ್ತು. ಪ್ರತಿಜ್ಞೆಯಾದ ಮೇಲೆ ಅವರು ಕೆಲವು

ಗಂಭೀರ ಸೂಚನೆಗಳನ್ನಿತ್ತರು ಪ್ರತಿಜ್ಞಿತರ ಕರ್ತೃತ್ವ ನೋಡಿಕೊಂಡು ಕೆಲಸ ಹಂಚಿದರು ಪ್ರತಿಜ್ಞೆ ತೆಗೆದುಕೊಂಡ ಮಾತ್ರಕ್ಕೆ ಕ್ರಾಂತಿವೀರರಾದೆವು ಎಂದು ಭಾವಿಸುತ್ತಿರಲಿಲ್ಲ.'

ಯಾರಾದರೂ ಒಳ್ಳೆಯ ತರುಣ ಕಣ್ಣಿಗೆ ಬಿದ್ದರೆ ಸಾಕು, ನಾನು ಅವನನ್ನು ಕ್ರಾಂತಿಕಾರ್ಯಕ್ಕೆ ಎಳೆಯದೆ ಬಿಡುತ್ತಿರಲಿಲ್ಲ. ಪುಣೆಯ ಧೋ.ಕೃ. ಸಾರೆಯ ಅನುಭವ ಕೇಳಿ :' 1905ರ ಡಿಸೆಂಬರ್ ಇರಬಹುದು. ಮುಂಬೈನಿಂದ ಪುಣೆಗೆ ಹೊರಟಿದ್ದೆ ರೈಲಿನಲ್ಲಿ ಮೊದಲಬಾರಿಗೆ ಸಾವರಕರರ ಭೇಟಿಯಾಯಿತು. ನನ್ನ ತರುಣ ವಯಸ್ಸು ಮತ್ತು ಅದೇ ತಾನೆ ಮೆಟ್ರಿಕ್ ತೇರ್ಗಡೆಯಾಗಿದ್ದ ಸಂಗತಿ ಗಮನಿಸಿದ ಅವರು, ''ನಾನು ಮೆಟ್ರಿಕ್ ನಂತರ ಏನು ಮಾಡುತ್ತೇನೆ'' ಎನ್ನುವ ವಿಷಯ ತೆಗೆದುಕೊಂಡು ಚರ್ಚಿಸಲಾರಂಭಿಸಿದರು. ಚರ್ಚೆಗಿಂತ ಮಾರ್ಗದರ್ಶನವೇ ಹೆಚ್ಚು. ಏಕೆಂದರೆ, ನನಗಾಗಿಯೇ ಅವರು ಅದನ್ನು ಹೇಳುತ್ತಿದ್ದುದು ! ನಾನು ಬಾಯಿ ಮುಚ್ಚಿಕೊಂಡು ಕುಳಿತಿದ್ದೆ. ಅವರು ಹೇಳುತ್ತಿದ್ದ ವಿಷಯ ನನ್ನ ಕಲ್ಪನೆಗೂ ಬಂದಿರಲಿಲ್ಲ. ಮುಂದೆ ಏನು ಮಾಡಬೇಕೆಂಬುದನ್ನೂ ನಾನು ನಿಶ್ಚಯಿಸಿರಲಿಲ್ಲ. ''ಪುಣೆಯಲ್ಲಿ ಡೆಕ್ಕನ್ ಕಾಲೇಜಿಗೆ ಸೇರಿದರೆ, ಅಲ್ಲಿ ಶಿವರಾಮಪಂತ ಪರಾಂಜಪೆಯವರ ಮಗ ಕೃಷ್ಣ ನಿನಗೆ ಮಾರ್ಗದರ್ಶನ ಮಾಡುತ್ತಾನೆ. ಫರ್ಗುಸನ್ ಕಾಲೇಜಿಗೆ ಸೇರಿದರೆ, ಚಿಂಚಾಳಕರ್ ಸಹಾಯ ಮಾಡುತ್ತಾನೆ'' ಎಂದರು ಸಾವರಕರ್. ಪುಣೆ ನಿಲ್ದಾಣದಲ್ಲಿ ಪರಸ್ಪರ ಬೀಳ್ಕೊಂಡೆವು. ನಾನು ನಮ್ಮ ಮನೆಗೆ ಹೋದೆ. ಮರುದಿನವೇ ಸಾವರಕರ್ ನಮ್ಮ ಮನೆಯಲ್ಲಿ ಹಾಜರ್ ! ಅವರ ಜೊತೆಗೆ ಇನ್ನೂ ಇಬ್ಬರು ಯುವಕರಿದ್ದರು. ಅವರನ್ನು ಸಾವರಕರ್ ನನಗೆ ಪರಿಚಯ ಮಾಡಿಕೊಟ್ಟರು.'

ಸಾಪ್ತಾಹಿಕ ಬೈಠಕ್ ಆರಂಭಿಸುವುದು ಒಂದು ಕ್ಷಣ ಸಹ ತಡವಾಗದಂತೆ ಎಚ್ಚರ ವಹಿಸುತ್ತಿದ್ದೆ. ಮೊದಲಿಗೆ ಪಾಠ, ವ್ಯಾಯಾಮ ಇತ್ಯಾದಿಗಳ ಅಭ್ಯಾಸ ಹೇಗೆ ನಡೆಯುತ್ತಿದೆ ಎಂದು ಒಬ್ಬೊಬ್ಬರನ್ನೂ ವಿಚಾರಿಸುವುದು. ಪರೀಕ್ಷೆಯ ಅಂಕಗಳನ್ನೂ ಕೇಳುವುದು. ಒಳ್ಳೆಯ ಮಾತಿನಲ್ಲಿ ಅವರ ಕೊರತೆಗಳನ್ನು ತಿಳಿಸುವುದು. ಬಹಳ ಕಡಿಮೆ ಅಂಕ ಬಂದವರಿಗೆ ಗಂಭೀರವಾಗಿ ಎಚ್ಚರಿಕೆ ನೀಡುತ್ತಿದ್ದೆ : 'ಇಲ್ಲಿ ಕೇಳು, ಚೆನ್ನಾಗಿ ಓದದೆ ಹೋದರೆ, ನಿನ್ನನ್ನು ಸಭೆಯಿಂದ ಹೊರಗೆ ಕಳುಹಿಸಬೇಕಾಗುತ್ತದೆ. ಅಲಂಕಾರ ವಿದ್ಯಾರ್ಥಿಗಳು ನನಗೆ ಬೇಕಾಗಿಲ್ಲ. ಅವರಿಂದ ಕಾರ್ಯಕ್ಕೆ ಕೇಡು.' ಅದರ ಯೋಗ್ಯ ಪರಿಣಾಮ ಆಗುತ್ತಿತ್ತು. ಸಭೆಯಿಂದ ಹೊರಗೆ ಕಳುಹಿಸುವುದರಷ್ಟು ದೊಡ್ಡ ಅವಮಾನ ಬೇರೆ ಇಲ್ಲವೆಂಬ ಭಾವನೆಯಿತ್ತು. ಒಮ್ಮೆ ಶಂಕರ ಮೋಘೆ, ಇತಿಹಾಸದಲ್ಲಿ ತನಗೆ 60 ಅಂಕ ಬಂದಿದೆಯೆಂದು ಅಭಿಮಾನದಿಂದ ಹೇಳಿದ. 'ನಿನಗೆ ಏಕೆ ಇಷ್ಟು ಕಡಿಮೆ ? ನಾನು ನಿನಗೆ ಇತಿಹಾಸದ ಬಗ್ಗೆ ಎಷ್ಟೊಂದು ವಿಷಯ ಹೇಳಿದ್ದೇನೆ ! ಕಡೇ ಪಕ್ಷ ನೀನು ಅದರಲ್ಲಿ 80 ಅಂಕಗಳನ್ನಾದರೂ ತೆಗೆಯಬೇಕಿತ್ತು' ಎಂದೆ.

ಸಹಕಾರಿಗಳ ಗುಣದೋಷಗಳ ಬಗ್ಗೆ ನನಗೆ ದೃಷ್ಟಿ ಸದಾ ತೀಕ್ಷ್ಣ. ಕೆಲವೊಮ್ಮೆ ಹಾಸ್ಯದಿಂದ, ಕೆಲವೊಮ್ಮೆ ರೇಗಿಸಿ, ಇನ್ನು ಕೆಲವು ಸಲ ನಿದರ್ಶನ ಸಹಿತ ಉಪದೇಶಿಸಿ ದೋಷಗಳನ್ನು ತಿದ್ದಬೇಕಾಗುತ್ತಿತ್ತು. ಆಪಟೆ ಮತ್ತು ಮೋಘೆ ಉತ್ತಮ ಲೇಖಕರು. ಆದರೆ ಅವರು ಬರೆಯುತ್ತಲೇ ಇರಲಿಲ್ಲ. ಒಮ್ಮೆ ಹರಟೆಯ ನಡುವೆ ಹೇಳಿದೆ : 'ನೋಡಿ, ನನ್ನದು ಎರಡು ಲಾವಣಿ ಪ್ರಕಟವಾಗಿ ಬಂತು ಈಗ ನಿಮ್ಮ ರಚನೆಗಾಗಿ ಎದುರು ನೋಡುತ್ತಿದ್ದೇನೆ.' ಕೆಲವೇ ದಿನಗಳಲ್ಲಿ ಆಪಟೆ 'ಮುರಾರಬಾಜಿ ಲಾವಣಿ' ಮತ್ತು ಮೋಘೆ 'ಪ್ರತಾಪರಾವ್ ಗುಜರ್ ಲಾವಣಿ' ಸಿದ್ಧ ಮಾಡಿಯೇಬಿಟ್ಟರು !

ಪುಣೆಯಲ್ಲಿ ನನ್ನ ಸಾಹಿತ್ಯ ಕೃಷಿಯೂ ತಕ್ಕಮಟ್ಟಿಗೆ ನಡೆಯಿತು. ಅನೇಕ ಲೇಖನ, ಕವಿತೆಗಳು ನನ್ನ

ಲೇಖನಿಯಿಂದ ಮೂಡಿದವು. 1902ರ ಜುಲೈ 18ರಂದು 'ಕಾಳ' ಪತ್ರಿಕೆಯಲ್ಲಿ ಪ್ರಕಟಗೊಂಡ, 'ಜಗತ್ತಿನಲ್ಲಿ ಇದುವರೆಗೆ ಯಾವುದು ತಾನೆ ಶಾಶ್ವತವಾಗಿದೆ?' ಎಂಬ ಲೇಖನ ಉಲ್ಲೇಖನೀಯ. 'ಗ್ರೀಕ್, ರೋಂ, ಪಾರಸಿಕ ಇತ್ಯಾದಿ ಎಷ್ಟೋ ಸಾಮ್ರಾಜ್ಯಗಳು ಅಳಿದು ಹೋದವು ಉನ್ನತಿ, ಅವನತಿ ಎಲ್ಲದಕ್ಕೂ ಕಟ್ಟಿಟ್ಟದ್ದು. ಆದ್ದರಿಂದ ಬ್ರಿಟಿಷರ ಸಂಪತ್ತು ಸಾಮರ್ಥ್ಯಗಳನ್ನಾಗಲಿ, ವೈಸರಾಯ್ ಕರ್ಜನ್ನನ ದಂಭ ದರ್ಪಗಳನ್ನಾಗಲಿ ಕಂಡು ಜನರು ನಿರಾಶರಾಗಬಾರದು. ಅವರ ಸಾಮ್ರಾಜ್ಯಕ್ಕೂ ಆಯುಸ್ಸು ತುಂಬಿಬರುತ್ತಿದೆ' ಎಂಬುದು ಅದರ ಸಾರಾಂಶ.

ಅದೇ ಪತ್ರಿಕೆಯ ಸೆಪ್ಟೆಂಬರ್ 19ರ ಸಂಚಿಕೆಯಲ್ಲಿ 'ದುರ್ಲಭಂ ಭಾರತೇ ಜನ್ಮ ಮಾನುಷ್ಯಂ ತತ್ರ ದುರ್ಲಭಮ್' ಎಂಬ ಲೇಖನ ಬೆಳಕು ಕಂಡಿತು. ಭಾರತೀಯ ಇತಿಹಾಸವನ್ನು ಪೂರ್ತಿ ಅವಲೋಕಿಸಿದ ಬಳಿಕ ಲೇಖನದ ಮುಕ್ತಾಯ ಈ ರೀತಿ : 'ಹೀಗೆ ಬಗೆಬಗೆಯಾಗಿ ಯೋಚಿಸಿದ ನಂತರ, ಹಿಂದುಸ್ಥಾನದ ಸಕಲ ದೈನ್ಯ ದಾರಿದ್ರ್ಯಗಳಿಗೂ ಹಿಂದು ಜನರೇ ಕಾರಣರೆಂದು ನನ್ನ ಮನಸ್ಸಿಗೆ ಖಾತರಿಯಾಯಿತು. ಆದರೆ ಪುನಃ ವೈಭವದ ದಿನಗಳನ್ನು ತರಬೇಕಾದಲ್ಲಿ ಅದನ್ನೂ ಹಿಂದುಗಳೇ ತರಬೇಕು. ಹಾಗಿಲ್ಲದೆ, ಅವರೇನಾದರೂ ತಮ್ಮ ದುಷ್ಕೃತ್ಯಗಳ ಪಾಪಕ್ಕೆ ''ಹಿಂದುಸ್ಥಾನದ ದುರ್ದೈವ''ವೇ ಕಾರಣವೆಂದು ಸಲೀಸಾಗಿ ಹೇಳಿಬಿಟ್ಟು, ಇಂಗ್ಲೆಂಡಿನ ಹೊಟ್ಟೆಯೊಳಗೆ ಸೇರಿಕೊಳ್ಳಲು ಬಯಸಿದರೆ, ''ಕಬ್ಬಿಣದ ಕೊಡಲಿ ದಕ್ಕಲಿಲ್ಲ, ಚಿನ್ನದ್ದು ಸಿಕ್ಕಲಿಲ್ಲ'' ಎನ್ನುವಂಥ ದುರ್ಗತಿ ಉಂಟಾದೀತು !'

1904ರ ಚಿರಸ್ಮರಣೀಯ ಪ್ರವಾಸವೊಂದು ನೆನಪಾಗುತ್ತಿದೆ. ನಾವು 13 ಜನ ಆಪ್ತ ಮಿತ್ರರು ಸಿಂಹಗಡದ ದರ್ಶನಕ್ಕೆ ಹೋದೆವು. ಗಡದ ಮೇಲೆ ಹೆಜ್ಜೆಹೆಜ್ಜೆಗೂ ಬಲಿದಾನ ನಡೆದಿತ್ತು. ತಾನಾಜಿಯ ಪರಾಕ್ರಮದ ಸ್ಮರಣೆಯಿಂದ ನಮ್ಮ ಮೈ ಪುಲಕಿತವಾಗುತ್ತಿತ್ತು. ನಾವು ಅಲ್ಲಿಗೆ ವಿಹಾರಾರ್ಥವಾಗಿ ಹೋದವರಲ್ಲ, ಅಲ್ಲಿನ ಮಹಿಮಾನ್ವಿತ ಇತಿಹಾಸವನ್ನು ಜ್ಞಾಪಿಸಿಕೊಳ್ಳಲು ಹೋಗಿದ್ದೆವು. ಸಿಂಹಗಡದ ವೀರನಂತೆಯೇ ನಮ್ಮ ಜೀವನವನ್ನೂ ರೂಪಿಸಿಕೊಂಡು ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕುವ ಸ್ಫೂರ್ತಿ ಗಳಿಸಲು ಹೋಗಿದ್ದೆವು. ಆ ಸಿಂಹಪರಾಕ್ರಮಿಯ ಸಮಾಧಿಯ ಬಳಿ ಗೆಳೆಯರನ್ನು ಸಂಬೋಧಿಸಿ ನಾನು ಭಾಷಣ ಮಾಡಿದೆ. ಶ್ರದ್ಧಾವಂತ ಯಾತ್ರಿಕರು ಕಾಶಿ - ರಾಮೇಶ್ವರಗಳಿಗೆ ಅದೆಷ್ಟು ಭಕ್ತಿಭಾವನೆಯಿಂದ ಹೋಗುತ್ತಾರೋ ಅಷ್ಟೇ ಭಕ್ತಿಭಾವನೆ ಹೃದಯಲ್ಲಿ ತುಂಬಿಕೊಂಡು ನಾವು ಸಿಂಹಗಡ ಏರಿದ್ದೆವು. ನರವೀರ ತಾನಾಜಿಯ ಸಮಾಧಿಯ ಮೇಲೆ ತಲೆಯಿಟ್ಟು ನಮಸ್ಕರಿಸಿದೆವು ; ಕೈಯಿಟ್ಟು ಶಪಥ ಕೈಗೊಂಡೆವು. ಆಗ ಆ ನರಶಾರ್ದೂಲ ತಾನಾಜಿ ನಮ್ಮ ಪಕ್ಕದಲ್ಲೆ ನಿಂತು ನಮ್ಮನ್ನು ಆಶೀರ್ವದಿಸುತ್ತಿರುವನೋ ಎಂಬ ಅನುಭವ ನಮಗಾಗುತ್ತಿತ್ತು. ಅವನ ರಕ್ತದಿಂದ ಪಾವನಗೊಂಡ ಆ ದುರ್ಗವನ್ನೆ ಸಾಕ್ಷಿಯಾಗಿಟ್ಟು, ತಾಯ್ನೆಲದ ಮುಕ್ತಿಗಾಗಿ ಪ್ರಾಣಪಣದಿಂದ ಹೋರಾಡುವ ನಿರ್ಧಾರವನ್ನು ಪುನಃ ದೃಢಗೊಳಿಸಿಕೊಂಡೆವು. ಮರಳಿ ಬಂದನಂತರ ಅದೇ ಗುಂಗಿನಲ್ಲೇ 'ಸಿಂಹಗಡದ ಲಾವಣಿ' ಉತ್ಸ್ಫೂರ್ತವಾಗಿ ಲೇಖನಿಯಿಂದ ಹೊರಬಂತು; ಅನಂತರ 'ಬಾಜಿಪ್ರಭುವಿನ ಲಾವಣಿ' ಸಹ. ಮಹಾರಾಷ್ಟ್ರದ ತರುಣ ಪೀಳಿಗೆಯ ಬಾಯಲ್ಲಿ ಅವೆರಡರ ನಾಲುಗಳು ಮೊಳಗತೊಡಗಿದವು.

1905ರ ಮಾರ್ಚಿ ತಿಂಗಳಲ್ಲಿ ನನ್ನ 'ವೃಷೋಕ್ತಿ' ಕವನ ಅಚ್ಚಾಯಿತು. ಅವರಲ್ಲಿ, ಓರ್ವ ಹಿಂದುವು ಎತ್ತನ್ನು ಕುರಿತು, 'ಕುತ್ತಿಗೆಯ ಮೇಲೆ ನೊಗ ಹೇರಿಕೊಂಡಿರುವೆ. ನಿನಗೆ ವಿಶ್ರಾಂತಿ ಎಂಬುದೇ ಇಲ್ಲ ; ಸಿಕ್ಕುವುದು ಚಾವಟಿಯ ಏಟು. ಛೀ, ನಿನ್ನ ಜನ್ಮಕ್ಕೆ ಧಿಕ್ಕಾರ' ಎಂದು ಹೀಯಾಳಿಸುತ್ತಾನೆ. ಆ ಎತ್ತು ನಕ್ಕು

ಹೇಳುತ್ತದೆ : 'ನಿನ್ನ ದಣಿ ನಿನಗೆ ಖಾಲಿ ಧನ್ಯವಾದ ಹೇಳುತ್ತಾನೆ; ''ಜೆ.ಪಿ.'', ''ಸಿ.ಎಸ್.ಪಿ.'' ಇತ್ಯಾದಿ ಪೊಳ್ಳು ಬಿರುದುಬಾವಲಿ ಕೊಡುತ್ತಾನೆ. ನನ್ನ ದಣಿಯಾದರೋ ಹಸಿಯ ಹುಲ್ಲು, ಸ್ವಚ್ಛನೀರು ನೀಡುತ್ತಾನೆ. ಹೆಚ್ಚು ಸುಖಿ ಯಾರು ಹೇಳು ? ನನ್ನ ನೊಗ ಹಾಗಿರಲಿ, ನಿನ್ನ ಮೇಲಿನ ದಾಸ್ಯದ ನೊಗ ಅದಕ್ಕಿಂತ ಎಷ್ಟೊಂದು ಭಾರ ಇದೆ ನೋಡಿಕೋ! ನನಗೆ ಕೊಂಬುಗಳಾದರೂ ಇವೆ; ನೀನಾದರೋ ಪೂರ್ತಿ ನಿಶ್ಯಸ್ತ್ರನಾಗಿದ್ದೀ. ನಾಚಿಕೆಯಾಗದೆ ? ನಿನ್ನ ದಂಭ ಬಿಟ್ಟು, ಮೊದಲು ದೇಶದ ದುಃಖ ಪರಿಹರಿಸುವ ಯೋಚನೆ ಮಾಡು' ಎನ್ನುತ್ತದೆ! ಗದ್ಯವಿರಲಿ, ಪದ್ಯವಿರಲಿ, ಅದರ ಒಂದೊಂದು ಸಾಲಿನಲ್ಲೂ ಸ್ವಾತಂತ್ರ್ಯದೆಡೆಗೆ ಸೆಳೆತ; ಪಾರತಂತ್ರ್ಯಕ್ಕೆ ಹೊಡೆತ ಅದೇ ಗುರಿ.

ಡೆಕ್ಕನ್ ಕಾಲೇಜು ಪುಣೆಯಲ್ಲಿದ್ದ ಅತ್ಯಂತ ಪ್ರಮುಖ ವಿದ್ಯಾಲಯ. ಅದು ಸರಕಾರಿ ಕಾಲೇಜ್ ಆದುದರಿಂದ, ಅಲ್ಲಿದ್ದ ಆಂಗ್ಲ ಪ್ರಾಧ್ಯಾಪಕರಂತೂ ವಿದ್ಯಾರ್ಥಿಗಳಿಗೆ ರಾಜಕಾರಣದ ಸ್ಪರ್ಶವಾಗದಂತೆ ವಿಶೇಷ ಎಚ್ಚರ ವಹಿಸುತ್ತಿದ್ದರು. ಆದರೂ ಅಲ್ಲಿ ಕ್ರಾಂತಿಯ ಮೊಳಕೆ ಏಳತೊಡಗಿತ್ತು. ಬಾಪಟ್, ದೇವಭಾನಕರ್ ಮತ್ತು ಗುರನಾಥ ಬೇತೂರ್ ಉಗ್ರ ದೇಶಭಕ್ತರಾಗಿದ್ದರು. ಆದರೆ ಸಂಸ್ಥೆಯ ರೂಪದಲ್ಲಿ ಅಲ್ಲಿ ಕಾರ್ಯ ಪ್ರಾರಂಭವಾಗಿರಲಿಲ್ಲ.

ಆಗಿನ ಕಾಲದಲ್ಲಿ ಮೊದಲ ವರ್ಷದ ಬಿ.ಎ. ವಿದ್ಯಾರ್ಥಿಗಳು ಪುಣೆಯಲ್ಲೆ ಮೊದಲ ವರ್ಷದ ಎಲ್.ಎಲ್.ಬಿ. ಸಹ ಓದಲು ಅವಕಾಶವಿತ್ತು. ಸಂಜೆಯ ಹೊತ್ತು ಡೆಕ್ಕನ್ ಕಾಲೇಜಿನಲ್ಲಿ ಅದಕ್ಕಾಗಿ ತರಗತಿಗಳು ನಡೆಯುತ್ತಿದ್ದವು. ಕಾನೂನಿನ ಜತೆಗೇ ಅಲ್ಲಿನ ವಿದ್ಯಾರ್ಥಿಗಳ ಪರಿಚಯವನ್ನೂ ಮಾಡಿಕೊಳ್ಳುವ ಉದ್ದೇಶದಿಂದ ನಾನು ಅಲ್ಲಿಗೆ ಸೇರಿದೆ. ವರ್ಷದ ಕೊನೆಗೆ ಪರೀಕ್ಷೆಯಲ್ಲೂ, ಕ್ರಾಂತಿಸಂಸ್ಥೆಗೆ ಸದಸ್ಯರನ್ನು ಸಂಪಾದಿಸುವುದರಲ್ಲೂ ಯಶಸ್ವಿಯಾಗಿದ್ದೆ.

ಪುಣೆ ಬಳಿಯ ಧುಳೆಯಲ್ಲಿ ಒಂದು ಶಿಕ್ಷಕರ ತರಬೇತಿ ಕಾಲೇಜ್ ಇತ್ತು. ಅಲ್ಲಿಂದ ವರ್ಷವರ್ಷವೂ ಪ್ರಾಂತದ ನೂರಾರು ಸ್ಥಾನಗಳಿಗೆ ಶಿಕ್ಷಕರು ಹೋಗುತ್ತಿದ್ದರು. ಹೀಗಾಗಿ, ಇಡೀ ಪ್ರಾಂತಕ್ಕೆ ಮಿತ್ರಮೇಳ ಹಬ್ಬಿಸುವ ಯೋಜನೆಗೆ ಅದೊಂದು ಅಯಾಚಿತ ಕೇಂದ್ರ ಆಗಿತ್ತು. ಪುಣೆಯ ಸದಸ್ಯರು ಅಲ್ಲೂ ಹೋಗಿ ಶಾಖೆ ಆರಂಭಿಸಿದರು. ಹೀಗೆ ಸಂಸ್ಥೆ ಬೆಳೆದಂತೆ, ನಾನಾ ಶಾಖೆಗಳ ನಡುವೆ ಹೊಂದಾಣಿಕೆ ಹಾಗೂ ಸಮಾನ ಕಾರ್ಯಕ್ರಮ ರೂಪಿಸುವುದು ಅನಿವಾರ್ಯವಾಯಿತು. ಅದಕ್ಕಾಗಿ ವರ್ಷಕ್ಕೆ ಒಂದೆರಡು ಬಾರಿ ಎಲ್ಲ ಪ್ರತಿನಿಧಿಗಳ ಗುಪ್ತಸಭೆ ನಡೆಸಲು ನಿರ್ಧರಿಸಿದೆವು. ಮೊದಲ ಸಭೆ ಧುಳೆಯ ರಣದಿವೆ ವಕೀಲರ ಮನೆಯಲ್ಲಿ 1903ರ ನಡುಭಾಗದಲ್ಲಿ ಸೇರಿತು. ಎಲ್ಲ ಶಾಖೆಗಳಿಂದ ಸುಮಾರು 70 ಸದಸ್ಯರು ಬಂದಿದ್ದರು. ಪರಸ್ಪರ ಪರಿಚಯ, ಅಡ್ಡಿ-ಆತಂಕಗಳ ವಿವರ ಹಾಗೂ ವಿಚಾರ ವಿನಿಮಯಕ್ಕೆ ಎರಡು ದಿನ ಹಿಡಿಯಿತು.

1904ರ ವಾರ್ಷಿಕ ಸಮ್ಮೇಳನವನ್ನು ನಾಸಿಕದ ನಮ್ಮ ಭಾವೂನ ಮನೆಯಲ್ಲಿ ಜರುಗಿಸಿದೆವು ಆರೇಳು ಜಿಲ್ಲೆಗಳಿಂದ 200ರ ವರೆಗೂ ಪ್ರತಿನಿಧಿಗಳು ಬಂದಿದ್ದರು. ಮಿತ್ರಮೇಳದ ಇತಿಹಾಸದಲ್ಲೆ ಅತ್ಯಂತ ಮಹತ್ವದ ಸಭೆ ಇದು. ನನ್ನ ಸಮಾರೋಪ ಭಾಷಣದಲ್ಲಿ ಜಗತ್ತಿನ ಮಹತ್ವಪೂರ್ಣ ಘಟನೆಗಳನ್ನು ವಿವರಿಸಿದೆ. ಸಂಸ್ಥೆಯ ಕಾರ್ಯವನ್ನು ರಾಷ್ಟ್ರವ್ಯಾಪಿಯಾಗಿ ಹಬ್ಬಿಸಲು ಕರೆನೀಡಿದೆ. ಸಂಸ್ಥೆಗೆ ಹೆಚ್ಚು ಅರ್ಥಪೂರ್ಣ ಹೆಸರು ಇರಬೇಕೆಂದೂ ಇಟಲಿಯ ಯಶಸ್ವಿ ಕ್ರಾಂತಿಸಂಸ್ಥೆ 'ಯಂಗ್ ಇಟಲಿ' ಯ ಮಾದರಿಯಲ್ಲೆ 'ಮಿತ್ರಮೇಳ' ಇಂದಿನಿಂದ 'ಅಭಿನವ ಭಾರತ' ಆಗಿದೆ ಎಂದೂ ಘೋಷಿಸಿದೆ. 1905ರಲ್ಲಿ ಅಭಿನವ ಭಾರತದ ಸಮ್ಮೇಳನ ಕೋರೂರಿನಲ್ಲಿ ನಡೆಯಿತು.



ಅಭಿನವ ಭಾರತದ ಸ್ಥಾಪಕನಾಗಿ...

1905ರಲ್ಲಿ ವಂಗಭಂಗ ಚಳವಳಿ ಆರಂಭವಾಯಿತು. ಪುಣೆಯಲ್ಲೂ ಅದರ ಕಾವು ಏರಿತು. ಎಲ್ಲೆಡೆ ತಿಲಕರ 'ಬಹಿಷ್ಕಾರ - ಸ್ವದೇಶಿ - ರಾಷ್ಟ್ರೀಯ ಶಿಕ್ಷಣ - ಸ್ವರಾಜ್ಯ'ದ ಚತುಸ್ಸೂತ್ರಗಳ ಘೋಷಣೆ ಕೇಳಿಬರುತ್ತಿತ್ತು. ಚಳವಳಿಗೆ ಪುಣೆ ವಿದ್ಯಾರ್ಥಿಗಳ ಸಹಾನುಭೂತಿ ವ್ಯಕ್ತಪಡಿಸಲು ಅಕ್ಟೋಬರ್ 1ರಂದು ಊರಿನಲ್ಲಿ ಸಭೆಯಿತ್ತು. ನ.ಚಿ. ಕೇಳ್ಕರ್ ಅಂದಿನ ಅಧ್ಯಕ್ಷರು. 'ಅಭಿನವ ಭಾರತ'ದ ಸದಸ್ಯರೆಲ್ಲ ಹುರುಪಿನಿಂದ ಜಮಾಯಿಸಿದ್ದರು ; ಜತೆಗೆ ಕಿಕ್ಕಿರಿದ ಜನತೆ ಭಾಷಣ ಮಾಡುತ್ತಾ ನಾನೆಂದೆ : 'ವಿದೇಶಿ ಮಾಲಿನ ಬಹಿಷ್ಕಾರಕ್ಕೆ ಪ್ರಖರ ಹಾಗೂ ಪರಿಪೂರ್ಣ ಸ್ವರೂಪ ಬರಲು, ವಿದೇಶಿ ವಸ್ತುಗಳ ದಹನ ಆಚರಿಸುವುದು ಅಗತ್ಯ.' ಇಡೀ ಸಭೆ ಕರತಾಡನ ಹಾಗೂ ಹರ್ಷೋದ್ಗಾರಗಳಿಂದ ಅದನ್ನು ಸ್ವಾಗತಿಸಿತು. ಶಿ.ಮ. ಪರಾಂಜಪೆಯವರೂ ನನ್ನ ಕಲ್ಪನೆಯನ್ನು ಪ್ರಶಂಸಿಸಿದರು. ತಿಲಕರು ಊರಿನಲ್ಲಿ ಇಲ್ಲದಿದ್ದುದರಿಂದ, ಸಭೆಗೆ ಬಂದಿರಲಿಲ್ಲ. ಅಂದಿನಿಂದ ಒಂದು ವಾರಕ್ಕೆ ಸರಿಯಾಗಿ ಮಹಾನವಮಿಯಂದು ವಿದೇಶಿ ವಸ್ತ್ರದ ಹೋಳಿ ಆಚರಿಸಲು ನಿರ್ಧರಿಸಿದೆವು.

ಸಭೆ ಮುಗಿದ ನಂತರ ಅಧ್ಯಕ್ಷತೆ ವಹಿಸಿದ್ದ ಕೇಳ್ಕರ್ ನನ್ನನ್ನು ಒಂದು ಬದಿಗೆ ಕರೆದು ಹೇಳಿದರು : 'ವಿದೇಶಿ ವಸ್ತ್ರಗಳನ್ನು ಸುಟ್ಟು ಅನ್ಯಾಯವಾಗಿ ಹಾಳು ಮಾಡುವುದಕ್ಕಿಂತ, ಅದನ್ನು ಸಂಗ್ರಹಿಸಿ ಅನಾಥರಿಗೆ ಹಂಚುವುದು ಶ್ರೇಯಸ್ಕರ.' ಆದರೆ ನಾವು ಹೋಳಿ ಆಚರಿಸಲಿದ್ದುದು ಲಾಭ - ನಷ್ಟಗಳ ವ್ಯಾಪಾರ ದೃಷ್ಟಿಯಿಂದ ಅಲ್ಲ. ಪರಕೀಯ ಪ್ರಭುತ್ವದ ವಿರುದ್ಧ ಜನಮನದಲ್ಲಿ ಜಾಗೃತಿ ಮೂಡಿಸಲು ಅದನ್ನೊಂದು ಸಾಧನವಾಗಿ ಬಳಸಲಿದ್ದೆವು. ಸ್ವದೇಶದ ಸ್ವಾತಂತ್ರ್ಯಕ್ಕಾಗಿ ಜೀವನವನ್ನೇ ಸುಟ್ಟುಕೊಳ್ಳ ಹೊರಟಿದ್ದವರಿಗೆ ಬಟ್ಟೆ ಲೆಕ್ಕಕ್ಕೆ ಬರಲಿಲ್ಲ. ದೇಶಾಭಿಮಾನವನ್ನು ತಕ್ಕಡಿಯಲ್ಲಿಟ್ಟು 'ರೂ. ಆ. ಪೈ'ಗಳಿಂದ ತೂಗಿನೋಡುವ ಮೆದುಗರ ನೀತಿ ನಮಗೆ ಎಳ್ಳಷ್ಟೂ ಸರಿಕಾಣಲಿಲ್ಲ.

ತಿಲಕರು ಊರಿಗೆ ಬರುತ್ತಲೇ ಅವರಿಗೆ ವಿಷಯ ತಿಳಿಸಿದೆವು. ಆ ಕೇಸರಿಯ ಬಾಯಿಂದ ಏನು ಬಂದೀತೋ ಎಂಬ ಕಾತರ, ಕುತೂಹಲ! ಅವರು ತರುಣರ ಉತ್ಸಾಹಕ್ಕೆ ಎಂದೂ ತಣ್ಣೀರು ಎರಚುವವರಲ್ಲ. ಆದರೆ ನಮ್ಮ ಆಳ ಅಳೆಯದೆ ಬಿಡುವವರೂ ಅಲ್ಲ. ಸೂಕ್ಷ್ಮವಾಗಿ ಎರಡು ಮಾತು ಅಂದರು : 'ನೋಡಿ, ಹೋಳಿ ಆಚರಿಸುವುದಿದ್ದರೆ, ಅದು ಹುಡುಗಾಟಿಕೆಯಂತೆ ಆಗಬಾರದು. ಅರ್ಧ ಗಾಡಿಯೋ ಭರ್ತಿ ಗಾಡಿಯೋ ವಿದೇಶಿ ಬಟ್ಟೆ ಸಂಗ್ರಹವಾದರೆ ಆಗ ದಹನ ಮಾಡುವುದಕ್ಕೂ ಒಂದು ಅರ್ಥವಿದೆ!'

ನಮಗೆ ಅದು ಅರ್ಥವಾಯಿತು ಹೆಚ್ಚು ಮಾತುಕತೆಯ ಅಗತ್ಯವಿರಲಿಲ್ಲ. ನಮ್ಮ ಕರ್ತೃತ್ವಶಕ್ತಿಯೂ ಹೆಚ್ಚಬೇಕು, ಕಾರ್ಯಕ್ರಮದ ಶೋಭೆಯೂ ಹೆಚ್ಚಬೇಕು ಎಂಬುದು ಅವರ ಅಂತರಂಗದ ಇಚ್ಛೆ- ಅಲ್ಲ, ಆಜ್ಞೆ! ಅದನ್ನು ಶಿರಾವಹಿಸಲು ನಾವು ಮೊದಲೇ ತಯಾರಿದ್ದೆವು. ಮಹಾನವಮಿಯ ಬೆಳಿಗ್ಗೆ ವಿದ್ಯಾರ್ಥಿಗಳ 'ರಾಮಸೇನೆ' ಒಂದೆಡೆ ಸೇರಿತು. ವಸ್ತ್ರಸಂಗ್ರಹಕ್ಕೆ ಹೊರಡುವ ಮುನ್ನ ನನ್ನಿಂದ ಭಾಷಣ. ಐದೈದು ನಿಮಿಷಕ್ಕೂ ಚಪ್ಪಾಳೆ ; ವಿದೇಶಿ ವಸ್ತ್ರಗಳ ಸುರಿಮಳೆ! ಅದರ ರಾಶಿ ಒಂದು ಗಾಡಿಯನ್ನೂ ಮೀರಿಸಿ ಬೆಳೆಯಿತು!

ಸಂಜೆ ಗಾಡಿಯ ಮೇಲೆ ಬಟ್ಟೆಗಳನ್ನು ಜೋಡಿಸಿದೆವು. ಅದರ ಮೇಲೆ ಚೆನ್ನಾಗಿ ಗುಲಾಲು ಸುರಿದೆವು. ಅದರ ಮೇಲೆ ಬಲಿಯನ್ನು ಹಾಕಿ, ಹಣತೆ ಹಚ್ಚಿಟ್ಟೆವು ಮಂಡಯಿ ಚೌಕದಿಂದ ವಾದ್ಯಸಮೇತ ಮೆರವಣಿಗೆ ಹೊರಟಿತು. ಹಿಂದೆ ಮತ್ತು ಮುಂದೆ ಸಹಸ್ರಾವಧಿ ವಿದ್ಯಾರ್ಥಿಗಳು ಮತ್ತು ಜನತೆ. ಅಗ್ರಭಾಗದಲ್ಲಿ ಶಿವರಾಮ ಪರಾಂಜಪೆ ಮತ್ತು ಭೋಪಟಕರ್. 'ಚಿತ್ರಶಾಲೆ'ಯ ಹತ್ತಿರ ಬಂದಾಗ ತಿಲಕರು ಅದೇ ತಾನೆ ಊರಿಂದ ಬಂದಿರುವ ವಿಷಯ ತಿಳಿಯಿತು ನಾನು, ಮೋಘೆ ಮತ್ತು ರಿಸಬೂಡ್ ಅವರ ಮನೆಯ ಒಳಗೆ

ಹೋದೆವು. 'ದಾದಾ, ನೀವೂ ಬರುವಿರಲ್ಲವೆ ?' ಎಂದೆ. ಅವರು, 'ಅದಕ್ಕಾಗಿಯೇ ಮುಂಬೈನಿಂದ ಧಾವಿಸಿ ಬಂದೆ' ಎನ್ನುತ್ತಾ ಹೊರಗೆ ಬಂದು ಮೆರವಣಿಗೆಯಲ್ಲಿ ಸೇರಿದರು. ಜನಸಂದಣಿ ಇನ್ನಷ್ಟು ಹೆಚ್ಚಿತು.

ಲಕಡಿ ಪೂಲಿನ ಆಚೆಯ ಕಡೆ ಮೆರವಣಿಗೆ ನಿಂತಿತು. ಬಟ್ಟೆಗಳನ್ನು ಕೆಳಗಿಳಿಸಿ, ಮೈದಾನದಲ್ಲಿ ಗುಡ್ಡೆ ಹಾಕಿದೆವು. 'ಇಲ್ಲಿ ಕೇವಲ ಹೋಳಿ ಆಚರಿಸಿದರೆ ಸಾಕು. ಭಾಷಣ ಮಾಡುವುದಿದ್ದರೆ ಬೇರೆ ಕಡೆಗೆ ಹೋಗೋಣ' ಎಂದರು ತಿಲಕರು ಆದರೆ ಅದು ನನಗೆ ಸರಿಬೀಳಲಿಲ್ಲ. ಧಗಧಗಿಸುವ ದಳ್ಳುರಿಯ ಎದುರಲ್ಲೆ ಸಿಡಿಲು ಗುಡುಗಿನ ಭಾಷಣವೂ ಸೇರಿದರೆ ಹೆಚ್ಚು ಪರಿಣಾಮಕಾರಿಯಾಗುತ್ತದೆ ; ವಿದೇಶಿ ವಸ್ತುಗಳ ತಿರಸ್ಕಾರ ಜನಮನದಲ್ಲಿ ಅಚ್ಚಳಿಯದೆ ಉಳಿಯುತ್ತದೆ - ಎಂದು ಪಟ್ಟುಹಿಡಿದೆ. ಮುಗಿಲಿಗೇರುತ್ತಿದ್ದ ಬೆಂಕಿಯ ಜ್ವಾಲೆಗಳ ಎದುರಲ್ಲಿ ಪ್ರಚಂಡ ಹರ್ಷೋದ್ಗಾರಗಳ ನಡುವೆ ತಿಲಕರು ಭಾಷಣಕ್ಕೆ ನಿಂತರು. ಅವರ ಗಂಭೀರ ಗರ್ಜನೆಯನ್ನು ಜನಸಾಗರ ನಿಶ್ಶಬ್ದವಾಗಿ ಆಲಿಸಿತು.

ಅನಂತರ ಪರಾಂಜಪೆಯವರ ಸರದಿ. ಅವರು ಬಟ್ಟೆಯ ರಾಶಿಗೆ ಕೈಹಾಕಿದರು. ಇನ್ನೂ ಬೆಂಕಿ ತಾಗದಿದ್ದ ಒಂದು ಕೋಟನ್ನು ಮೇಲೆತ್ತಿ ಹಿಡಿದು, 'ಇಗೋ, ಇವನೇ ಶತಕಪಟಿ ಇಂಗ್ಲಿಷ್ ವ್ಯಾಪಾರಿ' ಎಂದರು ! 'ಈ ಧೂರ್ತ ಪಾತಕಿ ವ್ಯಾಪಾರದ ಸೋಗಿನಲ್ಲಿ ಹಿಂದುಸ್ಥಾನದ ಜನಕೋಟಿಯನ್ನು ಲೂಟಿ ಹೊಡೆದು ಜೇಬು ತುಂಬಿಕೊಂಡಿದ್ದಾನೆ; ಈಗ ಈ ಖದೀಮನ ತನಿಖೆ ನಡೆಸುತ್ತೇನೆ' ಎನ್ನುತ್ತಾ ಜೇಬುಗಳಿಗೆ ಕೈಹಾಕಿ ಜಾಡಿಸಿದರು. ಅಣಕ ಹಾಗೂ ಕೊಂಕುಮಾತಿಗೆ ಅವರು ಎತ್ತಿದ ಕೈ. 'ಇನ್ನು ಪರಮ ಪಾತಕಿಯನ್ನು ಅಗ್ನಿಗೆ ಸಮರ್ಪಿಸುತ್ತೇನೆ' ಎಂದು ಧಗಧಗಿಸುತ್ತಿದ್ದ ಜ್ವಾಲೆಯೊಳಕ್ಕೆ ಆ ಕೋಟನ್ನು ಎಸೆದು, ತಮ್ಮ ಭಾಷಣ ಆರಂಭಿಸಿದರು. ಅವರ ಬಳಿಕ ನನ್ನ ಭಾಷಣವೂ ಖಾರವಾಗಿಯೇ ಇತ್ತು. ಇಡೀ ದೇಶದಲ್ಲೇ ವಿದೇಶಿ ವಸ್ತ್ರಗಳ ಮೊದಲ ದಹನ ಅದಾಗಿತ್ತು.

ಸಭೆ ಮುಗಿಯುವ ಹೊತ್ತಿಗೆ ಗಂಟೆ ಒಂಬತ್ತಾಯಿತು. ಇನ್ನೂ ವಿದೇಶಿ ವಸ್ತ್ರಗಳ ಚಿತೆ ಉರಿಯುತ್ತಲೇ ಇತ್ತು. ತಿಲಕರು ನನ್ನನ್ನು ಒಂದು ಪಕ್ಕಕ್ಕೆ ಕರೆದು ಸೂಚನೆ ನೀಡಿದರು : 'ನಿಮ್ಮ ಪೈಕಿ ಯಾರಾದರೂ ಜವಾಬ್ದಾರಿಯುತ ವ್ಯಕ್ತಿಗಳು ಬೆಂಕಿ ಆರುವವರೆಗೂ ಇಲ್ಲೇ ಕಾವಲಿರಬೇಕು.' ಸಭೆಯ ಸ್ಥಳದಿಂದ ಸ್ವಲ್ಪ ದೂರದಲ್ಲಿ ಆಗೊಂದು ಭಾರಿ ಸೌದೆಯ ರಾಶಿ ಇತ್ತು. ಸಂಜೆ ಅಲ್ಲಿ ಕೆಲವು ಪೊಲೀಸ್ ಪೇದೆಗಳ ಓಡಾಟವನ್ನು ತಿಲಕರು ಗಮನಿಸಿದ್ದರು. ಸರಕಾರಿ ಹಸ್ತಕರೇ ಉದ್ದೇಶಪೂರ್ವಕವಾಗಿ ಆ ಕಟ್ಟಿಗೆ ರಾಶಿಗೆ ಬೆಂಕಿ ಹಚ್ಚಬಹುದು ; ಅದಕ್ಕೂ ಹೋಳಿಯ ಜನರೇ ಕಾರಣರೆಂದೋ ಅಥವಾ ಹೋಳಿಯ ಬೆಂಕಿ ಗಾಳಿಗೆ ಹಾರಿ ಬಂದು ಕಟ್ಟಿಗೆ ಹತ್ತಿಕೊಂಡಿತು ಎಂದೋ ಪುಕಾರು ಎಬ್ಬಿಸಬಹುದು ; ಸಭೆಯಲ್ಲಿ ಭಾಗವಹಿಸಿದವರ ವಿರುದ್ಧ ಸಂಚು ಹೂಡಿ ಸತಾಯಿಸಬಹುದು - ಎಂದು ಅವರು ಶಂಕಿಸಿದ್ದರು. ನಮ್ಮ ಭಾವು ಮತ್ತು ಧತ್ತೆ ಇಬ್ಬರನ್ನೂ ಅಲ್ಲಿಯೇ ಬಿಟ್ಟು, ಹಿರಿಯ ನಾಯಕರನ್ನು ಕಳುಹಿಸಿಕೊಟ್ಟು ನಾನು ವಸತಿಗೃಹ ಸೇರುವ ಹೊತ್ತಿಗೆ ಹನ್ನೊಂದು ಹೊಡೆದಿತ್ತು.

ಪುಣೆಯಿಂದ ನಾಸಿಕಕ್ಕೂ ರಹಸ್ಯ ಸೂಚನೆ ಹೋಗಿತ್ತು. ಮರುದಿನ ಅಲ್ಲೂ ವಿಜಯದಶಮಿಯಂದು ಸಭೆ, ಮೆರವಣಿಗೆ ; ಅಲ್ಲೂ ವಿದೇಶಿ ವಸ್ತುಗಳ ಚಿತೆ ಧಗಧಗಿಸಿತು.

ಪುಣೆಯ ಹೋಳಿಯ ಕಿಚ್ಚು ಸರಕಾರವನ್ನು ರೊಚ್ಚಿಗೆಬ್ಬಿಸಿತು. ಹಿಂದುಸ್ಥಾನದ ಸಮಸ್ತ ಆಂಗ್ಲೋ ಇಂಡಿಯನ್ ಪತ್ರಿಕೆಗಳೂ ಹುಚ್ಚಾಪಟ್ಟೆ ಬರೆದವು. ಈ ಘಟನೆ ಕೇಳಿ ದಕ್ಷಿಣ ಆಫ್ರಿಕಾದಲ್ಲಿದ್ದ ಬ್ಯಾರಿಸ್ಟರ್ ಗಾಂಧಿಯವರೂ ಸಿಟ್ಟಾಗಿದ್ದರು. ಎಲ್ಲರಿಗಿಂತ ಹೆಚ್ಚು ಕೋಪ, ಗಾಬರಿ ನಮ್ಮ ಕಾಲೇಜಿನ ಅಧಿಕಾರ ವರ್ಗ

ದವರಿಗೆ ನನ್ನ ಮೇಲೆ ಸೂಕ್ತ ಕ್ರಮ ಕೈಗೊಳ್ಳಲು ಅವರಿಗೆ ಸರಕಾರದಿಂದ ಸೂಚನೆ ಬಂದಿತ್ತಂತೆ. ಒಂದಲ್ಲ, ಎರಡು ಶಿಕ್ಷೆಗಳನ್ನು ಅವರು ಏಕಕಾಲದಲ್ಲಿ ನನಗೆ ವಿಧಿಸಿದರು. ಬಹುಶಃ ಒಂದೇ ಶಿಕ್ಷೆ ನನ್ನ ದೇಶಭಕ್ತಿಗೆ ಕಡಿಮೆ ಪುರಸ್ಕಾರ ಎಂತಲೋ ಏನೋ! (ಮುಂದೆ ಬ್ರಿಟಿಷರು ಮಾಡಿದ್ದೂ ಹಾಗೆಯೇ!) ಮೊದಲನೆಯದಾಗಿ, ಉಗ್ರ ರಾಜಕಾರಣದಲ್ಲಿ ಭಾಗವಹಿಸಿದ್ದಕ್ಕಾಗಿ ಹತ್ತು ರೂ. ದಂಡ. ಎರಡನೆಯದಾಗಿ, ಇತರ ವಿದ್ಯಾರ್ಥಿಗಳನ್ನು ಕೆಡಿಸಿ ಹಾಳುಮಾಡದಂತೆ ವಸತಿಗೃಹದಿಂದ ಮತ್ತು ಕಾಲೇಜು ತರಗತಿಗಳಿಂದ ಉಚ್ಚಾಟನೆ! ಆದರೆ ಪಾಪ, ನನ್ನ ಸಹವಾಸದಿಂದ ಮೊದಲೇ ನಾಕಷ್ಟು ವಿದ್ಯಾರ್ಥಿಗಳು 'ಕೆಟ್ಟು ಹಾಳಾಗಿದ್ದರು', 'ಹುಚ್ಚರಾಗಿದ್ದರು' ಎಂಬುದನ್ನು ಆ ಸದ್ಗೃಹಸ್ಥರು ಅರಿಯರು. ಒಂದು ವೇಳೆ ಅರಿತಿದ್ದರೆ, ದುಷ್ಟ ವಿದ್ಯಾರ್ಥಿಗಳ ಸಂಪರ್ಕದಿಂದ ವಸತಿಗೃಹವನ್ನೇ ಉಚ್ಚಾಟಿಸಬೇಕಾಗಿ ಬರುತ್ತಿತ್ತು!

ಶಿಕ್ಷೆಯಿಂದ ನನಗುಂಟಾದ ನಷ್ಟ ಅಷ್ಟರಲ್ಲೆ ಇತ್ತು ; ಲಾಭವೇ ಹೆಚ್ಚು. ಸಮರ್ಥ ವಿದ್ಯಾರ್ಥಿ ಮುಖಂಡನೆಂಬ ಕೀರ್ತಿ ಭಾರತದಾದ್ಯಂತ ಹರಡಿತು ! ಆಗ ನಾನಿದ್ದುದು ಅಂತಿಮ ವರ್ಷದ ಬಿ.ಎ ತರಗತಿಯಲ್ಲಿ. ಕಾಲೇಜಿನ ಉಪಾಂತ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದೆ ; ಅರ್ಹತಾ ಪತ್ರಗಳೆಲ್ಲವೂ ಕೈಗೆ ಬಂದಿದ್ದವು. ಅದರಿಂದ ಪರೀಕ್ಷೆಗೆ ಕುಳಿತುಕೊಳ್ಳಲು ಏನೂ ತೊಂದರೆ ಆಗಲಿಲ್ಲ.

ಇನ್ನು, ದಂಡ ತೇರಬೇಕಾಗಿದ್ದ ದುಡ್ಡು. ವಿದ್ಯಾರ್ಥಿಗಳು ಸ್ವಯಂ ಸ್ಫೂರ್ತಿಯಿಂದ ಸಹಾಯನಿಧಿ ಸಂಗ್ರಹಿಸಿ ತಂದರು. ಅದರಲ್ಲಿ ದಂಡ ತೆರಲು ಹತ್ತು ರೂ. ಮಾತ್ರ ತೆಗೆದುಕೊಂಡು ಉಳಿದುದನ್ನು 'ಪೈಸಾ ಫಂಡ್' (ಸ್ವದೇಶಿ ಕೈಗಾರಿಕೆಗಳ ಸ್ಥಾಪನೆಗೆ ಕಾಳೆಯವರು ಸ್ಥಾಪಿಸಿದ್ದ ನಿಧಿ) ಗೆ ಕೊಟ್ಟುಬಿಟ್ಟೆ. ನಾರಾಯಣ ಪೇಟೆಯಲ್ಲಿದ್ದ ಓರ್ವ ಗೆಳೆಯನ ಮನೆಯಲ್ಲಿ ವಸತಿ ಹೂಡಿದೆ.

ನನ್ನ ಶಿಕ್ಷೆಯ ವಿರುದ್ಧ ಅಕ್ಟೋಬರ್ 16ರಂದು ಪುಣೆಯಲ್ಲಿ ಪ್ರಚಂಡ ಪ್ರತಿಭಟನಾ ಸಭೆ ಜರುಗಿತು. ಲೋಕಮಾನ್ಯ ತಿಲಕರು ಕಾಲೇಜಿನ ಅಧಿಕಾರ ವರ್ಗವನ್ನು ತರಾಟೆಗೆ ತೆಗೆದುಕೊಳ್ಳದೆ ಬಿಡಲಿಲ್ಲ. ದಿ|| 17 ಮತ್ತು 24ರಂದು 'ಕೇಸರಿ' ಯಲ್ಲಿ 'ಇಂಥವರು ನಮ್ಮ ಗುರುಗಳಾಗಲು ಅನರ್ಹರು' ಎಂದು ಬರೆದರು. ಆ ಲೇಖನಕ್ಕೆ 'ಕಾಗೆ ಶಿಖರದ ಮೇಲೆ ಕುಳಿತರೆ ಗರುಡ ಆಗುವುದಿಲ್ಲ' ಎಂಬ ಶೀರ್ಷಿಕೆ ಕೊಟ್ಟರು. ಫರ್ಗುಸನ್ ಕಾಲೇಜಿನ ಅಧಿಕಾರವರ್ಗ ತನ್ನ ಪುಕ್ಕಲು ನೀತಿಗೆ ತಕ್ಕ ಪ್ರಾಯಶ್ಚಿತ್ತ ಅನುಭವಿಸಿತು. ಆದರೆ ಆ ಪಾಠದಿಂದ ಅವರು ಬುದ್ಧಿ ಕಲಿಯಲಿಲ್ಲ. ಮರುವರುಷ ಜೋಗಳೇಕರನನ್ನು 'ರಾಜದ್ರೋಹ' ದ ಆಪಾದನೆಯ ಮೇಲೆ ಹೊರದಬ್ಬಿದರು. ಆಗ ಅವರಿಗೆ ಮತ್ತೊಮ್ಮೆ ಮುಖಭಂಗ ಆಯಿತು. ಏಕೆಂದರೆ, ಯಾವ ವಿದ್ಯಾರ್ಥಿಯನ್ನು 'ರಾಜದ್ರೋಹ' ಆಪಾದನೆಯ ಮೇಲೆ 'ರಾಷ್ಟ್ರೀಯ ಶಿಕ್ಷಣ ಸಂಸ್ಥೆ' ಯಾದ ಫರ್ಗುಸನ್ ಕಾಲೇಜು ಉಚ್ಚಾಟಿಸಿತೋ ಅದೇ ವಿದ್ಯಾರ್ಥಿಯನ್ನೇ, ಹೇಳಿಕೇಳಿ ಸರಕಾರಿ ಸಂಸ್ಥೆಯಾದ ಡೆಕ್ಕನ್ ಕಾಲೇಜಿಗೆ ಬ್ರಿಟಿಷರಾದ ಪ್ರೊಫೆಸರ್ ಬೆನ್ ಸಂತೋಷದಿಂದ ಸೇರಿಸಿಕೊಂಡರು! ಫರ್ಗುಸನ್ ಕಾಲೇಜಿನ ಆಡಳಿತವರ್ಗದ ಅನಗತ್ಯ ಗಾಬರಿ ಹಾಗೂ ಅತ್ಯಂದ ಮೆದುಗತನಕ್ಕೆ ಅದಕ್ಕಿಂತ ದೊಡ್ಡ ರುಜುವಾತು ಅನಗತ್ಯ. ಜೋಗಳೇಕರ್ ಸರಕಾರಿ ಕಾಲೇಜು ಸೇರಿದ್ದು ನಮ್ಮ ಕ್ರಾಂತಿ ಚಳವಳಿಯ ದೃಷ್ಟಿಯಿಂದಲೂ ಉತ್ತಮವೇ ಆಯಿತು. ಅವನು ಮೋಡಕ್, ಆಪಟೆ, ಅಮಳನೇರಿನ ಘಾಟಕ್, ಆಚಾರ್ಯ ಕೃಪಲಾನಿ ಮುಂತಾದ ದೇಶಭಕ್ತ ತರುಣರನ್ನು ಅಭಿನವ ಭಾರತಕ್ಕೆ ಸೇರಿಸಿದ. ಅಲ್ಲಿನ ಶಾಖೆಯನ್ನು ಸುವ್ಯವಸ್ಥಿತವಾಗಿ ನಡೆಸತೊಡಗಿದ. ಸದ್ಯಕ್ಕೆ ಅದಂತಿರಲಿ.

ನನ್ನ ಬಿ ಎ. ಪರೀಕ್ಷೆಗೆ ಕೇವಲ ಒಂದು ತಿಂಗಳು ಉಳಿದಿತ್ತು. ಇಡೀ ವರ್ಷ ಸಭೆ ಸಮ್ಮೇಳನ, ಚಳವಳಿ

ಭಾಷಣ, ಕ್ರಾಂತಿಕಾರಿ ಸಂಘಟನೆ, ಪಠ್ಯೇತರ ಅಧ್ಯಯನ ಇತ್ಯಾದಿಗಳಲ್ಲಿ ಕಳೆದುಹೋಗಿತ್ತು. ವಸತಿಗೃಹದ ಸೌಲಭ್ಯವೂ ಸೊನ್ನೆಯಾಗಿತ್ತು. ಅಕಸ್ಮಾತ್ ತೇರ್ಗಡೆ ಆಗದಿದ್ದರೆ ನಮ ಮಾವ ಧನದಾತ ಚಿಪಳೂಣಕರ್ ಏನೆಂದುಕೊಂಡಾರು ? ನನ್ನ ಬಗ್ಗೆ ಉಚ್ಚ ಕಲ್ಪನೆ ಇಟ್ಟುಕೊಂಡಿರುವ ತಿಲಕರು, ಪರಾಂಜಪೆಯವರು, ಇನ್ನಿತರ ಅಸಂಖ್ಯ ಹಿತಚಿಂತಕರಿಗೆ ಮುಖ ಹೇಗೆ ತೋರಿಸಲಿ ? ಎಲ್ಲಕ್ಕಿಂತ ಮಹತ್ವದ ಪ್ರಶ್ನೆ ಇನ್ನೊಂದಿತ್ತು. ಆ ಕಾಲದಲ್ಲಿ - ಆಟದಲ್ಲಿ ಮುಂದಾದರೆ ಪಾಠದಲ್ಲಿ ಹಿಂದು ; ಕ್ರೀಡಾಪಟು ಎಂದರೆ ಶುದ್ಧ ಉಡಾಳ - ಎಂಬ 'ಖ್ಯಾತಿ' ಕ್ರೀಡಾಕ್ಷೇತ್ರಕ್ಕೆ ಕಾಲಿಟ್ಟಿತ್ತು. ನನ್ನೊಬ್ಬನ ತಪ್ಪಿನಿಂದಾಗಿ ಅದೇ ಭಾವನೆ ದೇಶಭಕ್ತರ ಬಗ್ಗೆಯೂ ಹುಟ್ಟಿಕೊಂಡರೆ? ಕ್ರಾಂತಿಯ ಕ್ಷೇತ್ರಕ್ಕೂ ಅದೇ ರೀತಿಯ ಅಪಖ್ಯಾತಿ ಅಂಟಿಕೊಂಡುಬಿಟ್ಟರೆ? ಅದಕ್ಕಾಗಿ ಅಭಿನವ ಭಾರತದ ಯಾವ ವಿದ್ಯಾರ್ಥಿ ಸದಸ್ಯನೂ ಪರೀಕ್ಷೆಗಳಲ್ಲಿ ಅನುತ್ತೀರ್ಣನಾಗಬಾರದೆಂಬ ನಿಯಮವನ್ನು ಕಡ್ಡಾಯ ಮಾಡಿದ್ದೆವು. ನಾನೇ ನಿಯಮಭಂಗ ಮಾಡಬಹುದೆ ? ಮುಂದಾಳು ತಾನೇ ಹಿಂದೆಬೀಳಬಹುದೆ ?

ಅಗಾಧ ಚಿಂತೆ ಹತ್ತಿಕೊಂಡಿತು. ನನ್ನೊಬ್ಬನ ವಿಫಲತೆ ಸ್ವಾತಂತ್ರ್ಯ ಚಳವಳಿಗೆ ಧುಮುಕುವ ಸಹಸ್ರಾರು ವಿದ್ಯಾರ್ಥಿಗಳ ಮೇಲೆ ಎಂಥ ದುಷ್ಪರಿಣಾಮ ಬೀರೀತು ! ಜನ ಏನೆಲ್ಲ ಆಡಿಕೊಳ್ಳುವಂತಾದೀತು ! ಅದನ್ನು ಕಲ್ಪಿಸಿಕೊಳ್ಳುತ್ತಲೇ ನನ್ನ ಜನ್ಮಜಾತ ಪ್ರವೃತ್ತಿ ಜಾಗೃತವಾಯಿತು. ಕಠಿನ ಪ್ರಸಂಗಗಳಲ್ಲಿ ನನ್ನದು ಅಳುಕದ ಮನಸ್ಸು; ಬಿಕ್ಕಟ್ಟುಗಳಲ್ಲಿ ದುರ್ದಮ್ಯವಾಗಿ ಬೆಳೆದು ನಿಲ್ಲುತ್ತದೆ, ಇದರ ಹುಮ್ಮಸ್ಸು ದುಃಖ ವಿಪತ್ತುಗಳಲ್ಲಿ ಈ ಜೀವ ಕಲ್ಲಾಗಬಲ್ಲದು ; ಕರಗಲೊಲ್ಲದು. ಪಟ್ಟಾಗಿ ಕುಳಿತೆ, ಓದಿದೆ. ಪರೀಕ್ಷೆಗೆ ಹೋದೆ, ಬರೆದೆ. 1905ರ ಡಿಸೆಂಬರಿನಲ್ಲಿ ಫಲಿತಾಂಶ ಪ್ರಕಟವಾಯಿತು. ನನಗೆ ತೇರ್ಗಡೆಯಾಗಿತ್ತು.

ಓದಲು ಕುಳಿತ ಸಮಯದಲ್ಲಿ ವಿಘ್ನಗಳು ಬಾರದೆ ಇರಲಿಲ್ಲ 'ಭಾಲಾ' ಪತ್ರಿಕೆಯಲ್ಲಿ ಪ್ರಕಟವಾಗಿದ್ದ 'ನರಕದ ದರ್ಬಾರು' ಎಂಬ ಲೇಖನದ ಮೇಲೆ ಸರ್ಕಾರ ಮೊಕದ್ದಮೆ ಹೂಡಿತು. ಆ ಲೇಖನದ ಕರ್ತೃ ನಮ್ಮ ಅಭಿನವ ಭಾರತದ ಕಾರ್ಯದರ್ಶಿ ದಾಜಿ ನಾಗೇಶ ಆಪಟೆ. ಅವನು ಅದನ್ನು ಮೊದಲು ಫರ್ಗುಸನ್ ಕಾಲೇಜಿನ ಹಸ್ತಲಿಖಿತ ಮಾಸಪತ್ರಿಕೆಗೆ ಕೊಟ್ಟಿದ್ದ. ಅದರಿಂದ 'ಭಾಲಾ' ಸಾಲ ಪಡೆದಿತ್ತು ! ನಾನು ಪಠ್ಯಪುಸ್ತಕ ಪಕ್ಕಕ್ಕಿಟ್ಟು ಕಾಲೇಜಿಗೆ ಹೋದೆ. ಮೂಲ ಲೇಖನ ಹುಡುಕಿ ತೆಗೆದು, ಅದನ್ನು ಇಲ್ಲದಂತೆ ಮಾಡಿದಾಗಲೇ ಮನಸ್ಸಿಗೆ ಸಮಾಧಾನವಾಯಿತು. ಹಳ್ಳಿಗೆ ಹೋಗಿದ್ದ ಆಪಟೆಗೂ ಎಚ್ಚರಿಕೆಯ ಸೂಚನೆ ಕಳುಹಿಸಿಕೊಟ್ಟೆ.

ಪರೀಕ್ಷೆಯಲ್ಲಿ ನನ್ನ ವಿಜಯ ವೈಯಕ್ತಿಕವಾಗಿರದೆ ಸಾರ್ವಜನಿಕವಾಗಿತ್ತು. ದಿಕ್ಕುದಿಕ್ಕಿನಿಂದ ಅಭಿನಂದನೆಗಳು ಹರಿದುಬಂದವು. ಸಿಕ್ಕಸಿಕ್ಕಲ್ಲಿ ಸತ್ಕಾರಗಳು ನಡೆದವು. ಅಭಿನವ ಭಾರತದ ಮಿತ್ರರ ಹೃದಯ ಹಿಗ್ಗಿ, ಎದೆ ಉಬ್ಬಿತು. ರಾಜಕಾರಣಕ್ಕೂ ಕ್ರಾಂತಿಕಾರ್ಯಕ್ಕೂ ಕಾಲಿಟ್ಟಿದ್ದ ತರುಣರ ಮನಃಸ್ಥೈರ್ಯಕ್ಕೆ ಆನೆಯ ಬಲ ಕೂಡಿಕೊಂಡಿತು. ಯಶಸ್ಸಿನಂತಹ ಯಶೋಮಾರ್ಗ ಬೇರೊಂದಿಲ್ಲ ! *(Nothing succeeds like success)*.

ಬಿ.ಎ. ಪರೀಕ್ಷೆ ಮುಗಿದ ನಂತರ ಫಲಿತಾಂಶ ಬರುವವರೆಗೆ ಇಡೀ ಮಹಾರಾಷ್ಟ್ರ ಸಂಚರಿಸಿದೆ. ಪುಣೆಯಲ್ಲಿನ ವಿದೇಶಿ ವಸ್ತ್ರ ದಹನದ ಪ್ರಸಂಗ ಅದಕ್ಕೆ ಮುಖ್ಯ ಕಾರಣ. ಅಹಮದ್‌ನಗರ, ನಾಸಿಕ, ಭಿವಂಡಿ, ಪುಣೆ ಇತ್ಯಾದಿ ಪ್ರಮುಖ ಸ್ಥಾನಗಳಲ್ಲಿ ವ್ಯಾಖ್ಯಾನಗಳು ಏರ್ಪಟ್ಟವು. ಒಂದೆರಡು ತಿಂಗಳ ಕಾಲ ಪ್ರವಾಸ, ಭಾಷಣ, ಸ್ವದೇಶಿ ಪುರಸ್ಕಾರ, ವಿದೇಶಿ ಬಹಿಷ್ಕಾರ ಸತತವಾಗಿ ನಡೆಯಿತು. ಅದರ ಜತೆಗೇ ಅಲ್ಲಲ್ಲಿನ ಅಭಿನವ ಭಾರತದ ಶಾಖೆಗಳ ಸ್ಥಾಪನೆಗೂ ಬೆಳವಣಿಗೆಗೂ ಅವಕಾಶವಾಯಿತು.





# ಹವಿಸ್ಸು ಒಂಬತ್ತು

ಗಿರಗಾವಿಯ ಟ್ರಾಮ್ ಟರ್ಮಿನಸ್ ಬಳಿ 'ಸುಖನಿವಾಸ' ಹೋಟೆಲು ಇತ್ತು ಮುಂಬೈನಲ್ಲಿ ಅದೇ ನಾವು ಆರಿಸಿಕೊಂಡ ನಿವಾಸ 'ನಾವು' ಎಂದರೆ ನಾನು ಮತ್ತು ವಿಷ್ಣು ಮಹಾದೇವ ಭಟ್ ಅವನನ್ನು ಭಾವು ಎಂದೇ ನಾನು ಕರೆಯುತ್ತಿದ್ದುದು , ನನಗೆ ಸಂಬಂಧಿಯೂ ಆಗಬೇಕು ನಾನು 1906 ಜನವರಿಯಲ್ಲಿ ಎರಡನೆ ಎಲ್.ಎಲ್ ಬಿ. ತರಗತಿಗೆ ಸೇರಿದೆ ಭಾವು ವಿಲ್ಸನ್ ಕಾಲೇಜಿನಲ್ಲಿ ಬಿ ಎ ಅಂತಿಮ ವರ್ಷಕ್ಕೆ ಸೇರಿದ

ಇಬ್ಬರೂ ಮುಂಬೈನ ತರುಣ ವಿದ್ಯಾರ್ಥಿಗಳ ನಡುವೆ ಕ್ರಾಂತಿವಿಚಾರದ ಪ್ರಚಾರ ಪ್ರಾರಂಭಿಸಿದೆವು ವಿಲ್ಸನ್ ಕಾಲೇಜಿನಲ್ಲಿ ಓದುತ್ತಿದ್ದ ಬಿ ಜಿ. ಖೇರ್, ವಾ.ದಾ ಗುಣೆ, ಧಾರವಾಡದ ಚಂದಾವರಕರ್, ಗುಂಡಿಲ್, ಮುರ್ಡೇಶ್ವರ್ ಮುಂತಾದವರು ಅಭಿನವ ಭಾರತದ ಶಪಥ ಸ್ವೀಕರಿಸಿದರು ಸಾಪ್ತಾಹಿಕ ಗುಪ್ತಸಭೆ, ವಾಚನ, ಲೇಖನ ಇತ್ಯಾದಿ ಚಟುವಟಿಕೆಗಳೂ ಪ್ರಾರಂಭವಾದವು ಬರೋಡದ ಸರದಾರ ಮುಜುಮದಾರ್, ಡಹಣದ ಕರಂದೀಕರ್, ಭಾಟೆ, ಗೋರೆ, ಶಿವರಾಮಪಂತ ಅಭ್ಯಂಕರ್ ಮುಂತಾದ ಎಷ್ಟೋ ತರುಣರು ಬೈರಕ್‌ಗಳಿಗೆ ಬರುತ್ತಿದ್ದರು

ಕೆಲವೇ ದಿನಗಳಲ್ಲಿ 'ವಿಹಾರಿ' ವಾರಪತ್ರಿಕೆಯ ಪರಿಚಯವಾಯಿತು ಘಾಟಕರೆಂಬ ದೇಶಭಕ್ತ ಮಹನೀಯರು ಅದರ ಮಾಲಿಕರು ಪ್ರಸಿದ್ಧ ಲೇಖಕರೂ ಅಭಿನವ ಭಾರತದ ಸದಸ್ಯರೂ ಆದ ಭಾಸ್ಕರವಿಷ್ಣು ಫಡಕೆ ಅದರ ಸಂಪಾದಕರು ಘಾಟಕರ ಒತ್ತಾಯದ ಮೇಲೆ ನಾನೂ 'ವಿಹಾರಿ'ಯಲ್ಲಿ ಬರೆಯಲಾರಂಭಿಸಿದೆ ಅಭಿನವ ಭಾರತದ ವಿಚಾರ ಮಂಡಿಸಲು ಅದೊಂದು ದೈವದತ್ತ ಸಾಧನವಾಯಿತು ನನ್ನ ಲೇಖನಗಳು ಬಂದಂತೆಲ್ಲ ಪತ್ರಿಕೆಯ ಪ್ರಭಾವ ಹಾಗೂ ಪ್ರಸಾರ ಹೆಚ್ಚತೊಡಗಿತು ಬಂಗಾಲದ 'ಸಂಧ್ಯಾ', 'ಯುಗಾಂತರ', ವಂದೇ ಮಾತರಂ'ಗಳಂತೆಯೇ 'ವಿಹಾರಿ'ಯೂ ಸಮಕಾಲೀನ ಪತ್ರಿಕಾರಂಗದಲ್ಲಿ ಉಚ್ಚಸ್ಥಾನಕ್ಕೇರಿತು ಕೆಲವೊಮ್ಮೆ ಪತ್ರಿಕೆಯ ಪೂರಾ ಜವಾಬ್ದಾರಿ ನನ್ನ ಮೇಲೆಯೇ ಬರುವಷ್ಟು ನಿಕಟ ಸಂಬಂಧ ಬೆಳೆಯಿತು

ಒಮ್ಮೆ 'ವಂದೇ ಮಾತರಂ' ಎಂಬ ಶೀರ್ಷಿಕೆಯುಳ್ಳ ಅಗ್ರಲೇಖ ಬರೆದೆ ಅದರ ಕೆಲವು ಸಾಲುಗಳಿವು 'ಭಾರತಮಾತೆ ಮೂವತ್ತು ಕೋಟಿ ಮಕ್ಕಳ ತಾಯಿ ಕೇವಲ ನಮ್ಮ ಜತೆಗೆ ಆಡುವುದಕ್ಕಾಗಿ ಕೆಲವು

ಅನ್ಯಸ್ತ್ರೀಯರ ಮಕ್ಕಳು ಬಂದಿದ್ದಾರೆ. ಈ ಆರ್ಯಮಾತೆ ಆ ಪರಕೀಯ ಕೂಸುಗಳನ್ನು ಉದಾರ ಬುದ್ಧಿಯಿಂದಲೂ ಸಹೃದಯ ಅಂತಃಕರಣದಿಂದಲೂ ತನ್ನ ತೊಡೆಯ ಮೇಲೆ ನಮಗೆ ಸರಿಸಮನಾಗಿ ಕೂಡಿಸಿಕೊಂಡಿರುವುದು ನಿಜ. ಅಂದಮೇಲೆ ಅದು ಆಕೆಯ ಔದಾರ್ಯವೇ ಹೊರತು, ಅವರ ಹಕ್ಕಲ್ಲ.'

ಹೀಗೇ ಲೇಖನ ಮುಂದುವರಿದು ಹಿಮಾಲಯದ ವರ್ಣನೆ ಬರುತ್ತದೆ ; 'ಸಮಸ್ತ ವಿಶ್ವದಲ್ಲಿ ಹರಡಿರುವ ಸಹಸ್ರಾರು ಭೂಭಾಗಗಳಲ್ಲಿ ಹಿಂದುಸ್ಥಾನದಂಥ ರಮಣೀಯ ದೇಶ ಬೇರೆ ಯಾವುದಾದರೂ ಉಂಟೇನು ಎಂದು ನೋಡಲು ಹಿಮಾಲಯ ಪರ್ವತ ಮೇಲೆದ್ದು ನಿಲ್ಲತೊಡಗಿತು. ಇಡೀ ಜಗತ್ತು ಕಣ್ಣಿಗೆ ಬೀಳುವಷ್ಟು ಎತ್ತರಕ್ಕೆ ತನ್ನ ತಲೆ ಎತ್ತಿ ನೋಡಿತು. ಆದರೂ ಇಂಥ ಸರ್ವಸುಂದರ ದೇಶ ಇನ್ನೆಲ್ಲೂ ಕಣ್ಣಿಗೆ ಬೀಳಲಿಲ್ಲ ! ಭೂಲೋಕದಲ್ಲಂತೂ ಇದರಷ್ಟು ಚೆಲುವಾದ ಭೂಭಾಗ ಇಲ್ಲ, ಇನ್ನು ಸ್ವರ್ಗದಲ್ಲಾದರೂ ಉಂಟೇ ನೋಡೋಣ ಎಂದು ವಿಜಯದ ಹೆಮ್ಮೆಯಿಂದ ಹಿಮಾಲಯವು ಸ್ವರ್ಗದ ಬಾಗಿಲುಗಳನ್ನೂ ತಳ್ಳಿಕೊಂಡು ಒಳಗೆ ನುಗ್ಗಿತು. ಆದರೆ ಹೇ, ಆರ್ಯಭೂಮಿ, ನಿನಗೆ ಸರಿಸಮನಾದ ಸೊಬಗಿನ ದೃಶ್ಯ ಕಾಣುವುದು ಹಾಗಿರಲಿ, ನಿನ್ನ ಹಿಮಾಲಯದ ಸ್ಫಟಿಕ ಶುಭ್ರ ಶಿಖರ ಸೌಧಗಳನ್ನು ಕಾಣುತ್ತಲೇ ಅದಕ್ಕೆ ದೇವೇಂದ್ರನ ಅಮರಾವತಿಯ ಅಪ್ಸರೆಯರೂ ಮನಸೋತು ಜೋತುಬಿದ್ದರು !.... ಹೇ, ಹಿಂದು ಭೂಮಿ, ಅಂಥ ಹಿಮಾಲಯದಿಂದ ನೀನು ಅಲಂಕೃತಳಾಗಿರುವೆ !.... ಇಡೀ ಜಗತ್ತಿನ ಮೇಲ್ಮೈಗೆ ಕವಚ ತೊಡಿಸಿ ಅಲಂಕರಿಸಬಹುದಾದಷ್ಟು ಚಿನ್ನ, ಬೆಳ್ಳಿಗಳನ್ನೂ, ವಜ್ರ ವೈಢೂರ್ಯಗಳನ್ನೂ, ಹೇ, ಆರ್ಯ ಭೂಮಾತೆ, ನೀನು ನಿನ್ನ ಭೂಗರ್ಭದ ಸಹಸ್ರಾರು ಗಣಿಗಳಲ್ಲಿ ನಮಗಾಗಿ ಜೋಪಾನವಾಗಿ ಸಂರಕ್ಷಿಸಿ ಇಟ್ಟುಕೊಂಡಿರುವೆ.... ಅಪರಿಮಿತ ಹೊನ್ನು ರನ್ನಗಳಿಂದ ಶೋಭಿಸುವ ಸುವರ್ಣ ಭೂಮಿಗೆ, ಅಗಣಿತ ವಜ್ರಭಂಡಾರಗಳಿಂದ ತೇಜೋಮಯವಾಗಿರುವ ಆರ್ಯವಸುಂಧರೆಗೆ ನಮ್ಮ ಪ್ರಣಾಮಗಳು!

'.... ಎಲ್ಲಿ ಸದಾಕಾಲವೂ ಭೂಮಿಯ ಸಸ್ಯಶೋಭೆಯಿಂದ ಕೂಡಿದೆಯೋ, ಎಲ್ಲಿ ಕ್ರಮಾನುಗತವಾಗಿ ಹೊಲಗದ್ದೆಗಳು ತಮ್ಮ ಧನಧಾನ್ಯ ಸಂಪನ್ನವಾದ ಹಸ್ತಗಳನ್ನು ಮೇಲೆತ್ತಿ ನರ್ತಿಸುತ್ತಾ, ಇಡೀ ಮಾನವ ಜನಾಂಗದ ಯೋಗಕ್ಷೇಮವನ್ನು ನೋಡಿಕೊಳ್ಳಲು ನಾವು ಸಮರ್ಥರಾಗಿದ್ದೇವೆ ಎಂಬುದನ್ನು ಯಥಾರ್ಥ ಸ್ವಾಭಿಮಾನದಿಂದ ಪ್ರದರ್ಶಿಸುತ್ತಿರುವುವೋ, ಎಲ್ಲಿ ಕುದುರೆಗಳ ಬೆನ್ನುಗಳನ್ನು ಸ್ವತಃ ಪರಮಾತ್ಮನೇ ತನ್ನ ಕರಕಮಲಗಳಿಂದ ಸವರಿ ಪಾವನಗೊಳಿಸುತ್ತಿದ್ದಾನೆಯೋ, ಎಲ್ಲಿ ಗೋವುಗಳ ಕ್ಷೀರ ಸಮೃದ್ಧವಾಗಿದೆಯೋ - ಅಂತಹ ಸುಭಿಕ್ಷಳೂ ಸುಸಂಪನ್ನಳೂ ಆದ ಭಾರತ ಭೂದೇವಿಗೆ ನಮ್ಮ ಪ್ರಣಾಮಗಳು !

'.... ಜಗದ್ವಂದ್ಯನಾದ ಕಪಿಲ ಮಹರ್ಷಿಯು ಪ್ರೀತಿಯಿಂದ ''ಅಮ್ಮಾ'' ಎಂದು ಕರೆಯುವ ದೇಶ ಈ ಭೂಗ್ರಹದಲ್ಲಿ ಹಾಗಿರಲಿ, ಎಲೈ ಚಂದ್ರ-ಮಂಗಳ-ಬುಧ ಗ್ರಹಗಳೇ, ನಿಮ್ಮಲ್ಲಿಯಾದರೂ ಇನ್ನೊಂದು ಇದೆಯೆ ? ಭಾಸ್ಕರಾಚಾರ್ಯ, ಆರ್ಯಭಟ, ವರಾಹಮಿಹಿರರು ಈ ಭೂಮಿಯ ಆಹಾರ ಸೇವನೆಯಿಂದ ಹುಟ್ಟಿದ ತೀವ್ರ ಸಂವೇದನೆಯಿಂದಾಗಿ ಗಣಿತ-ಜ್ಯೋತಿಷ-ಭೂಗೋಳ ಶಾಸ್ತ್ರಗಳ ಸಂಶೋಧನೆ ಮಾಡಿದರು. ದಶಾಂಶ ಪದ್ಧತಿ ಕಂಡುಹಿಡಿದದ್ದು ಈ ಭೂಮಿ ; ಗುರುತ್ವಾಕರ್ಷಣೆಯ ಜ್ಞಾನ ಕೊಟ್ಟದ್ದು ಈ ಭೂಮಿ ; ಭೂಮಿತಿ ಶಾಸ್ತ್ರ ಹುಟ್ಟಿದ್ದು ಈ ಭೂಮಿಯಲ್ಲಿ.... ಇದೇ ಭೂತಾಯಿಯ ಕೋಮಲ ಕಂಠದಿಂದ ಸಪ್ತಸ್ವರಗಳು ಉಗಮಿಸಿದವು. ಜಗತ್ತಿಗೆ ವ್ಯಾಕರಣ ಶಾಸ್ತ್ರದ ಕೊಡುಗೆ ನೀಡಿದ್ದೂ ಇದೇ ಭೂಮಿಯ ಪ್ರತಿಭೆಯೇ.' ಹೀಗೆಯೇ ಮುಂದುವರಿಯುತ್ತದೆ ಆ ಲೇಖನ. ನಾಗಪುರದ ಮಹಾಮಹೋಪಾಧ್ಯಾಯ ಬಾಳ ಶಾಸ್ತ್ರಿ ಹರದಾಸರು ನನ್ನ ಕೃತಿಗಳ ಬಗ್ಗೆ ಬರೆಯುತ್ತಾ, 'ಸಾವರಕರ್ ಲೇಖನಿಯು ಸೃಷ್ಟಿಸಿದ

ಸಾಹಿತ್ಯದಲ್ಲೇ ಈ ಲೇಖನ ಅತ್ಯಪೂರ್ವವಾದ ವಿಶಿಷ್ಟ ಸ್ಥಾನ ಗಳಿಸಿದೆ' ಎಂದು ಅಭಿಪ್ರಾಯಪಟ್ಟಿದ್ದಾರೆ

ನಾನು ಪುಣೆಯಲ್ಲಿದ್ದಾಗ ನಮ್ಮ ಭಾವೂ ಮತ್ತು ದಾ.ನಾ. ಆಪಟೆ ಲೇಖನಕಲೆಯಲ್ಲಿ ಚೆನ್ನಾಗಿ ಸುರಿತಿದ್ದರು. ನಾನು ಇಂಗ್ಲೆಂಡಿಗೆ ಹೋದ ನಂತರ ನಮ್ಮ ಭಾವು 'ವಿಹಾರಿ' ಗೆ ಲೇಖನ ಬರೆಯತೊಡಗಿದ ಕೆಲವೇ ದಿನಗಳಲ್ಲಿ ಆ ಬರಹಗಳ ಮೇಲೆ 'ರಾಜದ್ರೋಹ' ದ ಆಪಾದನೆ ಬಂತು. ಭಾಸ್ಕರರಾವ್ ಫಡಕೆ ಮತ್ತು ನಂತರ ರಾಮಭಾವು ಮಾಂಡಲಿಕ್ ಇಬ್ಬರಿಗೂ ಶಿಕ್ಷೆಯಾಗಿ 'ವಿಹಾರಿ' ಕೊನೆಯುಸಿರೆಳೆಯಿತು! ಆಪಟೆಯ ಲೇಖನ ಪ್ರಕಟಿಸುತ್ತಿದ್ದ 'ಭಾಲಾ' ಪತ್ರಿಕೆಗೂ ಸರಕಾರದ ಶನಿಕಾಟ ತಪ್ಪಲಿಲ್ಲ. ಮೊಕದ್ದಮೆ ನಡೆದು, ಸಂಪಾದಕರಾದ ಭೋಪಟಕರರಿಗೆ ಶಿಕ್ಷೆಯಾಯಿತು. ಅಭಿನವ ಭಾರತದಲ್ಲಿ ತಯಾರಾದ ಲೇಖಕರ ಪ್ರಖರತೆಗೆ ಸಣ್ಣಪುಟ್ಟ ಸಾಕ್ಷಿಗಳು ಇವು!

1906ರ ಫೆಬ್ರವರಿ ಮೂರನೆ ವಾರ ಇರಬಹುದು. ಮುಂಬೈನ ಕಾರ್ಯ ಚಟುವಟಿಕೆಗಳಲ್ಲಿ ಮಗ್ನನಾಗಿದ್ದೆ. ಆಗ ಇದ್ದಕ್ಕಿದ್ದಂತೆ ಪುಣೆಯ ಗೆಳೆಯರಿಂದ ಒಂದು ತಂತಿ ಬಂತು ಮಹಾತ್ಮಾ ಅಗಮ್ಯ ಗುರು ಪರಮಹಂಸರೆಂಬ ಸಂನ್ಯಾಸಿ ಫೆ. 17ರಂದು ಪುಣೆಯಲ್ಲಿ ಪ್ರತ್ಯಕ್ಷರಾಗಿದ್ದರು ಯುವಕರ ನಡುವೆ ಉಗ್ರ ಭಾಷಣಗಳನ್ನು ಮಾಡತೊಡಗಿದ್ದರು. ವಿದ್ಯಾರ್ಥಿಗಳಿಗೆ ಹೇಳುತ್ತಿದ್ದರು . 'ನೀವು ಒಂದು ಸಮಿತಿ ಮಾಡಿಕೊಂಡು, ಕೆಲವು ಮುಖಂಡರನ್ನು ಪ್ರತಿನಿಧಿಗಳನ್ನಾಗಿ ನನ್ನ ಹತ್ತಿರ ಕಳಿಸಿ. ನಾನು ಅವರಿಗೆ ಮಹತ್ವದ ಕ್ರಾಂತಿಕಾರಿ ಯೋಜನೆಗಳನ್ನು ತಿಳಿಸುತ್ತೇನೆ; ಮಾರ್ಗದರ್ಶನ ಮಾಡುತ್ತೇನೆ' ಎಂದರು. ನಾನು ಯುವಕರ ಪ್ರತಿನಿಧಿಯಾಗಿ ಭೇಟಿಗೆ ಹೋಗಬೇಕೆಂದು ಎಲ್ಲರ ಇಚ್ಛೆ. ಅದಕ್ಕಾಗಿ ಬಂದಿತ್ತು ತಂತಿ.

ಫೆ. 25ರಂದು ಪುಣೆಗೆ ಹೋದೆ. ಅಂದು ವಿದ್ಯಾರ್ಥಿಗಳ ಪ್ರಚಂಡ ಸಭೆಯೊಂದು ಏರ್ಪಟ್ಟಿತು. ನನ್ನ ಭಾಷಣವೂ ಆಯಿತು. ಬಳಿಕ 9 ಜನರ ಸಮಿತಿ ರಚಿತವಾಯಿತು. ಅದಕ್ಕೆ ನನ್ನದೇ ನೇತೃತ್ವ. ಎಲ್ಲರೂ ಅಗಮ್ಯ ಗುರುವಿನ ಭೇಟಿಗೆ ಹೊರಟೆವು. 'ರಾಷ್ಟ್ರೀಯ ರಾಜಕಾರಣದಲ್ಲಿ ಈಗ ಯಾವ ಕಾರ್ಯಕ್ರಮ ನಡೆಸಬೇಕು? ನಿಮ್ಮ ಮಾರ್ಗದರ್ಶನ ಏನು? ನಿಮ್ಮ ಸೂಚನೆಯ ಮೇರೆಗೆ ಬಂದಿರುವ ಈ ವಿದ್ಯಾರ್ಥಿ ಸಮಿತಿಗೆ ತಿಳಿಸಿ' ಎಂದೆ. ಆದರೆ ಸ್ವಾಮೀಜಿ ಹೇಳಿದ್ದು - ನಾಲ್ಕಾರು ಯೋಗ ಪ್ರಾಣಾಯಾಮಗಳ ಶಬ್ದ; ಅವರ ವಿದೇಶಿ ಪ್ರವಾಸದ ಅಪ್ರಯೋಜಕ ವರ್ಣನೆ; ಮೊದಲು ದೈವೀ ಅಧಿಷ್ಠಾನ ಬೇಕು ಎಂಬ ಕುಟಿಲ ಶಬ್ದಜಾಲ! ನಮ್ಮ ಸಮಯವೆಲ್ಲ ವ್ಯರ್ಥವಾಗುತ್ತಿತ್ತು. ಮಧ್ಯದಲ್ಲೇ ಅವರ ಮಾತು ತಡೆದು ಕೇಳಿದೆ: 'ಸ್ವಾತಂತ್ರ್ಯ ಚಳವಳಿಯ ಬಗ್ಗೆ ಏನು ಮಾರ್ಗದರ್ಶನ ಮಾಡಬೇಕೆಂದು ಇರುವಿರೋ ಮೊದಲು ಅದನ್ನು ಸ್ಪಷ್ಟವಾಗಿ ಹೇಳಿ.'

'ಈ ವಿದ್ಯಾರ್ಥಿಗಳಿಗೆ ಹೇಗೆತಾನೆ ಮಾರ್ಗದರ್ಶನ ಮಾಡಲಿ? ಇವರ ಕೈಯಿಂದ ಏನುತಾನೆ ಆದೀತು? ಮೊದಲು ಹಣ ಸಂಗ್ರಹಿಸಿಕೊಂಡು ಬನ್ನಿ ಎಂದು ಇವರಿಗೆ ಹತ್ತು ಸಲ ಹೇಳಿದರೂ, ಅದನ್ನು ಸಹ ಯಾರೂ ಮಾಡಲಿಲ್ಲ. ಈಗ ನೀವಾದರೂ ಹೋಗಿ ಹಣ ಕಳುಹಿಸಿ; ಅನಂತರ ಆ ರಹಸ್ಯ ಹೇಳುತ್ತೇನೆ' ಎಂದರು ಸ್ವಾಮೀಜಿ. ಗುರುವಿನ ಬಣ್ಣ ತಟ್ಟನೆ ನನಗೆ ಬಯಲಾಯಿತು. 25 ನಿಮಿಷದೊಳಗೇ ಭೇಟಿ ಮುಗಿಯಿತು. ಮೇಲೆದ್ದು ಹೊರಗೆ ಬಂದೆ. ಅನಂತರ ಅಭಿನವ ಭಾರತದ ಗೆಳೆಯರನ್ನು ಬೇರೆಯಾಗಿ ಕರೆದು ಕೇಳಿದೆ: 'ನಿಮ್ಮ ಹೆಸರಲ್ಲಿ ತಂತಿ ಕಳಿಸಿದ್ದೇಕೆ? ಅದನ್ನು ನೋಡಿ ನಾನು ಬಂದೆ. ಇಂಥ ಎಷ್ಟೋ ಗೋಸಾವಿ, ಸಂನ್ಯಾಸಿ, ಬೈರಾಗಿಗಳನ್ನು ನಾನು ಕಂಡಿದ್ದೇನೆ. ಇವನದು ಶುದ್ಧ ಮೋಸ; ಇದು ಕಪಟ ಸಂನ್ಯಾಸ. ದೂರ ಇಡಿ; ದೂರವಿರಿ.' ಎಚ್ಚರಿಕೆಯಿತ್ತು ನಾನು ಮುಂಬೈಗೆ ಹೊರಟೆ.

ಆ ಸಂನ್ಯಾಸಿಯ ಬಗ್ಗೆ ನನ್ನ ನಿಷ್ಕರ್ಷೆಯೆಂದರೆ - ಪುಣೆಯ ಯುವಕ ವರ್ಗದಲ್ಲಿ ರಾಷ್ಟ್ರೀಯ ಜಾಗೃತಿ ಮೂಡಿದ ಸುದ್ದಿ ಅವನಿಗೆ ಆಕರ್ಷಕವಾಗಿ ಕಂಡಿತು ಉತ್ಸಾಹಿ ಯುವಕರೆದುರು ದೇವರು, ಆಧ್ಯಾತ್ಮ, ಯೋಗಶಕ್ತಿ ಇತ್ಯಾದಿ ಬುರುಡೆ ಹೊಡೆದರೆ ಅವರು ತನ್ನ ಬಲೆಗೆ ಬೀಳುತ್ತಾರೆ ; ಕ್ರಾಂತಿಯ ಹೆಸರಲ್ಲಿ ಮುಗ್ಧರಾದ ಅವರ ಮೂಲಕ ಹಣ ಸಂಗ್ರಹಿಸಿ ಗಂಟುಮಾಡಿಕೊಳ್ಳಬಹುದು ; ಜತೆಗೆ ಯುವಕರ ಕ್ರಾಂತಿ ಪ್ರಯತ್ನಗಳೇನಾದರೂ ನಡೆದಿದ್ದರೆ ಆ ಗುಟ್ಟನ್ನು ಸರಕಾರಕ್ಕೂ ಮಾರಿ, ಆ ಕಡೆಯಿಂದಲೂ ಲಾಭ ಗಿಟ್ಟಿಸಬಹುದು ಎಂದು ಲೆಕ್ಕ ಹಾಕಿರಬೇಕು. ಅವನ ರಹಸ್ಯ ಯೋಜನೆ ಎಂದರೆ ಇದೇ! ಅವನ ಮಾತಿನ ಚಾತುರ್ಯ, ಕಾವಿ-ಭಸ್ಮಧಾರಣೆ ಕಂಡು ವಿದ್ಯಾರ್ಥಿಗಳು ಮೋಸಹೋಗುವುದು ಸಹಜವಾಗಿತ್ತು. ಸಕಾಲದಲ್ಲಿ ಆ ಅನರ್ಥ ತಪ್ಪಿತು. ಅಗಮ್ಯ ಗುರು ಹೇಳದೆ ಕೇಳದೆ ಮರುದಿನವೇ ಅಗಮ್ಯನಾದ - ಯೋಗಶಕ್ತಿಯ ಮಹಿಮೆ ಸಾಮಾನ್ಯವೇ!

ಆ ಆಷಾಢಭೂತಿಯ ಬಗ್ಗೆ ನನ್ನ ನಿಷ್ಕರ್ಷೆಗೆ ಎರಡೇ ವರ್ಷಗಳಲ್ಲಿ ಸಾಕ್ಷಿಯೂ ಸಿಕ್ಕಿತು. 1908ರಲ್ಲಿ 'ಮಹಾತ್ಮಾ ಶ್ರೀ ಅಗಮ್ಯ ಗುರು ಪರಮಹಂಸರು' ಲಂಡನ್ನಿನಲ್ಲಿದ್ದರು. ಅಲ್ಲಿಗೆ ಹೋದ ಉದ್ದೇಶವೇನೆಂದು ಯಾರಿಗೂ ತಿಳಿಯದು. ಅದು ಯಾವಾಗಲೂ ರಹಸ್ಯವೇ ತಾನೆ! ಆಗ ಆ ಮಹಾಸ್ವಾಮಿಯವರು ಓರ್ವ ಇಂಗ್ಲಿಷ್ ಮಹಿಳೆಯನ್ನು ಕೆಣಕಿದರೆಂದು ನಾಲ್ಕು ತಿಂಗಳ ಶಿಕ್ಷೆಯಾಯಿತು. ಅಂತೂ, ನಾನು ಮೊದಲೇ ಆ 'ವ್ಯಕ್ತಿಪರೀಕ್ಷೆ'ಯ ಪರೀಕ್ಷೆಯಲ್ಲಿ ಉತ್ತೀರ್ಣನಾಗಿದ್ದೆ.

ಪುಣೆಯಿಂದ ಹಿಂದಿರುಗುತ್ತಿದ್ದಂತೆ 'ಇಂಡಿಯನ್ ಸೋಷಿಯಾಲಜಿಸ್ಟ್' ಪತ್ರಿಕೆಯಲ್ಲಿ ಒಂದು ಜಾಹಿರಾತು ಕಣ್ಣಿಗೆ ಬಿತ್ತು. ಲಂಡನ್ನಿನಲ್ಲಿದ್ದ ಪಂಡಿತ ಶ್ಯಾಮಜಿ ಕೃಷ್ಣವರ್ಮರು 'ಶಿವಾಜಿ ವಿದ್ಯಾರ್ಥಿವೇತನ' ಪ್ರಸಿದ್ಧಿಪಡಿಸಿದ್ದರು. ಯುರೋಪಿನ ಸ್ವತಂತ್ರ ದೇಶದಲ್ಲಿದ್ದುಕೊಂಡು ರಾಜಕಾರಣದ ತತ್ವಜ್ಞಾನ ಮತ್ತು ಆಚರಣೆಯ ಬಗ್ಗೆ ಅಧ್ಯಯನ ಮಾಡಲಿದ್ದ ದೇಶಭಕ್ತ ಭಾರತೀಯ ವಿದ್ಯಾರ್ಥಿಗಳಿಗೆ ಅದು ಮೀಸಲು. ನನ್ನ ತಲೆಯೊಳಗೆ ವಿಚಾರ ಚಕ್ರ ತಿರುಗಲಾರಂಭಿಸಿತು.

ಲಂಡನ್ ಪಟ್ಟಣ! ಬ್ರಿಟಿಷ್ ಸಾಮ್ರಾಜ್ಯದ ಕೇಂದ್ರಸ್ಥಾನ; ಶತ್ರುವಿನ ಮರ್ಮಸ್ಥಾನ; ಅನೇಕ ಹೊರ ರಾಷ್ಟ್ರಗಳ ಕ್ರಾಂತಿಕಾರರ ಆಶ್ರಯಸ್ಥಾನ ; ಉಚ್ಚ ವ್ಯಾಸಂಗಕ್ಕಾಗಿ ಹೋಗುವ ಭಾರತೀಯ ತರುಣರ ಭೇಟಿಯ ಸ್ಥಾನ ! ಅಂದಮೇಲೆ ಅಲ್ಲಿಗೆ ಹೋಗಲೇಬೇಕು. ಪ್ರತಿಭಾವಂತರನ್ನು ದೇಶಭಕ್ತ ಕ್ರಾಂತಿವೀರರನ್ನಾಗಿ ಪರಿವರ್ತಿಸಬೇಕು. ಅನ್ಯದೇಶಗಳ ಕ್ರಾಂತಿಕಾರಿಗಳ ಹಾಗೂ ಕ್ರಾಂತಿಕಾರ್ಯಗಳ ಪರಿಚಯ ಪಡೆಯಬೇಕು. ಶತ್ರುವಿನ ಮನೆಯ ಒಳಹೊಕ್ಕು ಅವನ ಸಾಮರ್ಥ್ಯದ ರಹಸ್ಯ ಭೇದಿಸಬೇಕು. ಅವನ ದುರ್ಬಲ ಅಂಶಗಳನ್ನು ಪತ್ತೆಹಚ್ಚಬೇಕು. ದೃಢ ನಿರ್ಧಾರ ಮಾಡಿಯೇಬಿಟ್ಟೆ.

ಆದರೆ ವಿದ್ಯಾರ್ಥಿವೇತನದಿಂದ ಕೇವಲ ಅರ್ಧ ಖರ್ಚು ತೂಗಬಹುದಾಗಿತ್ತು. ಇನ್ನು ಉಳಿದ ಅರ್ಧಕ್ಕೆ ಏನು ವ್ಯವಸ್ಥೆ? ನಮ್ಮ ಮಾವ ಬಾಪೂ ರಾವ್ ಚಿಪಳೂಣಕರರು ಆ ಭಾರ ಹೊರಲು ಒಪ್ಪಿದರು. ಎಲ್ಲವೂ ನಿಶ್ಚಯವಾಗುವ ವೇಳೆಗೆ ವಿದೇಶಿ ಟಪಾಲು ಹೊರಡಲು ಕೆಲವೇ ಗಂಟೆಗಳು ಉಳಿದಿದ್ದವು. ಆದ್ದರಿಂದ ಮಾರ್ಚಿ 9ರಂದು ಅವಸರದಲ್ಲಿ ಸೀಸದಕಡ್ಡಿಯಿಂದಲೇ ಅರ್ಜಿ ಬರೆದು ಕಳಿಸಿದ್ದಾಯಿತು. ಅದರಲ್ಲಿ ನನ್ನ ಪರಿಚಯದ ವಿವರ ತಿಳಿಸಿದ ನಂತರ, 'ರಾಷ್ಟ್ರದ ಸ್ವಾತಂತ್ರ್ಯವೇ ಅದರ ಜೀವನಾಡಿ ಹಾಗೂ ಬಾಳುಸಿರು ಎಂಬುದೇ ನನ್ನ ನಂಬಿಕೆ. ಸ್ವಾಮಿ! ನಾನು ಬಾಲ್ಯದಿಂದ ಇಂದಿನವರೆಗೂ ಹಗಲಿರುಳೂ ಕನಸುಮನಸಿನಲ್ಲಿ ನನ್ನ ಸ್ವದೇಶದ ಸ್ವಾತಂತ್ರ್ಯಕ್ಕೆ ಒದಗಿರುವ ಹಾನಿ ಹಾಗೂ ಸ್ವಾತಂತ್ರ್ಯ ಗಳಿಕೆಯ ಸಾಧ್ಯತೆಯ ಬಗ್ಗೆಯೇ

ಯೋಚಿಸುತ್ತಿದ್ದೇನೆ' ಎಂದು ಬರೆದಿದ್ದೆ.

ಇನ್ನು ಶಿಫಾರಸ್ಸು ಪತ್ರ ಕಳಿಸುವುದು ಉಳಿದಿತ್ತು. ಪುಣೆಗೆ ಹೋಗಿ ತಿಲಕರನ್ನು ಭೇಟಿಯಾದೆ. ಆ ವೇಳೆಗೆ ಅರ್ಜಿದಾರರ ಸಂಖ್ಯೆ 150ಕ್ಕೂ ದಾಟಿತ್ತು ಎಂಬ ವಿಷಯ ಅವರಿಗೆ ತಿಳಿದಿತ್ತು. ಆದರೂ ಅವರು ಮಾರ್ಚಿ 16ರಂದು ಶ್ಯಾಮಜಿಯವರಿಗೆ ಪತ್ರ ಬರೆದು, 'ಅಷ್ಟೊಂದು ನೂಕು ನುಗ್ಗಲು ಇರುವಾಗ ನಿಮಗೆ ಯಾವುದಾದರೊಂದು ನಿರ್ದಿಷ್ಟ ಹೆಸರಿನ ಬಗ್ಗೆ ಶಿಫಾರಸು ಮಾಡುವುದು ಅಷ್ಟು ಪ್ರಯೋಜನಕಾರಿಯಲ್ಲ. ಆದರೂ ಒಂದು ಸಂಗತಿ. ಅರ್ಜಿದಾರರ ಪೇಕಿ, ಕಳೆದ ವರ್ಷ ಪದವೀಧರನಾದ ಮುಂಬೈನ ಸಾವರಕರ್ ಎಂಬವನನ್ನು ನಾನು ಬಲ್ಲೆ. ಸ್ವದೇಶಿ ಚಳವಳಿಯಲ್ಲಿ ಬಹಳ ಉತ್ಸಾಹವುಳ್ಳ ದಿಟ್ಟ ತರುಣ.... ಸರಕಾರಿ ನೌಕರಿಗೆ ಎಂದೂ ಸೇರಬಾರದೆಂದು ನಿರ್ಧರಿಸಿದ್ದಾನೆ. ಉತ್ತಮ ಚಾರಿತ್ರ್ಯವಂತ' ಎಂದು ಪರಿಚಯ ತಿಳಿಸಿದರು. ತಿಲಕ್ ಮತ್ತು ಪರಾಂಜಪೆ ಇಬ್ಬರ ಶಿಫಾರಸು ಪತ್ರಗಳನ್ನೂ ಒಟ್ಟಿಗೆ ಕಳುಹಿಸಿಕೊಟ್ಟೆ. ಇನ್ನೂ ಒಂದು ಮುಂಜಾಗರೂಕತೆ ವಹಿಸಬೇಕಾಗಿತ್ತು. ಅರ್ಜಿಯಲ್ಲಿ ನಾನು ಬ್ಯಾರಿಸ್ಟರ್ ಪರೀಕ್ಷೆಗೆ ಓದುವುದಾಗಿ ತಿಳಿಸಿದ್ದೆ. ಓದು ಮುಗಿದ ನಂತರ ವಕೀಲಿ ವೃತ್ತಿ ಅವಲಂಬಿಸುವುದೂ ಸರಕಾರಕ್ಕೆ ನೆರವಾದಂತೆ ಎಂದು ಯಾರಾದರೂ ಅರ್ಥ ಮಾಡಿದರೆ? ಅದಕ್ಕಾಗಿ ಮೇ 1ರಂದು ಶ್ಯಾಮಜಿಯವರಿಗೆ ಇನ್ನೊಂದು ಪತ್ರ ಬರೆದೆ: '.....ಕಾನೂನಿನ ಅಧ್ಯಯನದಿಂದ ಶಾಸನ ವ್ಯವಸ್ಥೆಯ ಮರ್ಮಸ್ಥಾನಗಳೂ, ಸಮಯ ಬಂದಾಗ ಎಲ್ಲಿಗೆ ಏಟು ಹಾಕಿದರೆ ಅನುಕೂಲ ಆದೀತೆಂಬುದೂ ತಿಳಿಯುತ್ತದೆ. ಅದಕ್ಕಾಗಿ ಅದನ್ನು ಆರಿಸಿಕೊಂಡಿದ್ದೇನೆ.'

ನಾಸಿಕದಲ್ಲಿದ್ದ ನನಗೆ 'ಶಿವಾಜಿ ವಿದ್ಯಾರ್ಥಿವೇತನ' ಸಿಕ್ಕಿದ ಆನಂದದ ಸುದ್ದಿ ಪತ್ರಮುಖೇನ ತಿಳಿಯಿತು. ಅದರ ಹಣ ನನಗೆ ಪ್ರತಿ ಆರು ತಿಂಗಳಿಗೊಮ್ಮೆ 400 ರೂ. ಗಳಂತೆ ಐದು ಕಂತುಗಳಲ್ಲಿ ದೊರೆಯಲಿತ್ತು. ಮೇ 20ರಂದು ಪುಣೆಗೆ ಹೋಗಿ ತಿಲಕರಿಂದ ಮೊದಲ ಕಂತು ಪಡೆದೆ. ಮೇ 25ರಂದು ಅಧಿಕೃತ ಕರಾರು ಪತ್ರಕ್ಕೂ ಹಸ್ತಾಕ್ಷರ ಹಾಕಿ ಕಳುಹಿಸಿಕೊಟ್ಟೆ. ಅದರಲ್ಲಿನ ವಿವರ : 'ನಾನು ಪ್ರತ್ಯಕ್ಷವಾಗಿಯೇ ಆಗಲಿ ಪರೋಕ್ಷವಾಗಿಯೇ ಆಗಲಿ ಬ್ರಿಟಿಷ್ ಸರಕಾರದ ಯಾವುದೇ ಹುದ್ದೆಯಾಗಲಿ, ಗೌರವ ಪದವಿ, ಪ್ರಶಸ್ತಿ, ಕೃಪೆಯನ್ನಾಗಲಿ (ಪುರಸಭೆ, ಜಿಲ್ಲಾಸಮಿತಿ ಇತ್ಯಾದಿ) ಯಾವುದೇ ಸಮಿತಿಯಲ್ಲಿ ಸ್ಥಾನವನ್ನಾಗಲಿ ಅಥವಾ ಸೇವೆಯನ್ನಾಗಲಿ ಕೈಗೊಳ್ಳುವುದಿಲ್ಲ. ಆ ಸರಕಾರದಿಂದ ಯಾವುದೇ ರೀತಿಯ ವೇತನವನ್ನೂ ಪಡೆಯುವುದಿಲ್ಲ. ಇದು ನನ್ನ ವಚನ.'

ನನಗೆ ಸರಕಾರಿ ಗುಪ್ತಚರರ 'ಕಾವಲು' ಪ್ರಾರಂಭವಾಗಿ ಅನೇಕ ದಿನಗಳಾಗಿದ್ದವು. ಆದರೆ ಅವರನ್ನು ಬೇಕಾದಾಗ ಬೆನ್ನು ಹತ್ತಿಸಿಕೊಳ್ಳುವ, ಬೇಡವಾದಾಗ ಒದರಿಬಿಡುವ ಕಲೆ ಕರಗತವಾಗಿದ್ದವರಿಗೆ ಅವರ ಬಗ್ಗೆ ಚಿಂತಿಸುವ ಅಗತ್ಯವೇನು ? 1906ರ ಫೆಬ್ರವರಿಯಲ್ಲಿ ಪುಣೆಯ ಬಹಿರಂಗ ಸಭೆಯೊಂದರಲ್ಲಿ 'ಸಮರ್ಥ ರಾಮದಾಸರ ಉಪದೇಶದಂತೆ ನಡೆಯಬೇಕು ; ಜನ ಒಗ್ಗೂಡಬೇಕು ; ಹೃದಯಕ್ಕೆ ಧಗಧಗಿಸುವ ಸ್ವಾತಂತ್ರ್ಯದ ಕಿಚ್ಚು ಹಚ್ಚಿಕೊಂಡು ಮೇಲೆ ಬೀಳಬೇಕು' ಎಂದು ಜನತೆಗೆ ಕರೆ ನೀಡಿದ್ದೆ. 'ಬ್ರಿಟಿಷರ ಮೇಲೆ ಬೀಳಬೇಕು' ಎಂಬುದು ಅಭಿಪ್ರಾಯ. ಆದರೆ ಸಭೆಯಲ್ಲಿ ಗೂಢಚಾರರಿದ್ದುದರಿಂದ ನಾನು 'ಬ್ರಿಟಿಷರು' ಎಂಬ ಶಬ್ದ ಬಿಟ್ಟು ಉಳಿದೆಲ್ಲ ಹೇಳಿದೆ. ಜನಕ್ಕಂತೂ ಅಂತರಾರ್ಥ ಸ್ಪಷ್ಟವಾಯಿತು. ಆಗ ನನ್ನ ಬಂಧನ ಆಗಬಹುದೆಂಬ ಮಾತುಕತೆಯೂ ಅನೇಕ ದಿನಗಳವರೆಗೆ ಕೇಳಿಬರುತ್ತಿತ್ತು. ಆದರೆ ನನ್ನ ಮಾತಿನಲ್ಲಿ ಕಾನೂನಿಗೆ ಸಿಕ್ಕಿಕೊಳ್ಳುವ ಅಂಶ ಯಾವುದೂ ಇರಲಿಲ್ಲ.

ಅದೇ ವರ್ಷದ ಏಪ್ರಿಲ್ 22ರಂದು ನಾಸಿಕದಲ್ಲಿ ಮಾತನಾಡುತ್ತಾ, ಸಭಿಕರಿಗೆ ಪಕ್ಕದಲ್ಲಿದ್ದ ಆಂಜನೇಯನ ಚಿತ್ರ ತೋರಿಸಿದೆ. ವೀರ ಮಾರುತಿಯು ಕೈಯಲ್ಲಿ ಗದೆ ಹಿಡಿದು ಕಾಲಿನಿಂದ ಓರ್ವ ರಾಕ್ಷಸನನ್ನು ಮೆಟ್ಟಿ ನಿಂತಿದ್ದ. ರಾಕ್ಷಸನ ಮುಖಕ್ಕೆ ಕೆಂಪುಬಣ್ಣ ಹಚ್ಚಿತ್ತು 'ಇದು ಪರಂಗಿಯವರ ಬಣ್ಣ ಅನ್ನುವುದರಲ್ಲಿ ಸಂದೇಹವೇ ಇಲ್ಲ. ಜನರು ಮಾರುತಿಯಂತೆ ಮಲ್ಲಯುದ್ಧ ಪ್ರವೀಣರಾಗಬೇಕು. ಅವನ ಕಾರ್ಯ ಮುಂದುವರಿಸಬೇಕು' ಎಂದು ಸಾರಿ ಹೇಳಿದೆ. ನಾಸಿಕದ ಮೊದಲ ದರ್ಜೆ ನ್ಯಾಯಾಧೀಶ ಮಾಂಟ್ಗೋಮರಿ, 'ಸಾವರಕರ್ ಈಗಾಗಲೇ ಈರ್ಷ್ಯಾಸ್ಪದವೆನಿಸುವಂಥ ವಾಕ್ಪಟುತ್ವ ಸಂಪಾದಿಸಿದ್ದಾರೆ' ಎಂದು ಸರಕಾರಕ್ಕೆ ರಹಸ್ಯ ವರದಿ ಕಳುಹಿಸಿದ್ದು ಆ ದಿನಗಳಲ್ಲೇ.

ನಾಸಿಕದಲ್ಲಿ ನನ್ನ ಬೀಳ್ಕೊಡುಗೆಯ ಸಮಾರಂಭ ಪ್ರಚಂಡ ರೂಪ ತಾಳಿತು. ಮೇ 28ರಂದು ಭದ್ರಕಾಳಿ ದೇವಸ್ಥಾನದಲ್ಲಿ ಭಾರಿ ಸಾರ್ವಜನಿಕ ಸಭೆ. ಹಿರಿಯರನೇಕರು ಆಶೀರ್ವಚನ ನುಡಿದರು. ಬ್ಯಾರಿಸ್ಟರ್ ಪದವಿ ಪಡೆದು ಬಂದು ಧನದೌಲತ್ತು ಸಂಪಾದಿಸಲೆಂದು ಎಲ್ಲರ ಹಾರೈಕೆ ! ಸರದಿ ಬಂದಾಗ ನಾನು ಹೇಳಿದೆ: 'ಸ್ವದೇಶ ಇಂದು ದಾಸ್ಯಕೂಪದಲ್ಲಿ ಸಿಲುಕಿ ನರಳುತ್ತಿದೆ. ನಾನು ಪರದೇಶಕ್ಕೆ ಹೋಗುತ್ತಿರುವುದು ಏಕಮಾತ್ರ ಉದ್ದೇಶದಿಂದ. ಜನ್ಮಭೂಮಿಯಾದ ಹಿಂದುಸ್ಥಾನದ ಋಣ ತೀರಿಸುವ ಸಲುವಾಗಿ.'

ಲೋಕಮಾನ್ಯ ತಿಲಕ್ ಮತ್ತು ಪರಾಂಜಪೆಯವರನ್ನು ಪುಣೆಯಲ್ಲಿ ಕಂಡು ಆಶೀರ್ವಾದ ಪಡೆದಾಯಿತು. ಜೂನ್ 9ರಂದು ಮುಂಬೈನಲ್ಲಿ 'ಪರ್ಷಿಯಾ' ಹಡಗು ಹತ್ತಿದೆ. ದಡದಲ್ಲಿ ಬಂಧುಬಳಗ, ಇಷ್ಟಮಿತ್ರರು ನಿಂತಿದ್ದರು. ಎಲ್ಲರ ನಡುವೆ ಎದ್ದುಕಾಣುತ್ತಿದ್ದ ನನ್ನ ಮಾವ ಭಾವೂಸಾಹೇಬ್ ಚಿಪಳೂಣಕರ್ ; ನಮ್ಮ ಅತ್ತೆ, ಜೀವನದ ಸಂಗಾತಿ ಯಮುನಾ, ಒಂದೂವರೆ ವರ್ಷದ ಮಗ ಪ್ರಭಾಕರ, ಪ್ರೀತಿಯ ಅತ್ತಿಗೆ, ಹೆಮ್ಮೆಯ ಬಾಬಾ, ದೇಶದ ಆಶಾಜ್ಯೋತಿಯಂತಿದ್ದ ಅಭಿನವ ಭಾರತದ ತೇಜಸ್ವಿ ತರುಣವೃಂದ.

'ನಮ್ಮ ತಾತ್ಯಾ ಸಿಂಹದ ಗುಹೆಗೇ ನುಗ್ಗಿ ಅದರ ಕೇಸರ ಹಿಡಿಯುತ್ತಾನೆ' ಎಂದು ಬಾಬಾ ಎಲ್ಲರೊಡನೆ ಹೇಳುತ್ತಿದ್ದ. ಅದೇ ನನಗೆ ಅವನ ಆಶೀರ್ವಾದ. ನಮಸ್ಕರಿಸಿದಾಗ ಅತ್ತಿಗೆ ಹೇಳಿದ್ದರು : 'ತಾತ್ಯಾ, ದೊಡ್ಡವನಾಗು ; ದೇಶದ ಹೆಸರು ದೊಡ್ಡದು ಮಾಡು.' ಯೇಸೂವಹಿನಿಗೆ ನನ್ನ ಹೃದಯ ಎಷ್ಟು ಚೆನ್ನಾಗಿ ಗೊತ್ತು !

ನನಗೆ ನಮಸ್ಕರಿಸಿದ ಯಮುನಾಳ ತಾರುಣ್ಯ ಸಹಜ ಭಾವನೆಗಳ ಏರಿಳಿತ ಏನಿತ್ತೊ ? ಅತ್ತೆ ಮಾವಂದಿರ ಕಲ್ಪನಾಲೋಕದ ಎತ್ತರ, ಆಸೆಯ ಆಕಾಶದ ವಿಸ್ತಾರ ಎಷ್ಟಿತ್ತೊ ? ಹಡಗು ಚಲಿಸಿತು. ಆದರೆ ನನ್ನ ಹೃದಯ ಅಚಲವಾಗಿತ್ತು.





# ಹವಿಸ್ಸು ಹತ್ತು

'ಇನ್ನು ಮೂರು ವರ್ಷ ! ಆಮೇಲಾದರೂ ತಾಯ್ನಾಡಿಗೆ ಕ್ಷೇಮವಾಗಿ ಹಿಂದಿರುಗುವೆನೇ, ಬಂಧುಬಾಂಧವರನ್ನು ಪುನಃ ನೋಡುವೆನೇ ?'

ಮುಂಗಟ್ಟೆಯ ಕಂಬಿ ಹಿಡಿದು ಯೋಚಿಸುತ್ತಿದ್ದೆ. ಹಡಗಿನ ವೇಗ ಹೆಚ್ಚಿತು ಪ್ರಯಾಣಿಕರೆಲ್ಲ ತಂತಮ್ಮ ಸ್ಥಳ, ಸಾಮಾನು ಹುಡುಕಿಕೊಳ್ಳಲು ಹೊರಟು ಹೋಗಿದ್ದರು. ಆಚೀಚೆ ಓಡಾಡುತ್ತಿದ್ದವರೆಲ್ಲ ಬ್ರಿಟಿಷರು ಅಥವಾ ಆಂಗ್ಲೋ ಇಂಡಿಯನರು 'ಯಾರಿವನು - ಪಂಚೆ ಉಟ್ಟು, ಕಿವಿಗೆ ಕಡಕು ಹಾಕಿಕೊಂಡು, ಒಂಟಿಯಾಗಿ ನಿಂತ ಹಳ್ಳಿ ಗಮಾರ ?' ಎಂಬಂತೆ ತಿರಸ್ಕಾರದಿಂದ ನೋಡುತ್ತಿದ್ದರು ಸ್ವಜನರು ಒಬ್ಬರೂ ಕಣ್ಣಿಗೆ ಬೀಳಲಿಲ್ಲ. ಆ ಪರಕೀಯರ - ಶತ್ರುಸಮಾಜದ - ನಡುವೆ ಒಂಟಿಯಾಗಿ ನಿಂತುದು ಅದೇ ಮೊದಲು

ನನ್ನ ಕೊರಡಿ ಹುಡುಕಿದೆ. ಒಳಗೆ ಕಾಲಿಡುತ್ತಲೇ, 'ನೀವೇ ಏನು, ಮಿಸ್ಟರ್ ಸಾವರಕರ್ ?' ಎಂಬ ಪ್ರಶ್ನೆ. ಹಾಗೆ ಕೇಳಿದವನು ಓರ್ವ ತೇಜಸ್ವಿ ಸಿಖ್ ಯುವಕ. ವಯಸ್ಸು ಇಪ್ಪತ್ತಕ್ಕೂ ಕಡಿಮೆ ತನ್ನ ಸಾಮಾನು ಗಳನ್ನು ಜೋಡಿಸಿ ಇಟ್ಟುಕೊಳ್ಳುತ್ತಿದ್ದ ನಾನು 'ಹೌದು' ಎನ್ನುತ್ತಲೇ ಅವನ ಆನಂದಕ್ಕೆ ಪಾರವಿಲ್ಲ 'ನಾನೀಗ ನಿಮ್ಮನ್ನೇ ಎದುರು ನೋಡುತ್ತಿದ್ದೆ ಈ ಕೋಣೆಯಲ್ಲಿ ನಮ್ಮಿಬ್ಬರ ಹೆಸರಿದೆ. ನನ್ನ ಜತೆಗೆ ಭಾರತೀಯರೇ ಸಿಕ್ಕಿದ್ದು ಕಂಡು ಹರ್ಷವಾಯಿತು. ಆದರೆ ನೀವು ಬರುವುದು ತಡವಾದ್ದರಿಂದ, ಪ್ರಯಾಣ ರದ್ದಾಯಿತೊ ಏನೊ ಎಂದು ಯೋಚಿಸುತ್ತಿದ್ದೆ ಸದ್ಯ, ಅಷ್ಟರಲ್ಲೆ ನೀವು ಬಂದಿರಿ.'

ಅವನ ಪ್ರೀತಿಯ ಅಂತಃಕರಣ ನನಗೆ ಹಿಡಿಸಿತು. 'ನಿನ್ನ ಪರಿಚಯ ಆದುದು ನನಗೂ ಸಂತೋಷ. ನಿನ್ನ ಹೆಸರೇನು ?' ಎಂದೆ. ಅವನೆಂದ, 'ಹರನಾಮಸಿಂಗ್.'

ಹರನಾಮಸಿಂಹ ಭಾರಿ ಶ್ರೀಮಂತ ಮನೆತನದವನು ಚಿಕ್ಕಂದಿನಲ್ಲೇ ತಂದೆ ತೀರಿಕೊಂಡರು ಇವ ನೊಬ್ಬನೇ ಮಗ. ಒಳ್ಳೆಯ ಪ್ರತಿಭಾವಂತ ಬಿ.ಎ ಮುಗಿಸುತ್ತಲೇ ನಭ ಸಂಸ್ಥಾನದ ಸಿಖ್ ರಾಜರು ವಿದ್ಯಾರ್ಥಿ ವೇತನ ನೀಡಿದರು - ಬ್ಯಾರಿಸ್ಟರ್ ಆಗಿ ಬರಲು ತಾಯಿ ಒಪ್ಪಲಿಲ್ಲ ಆದರೆ ಬಂಧುಬಳಗದವರ ಬಲವಂತ. ವರ್ಷವರ್ಷವೂ ಬಂದು ತಾಯಿಯನ್ನು ನೋಡಿ ಹೋಗಲು, ರಾಜರೂ ವಿದ್ಯಾರ್ಥಿ ವೇತನ

ಮೊತ್ತ ಹೆಚ್ಚಿಸಿದರು. ಕಡೆಗೂ ಹರನಾಮಸಿಂಹ ಊರು ಬಿಟ್ಟು, ತೀರ ಬಿಟ್ಟು ಹೊರಟಿದ್ದ.

ಹಡಗಿನಲ್ಲಿ ಭಾರತೀಯ ಪ್ರಯಾಣಿಕರಿದ್ದುದು 8- 10 ಜನ. ಎರಡು ದಿನದಲ್ಲೆ ಎಲ್ಲರೂ ಪರಿಚಿತರಾದರು ಆ ಪೈಕಿ ಓರ್ವ ಪಂಜಾಬಿ ಮಹನೀಯರು. ವಯಸ್ಸು ಸುಮಾರು ಮೂವತ್ತು ದೊಡ್ಡ ವ್ಯಾಪಾರಿ. ಹತ್ತಾರು ಬಾರಿ ಇಂಗ್ಲೆಂಡಿಗೆ ಹೋಗಿ ಬಂದಿದ್ದರು. ಹೆಜ್ಜೆಹೆಜ್ಜೆಗೂ ಅವರ 'ಇಂಗ್ಲೆಂಡ್ ರಿಟರ್ನ್ಡ್'ತನ ಎದ್ದುಕಾಣುತ್ತಿತ್ತು. 'ಆಟಪಾಟ, ವೇಷಭೂಷಣ, ನಡೆ ನುಡಿ, ಊಟ ಉಪಹಾರದಿಂದ ಹಿಡಿದು ಎಲ್ಲದರಲ್ಲೂ ನಾವು ಇಂಗ್ಲಿಷರನ್ನು ಅನುಕರಿಸಬೇಕು. ಹಾಗೆ ಮಾಡದಿರುವುದರಿಂದಲೇ ನಾವು ಹುಂಬರೂ ಹೀನರೂ ಆಗಿದ್ದೇವೆ. ನಮ್ಮಂಥ ಗುಗ್ಗುಗಳು ಇನ್ನೂ ಸ್ವಾತಂತ್ರ್ಯಕ್ಕೆ ಅಪಾತ್ರರು' - ಎಂಬುದು ಅವನ ಘನ ಅಭಿಪ್ರಾಯ. ನಿಸ್ಸಂಶಯವಾಗಿ ಅವರು ಪ್ರಾಮಾಣಿಕ ದೇಶಭಕ್ತರು. ಸ್ವದೇಶದ ಉನ್ನತಿಯಲ್ಲಿ ಅವರಿಗೂ ಆಸಕ್ತಿ. ಆದರೆ ಅವರ ಉನ್ನತಿಯ ಕಲ್ಪನೆಯೇ ಹೀಗೆ. ಅವರ ದೃಷ್ಟಿಯಲ್ಲಿ ಸ್ವಾತಂತ್ರ್ಯ ಗಳಿಕೆಗೆ ನನ್ನಂಥ ಅಯೋಗ್ಯ (ಪಂಚೆ ಉಟ್ಟಿದ್ದುದರಿಂದ) ಇನ್ನೊಬ್ಬನಿಲ್ಲ! ಸ್ವಾತಂತ್ರ್ಯದ ಅರ್ಹತೆ ಹಾಗೂ 'ನಕಲಿ ಸಾಹೇಬಗಿರಿ' ಯ ಬಾದರಾಯಣ ಸಂಬಂಧ ಸದ್ಯಕ್ಕೆ ಹಾಗಿರಲಿ.

ನಾನು ಪರದೇಶಕ್ಕೆ ವರ್ಷಗಟ್ಟಲೆ ವಾಸಿಸಲು ಹೋಗುತ್ತಿದ್ದೆ. ಅಲ್ಲಿನ ಶಿಷ್ಟಾಚಾರಗಳನ್ನೂ ತಕ್ಕಮಟ್ಟಿಗೆ ತಿಳಿದಿರುವುದು ಒಳ್ಳೆಯದೆನಿಸಿತು. ಅದರಿಂದ ನಮ್ಮ ಉದ್ದೇಶ ನೆರವೇರುವುದು ಸುಲಭ. ಯಾವುದೇ ಕಾರ್ಯಸಾಧನೆಗೂ ಸಲೀಸು. ಹೊರಡುವ ಗಡಿಬಿಡಿಯಲ್ಲಿ ಅದಕ್ಕೆಲ್ಲ ಸಮಯವೆಲ್ಲಿ? ಈಗ ಹಡಗಿನಲ್ಲೇ ಸ್ವಲ್ಪ ಬಿಡುವು. ಅದಕ್ಕಾಗಿ ಪಾಶ್ಚಾತ್ಯ ಶಿಷ್ಟಾಚಾರದ ಓನಾಮ ಪ್ರಾರಂಭಿಸಿದೆ.

ಇಂಗ್ಲೆಂಡಿನ ಹವಾಮಾನ ಅತಿ ಶೀತ. ಆದ್ದರಿಂದ ಮೊದಲು ಉಡುಪಿನ ಪಾಠ. ಆ ಪಂಜಾಬಿ ಮಹನೀಯರೇ ನನ್ನ ಗುರು. 'ಶಿಷ್ಟಾಚಾರಿ' ಎಂಬುದು ಅವರಿಗೆ ನಾನಿಟ್ಟ ಅಚ್ಚ ಸ್ವದೇಶಿ ಹೆಸರು. ಸೂಟು - ಬೂಟು - ಹ್ಯಾಟು ತೊಡುವುದನ್ನು ಅವರು ನನಗೆ ಮೊದಲು ಕಲಿಸಿದರು. ಕೊನೆಗೆ 'ಕಂಠ ಲಂಗೋಟಿ' (ಟೈ) ಧಾರಣೆ ಕಲಿಯುವ ಹೊತ್ತಿಗೆ ಬೇಸತ್ತುಹೋದೆ. ಅದಾದ ಮೇಲೆ ಊಟದ ಪಾಠ ! ಆ ಪೂಜ್ಯ ಶಿಷ್ಟಾಚಾರ್ಯರು ನಾನಾ ಬಗೆಯ ಮಾಂಸಾಹಾರಗಳನ್ನು ನನ್ನ ಕೊಠಡಿಗೇ ತಂದರು. ಶಾಸ್ತ್ರೋಕ್ತವಾಗಿ ಅವುಗಳ ಸಶಸ್ತ್ರ ಶವವಿಚ್ಛೇದನ ಮಾಡಿದರು. ಚಾಕು ಮತ್ತು ಮುಳ್ಳುಚಮಚ ಪ್ರಯೋಗಿಸಿ ಅದನ್ನು ಹೇಗೆ ತಿನ್ನಬೇಕೆಂಬುದನ್ನು ಕಲಿಸಿದರು. ಆದರೆ ಹುಟ್ಟು ಗುಣವೇ ಗಟ್ಟಿ ; ಒಮ್ಮೆ ಬಲಗೈಲಿದ್ದ ಚಾಕುವನ್ನೇ ಸಹಜವಾಗಿ ಬಾಯಿಯ ಬಳಿ ತೆಗೆದುಕೊಂಡು ಹೋದೆ. ತುಟಿ ಹರಿದು ಉರಿಯಹತ್ತಿತು. ನನಗೆ ಸಿಕ್ಕಿದ್ದು ನನ್ನ ರಕ್ತಮಾಂಸಗಳದ್ದೇ ರುಚಿ !

ಹಡಗಿನಲ್ಲಿದ್ದ ಹಿಂದೀಯರೆಲ್ಲ ಒಂದು ಗುಂಪು. ಸಂಜೆಯ ಹೊತ್ತು ಒಟ್ಟಿಗೆ ಮೇಲ್ಗಟ್ಟೆ ( ಡೆಕ್) ಯಲ್ಲಿ ತಿರುಗಾಡಲು ಹೋಗುತ್ತಿದ್ದೆವು. ಆಗ ಹರನಾಮಸಿಂಹನ ಪೇಟ ನೋಡಿ ಯುರೋಪಿಯನರು ನಗುತ್ತಿದ್ದರು. ಅವರ ಮಕ್ಕಳು ಬೆರಳು ಕುಣಿಸಿ ಅಣಕಿಸುತ್ತಿದ್ದರು. ಒಂದು ದಿನವಂತೂ ತೀರ ಹತ್ತಿರಕ್ಕೇ ಬಂದು, 'ಎಂಥ ವಿಚಿತ್ರ ಟೋಪಿ!' ಎನ್ನುತ್ತಾ ಕುಚೇಷ್ಟೆ ಆರಂಭಿಸಿದರು. ಅವರ ಹಿರಿಯರೂ ಪಕಪಕನೆ ನಗತೊಡಗಿದರು. ಹರನಾಮಸಿಂಗ್ ಅವಮಾನ ಹಾಗೂ ಸಿಟ್ಟಿನಿಂದ ಆ ಸ್ಥಳ ಬಿಟ್ಟು ಹೋದ. ನಮ್ಮ ಶಿಷ್ಟಾಚಾರಿ ಒಬ್ಬ ಬಿಳಿ ಹುಡುಗನ ಕೈಹಿಡಿದು ತಿರುಚಿ ಹಿಂದಕ್ಕೆ ದಬ್ಬುತ್ತಲೇ ಹುಡುಗರ ಗುಂಪು ಕಾಲಿಗೆ ಬುದ್ಧಿ ಹೇಳಿತು.

ಶಿಷ್ಟಾಚಾರ್ಯರು ನನ್ನನ್ನು ತಮ್ಮ ಕೋಣೆಗೆ ಕರೆದರು. ಅಲ್ಲಿ ದುಃಖದಿಂದ ಹೇಳಿದರು : 'ಸಾವರಕರ್,

ಹರನಾಮಸಿಂಹನಿಗೆ ನೀವಾದರೂ ಹೇಳಿ ; ನಿಮ್ಮ ಮಾತು ಕೇಳುತ್ತಾನೆ ಅವನು ಪುನಃ ಪೇಟ ಹಾಕಿಕೊಳ್ಳುವುದು ಬೇಡ. ಯುರೋಪಿಯನರು ನಗುವ ಹಾಗೆ ನಾವೇಕೆ ಮಾಡಬೇಕು ? ಅವರ ಉಪಹಾಸದಿಂದ ನಮ್ಮ ಜಾತಿಗೆ ಅಪಮಾನ!'

ಅದಕ್ಕೆ ನಾನೆಂದೆ : 'ಹರನಾಮಸಿಂಹನಿಗೆ ನಾನು ಹಾಗೆಂದಿಗೂ ಹೇಳಲಾರೆ. ನಮ್ಮಲ್ಲಿ ಏನಾದರೂ ತಪ್ಪು ಇದೆಯೆಂದು ನಮಗೇ ಅನ್ನಿಸಿದರೆ, ಆಗ ತಿದ್ದಿಕೊಳ್ಳೋಣ. ಅಂತಹ ಸುಧಾರಣೆಯಲ್ಲಿ ನಾನು ನಿಮಗಿಂತಲೂ ಒಂದು ಹೆಜ್ಜೆ ಮುಂದು. ಆದರೆ ಯಾರೋ ನಗುತ್ತಾರೆಂದ ಮಾತ್ರಕ್ಕೆ ನಮ್ಮ ಪದ್ಧತಿ ಬಿಡುವುದು ಮನೋದೌರ್ಬಲ್ಯದ ಲಕ್ಷಣ. ಅದರಲ್ಲೂ ಶಿರೋಭೂಷಣ ಎನಿಸಿಕೊಳ್ಳಲು ನಮ್ಮ ವರ್ಣರಂಜಿತ ಪೇಟ ಲಾಯಕ್ಕೇ ಹೊರತು, ಬಿಳಿಯರ ಆ ತಲೆಕೆಳಗು ಬಾಣಲೆಯಲ್ಲ. ಪೇಟ ಇದ್ದರೆ ಎಷ್ಟು ಭವ್ಯ, ಎಷ್ಟು ಶೋಭೆ, ಎಷ್ಟು ಮುದ್ದಾಗಿ ಎದ್ದುಕಾಣುತ್ತದೆ! ಸೀಖರ ವಿಷಯದಲ್ಲಂತೂ ಅದೊಂದು ಧಾರ್ಮಿಕ ಉಡುಗೆ ; ಅದು ಅವರ ರಣವೇಷ ! ಯಾವನೋ ಯುರೋಪಿಯನನ ಕಣ್ಣಿಗೆ ಅದು ಸರಿಕಾಣದೆ ಹೋದರೆ, ನಾವೇಕೆ ನಾಚಬೇಕು ? ಪೇಟಧಾರಣೆ ಬಿಟ್ಟರೆ ನಿಜಕ್ಕೂ ನಿಮ್ಮ ಜಾತಿಗೆ ಅಪಮಾನ. ನಾಳೆ ಎಲ್ಲರೂ ಪೇಟ ಕಟ್ಟಿಕೊಂಡೇ ಅಡ್ಡಾಡೋಣ. ಬಿಳಿಯರ ಮುಖದ ನೀರು ಇಳಿಸಿದಂತಾಗುತ್ತದೆ.'

'ಸರಿಯಾಗಿ ಹೇಳಿದಿರಿ. ಹಾಗೆಯೇ ಮಾಡೋಣ' ಎಂದರು ಶಿಷ್ಟಾಚಾರಿ. ಅವರ ಸುಪ್ತ ಸ್ವಾಭಿಮಾನದ ಕಿಡಿ ಜ್ವಲಿಸತೊಡಗಿತ್ತು. ಹೀಗೇ ಹಡಗಿನಲ್ಲಿದ್ದ ಇತರ ಭಾರತೀಯ ಪ್ರಯಾಣಿಕರೆಲ್ಲರೂ ಪರಿವರ್ತನೆ ಆಗತೊಡಗಿದರು. ನಡುನಡುವೆ ನನ್ನ ವಿಚಾರದ ಓಟವನ್ನು ರಾಜಕಾರಣದ ಕ್ಷೇತ್ರಕ್ಕೂ ತಿರುಗಿಸುತ್ತಿದ್ದೆ. ಆಗ, ಸರಕಾರಿ ನೆರವು ಪಡೆದು ಬಂದಿದ್ದ ವಿದ್ಯಾರ್ಥಿಗಳು ಗಾಬರಿಗೊಳ್ಳುತ್ತಿದ್ದರು. ಅವರು ರಾಜಕೀಯ ಚಟುವಟಿಕೆಗಳಲ್ಲಿ ಪಾಲುಗೊಳ್ಳಬಾರದೆಂಬ ನಿಯಮವಿತ್ತು.

'ರಾಜಕೀಯ ಚಳವಳಿಯಲ್ಲಿ ಖಂಡಿತ ಭಾಗವಹಿಸಬೇಡಿ. ಆದರೆ ರಾಜಕೀಯ ಚರ್ಚೆಯಲ್ಲೂ ಭಾಗವಹಿಸಬಾರದೆಂದು ಎಲ್ಲಿ ಹೇಳಿದೆ ?' ಎನ್ನುತ್ತಿದ್ದೆ ನಾನು. ಕ್ರಮೇಣ ಅವರಿಗೂ ದೇಶ ಹಾಗೂ ಇತಿಹಾಸದ ಬಗ್ಗೆ ನನ್ನ ಪ್ರಾಥಮಿಕ ಪ್ರವಚನ ಪ್ರಾರಂಭವಾಯಿತು.

ಹರನಾಮಸಿಂಹನಿಗೆ ಮೊದಲೇ ಮನೆಯ ಗೀಳು. ಅದರ ಜತೆಗೆ ಸಮುದ್ರ ಪಿತ್ತದ (ಸೀ ಸಿಕ್‌ನೆಸ್) ಗೋಳೂ ಶುರುವಾಯಿತು. ಏನು ತಿಂದರೂ ವಾಂತಿ. ಮೂರು ನಾಲ್ಕು ದಿನ ಹಾಸಿಗೆ ಬಿಟ್ಟು ಏಳಲಿಲ್ಲ. ಅವನ ಶುಶ್ರೂಷೆಯ ಹೊಣೆಗಾರಿಕೆ ನಾನೇ ವಹಿಸಿಕೊಂಡೆ. ದೈನ್ಯ ಸ್ವರದಿಂದ ಅವನು ಹೇಳತೊಡಗಿದ : 'ಸಾವರಕರ್‌ಜಿ, ನೀವು ಏನು ಬೇಕಾದರೂ ತಿಳಿದುಕೊಳ್ಳಿ, ಆದರೆ ನನ್ನಿಂದ ಈ ಪ್ರವಾಸ ಸಾಧ್ಯವಿಲ್ಲ. ಈ ಬ್ಯಾರಿಸ್ಟರಿ ನನಗೆ ಬೇಕಿಲ್ಲ ; ಮನೆಯಲ್ಲಿ ಹುಳಿತುಹೋಗುವಷ್ಟು ಹಣ ಇದೆ. ಏಡನ್ನಿನಲ್ಲಿ ಇಳಿದುಬಿಡುತ್ತೇನೆ. ಹಿಂದುಸ್ಥಾನಕ್ಕೆ ವಾಪಸಾಗುತ್ತೇನೆ.'

'ನೋಡು, ನಮ್ಮ ಜನಾಂಗ ದಿನೇ ದಿನೇ ಎಷ್ಟು ದುರ್ಬಲವಾಗುತ್ತಿದೆ! ಕೇವಲ ಇನ್ನೂರು ವರ್ಷಗಳ ಹಿಂದೆ ಮರಾಠಾ ಮಹಿಳೆಯರು ಮುಂಬೈ ಬಳಿಯ ಸಾಗರದಲ್ಲಿ ನಿರ್ಭಯವಾಗಿ ಸಂಚರಿಸುತ್ತಿದ್ದರು ; ಅಷ್ಟು ಮಾತ್ರವಲ್ಲ, ನೌಕಾ ಪಡೆಗಳನ್ನೇ ನಿಯಂತ್ರಿಸುತ್ತಿದ್ದರು. ಇಂಗ್ಲಿಷ್ ಹುಡುಗರ ಕಡೆ ನೋಡು ; ಅವರು ಹೇಗೆ ಮನೆ ಮಠ ಬಿಟ್ಟು ಅಪರಿಚಿತ ದೇಶಗಳಿಗೆ ಹೊರಟರು ; ಲಕ್ಷಾಂತರ ಕೋಟ್ಯಂತರ ಶತ್ರುಗಳ ನಡುವೆ ಜೀವಿಸಿದ್ದು ಮಾತ್ರವಲ್ಲ, ಕಾದಾಡಿ ಗೆದ್ದು ಮಹಾ ಸಾಮ್ರಾಜ್ಯಕ್ಕೆ ಒಡೆಯರಾದರು ! ಇನ್ನು ನಾವು ಇಷ್ಟೆಲ್ಲ ಸುಖ ಸೌಕರ್ಯಗಳ ನಡುವೆ ಇದ್ದೂ ಹೆದರುವುದು ಎಂಥ ನಾಚಿಕೆಗೇಡು ! ಕೂಡದು, ನೀನು

ಹಿಂದಿರುಗಿ ಹೋಗಕೂಡದು. ನಿಮ್ಮ ತಾಯಿಯ ಬಳಿ ಅಪಾರ ಸಂಪತ್ತು ಇದೆಯೆಂದೂ, ಬ್ಯಾರಿಸ್ಟರ್ ಗಿರಿಯ ಸಂಪಾದನೆ ಕ್ಷುಲ್ಲಕವೆಂದೂ ನೀನು ಹೇಳುತ್ತಿ. ಆದರೆ, ಮಿತ್ರ! ನಮ್ಮ ತಾಯಂದಿರೆಲ್ಲರ ತಾಯಿ, ನಮ್ಮ ಭಾರತಮಾತೆ ಅಷ್ಟು ಶ್ರೀಮಂತಳಲ್ಲ. ತನ್ನ ಮಕ್ಕಳು ಕೆಲ ಕಾಲ ವಿದೇಶಗಳಿಗೆ ಹೋಗಿ - ಜಗತ್ತು ಹೇಗಿದೆ, ತಮ್ಮ ಶತ್ರುಗಳ ಶಕ್ತಿ ಎಷ್ಟು, ತಮ್ಮ ದುರ್ಬಲತೆಗಳೇನು ಎಂಬುದೆಲ್ಲವನ್ನೂ ಅರಿತುಕೊಳ್ಳ ಬೇಕೆಂಬುದು ಆಕೆಯ ಇಚ್ಛೆ. ತನ್ನ ಪುತ್ರರು ಧೀರರೂ, ಸಮರ್ಥರೂ ನಿರ್ಭಯರೂ ಆಗಬೇಕೆಂಬುದು ಅವಳ ಆಸೆ. ನಾವು ಇಂಗ್ಲೆಂಡ್, ಫ್ರಾನ್ಸ್, ರಶ್ಯಾಗಳಿಗೆ ಹೋಗಬೇಕು ; ಕ್ರಾಂತಿಯ ಕಲೆ ಕಲಿಯಬೇಕು ಮತ್ತು ಸ್ವಾತಂತ್ರ್ಯ ಗಳಿಸಬೇಕು ; ಧನಸಂಪಾದನೆಯ ಅಗತ್ಯವಿಲ್ಲವೆಂಬ ಈ ಕ್ಷುದ್ರ ವಿಚಾರ ಹಾಗಿರಲಿ, ಕೊನೆಯ ಪಕ್ಷ ಈ ಭವ್ಯ ಧ್ಯೇಯಕ್ಕಾದರೂ ನೀನು ವಾಪಸು ಹೋಗುವ ವಿಚಾರ ಕೈಬಿಡಬೇಕು. ಇನ್ನು, ಆಪ್ತ ಬಂಧುಬಳಗದ ನೆನಪಿನ ವಿಷಯವೆ ? ನೋಡು, ಆ ವಿಷಯದಲ್ಲಿ ನನಗಿಂತ ಹೆಚ್ಚು ಮನಸ್ಸು ನೊಂದಿರುವವರು ಯಾರನ್ನೂ ಕಾಣೆ. ಆದರೆ, ನಾವು ಅಗಲಿಕೆಯ ದುಃಖ ಸಹಿಸಬೇಕು ಮಾತ್ರವಲ್ಲ, ಸಮಯ ಬಂದರೆ ನಮ್ಮ ಪವಿತ್ರ ಧ್ಯೇಯಕ್ಕೆ ಎರಡುಬಗೆಯುವ ಬದಲು ಅವರೂ ನಾವೂ ಪ್ರಾಣಾರ್ಪಣೆಗೂ ಸಿದ್ಧರಾಗಬೇಕು. ತಾಯಿಯ ಬಗ್ಗೆ ಪ್ರೀತಿ ಇದೆ, ನಿಜ. ಆದರೆ ನಮ್ಮ ಜನಾಂಗದ ಸಮಸ್ತ ತಾಯಂದಿರ ತಾಯಿ - ನಮ್ಮ ಮಾತೃಭೂಮಿ - ಇನ್ನೂ ಹೆಚ್ಚು ಪ್ರೀತಿಪಾತ್ರಳಾಗಬೇಕು.'

ಬಾಳಿನ ಬಗೆಗೆ ಹರನಾಮಸಿಂಹನ ದೃಷ್ಟಿಕೋನವೇ ಬದಲಾಯಿತು. ಹಿಂದಿರುಗಿಹೋಗುವ ಯೋಚನೆಯನ್ನೇ ಅವನು ಹಿಂದಿರುಗಿಸಿಬಿಟ್ಟ. 'ಸ್ವದೇಶಕ್ಕೆ ನಾನು ಏನು ಸೇವೆ ಮಾಡಬಲ್ಲೆ, ಹೇಳಿ' ಎಂದು ಕಳಕಳಿಯಿಂದ ವಿಚಾರಿಸತೊಡಗಿದ. ಆಗ ನನ್ನ ಬಳಿ ಇದ್ದ ಜೋಸೆಫ್ ಮ್ಯಾಟ್ಸಿನಿಯ ಇಂಗ್ಲಿಷ್ ಜೀವನ ಚರಿತ್ರೆ ಓದಲು ಅವನಿಗೆ ಕೊಟ್ಟೆ. ಉಳಿದ ಮಿತ್ರರೂ ಅದನ್ನು ಓದಿದರು. ಅದರಲ್ಲಿದ್ದ 'ತರುಣ ಇಟಲಿ' ಗುಪ್ತಸಂಸ್ಥೆಯ ಅಂಗರಚನೆ ಮತ್ತು ಕಾರ್ಯಯೋಜನೆಯ ಸಾಲುಗಳ ಕೆಳಗೆ ಕೆಂಪುಗೆರೆ ಎಳೆದು ಗುರುತಿಸಿದ್ದೆ. ಶಿಷ್ಟಾಚಾರಿ ಮತ್ತು 'ಕೇಶವಾನಂದ' (ನಿಜವಾದ ಹೆಸರು ಇನ್ನೇನೋ ಇದೆ) ಅದರ ಬಗ್ಗೆ ವಿಶೇಷ ಆಸಕ್ತಿಯಿಂದ ಗಮನಿಸುತ್ತಿದ್ದುದು ನನ್ನ ಗಮನಕ್ಕೆ ಬಂತು. ಒಂದು ದಿನ ಮಾತಿನ ನಡುವೆ, 'ಹಿಂದುಸ್ಥಾನದ ಸ್ವಾತಂತ್ರ್ಯಕ್ಕಾಗಿ ಮ್ಯಾಟ್ಸಿನಿಯ ತರುಣ ಇಟಲಿಯಂತಹ ಗುಪ್ತಸಂಸ್ಥೆ ಸ್ಥಾಪಿಸುವುದು ಅಗತ್ಯ ಅಲ್ಲವೇನು ?' ಎಂದು ಆ ಇಬ್ಬರನ್ನೂ ಸಹಜವಾಗಿ ಕೇಳಿದೆ.

'ಅತ್ಯಗತ್ಯ ! ಆದ್ಯ ಕರ್ತವ್ಯ ಅದು. ಆದರೆ ನಮ್ಮಂಥ ಹಿಡಿಯಷ್ಟು ಅಜ್ಞಾತ ತರುಣರು ಸ್ಥಾಪಿಸಿದರೆ ಏನು ಉಪಯೋಗ? ತಿಲಕ್, ಲಜಪತರಾಯ್ ಅಥವಾ ಬರೋಡದ ಮಹಾರಾಜರಂಥವರು ಸ್ಥಾಪಿಸಿದರೆ ಅದಕ್ಕೆ ಬೆಲೆ. ನಾವು ಅದರಲ್ಲಿ ಸೇರಬಹುದು' ಎಂದರು ಶಿಷ್ಟಾಚಾರಿ.

'ಏನೆಂದಿರಿ ? ಹಿಡಿಯಷ್ಟು ಅಜ್ಞಾತ ತರುಣರೆ ? ಹಾಗಾದರೆ ತರುಣ ಇಟಲಿಯನ್ನು ಸ್ಥಾಪಿಸಿದವರು ಯಾರು ? ಮ್ಯಾಟ್ಸಿನಿಯೂ ನೀವು ಹೇಳಿದ ಪದಗಳನ್ನೇ ಉಪಯೋಗಿಸಿದ್ದಾನೆ - ನಾವು ಕೇವಲ ಹಿಡಿಯಷ್ಟು ತರುಣರು ಇಟಲಿಯ ಹೆಸರು ಕೇಳುತ್ತಲೇ ಯುರೋಪಿನ ರಾಜಸಿಂಹಾಸನಗಳೂ ನಡುಗತೊಡಗಿದವು - ಎಂದಿದ್ದಾನೆ ! ಇಂದು ಹಿಂದುಸ್ಥಾನದಲ್ಲಿ ಸಂಪೂರ್ಣ ಸ್ವಾತಂತ್ರ್ಯಕ್ಕಾಗಿ ಪ್ರಕಟವಾಗಿ ಅಥವಾ ಗುಪ್ತವಾಗಿ ಯಾವ ರಾಜ ಮಹಾರಾಜರೂ ಪ್ರಯತ್ನಿಸುತ್ತಿಲ್ಲ. ಅಂಥ ಗುಪ್ತಸಂಸ್ಥೆ ಒಂದಾದರೂ ಇಲ್ಲ, ಎಂದಿಟ್ಟುಕೊಳ್ಳಿ. ಆದರೂ ನಮಗೆ ಕರ್ತವ್ಯ ಎನಿಸಿದ್ದನ್ನು ನಾವು ಮಾಡಬೇಕಲ್ಲವೆ ? ಇತರರು ಯಾರೂ ಮಾಡುತ್ತಿಲ್ಲ ಎಂದೇ ಅದನ್ನು ನಾವು ಪ್ರಾರಂಭಿಸಬೇಕಾಗಿದೆ. ಇಷ್ಟು ತಿಳಿದೂ ನಾವು ಸುಮ್ಮನೆ

ಕುಳಿತರೆ, ಇತರರೆಲ್ಲರಿಗಿಂತಲೂ ದೊಡ್ಡ ಅಪರಾಧಿಗಳಾಗುತ್ತೇವೆ. ದೃಢನಿರ್ಧಾರ ಒಂದಿದ್ದರೆ, ಕೇವಲ ಮೂರು ಜನರೇ ಆದರೂ ಎಂಥ ಸಾಹಸ ತೋರಿಸಬಹುದೆಂಬುದಕ್ಕೆ ಧೀರ ಚಾಫೇಕರ ಬಂಧುಗಳೇ ಸಾಕ್ಷಿ' ಎಂದು ನಾನವರಿಗೆ ಆ ಎಲ್ಲ ಕಥೆ ವಿವರಿಸಿದೆ. 'ಅವರು ರಾಷ್ಟ್ರದ ಸೇಡು ತೀರಿಸಿದರು. ನನ್ನ ಸ್ಫೂರ್ತಿಗೂ ಅವರ ಪರಾಕ್ರಮವೇ ಕಾರಣ. ಯಾರು ಬರಲಿ, ಬಿಡಲಿ. ವೀರಾತ್ಮರ ಶೌರ್ಯದಿಂದ ಕಾರ್ಯ ವರ್ಧಿಸುತ್ತಾ ಹೋಗುತ್ತದೆ; ಕಿಡಿಗೂ ಕಾಳ್ಗಿಚ್ಚಾಗುತ್ತದೆ' ಎಂದೆ.

'ಶಪಥ ತೊಡಲು ನೀವು ಸಿದ್ಧ ತಾನೆ ?' ಎಂದು ಕೇಶವಾನಂದರು ನನ್ನೆಡೆಗೆ ತಿರುಗಿ ಅಯ್ಯರು ಪ್ರಶ್ನೆ ಕೇಳಿದರು.

'ಎಲ್ಲರಿಗಿಂತ ಮೊದಲು !' ಎಂದೆ.

'ಹಾಗಾದರೆ ನಾನೂ ಸಿದ್ಧ' – ಆವೇಶದಿಂದ ಅವರೆಂದರು.

'ನಾಳೆ ಯಾವುದೂ ಹೇಳುತ್ತೇನೆ' ಎಂದರು ಶಿಷ್ಟಾಚಾರಿ.

'ಒಂದಲ್ಲ, ಎರಡು ದಿನ ತೆಗೆದುಕೊಳ್ಳಿ. ಇಂಥ ವಿಷಯಗಳಲ್ಲಿ ನಾವು ಪೂರ್ತಿ ಆಲೋಚಿಸಿ, ಮನಸ್ಸಿಗೆ ಒಪ್ಪಿಗೆಯಾದರೆ ಮಾತ್ರ ಮಾಡಬೇಕು' ಎಂದೆ. ಅಂದು ರಾತ್ರಿಯೇ ನಾನು ಮರಾಠಿಯಲ್ಲಿದ್ದ ಅಭಿನವ ಭಾರತದ ಪ್ರತಿಜ್ಞೆಯನ್ನು ಇಂಗ್ಲಿಷಿನಲ್ಲಿ ಬರೆದಿಟ್ಟೆ.

ಮರುದಿನ ನಾನು ಕೇಳುವ ಮೊದಲೇ ಶಿಷ್ಟಾಚಾರಿ ಹೇಳಿಕಳುಹಿಸಿದರು. ತಮ್ಮ ಕೆಲವು ಸಂಶಯಗಳನ್ನು ಮುಂದಿಟ್ಟರು. ಸಮಾಧಾನಕರ ಉತ್ತರ ಕೊಟ್ಟೆ. 'ಈಗಿಂದೀಗಲೇ ಗುಪ್ತಸಂಸ್ಥೆ ಸ್ಥಾಪಿಸಿಬಿಡಬೇಕು. ಹೆಸರು ಏನಿಡೋಣ ?' ಎಂದರು. 'ಅಭಿನವ ಭಾರತ' ಎಂದೆ. ಕೇಶವಾನಂದರನ್ನೂ ಅವರು ತಮ್ಮ ಕೊಠಡಿಗೇ ಕರೆಸಿದರು. ನಾನು ಪ್ರತಿಜ್ಞೆಯ ಪ್ರತಿ ಕೊಡುತ್ತಾ, 'ಮೊದಲು ಇದನ್ನು ಚೆನ್ನಾಗಿ ಓದಿಕೊಳ್ಳಿ. ಇದರ ರಮ್ಯಾದ್ಭುತ ಕಲ್ಪನೆಯಲ್ಲಿ ಕೊಚ್ಚಿಹೋಗದೆ, ಪ್ರಕ್ಷುಬ್ಧರಾಗದೆ, ಶಾಂತ ಮನಸ್ಸಿನಿಂದ ಅದರ ಭೀಕರ ಪರಿಣಾಮಗಳನ್ನು ಆಲೋಚಿಸಿ ನೋಡಿ. ಈ ಶಪಥ ಸ್ವೀಕರಿಸದಿದ್ದರೂ ಚಿಂತೆಯಿಲ್ಲ ; ಆದರೆ ಒಮ್ಮೆ ಸ್ವೀಕರಿಸಿದ ನಂತರ ಆಮರಣ ಬಿಡುವಂತಿಲ್ಲ!' ಎಂದೆ. ಇಬ್ಬರೂ ಓದಿಕೊಂಡು, 'ಸರಿ, ಆಗಲಿ' ಎಂದರು. ಮೊದಲು ನಾನೇ ಎದ್ದು ನಿಂತು ಶಪಥ ಮಾಡಿದೆ.

'ದೇವರನ್ನು ಸ್ಮರಿಸಿ,

ನನ್ನ ಮಾತೃಭೂಮಿಯಾದ, ಪಿತೃಭೂಮಿಯಾದ ಹಿಂದುಸ್ಥಾನವನ್ನು ಸ್ಮರಿಸಿ,

ಇದುವರೆಗೆ ನಮ್ಮ ರಾಷ್ಟ್ರವನ್ನು ಶ್ರೇಷ್ಠ ಹಾಗೂ ಉನ್ನತಗೊಳಿಸಿರುವ ಮತ್ತು ಅದರ ಸ್ವಾತಂತ್ರ್ಯ ಹಾಗೂ ಗೌರವ ರಕ್ಷಣೆಗಾಗಿ ಹೋರಾಡಿರುವ ಆ ನಮ್ಮೆಲ್ಲ ಋಷಿಮುನಿಗಳನ್ನೂ ವೀರಾತ್ಮ ಹುತಾತ್ಮರನ್ನೂ ಸ್ಮರಿಸಿ,

ನಾನು –

ನನ್ನ ಮಾತೃಭೂಮಿಯನ್ನು ಭೂರಕ್ಕಸ ಆಂಗ್ಲಶಾಹಿಯ ಶಸ್ತ್ರಬಂಧನದಿಂ ಮುಕ್ತಗೊಳಿಸಿ ನಮ್ಮ ರಾಷ್ಟ್ರಕ್ಕೆ ಸಂಪೂರ್ಣ ರಾಜಕೀಯ ಸ್ವಾತಂತ್ರ್ಯವನ್ನು ಗಳಿಸಿಕೊಡುವುದು ನನ್ನ ಜೀವನದ ಆದ್ಯ ಕರ್ತವ್ಯ ಹಾಗೂ ಜೀವನೋದ್ದೇಶ ಎಂದೂ, ಅದೊಂದೇ ಪವಿತ್ರವೂ ಮಾನವೀಯವೂ ಆದ ಧ್ಯೇಯವೆಂದೂ ಮನವರಿಕೆಯಾಗಿ ;

ಅದಕ್ಕೆ – ನಮ್ಮ ಜನರ ಇತರೆಲ್ಲ ರಾಜಕೀಯ ಪ್ರಯತ್ನಗಳೇನೇ ಇರಲಿ – ಸಂಘಟಿತ ಸಶಸ್ತ್ರ ಹೋರಾಟವೊಂದೇ ಪರಿಣಾಮಕಾರಿ ಸಾಧನವೆಂಬುದನ್ನು ಮನಗಂಡು ;

ಮೇಲ್ಕಂಡ ತತ್ವಗಳ ಆಧಾರವುಳ್ಳ ಅಖಿಲ ಭಾರತೀಯ ಗುಪ್ತ ಕ್ರಾಂತಿಕಾರಿ ಸಂಸ್ಥೆಯಾದ ಅಭಿನವ ಭಾರತದ ಸದಸ್ಯನಾಗಿದ್ದೇನೆ.

ಮತ್ತು ಅದರ ಕ್ರಾಂತಿಧ್ವಜದಡಿಯಲ್ಲಿ ಬ್ರಿಟಿಷ್ ಆಳರಸರ ವಿರುದ್ಧ ವಿಜಯ ಇಲ್ಲವೆ ವೀರಮರಣ ಗಳಿಸುವವರೆಗೂ ಹೋರಾಡುವುದಾಗಿ ಪ್ರತಿಜ್ಞೆ ಕೈಗೊಳ್ಳುತ್ತೇನೆ.

ದೇವರು ನನಗೆ ನೆರವಾಗಲಿ.'

ನಾನು ಮುಗಿಸಿದೊಡನೆಯೇ ಕೇಶವಾನಂದರೂ, ಶಿಷ್ಟಾಚಾರ್ಯರೂ ಭಾವಾವೇಶಭರಿತರಾಗಿ ಶಪಥ ಮಾಡಿದರು. ಅನಂತರನಾನು ಅವರಿಗೆ ತಿಳಿಸಿದೆ : 'ಹಿಂದುಸ್ಥಾನದಲ್ಲಿ ಈಗಾಗಲೇ ಅಭಿನವ ಭಾರತ ಸ್ಥಾಪಿತವಾಗಿದೆ. ಅದರ ನೂರಾರು ಶಾಖೆಗಳಲ್ಲಿ ಇದೇ ರೀತಿ ಶಪಥ ತೊಟ್ಟ ಸಹಸ್ರಾವಧಿ ಸದಸ್ಯರಿದ್ದಾರೆ.'

ಇಬ್ಬರಿಗೂ ಅತ್ಯಾನಂದ ಆಯಿತು. ಹಡಗಿನಲ್ಲಿದ್ದ ಇನ್ನೂ ಒಬ್ಬಿಬ್ಬರು ಮಿತ್ರರನ್ನು ಶಪಥಬದ್ಧರನ್ನಾಗಿ ಮಾಡಿದೆವು. ಯುರೋಪಿನಲ್ಲಿ ಅಭಿನವಭಾರತ ಸ್ಥಾಪಿಸಲು ಹೊರಟಿದ್ದ ನಾನು ದಾರಿಯಲ್ಲೆ ಆ ಕಾರ್ಯ ಪ್ರಾರಂಭಿಸಿದ್ದೆ. ಅದರಿಂದ ನನ್ನ ಉತ್ಸಾಹ ಇಮ್ಮಡಿಸಿತು. ಮನಸ್ಸಿನಲ್ಲಿ ಮೂರು ಹೊತ್ತೂ ಧ್ಯೇಯದ ತಳಮಳ ಇದ್ದಲ್ಲಿ ವಿಜಯದ ಹೆಜ್ಜೆ ಮುಂದಿಡಬಹುದು ಎಂಬ ಆತ್ಮವಿಶ್ವಾಸ ಬಲವಾಯಿತು.

ಇಂಗ್ಲೆಂಡ್ ತಲಪಿದ ನಂತರ ಶಿಷ್ಟಾಚಾರಿಯವರು ಮಾಡಿದ ಕಾರ್ಯಸಾಧನೆ ಹಾಗೂ ತ್ಯಾಗ ನಿಜಕ್ಕೂ ಸ್ಮರಣೀಯ. ಕ್ರಾಂತಿಸಾಹಿತ್ಯ ಮುದ್ರಿಸಿ ಹಂಚುವುದರಿಂದ ಮೊದಲುಗೊಂಡು ಶಸ್ತ್ರಾಸ್ತ್ರಗಳನ್ನು ಕೊಂಡು ಭಾರತಕ್ಕೆ ರವಾನಿಸುವವರೆಗೆ ಕ್ರಾಂತಿಕಾರ್ಯಕ್ಕೆ ಅವರು ನಾನು ಕೇಳಿಕೇಳಿದಷ್ಟು ಧನಸಹಾಯ ಮಾಡಿದರು; ಆದರೆ ತಾವು ಮಾತ್ರ ಎಲೆಮರೆಯ ಕಾಯಂತೆಯೇ ಉಳಿದರು. ತಮ್ಮ ಪರಿಚಿತ ವ್ಯಾಪಾರಿಗಳು ಕಳಿಸುತ್ತಿದ್ದ ಯಂತ್ರಗಳು, ಬಟ್ಟೆ ಮುಂತಾದ ಸಾಮಾನುಗಳೊಡನೆ ಕರಪತ್ರಗಳನ್ನೂ, ಪಿಸ್ತೂಲುಗಳನ್ನೂ ಗುಟ್ಟಾಗಿ ಕಳಿಸುವ ಏರ್ಪಾಟನ್ನೂ ಅವರು ದಕ್ಷತೆಯಿಂದ ಮಾಡುತ್ತಿದ್ದರು.

'ಶಸ್ತ್ರಗಳು ಎಲ್ಲಿವೆ ಎಂದೇಕೆ ಯೋಚಿಸುತ್ತೀರಿ ? ಬ್ರಿಟಿಷ್ ಶಾಸನವನ್ನು ಬುಡಮೇಲು ಮಾಡಲು, ಸೈನಿಕ ಬಂಧುಗಳೇ ! ನಿಮ್ಮ ಕೈಗಳಲ್ಲೇ ಮಾತೃಭೂಮಿಯ ಶಸ್ತ್ರಾಗಾರ ಇದೆ' ಎಂಬ ಶಿರೋನಾಮೆಯಡಿಯಲ್ಲಿ ನಾನೊಂದು ಇಂಗ್ಲಿಷ್ ಪತ್ರಕ ತಯಾರಿಸಿದ್ದೆ. ಶಿಷ್ಟಾಚಾರಿ ಅದನ್ನು ಪಂಜಾಬಿಗೆ ಭಾಷಾಂತರಿಸಿದರು. ಅದರ ಸಹಸ್ರಾವಧಿ ಪ್ರತಿಗಳನ್ನು ಮುದ್ರಿಸಿ ಸೈನಿಕ ಕೇಂದ್ರಗಳಿಗೆ ರಹಸ್ಯವಾಗಿ ತಲಪುವಂತೆ ಮಾಡಿದವರೂ ಅವರೇ. ಗಲಭೆಯ ಸಂಭವ ಇದ್ದಾಗಲೆಲ್ಲ ಅವರು ತಮ್ಮ ಹತ್ತಿಪ್ಪತ್ತು ಶಿಷ್ಯರೊಡನೆ ಬರುತ್ತಿದ್ದರು; ಯೋಗ್ಯ ತಯಾರಿ ಮಾಡಿಕೊಂಡು ನಿರ್ದಿಷ್ಟ ಸ್ಥಳದಲ್ಲಿ ಹಾಜರಾಗುತ್ತಿದ್ದರು ! ಸಭೆ ಸಮಾರಂಭಗಳಲ್ಲಿ ನನ್ನ ರಕ್ಷಣೆಯ ಸಲುವಾಗಿ, ಯಾರಿಗೂ ಪತ್ತೆಹತ್ತದಂತೆ, ವೇದಿಕೆಯ ಹತ್ತಿರವೇ ಬಂದು ಕುಳಿತಿರುತ್ತಿದ್ದರು. ನಾನು ಲಂಡನ್ ಬಿಟ್ಟನಂತರ ಅವರು ಎಲ್ಲಿ ಹೋದರೋ ತಿಳಿಯದು. ಅವರಿಗೂ (ಅವರ ಹೆಸರು ಎಂದಿಗೂ ಹೇಳುವುದಿಲ್ಲವೆಂದು ಮಾತು ಕೊಟ್ಟಿದ್ದೆ.) ಮತ್ತು ಹೆಸರು ಹೇಳಲಾಗದ ಇತರ ನೂರಾರು ಕ್ರಾಂತಿ ಮಿತ್ರರಿಗೂ ಇಲ್ಲಿಯೇ ಕೃತಜ್ಞತೆ ಶ್ರದ್ಧಾಂಜಲಿ ಅರ್ಪಿಸಿಬಿಡುತ್ತೇನೆ.

ಹಡಗಿನಲ್ಲಿ ಹಗಲ ಬಿಡುವಿನಲ್ಲಿ ಭಾರತೀಯರೊಡನೆ ಬೆರೆಯುವುದು ; ದೇಶದ ವಿವಿಧ ಸಮಸ್ಯೆಗಳ ಬಗ್ಗೆ ಚರ್ಚಿಸುವುದು ; ಅವರಿಗೆ ಸ್ವಾತಂತ್ರ್ಯದ ಓನಾಮ ಕಲಿಸುವುದು. ಆಗಲೇ ನನ್ನ ಕರ್ಮತೃಷ್ಣೆಗೆ, ಕ್ರಿಯಾಶೀಲ ಮನಸ್ಸಿಗೆ ಸ್ವಲ್ಪ ತೃಪ್ತಿ. ಆದರೆ ಚಿಂತನಶೀಲ ಮನಸ್ಸಿಗೆ ಆಗಲೂ ಸಮಾಧಾನವಿಲ್ಲ. ಅದಕ್ಕಾಗಿ ರಾತ್ರಿ ಬಿಡುವಾದೊಡನೆ ಏಕಾಂತಕ್ಕೆ ಧಾವಿಸುತ್ತಿದ್ದೆ. ಹಡಗಿನ ಮೇಲಂಗಳದಲ್ಲಿ ಯಾವುದಾದರೊಂದು

ಅಜ್ಞಾತ ಮೂಲೆಗಳಲ್ಲಿ ಗಂಟೆಗಟ್ಟಲೆ ಕುಳಿತುಕೊಳ್ಳುತ್ತಿದ್ದೆ.

ಕೆಳಗೆ ಅನಂತ ಅಪಾರ ಸಾಗರ; ಮೇಲೆ ಅನಂತ ಅಪಾರ ಆಕಾಶ ಅವೆರಡು ರಮ್ಯಭೀಷಣ 'ಮಹಾ ಭೂತ' ಗಳ ನಡುವೆ ಮನುಷ್ಯ ಎಷ್ಟು ಸಣ್ಣವ ! ಲೋಕದ ಸಮಸ್ತ ಚಟುವಟಿಕೆಗಳೂ ಕೇವಲ ಕುರುಡರ ಹುಡುಕಾಟದಂತೇನು ? ಅದನ್ನೇ ಸಿಹಿಮಾತಿನಲ್ಲಿ 'ಭಗವಂತನ ಲೀಲೆ' ಎನ್ನುವರೇನು ? ಶೂನ್ಯವಾದ, ಅಜ್ಞೇಯವಾದ, ಜಡವಾದ, ಮಾಯಾವಾದ, ಬ್ರಹ್ಮವಾದ, ಕ್ಯಾಂಟನ ಪ್ರತ್ಯಕ್ಷವಾದ, ಹೆಗೆಲನ ಜಡಾದ್ವೈತವಾದ ಎಲ್ಲವೂ ಒಂದೊಂದಾಗಿ ಬಂದುಹೋಗುತ್ತಿದ್ದವು. ಆಲೋಚನೆಗಳು ಕಾವ್ಯದ ಸಾಲುಗಳಾಗಿ ಹೊರಹೊಮ್ಮುತ್ತಿದ್ದವು.

.................................................. ..

**ಪ್ರಶ್ನ ಚರಮ ತೋ ಯುಗಾಸಿ ವಿಗತ ಯುಗಾಚಾ**
**ಕೇಂದ್ರ ಕುಠೇ ಭುವನಾಚಾ ? ನಾಭಿ ನಭಾಚಾ ?**
*(ಉಳಿದಿದೆ ಪ್ರಶ್ನೆಯು ಯುಗಯುಗಗಳದೊಂದು,*
*ಭುವಿಗಾವುದು ಕೇಂದ್ರವು, ಆವುದು ನಾಭಿಯು ನಭಕೆಂದು !)*
ಮತ್ತೆ ಹರ್ಷದಿಂದ ಹಾಡಿಕೊಳ್ಳುತ್ತಿದ್ದೆ -
**ಸುನೀಲ ನಭ ಹೇ ಸುಂದರ ನಭ ಹೇ ಅತಲ ಅಹಾ**
**ಸುನೀಲ ಸಾಗರ ಸುಂದರ ಸಾಗರ ಅತಲಚಿ ಹಾ !**
ದಿಗ್ಭ್ರಮೆಯಿಂದ ಅಂದುಕೊಳ್ಳುತ್ತಿದ್ದೆ -
**ನುಮಜೇ ಲಾಗೇ ಕುಠೇ ನಭ ಕುಠೇ ಜಲಸೀಮಾ ಹೋಯೀ**
**ನಭಾಂತ ಜಲ ತೇ, ಜಲಾಂತ ನಭ ತೇ ಸಂಗಮುನೀ ಜಾಯೀ !**
*(ನಭದಂಚಿನಲಾ ಜಲ, ಜಲದಂಚಿನಲಾ ನಭ ಸಂಗಮಿಸಿರಲು*
*ನಭವೆಲ್ಲಿಹುದೋ ಜಲವೆಲ್ಲಿಹುದೋ ನಾನರಿಯದೆಹೋದೆ).*
ನಡುನಡುವೆ ಪ್ರಶ್ನೆ ಏಳುತ್ತಿತ್ತು -
**ಆಕಾಶೀಚೇ ತಾರೇ ಸಾಗರಿ ಪ್ರತಿಬಿಂಬಿತ ಹೋತೀ**
**ಕಿವಾ ಆಕಾಶೀ ಹೇ ಬಿಂಬತಿ ಸಾಗರಿಚೇ ಮೋತೀ ?**
*(ಸಾಗರ ಪ್ರತಿಬಿಂಬಿಸುತಿಹುದೋ ಆಕಾಶದ ಆ ತಾರೆಗಳ*
*ಆಕಾಶವೆ ಬಿಂಬಿಸುತಿಹುದೋ ಸಾಗರದಾಳದ ರತ್ನಗಳ ?)*

ನಮ್ಮ ಹಡಗು ಸೂಯೆಜ್ ದಾಟಿ, ಭೂಮಧ್ಯ ಸಮುದ್ರದ ಮೂಲಕ ಮಾರ್ಸೇಲ್ಸ್ ತಲುಪಿತು. ಫ್ರಾನ್ಸ್‌ನ ಹೆಬ್ಬಾಗಿಲು ಅದು. ಇಂಗ್ಲೆಂಡಿನ ಪ್ರಯಾಣಿಕರೂ ಅಲ್ಲಿಯೆ ಇಳಿಯಬೇಕು. ನಮ್ಮ ರೈಲು ಹೊರಡಲು ಬಹಳ ಸಮಯವಿತ್ತು. ಮಾರ್ಸೇಲ್ಸ್ ಪಟ್ಟಣ ನೋಡಲು ನನಗೆ ವಿಶೇಷ ಕುತೂಹಲ. ಲೋಕಪ್ರಸಿದ್ಧ ಫ್ರೆಂಚ್ ರಾಷ್ಟ್ರಗೀತೆ 'ಮಾರ್ಸೆಯೇಸ್'ನ ತೌರು ಅದು. ಫ್ರೆಂಚ್ ರಾಜ್ಯಕ್ರಾಂತಿಯಾದ ಸಮಯದಲ್ಲಿ ರಾಷ್ಟ್ರೀಯ ಸೇನೆಗೆ ಸೇರಲು ಇಲ್ಲಿಂದ ಹಿಡಿಯಷ್ಟು ಕ್ರಾಂತಿಕಾರರು ಪ್ಯಾರಿಸ್ಸಿಗೆ ಹೊರಟರು. ಅವರು ಮೊದಲು ದಾರಿಯುದ್ದಕ್ಕೂ ಹಾಡಿದ ಈ ರಣಗೀತೆ ದೇಶವ್ಯಾಪಿಯಾಯಿತು, ಇಡೀ ರಾಷ್ಟ್ರಕ್ಕೆ ಸ್ಫೂರ್ತಿ ನೀಡಿತು.

ಮಾರ್ಸೇಲ್ಸ್ ನನ್ನ ಮನಸೆಳೆಯಲು ಕಾರಣವಾದ ಮತ್ತೂ ಒಂದು ವೈಶಿಷ್ಟ್ಯ ಇತ್ತು. ಮ್ಯಾಟ್ಸಿನಿಯ ಆಶ್ರಯಸ್ಥಾನ ಆಗಿತ್ತದು. ಸ್ವದೇಶದ ಸ್ವಾತಂತ್ರ್ಯಕ್ಕಾಗಿ ಅವನು ಸಶಸ್ತ್ರ ಹೋರಾಟ ಘೋಷಿಸಿದ. ಆ ಅಪರಾಧಕ್ಕಾಗಿ ಅಲ್ಲಿನ ಆಳರಸರು ಹರೆಯದ ಹೊಸ್ತಿಲಲ್ಲಿದ್ದ ಅವನನ್ನು ಇಟಲಿಯಿಂದಾಚೆಗೆ ಹೊರ 'ದಬ್ಬಿದ್ದರು. ನಿರ್ವಾಸಿತನಾದ ಅವನು ಮೊದಲು ಇಲ್ಲಿಗೆ ಬಂದ. ಗುರುತು ಪರಿಚಯವಿಲ್ಲ. ಹೊಟ್ಟೆಗಿಲ್ಲ, ಬಟ್ಟೆಗಿಲ್ಲ. ಅಂಥ ಪರಿಸ್ಥಿತಿಯಲ್ಲೂ ಇದೇ ನಗರದಲ್ಲಿ 'ತರುಣ ಇಟಲಿ' ಗುಪ್ತಸಂಸ್ಥೆ ಸ್ಥಾಪಿಸಿದ. ಆಸ್ಟ್ರಿಯ ಸರಕಾರ ಅವನಿಗೆ ಮರಣದಂಡನೆ ಘೋಷಿಸಿತು. ಅವನನ್ನು ಹಿಡಿದೊಪ್ಪಿಸುವಂತೆ ಫ್ರೆಂಚ್ ಸರಕಾರದ ಮೇಲೆ ಒತ್ತಡ ಹಾಕಿತು. ಆಗ ಮ್ಯಾಟ್ಸಿನಿ ಇಲ್ಲಿಯೇ ಭೂಗತನಾಗಿದ್ದುಕೊಂಡು ತನ್ನ ಕಾರ್ಯ ಮುಂದುವರಿಸಿದ. ಅವನ ಕರ್ಮಕ್ಷೇತ್ರ ಹಾಗೂ 'ತರುಣ ಇಟಲಿ'ಯ ಜನ್ಮಸ್ಥಾನ ಇದು. ಆದ್ದರಿಂದ ಮಾರ್ಸೇಲ್ಸ್ ನನ್ನಂಥ ಕ್ರಾಂತಿಕಾರಿಗೆ ಧರ್ಮಕ್ಷೇತ್ರವಾಗಿತ್ತು ; ಶ್ರದ್ಧಾಕೇಂದ್ರವಾಗಿತ್ತು. ಊರು ತೋರಿಸುತ್ತಿದ್ದ ಮಾರ್ಗದರ್ಶಿಯನ್ನು ಕೇಳಿದೆ :

'ಇಟಲಿಯ ಕ್ರಾಂತಿನಾಯಕ ಮ್ಯಾಟ್ಸಿನಿ ಇಲ್ಲಿ ವಾಸಿಸುತ್ತಿದ್ದ ಮನೆ ತೋರಿಸು.'

'ಮ್ಯಾಟ್ಸಿನಿ ? ಯಾರವರು ? ವಿಳಾಸ ಇದ್ದರೆ ಕೊಡಿ, ಹುಡುಕುತ್ತೇನೆ' ಎಂದ ಅವನು.

ಪಾಪ, ಅವನಿಗೇನು ಗೊತ್ತಿದ್ದೀತು ಇತಿಹಾಸ ? ಯಾರಾದರೂ ಪತ್ರಿಕಾಕರ್ತರನ್ನು ಕೇಳೋಣ ಎಂದುಕೊಂಡೆ. ದಾರಿಯಲ್ಲಿ ಸಿಕ್ಕಿದ ಒಂದು ಪತ್ರಿಕಾಲಯಕ್ಕೆ ಅವನನ್ನು ಕಳುಹಿಸಿದೆ. ವಾಪಸು ಬಂದು ಹೇಳಿದ: 'ಇಟಲಿಯ ಮ್ಯಾಟ್ಸಿನಿಯ ವಿಳಾಸ ಮಾರ್ಸೇಲ್ಸ್‌ನವರಿಗೆ ಗೊತ್ತಿಲ್ಲ ಅನ್ನುತ್ತಾರೆ. ಇಟಲಿಗೆ ಹೋಗಿ ವಿಚಾರಿಸಬೇಕಂತೆ. ಸಿಕ್ಕಿದರೆ ಅಲ್ಲಿಯೇ ಸಿಕ್ಕಬೇಕು ಅಂದರು !'

ಈ ಸಂಪಾದಕ ವರ್ಗದವರ ಜ್ಞಾನಸಂಪತ್ತು ಕಂಡು ನನಗೆ ನಗು ಬಂತು. ಆದರೆ ಮರುಕ್ಷಣವೇ ನನ್ನ ಮೂರ್ಖತೆ ಅರಿವಿಗೆ ಬಂದು ನಾನೇ ನಕ್ಕೆ. ಮ್ಯಾಟ್ಸಿನಿ ಇಲ್ಲಿಗೆ ನಿರ್ಗತಿಕನಾಗಿ, ಭಿಕಾರಿಯಾಗಿ ಬಂದ. ಯಾರ ಲಕ್ಷ್ಯಕ್ಕೂ ಅವನು ಬರಲಿಲ್ಲ. ಬಹುಶಃ ನನ್ನ ಇಂದಿನ ಪರಿಸ್ಥಿತಿಗಿಂತಲೂ ಅವನದು ಕೇಡಾಗಿತ್ತು. ಅವನಿಗೆ ಆಸರೆ ನೀಡುವ ನೆಲೆಯಾದರೂ ಎಲ್ಲಿತ್ತು ? ಇಂದಿನ ಅಭಿನವ ಭಾರತದಂತೆಯೇ ಅಂದಿನ ಅವನ ತರುಣ ಇಟಲಿಯೂ ಪ್ರಾಥಮಿಕಾವಸ್ಥೆಯಲ್ಲಿ ಇತ್ತೆಂದು ಕಾಣುತ್ತದೆ. ಆ ದೇಶಭಕ್ತನ ಚಟುವಟಿಕೆಗಳೆಲ್ಲ ರಹಸ್ಯವಾಗಿ, ನಿರಂತರ ಸ್ಥಳ ಬದಲಾವಣೆಯ ಸನ್ನಿವೇಶದಲ್ಲೇ ಸಾಗಿರಬೇಕು. ನಿಜಕ್ಕೂ ಅವನ ಮನೆ ಕೇಳಿದ ನಾನೇ ಶುದ್ಧ ಪೆದ್ದ! ಇಂದು ಮಾರ್ಸೇಲ್ಸಿನ ಬೀದಿಗಳಲ್ಲಿ ನನ್ನ ಕಡೆ ತಿರುಗಿ ನೋಡುವವರು ಸಹ ಒಬ್ಬರಿರಲಿಲ್ಲ. ಆ ಊರಿನಲ್ಲಿ ನನ್ನ ಹೆಸರು ಗೊತ್ತಿದ್ದುದು ನನಗೊಬ್ಬನಿಗೇ! ನಾಲ್ಕು ವರ್ಷದೊಳಗೆ - ಈ ಊರಿನ ಪ್ರತಿ ಯೊಬ್ಬರ ಬಾಯಲ್ಲೂ ನನ್ನ ಹೆಸರು, ಪ್ರತಿಯೊಂದು ಪತ್ರಿಕೆಯಲ್ಲೂ ನನ್ನ ಭಾವಚಿತ್ರ ಮೂಡುತ್ತದೆ; ಇದೇ ನಗರವೇ ಇಡೀ ಜಗತ್ತಿಗೆ ನನ್ನ ಕೀರ್ತಿಯನ್ನು ಸಾರಿ ಹೇಳುತ್ತದೆ - ಎಂದು ಆಗ ನಾನು ಕನಸು ಮನಸಿನಲ್ಲೂ ಎಣಿಸಿರಲಿಲ್ಲ.

ವೇಳೆಯಾಯಿತು. ರೈಲು ಹತ್ತುತ್ತಾ ಆ ಊರಿಗೆ ಮನಸ್ಸಿನಲ್ಲೆ ವಂದಿಸಿದೆ. ಜುಲೈ 3ರಂದು ಲಂಡನ್ ತಲುಪಿದೆವು. 'ಭಾರತ ಭವನ'ದ ಪ್ರಮುಖರು ಎದುರುಗೊಳ್ಳಲು ನಿಲ್ದಾಣಕ್ಕೆ ಬಂದಿದ್ದರು. ಹರನಾಮ ಸಿಂಹನದು ಹಸುಗೂಸಿನ ಸ್ವಭಾವ. ಲಂಡನ್ನಿನಲ್ಲಿ ತನಗಾಗಿ ಮೊದಲೇ ಕಾದಿರಿಸಿದ್ದ ವೈಭವ ಸಂಪನ್ನ ಕೊಠಡಿಗೆ ಹೋಗಲು ಅವನು ಒಪ್ಪಲಿಲ್ಲ. ನೇರವಾಗಿ ನನ್ನೊಡನೆ 'ಭಾರತ ಭವನ'ಕ್ಕೇ ಬಂದ. ಅಲ್ಲಿಯೇ ವಸತಿ ಹೂಡಿದ.





## ಹವಿಸ್ಸು ಹನ್ನೊಂದು

ಪಂ|| ಶ್ಯಾಮಜಿ ಕೃಷ್ಣವರ್ಮರು ಕಛ್ ಸಂಸ್ಥಾನದ ಮಾಂಡವಿ ಗ್ರಾಮದವರು. 1857 ಅಕ್ಟೋಬರ್ 4ರಂದು ಬಡ ಭನಸಾಲಿ ಕುಟುಂಬದಲ್ಲಿ ಜನಿಸಿದರು ಹತ್ತನೆ ವಯಸ್ಸಿನಲ್ಲಿ ತಂದೆತಾಯಿಗಳನ್ನು ಕಳೆದು ಕೊಂಡು ಅನಾಥರಾದರು. ಅನಂತರ ಬಂಧುಗಳ ನೆರವಿನಿಂದ ಮುಂಬೈನಲ್ಲಿ ವಾಸ ಎಳೆವಯಸ್ಸಿನಲ್ಲೇ ಸಂಸ್ಕೃತ ಪಾಂಡಿತ್ಯ ಸಿದ್ಧಿಸಿತು ಮಹರ್ಷಿ ದಯಾನಂದರ ಶಿಷ್ಯರಾದರು ದೇಶದಾದ್ಯಂತ ಧರ್ಮಪ್ರಚಾರ ಕೈಗೊಂಡರು. ಅವರ ನಿರರ್ಗಳ ಸಂಸ್ಕೃತ ಭಾಷಣಗಳನ್ನು ಕೇಳಿ ಘನ ವಿದ್ವಾಂಸರೆಲ್ಲರೂ ತಲೆದೂಗಿದರು

1879ರ ಏಪ್ರಿಲ್‌ನಲ್ಲಿ ಶ್ಯಾಮಜಿ ಲಂಡನ್ ತಲುಪಿದರು. ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ವಿದ್ಯಾರ್ಥಿಯಾದರು 'ಅವರ ಹಾಗೆ ಇಡೀ ಪಾಣಿನಿಯ ವ್ಯಾಕರಣ ಕಂಠಗತವಾಗಿದ್ದ ಭಾರತೀಯ ತರುಣನನ್ನು ನಮ್ಮ ವಿಶ್ವವಿದ್ಯಾಲಯ ಕಂಡದ್ದು ಅದೇ ಮೊದಲು' ಎಂದಿದ್ದಾನೆ, ಅಲ್ಲಿನ ಪ್ರೊ ಮ್ಯಾನಿಯರ್. ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳಲ್ಲೂ ಶ್ಯಾಮಜಿ ಪರಿಣತರಾದರು ಅವರ ಪ್ರತಿಭೆ ಅವರಿಗೆ ಅನೇಕ ಉನ್ನತ ಪ್ರಶಸ್ತಿಗಳನ್ನೂ, ಕೀರ್ತಿಯನ್ನೂ ತಂದುಕೊಟ್ಟಿತು 1883ರಲ್ಲಿ ಬಿ ಎ ಪದವಿ ದೊರೆಯಿತು ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಪ್ರಥಮ ಭಾರತೀಯ ಪದವೀಧರ ಅವರೇ ಎನ್ನಲು ಅಡ್ಡಿಯಿಲ್ಲ 1885ರಲ್ಲಿ ಬ್ಯಾರಿಸ್ಟರ್ ಪದವಿ ಗಳಿಸಿ ಭಾರತಕ್ಕೆ ಬಂದರು ರತ್ಲಾಂ, ಉದಯಪುರ, ಜುನಾಗಡ ಸಂಸ್ಥಾನಗಳಲ್ಲಿ ದಿವಾನರಾಗಿದ್ದರು ಬೇಕಾದ ಹಾಗೆ ಧನಸಂಪಾದನೆ ಮಾಡಿದರು.

ಜುನಾಗಡದಲ್ಲಿದ್ದಾಗ ಮೆಕಾನಕೀ ಎಂಬ ಇಂಗ್ಲಿಷ್ ಗೆಳೆಯ ಅವರಲ್ಲಿಗೆ ಬಂದ. ಶ್ಯಾಮಜಿ ಅವನಿಗೊಂದು ದೊಡ್ಡ ಹುದ್ದೆ ಕೊಟ್ಟು ಸಹಾಯ ಮಾಡಿದರು ಅನಂತರ ಅವನೇ ಅವರನ್ನು ಉಚ್ಚಾಟಿಸಿದ! 1895ರಲ್ಲಿ ಇದ್ದಕ್ಕಿದ್ದಂತೆ - ದುರ್ವರ್ತನೆಗಾಗಿ ನಿಮ್ಮನ್ನು ಪದಚ್ಯುತಿಗೊಳಿಸಲಾಗಿದೆ ; ಕೂಡಲೆ ಸಂಸ್ಥಾನದ ಗಡಿ ಬಿಟ್ಟು ಹೋಗುವುದು - ಎಂದು ಅವರಿಗೆ ನವಾಬರ ಆಜ್ಞೆಯಾಯಿತು ಅವರ 'ದುರ್ವರ್ತನೆ' ಏನು ಎಂಬ ಬಗ್ಗೆ ಚಕಾರವಿಲ್ಲ ಅಲ್ಲಿಂದ ಉದಯಪುರಕ್ಕೆ ಹೋಗಿ ಅವರು ಎರಡನೆಯ ಬಾರಿ ದಿವಾನರಾದರು ಆದರೆ ಅಲ್ಲೂ ಬ್ರಿಟಿಷರ ಕಾಟ ತಪ್ಪಲಿಲ್ಲ ಅಲ್ಲಿನ ಬ್ರಿಟಿಷ್ ರಾಜಕೀಯ ಪ್ರತಿನಿಧಿ ಕರ್ಜನ್ ವ್ಯಾಲಿಯಿಂದ ಅವರಿಗೆ ಆದೇಶ ಬಂತು : 'ಜುನಾಗಡದಲ್ಲಿ ನಿಮಗೆ ಹತ್ತಿರುವ ದುರ್ವರ್ತನೆಯ ಕಳಂಕ ದೂರವಾಗುವವರೆಗೆ ನಿಮ್ಮ ಹುದ್ದೆಗೆ ಮಾನ್ಯತೆಯಿಲ್ಲ '

ಎಲ್ಲ ಕಡೆಯಿಂದಲೂ ಹೊಡೆತ! ಅದೇ ಸಮಯಕ್ಕೆ ಪುಣೆಯಲ್ಲಿ ರ್‍ಯಾಂಡ್ ವಧೆಯ ಭೀಕರ ಘಟನೆ ಸಂಭವಿಸಿತು. ರಾಜದ್ರೋಹದ ಆಪಾದನೆಯ ಮೇಲೆ ತಿಲಕರಂಥ ಜನಪ್ರಿಯ ಮುಖಂಡರೂ ಬಂಧಿಸಲ್ಪಟ್ಟರು. ಪರಕೀಯ ಸರಕಾರ ತನಗೆ ಆಗದವರನ್ನು ಶಿಕ್ಷಿಸಲು ಎಂತಹ ಹೀನಮಟ್ಟಕ್ಕೆ ಇಳಿಯಲೂ ಹೇಸದು ಎಂಬುದನ್ನು ಶ್ಯಾಮಜಿ ಮನಗಂಡರು. ಅವರೂ ಬ್ರಿಟಿಷ್ ಸರಕಾರದ ಸಹಾನುಭೂತಿ ಕಳೆದುಕೊಂಡವರೇ ಆಗಿದ್ದರು. ಕೆಸರಿನಲ್ಲಿ ಕಾಲಿಟ್ಟು ಅನಂತರ ತೊಳೆದುಕೊಳ್ಳುವುದಕ್ಕಿಂತ ಕಾಲು ಇಡದಿರುವುದೇ ಮೇಲಲ್ಲವೆ? ಶ್ಯಾಮಜಿ 1897ರಲ್ಲಿ ಸಂಸಾರಸಹಿತ ಇಂಗ್ಲೆಂಡಿಗೆ ಹೊರಟರು. ಏಕೆಂದರೆ, ಅಲ್ಲಿ ವ್ಯಕ್ತಿಸ್ವಾತಂತ್ರ್ಯಕ್ಕೆ ಹೆಚ್ಚಿನ ಬೆಲೆ ಇತ್ತು. ಅಲ್ಲದೆ ಅವರು ಅಲ್ಲಿನ ವ್ಯಾಪಾರ ವ್ಯವಹಾರಗಳಲ್ಲಿ ಅಪಾರ ಧನರಾಶಿ ತೊಡಗಿಸಿದ್ದರು.

ಇಂಗ್ಲೆಂಡಿನ ನಿಶ್ಚಿಂತ ವಾತಾವರಣದಲ್ಲಿ ಅವರಿಗೆ ಸ್ವಾಮಿ ದಯಾನಂದರ ವಿಚಾರದ ನೆನಪು ಬಲವಾಯಿತು. ಸ್ವರಾಜ್ಯ, ಸ್ವರಾಷ್ಟ್ರ ಮುಂತಾದ ಭಾವನೆಗಳು ಪ್ರಭಾವಿಯಾದವು. ಜತೆಗೆ ಆಂಗ್ಲ ತತ್ವಜ್ಞಾನಿ ಹರ್ಬರ್ಟ್ ಸ್ಪೆನ್ಸರನ ಕೃತಿಗಳನ್ನೂ ಅವರು ಅಧ್ಯಯನ ಮಾಡಿದರು. ಅದರಿಂದ ಭಾರತದ ಮೇಲೆ ಬ್ರಿಟಿಷ್ ಆಡಳಿತದ ದುಷ್ಪರಿಣಾಮವನ್ನು ಮನಗಂಡರು. ಅವರ ಜೀವನದಲ್ಲೊಂದು ಮಹತ್ತರ ಕಾಯಕಲ್ಪವೇ ಆಯಿತು. ಮಾತೃಭೂಮಿಯ ಸ್ವಾತಂತ್ರ್ಯ ಹಾಗೂ ಮೇಲ್ಮೆಗಾಗಿ ಉದ್ಯಮಿಸುವ ಮನಸ್ಸು ಮಾಡಿದರು.


ಪಂ॥ ಶ್ಯಾಮಜಿ ಕೃಷ್ಣವರ್ಮ

ಆ ಸಮಯದಲ್ಲಿ 'ಲಂಡನ್ ಇಂಡಿಯನ್ ಸೊಸೈಟಿ', 'ಈಸ್ಟ್ ಇಂಡಿಯನ್ ಅಸೋಸಿಯೇಷನ್' ಮತ್ತು 'ಬ್ರಿಟಿಷ್ ಕಮಿಟಿ ಆಫ್ ದಿ ಇಂಡಿಯನ್ ನ್ಯಾಶನಲ್ ಕಾಂಗ್ರೆಸ್' ಇವು ಭಾರತದ ಹೆಸರಲ್ಲಿ ಕಾರ್ಯ ಮಾಡುತ್ತಿದ್ದವು. ಅವುಗಳಲ್ಲಿ ದಾದಾಭಾಯಿ ನವರೋಜಿಯವರದೇ ಮುಖ್ಯ ಪಾತ್ರ. ಈ ಎಲ್ಲ ಸಂಸ್ಥೆಗಳೂ ಬ್ರಿಟಿಷ್ ರಾಜನಿಷ್ಠೆಯ ಶಪಥ ತೊಟ್ಟಿದ್ದವು. ಕೆಲವೊಂದು ಸೌಲಭ್ಯಗಳ ಯಾಚನೆಯೇ ಅವುಗಳ ಗುರಿ. ಶ್ಯಾಮಜಿಯವರಿಗೆ 'ಸ್ವದೇಶ ನಿಷ್ಠೆ' ಮತ್ತು 'ಆಂಗ್ಲ ರಾಜನಿಷ್ಠೆ' ಪರಸ್ಪರ ವಿರೋಧವಾಗಿ ಕಂಡವು. ಅದಕ್ಕಾಗಿ ತಮ್ಮಲ್ಲಿ ಬಂದುಹೋಗುತ್ತಿದ್ದ ಭಾರತೀಯ ಮಿತ್ರರು ಹಾಗೂ ಯುವಕರೊಡನೆ ಮುದಿ ಪುಢಾರಿಗಳ ಭಿಕ್ಷಾನೀತಿಯನ್ನು ಖಂಡಿಸತೊಡಗಿದರು. ಕ್ರಮೇಣ ಅವರ ಸುತ್ತ ಒಂದು ದೊಡ್ಡ ಗುಂಪೇ ಬೆಳೆಯಿತು.

1903ರ ಡಿಸೆಂಬರ್‌ನಲ್ಲಿ ಹರ್ಬರ್ಟ್ ಸ್ಪೆನ್ಸರ್ ದೈವಾಧೀನನಾದ. ಆಗ ಶ್ಯಾಮಜಿ 'ಸ್ಪೆನ್ಸರ್ ಸ್ಮಾರಕ ಉಪನ್ಯಾಸ' ಏರ್ಪಡಿಸಲು ಆಕ್ಸ್‌ಫರ್ಡ್ ವಿಶ್ವವಿದ್ಯಾಲಯಕ್ಕೆ ಒಂದು ಸಹಸ್ರ ಪೌಂಡ್ ದತ್ತಿ ನೀಡಿದರು. 'ಬ್ರಿಟಿಷರ ದಾಸ್ಯದ ನೊಗವನ್ನು ಕಿತ್ತೆಸೆಯಲು ಹಿಂದುಸ್ಥಾನವು ಪ್ರಯತ್ನಿಸಿದಲ್ಲಿ ಅದೇನೂ ಅಪರಾಧವಲ್ಲ' ಎಂದು ಸಾರಿದ್ದ ಮಹಾಪುರುಷ, ಸ್ಪೆನ್ಸರ್. ಅವನ ಪ್ರಥಮ ಪುಣ್ಯತಿಥಿಯಂದು ಶ್ಯಾಮಜಿ ತಲಾ 2000 ರೂ.ಗಳ ಐದು 'ಹರ್ಬರ್ಟ್ ಸ್ಪೆನ್ಸರ್ ಪ್ರವಾಸಿ ಶಿಷ್ಯವೃತ್ತಿ'ಗಳನ್ನು ನೀಡಿದರು. ಅದು ಭಾರತೀಯ ಪದವೀಧರರಿಗೆ ಮೀಸಲು. ಅದನ್ನು ಪಡೆದವರು ಇಂಗ್ಲೆಂಡಿಗೆ ಬಂದು ಸ್ವತಂತ್ರ ಉದ್ಯೋಗಕ್ಕೆ ನೆರವಾಗುವ

ವಿಷಯ ಅಧ್ಯಯನ ಮಾಡಬೇಕಿತ್ತು. ಆದರೆ ಸರಕಾರಿ ಚಾಕರಿಯನ್ನು ಕೈಗೊಳ್ಳಬಾರದೆಂಬುದು ಮುಖ್ಯ ಷರತ್ತು.

1905ರ ಜನವರಿಯಲ್ಲಿ ಶ್ಯಾಮಜಿ 'ಇಂಡಿಯನ್ ಸೋಶಿಯಾಲಜಿಸ್ಟ್' ಎಂಬ ಮಾಸಪತ್ರಿಕೆ ಆರಂಭಿಸಿದರು 'ಸ್ವಾತಂತ್ರ್ಯದ ಹಾಗೂ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳ ಮುಖಪತ್ರ' ಎಂಬುದು ಅದರ ಧ್ಯೇಯಸೂತ್ರ. 'ಆಕ್ರಮಣಕ್ಕೆ ಪ್ರತೀಕಾರ ಮಾಡುವುದು ಕೇವಲ ಸಮರ್ಥನೀಯವಷ್ಟೇ ಅಲ್ಲ, ಅದೊಂದು ಅಪರಿಹಾರ್ಯ ಕರ್ತವ್ಯ. ಪ್ರತೀಕಾರ ಶೂನ್ಯತೆಯಿಂದ ಸ್ವಾರ್ಥಕ್ಕೆ ಮಾತ್ರವಲ್ಲ, ಪರಾರ್ಥಕ್ಕೂ ಹಾನಿ' - ಎಂಬುದು ಅದರ ನೀತಿಸೂತ್ರ. ಅದೇ ವರ್ಷ ಫೆಬ್ರವರಿ 18ರಂದು 'ಇಂಡಿಯನ್ ಹೋಂ ರೂಲ್ ಸೊಸೈಟಿ' ಸ್ಥಾಪಿತವಾಯಿತು. ಶ್ಯಾಮಜಿ ಅದರ ಸಂಸ್ಥಾಪಕ ಅಧ್ಯಕ್ಷರು. ಬ್ಯಾರಿಸ್ಟರ್ ರಾಣಾ, ಗೋದ್ರೇಜ್, ಸುಹ್ರಾವರ್ದಿ ಉಪಾಧ್ಯಕ್ಷರು ; ಜೆ.ಸಿ. ಮುಖರ್ಜಿ ಕಾರ್ಯದರ್ಶಿ.

ಲಂಡನ್ನಿಗೆ ಭಾರತೀಯ ವಿದ್ಯಾರ್ಥಿಗಳು, ಪ್ರವಾಸಿಗರು, ಜನನಾಯಕರು ಬಹುಸಂಖ್ಯೆಯಲ್ಲಿ ಬರುತ್ತಿದ್ದರು. ಅವರು ಸ್ವತಂತ್ರವಾದ ಸ್ವಾಭಿಮಾನದ ವಾತಾವರಣದಲ್ಲಿ ವಾಸಿಸಬೇಕೆಂದು ಪಂ|| ಶ್ಯಾಮಜಿಯವರ ಇಚ್ಛೆ. ಅದಕ್ಕಾಗಿ ತಮ್ಮ ಮನೆಯಿದ್ದ ಹೈಗೇಟ್ ಕ್ಷೇತ್ರದಲ್ಲೆ ಒಂದು ಜಾಗ ಹುಡುಕಿದರು. ಎರಡು ಮಹಡಿಗಳುಳ್ಳ ಭವ್ಯ ಹಾಗೂ ಪ್ರಶಸ್ತ ಭವನ ಅದು ; ಲಕ್ಷಾಂತರ ರೂ. ಬೆಲೆ ಅದಕ್ಕೆ. ಅದನ್ನು ಶ್ಯಾಮಜಿ ಕೊಂಡುಕೊಂಡರು. ಲಂಡನ್ನಿನ ಅತ್ಯಂತ ಆರೋಗ್ಯಕರ, ಅನುಕೂಲಕರ ಹಾಗೂ ರಮ್ಯ ಸ್ಥಾನದಲ್ಲಿ ಅದಿತ್ತು. ಟ್ರಾಮ್ ಹಾಗೂ ಮೂರು ರೈಲು ನಿಲ್ದಾಣಗಳು ಅಲ್ಲಿಗೆ ಬಲು ಹತ್ತಿರ. ಅಲ್ಲದೆ ವಾಟರ್ಲೂ ಪಾರ್ಕ್, ಹೈಗೇಟ್ ವುಡ್ಸ್, ಕ್ವೀನ್ಸ್ ವುಡ್ಸ್ ಇತ್ಯಾದಿ ಸುಂದರ ಉದ್ಯಾನಗಳೂ ಅಲ್ಲಿಗೆ ಸಮೀಪ. ಆ ಕಟ್ಟಡಕ್ಕೆ ಸೇರಿದಂತೆ ವಿಶಾಲ ಕ್ರೀಡಾಂಗಣ ಮತ್ತು ವ್ಯಾಯಾಮಶಾಲೆ ಸಹ ಇದ್ದವು. ಕೆಳಭಾಗದಲ್ಲಿ ಭಾಷಣಾಲಯ, ವಾಚನಾಲಯ, ಪುಸ್ತಕಾಲಯಗಳ ವ್ಯವಸ್ಥೆ ಇತ್ತು. ಇಡೀ ವಸತಿಗೃಹದ ಆಡಳಿತ ಭಾರತೀಯರ ಕೈಯಲ್ಲೇ ಇರಬೇಕೆಂಬುದು ಮೊದಲ ನಿಯಮ. ಇದಕ್ಕೆ ಶ್ಯಾಮಜಿ 'ಭಾರತ ಭವನ' (ಇಂಡಿಯಾ ಹೌಸ್) ಎಂದೇ ನಾಮಕರಣ ಮಾಡಿದರು. ಅಲ್ಲಿ ಮದ್ಯಪಾನ ನಿಷಿದ್ಧವಾಗಿತ್ತು. ಮೇಲಿನ ಮಹಡಿಗಳಲ್ಲಿ ಸುಮಾರು 50 ಜನರಿಗೆ ಊಟ ವಸತಿಯ ಸೌಲಭ್ಯಗಳಿದ್ದವು. ಶ್ಯಾಮಜಿಯವರ ಕಡೆಯಿಂದ ವಿದ್ಯಾರ್ಥಿವೇತನ ಪಡೆದವರಿಗೆ ಅಲ್ಲಿ ರಿಯಾಯಿತಿ ದರ; ವಾರಕ್ಕೆ 16 ಷಿಲಿಂಗ್ ಮಾತ್ರ.

1905ರ ಜುಲೈ 1ರಂದು 'ಭಾರತ ಭವನ' ದ ಆರಂಭೋತ್ಸವ ವೈಭವದಿಂದ ನೆರವೇರಿತು. ಭಾರತೀಯ ವಿದ್ಯಾರ್ಥಿಗಳು ಭಾರೀ ಸಂಖ್ಯೆಯಲ್ಲಿ ಸೇರಿದ್ದರು. ಭವನವನ್ನು ಉದ್ಘಾಟಿಸಿದ 'ಸೋಷಲ್ ಡೆಮೊಕ್ರೆಟಿಕ್' ಪಕ್ಷದ ಸ್ಥಾಪಕ ಹೈಂಡ್‌ಮನ್ ದಿಟ್ಟವಾಗಿ ಹೇಳಿದರು :

'ಇಂದು ಬ್ರಿಟನ್ನಿಗೆ ರಾಜನಿಷ್ಠೆ ತೋರಿಸುವುದೆಂದರೆ ಭಾರತಕ್ಕೆ ದ್ರೋಹ ಬಗೆದಂತೆ. ನನಗೆ ಸಿಕ್ಕುವ ಬಹುಪಾಲು ಭಾರತೀಯರು ಬ್ರಿಟಿಷರ ಆಡಳಿತಕ್ಕೆ ನಿಷ್ಠೆಯಿಂದಿರುವುದನ್ನು ಕಂಡು ಅಸಹ್ಯವಾಗುತ್ತದೆ. ಅವರು ಏನೋ ಸೋಗು ಹಾಕುತ್ತಿರಬೇಕು ಇಲ್ಲವೆ ಅಜ್ಞಾನಿಗಳಾಗಿರಬೇಕು. ಹೀಗಿದ್ದೂ ಇಂದು ಇಲ್ಲಿ ಒಂದು ಹೊಸ ಚೈತನ್ಯ ಉದಯವಾಗುತ್ತಿರುವುದನ್ನು ಕಂಡು ನನಗೆ ಆನಂದವಾಗಿದೆ. ಇಲ್ಲಿ ಸೇರಿರುವ ನೀವು ವಿವಿಧ ಪ್ರಾಂತ ಹಾಗೂ ಪಂಥಗಳವರಾಗಿದ್ದರೂ ಹಿಂದುಸ್ಥಾನವನ್ನು ದಾಸ್ಯಮುಕ್ತಗೊಳಿಸುವುದೇ ನಿಮ್ಮೆಲ್ಲರ ಏಕಮಾತ್ರ ಧ್ಯೇಯ.

'ಭಾರತೀಯರು ಇದುವರೆಗೆ ತಮ್ಮ ಬೇಡಿಗಳನ್ನೇ ಆಭರಣಗಳೆಂದು ಅಪ್ಪಿಕೊಂಡಿದ್ದರು. ಇಂಗ್ಲೆಂಡಿನ

ಕಡೆಯಿಂದ ನೀವು ಎಳ್ಳಷ್ಟೂ ಆಸೆ ಇಟ್ಟುಕೊಳ್ಳಬೇಡಿ. ಯಾರು ಉಗ್ರಗಾಮಿಗಳೋ, ಯಾರು ಹಟವಾದಿಗಳೋ, ಯಾರು ಭಾವಾವೇಶಯುಕ್ತರೋ ಅಂಥವರೇ ಸ್ವಪರಾಕ್ರಮದಿಂದ ಹಿಂದುಸ್ಥಾನವನ್ನು ಸ್ವತಂತ್ರಗೊಳಿಸಬಲ್ಲರು. ಹಿಂದುಸ್ಥಾನದ ಸ್ವಾತಂತ್ರ್ಯ ಸಾಧನೆಯ ಮಾರ್ಗದಲ್ಲಿ ಈ 'ಭಾರತ ಭವನ'ವು ಒಂದು ದೊಡ್ಡ ಹೆಜ್ಜೆಯಾಗಿದೆ. ಇಲ್ಲಿ ನೆರೆದಿರುವ ನಿಮ್ಮಲ್ಲಿ ಕೆಲವರಾದರೂ ಅದರ ಪ್ರಚಂಡ ಯಶಸ್ಸಿನ ಮೊದಲ ಫಲ ತಮ್ಮ ಕಣ್ಣೆದುರಿಗೇ ಕಾಣಬಹುದು!'

ಆಗಿನ ಕಾಲದ ಮಹಾ ಮಹಾ ಭಾರತೀಯ ಮುಖಂಡರಿಗೇ ಭೀತಿ ಹುಟ್ಟಿಸುವಂಥ ಕಟುಸತ್ಯವನ್ನು ಬ್ರಿಟಿಷರಾದ ಹೈಂಡ್‌ಮನ್ ನುಡಿದಿದ್ದರು.

ಪಂ|| ಶ್ಯಾಮಜಿಯವರ ಸಹಕಾರಿಗಳ ಪೈಕಿ ಬ್ಯಾರಿಸ್ಟರ್ ಸರದಾರ ಸಿಂಗ್ ರೇವಾಭಾಯಿ ರಾಣಾ ಅಗ್ರಗಣ್ಯರು. ಬ್ಯಾರಿಸ್ಟರ್ ಪದವಿ ಗಳಿಸಿದ ನಂತರ ಪ್ಯಾರಿಸ್‌ನಲ್ಲಿ ರತ್ನಪಡಿ ವ್ಯಾಪಾರ ಮಾಡುತ್ತಿದ್ದರು. ಅವರು 1905ರ ಡಿಸೆಂಬರ್‌ನ 'ಇಂಡಿಯನ್ ಸೋಶಿಯಾಲಜಿಸ್ಟ್' ಪತ್ರಿಕೆಯಲ್ಲಿ, ಶ್ಯಾಮಜಿಯವರ ಯೋಜನೆಯಂತೆ, ಮೂರು 'ಪ್ರವಾಸಿ ಶಿಷ್ಯವೃತ್ತಿ'ಗಳನ್ನು ತಾವು ನೀಡಲಿರುವುದಾಗಿ ಘೋಷಿಸಿದರು. ಮೊದಲನೆಯದು 'ರಾಣಾ ಪ್ರತಾಪ ಶಿಷ್ಯವೃತ್ತಿ'; ಎರಡನೆಯದು 'ಶಿವಾಜಿ ಶಿಷ್ಯವೃತ್ತಿ'. ಮೂರನೆಯದನ್ನು, ಹಿಂದುಸ್ಥಾನದ ಹಿತ ಸಾಧಿಸಿದ ಯಾರಾದರೂ ಮುಸಲ್ಮಾನ ದೇಶಭಕ್ತನ ಹೆಸರಿನಲ್ಲಿ ಕೊಡಬೇಕೆಂದಿದ್ದರು. ಆದರೆ ಅಂಥ ಯಾವ ಹೆಸರೂ ಅವರಿಗೆ ಹೊಳೆದಂತೆ ಕಾಣುವುದಿಲ್ಲ. ಆ ಪೈಕಿ ಎರಡನೆಯದಾದ 'ಶಿವಾಜಿ ಶಿಷ್ಯವೃತ್ತಿ' ಪಡೆದುದರಿಂದಲೇ ಇಂಗ್ಲೆಂಡಿಗೆ ಹೋಗುವ ಸದವಕಾಶ ನನಗೆ ದೊರೆತಿದ್ದು.

'ಹೋಂ ರೂಲ್‌ಸೊಸೈಟಿ'ಯ ಚಟುವಟಿಕೆಗಳಲ್ಲಿ ಉತ್ಸಾಹದಿಂದ ಪಾಲುಗೊಳ್ಳುತ್ತಿದ್ದವರಲ್ಲಿ ಮೇಡಂ ರುಸ್ತುಂ ಭಿಕಾಜಿ ಕಾಮಾ ಮತ್ತೊಬ್ಬರು. ಆಕೆಯ ಪಿತ ಮತ್ತು ಪತಿ ಇಬ್ಬರದೂ ಆಗರ್ಭ ಶ್ರೀಮಂತ ಮನೆತನ. ಸ್ಥಳ ಮುಂಬೈ. ಶ್ರೀಮತಿ ಕಾಮಾ ಸಾಮಾಜಿಕ ಚಟುವಟಿಕೆಗಳಲ್ಲಿ ಆಸಕ್ತೆ; ಸುಶಿಕ್ಷಿತೆ ಹಾಗೂ ಉತ್ತಮ ವಾಗ್ಮಿ. ಅವರ ಆರೋಗ್ಯಕ್ಕೆ ಪ್ಯಾರಿಸ್‌ನ ಹವೆ ಒಗ್ಗಿತ್ತು. ಆದರಿಂದ ಅಲ್ಲಿಯೇ ನೆಲೆಸಿದ್ದರು.

1905ರ ಏಪ್ರಿಲ್ 14ರಂದು ಬಂಗಾಲದ ಬಾರಿಸಾಲ್‌ನಲ್ಲಿ ಸುರೇಂದ್ರನಾಥ ಬ್ಯಾನರ್ಜಿಯವರ ಬಂಧನವಾಯಿತು. 'ವಂದೇ ಮಾತರಂ' ಘೋಷಿಸಿದ್ದೇ ಅವರ ಅಪರಾಧ! ಆ ಬಂಧನದ ವಿರುದ್ಧ ಮೇ 4ರಂದು ಹೋಂ ರೂಲ್ ಸೊಸೈಟಿ ಲಂಡನ್ನಿನಲ್ಲಿ ಪ್ರತಿಭಟನಾ ಸಭೆ ನಡೆಸಿತು. ಮರುದಿನವೇ ಪ್ಯಾರಿಸ್‌ನಲ್ಲೂ ಬ್ಯಾರಿಸ್ಟರ್ ರಾಣಾ, ಗೋದ್ರೇಜ್, ಶ್ರೀಮತಿ ಕಾಮಾ ಮುಂತಾದವರು ಪ್ರತಿಭಟನಾ ಸಭೆ ನಡೆಸಿದರು. ನಿಜಕ್ಕೂ ಇದೊಂದು ಐತಿಹಾಸಿಕ ಮಹತ್ವವುಳ್ಳ ಸಭೆ.

ಆದುವರೆಗೆ ಭಾರತದ ರಾಜಕಾರಣವೆಲ್ಲ ಕಾಂಗ್ರೆಸಿನದೇ ಗುತ್ತಿಗೆಯಾಗಿತ್ತು; ಬ್ರಿಟಿಷ್ ಸಾಮ್ರಾಜ್ಯದ ಗಡಿಗಳಿಗೇ ಸೀಮಿತವಾಗಿತ್ತು. ಏಕೆಂದರೆ ಅದು ಎಷ್ಟಾದರೂ 'ನಮ್ಮ ಸಾಮ್ರಾಜ್ಯ' ಎಂದು ಕಾಂಗ್ರೆಸ್ ಮುಖಂಡರು ನಂಬಿದ್ದರು! ಬ್ರಿಟಿಷರ ಅನ್ಯಾಯಗಳ ಬಗ್ಗೆ ಪರದೇಶಗಳಲ್ಲಿ ಬಾಯಿ ಬಿಡುವುದೆಂದರೆ - ಮನೆಯ ಜಗಳ ಬೀದಿಗೆ ತಂದಂತೆ; ತಮ್ಮ ಸಾಮ್ರಾಜ್ಯಕ್ಕೇ ಅಪಕೀರ್ತಿ ತಂದಂತೆ; ರಾಜದ್ರೋಹ ಮಾಡಿದಂತೆ; ಅದು ನಮ್ಮಂಥ ರಾಜನಿಷ್ಠೆ ಪ್ರಜೆಗಳಿಗೆ ಶೋಭಿಸದ ಕೃತ್ಯ; ಬ್ರಿಟಿಷರನ್ನು ಸಿಟ್ಟುಗೊಳಿಸುವ ಕೃತ್ಯ! ಹಾಗಾಗಿ, ಹಿಂದುಸ್ಥಾನದಲ್ಲಿ ಆಂಗ್ಲರು ನಡೆಸುತ್ತಿದ್ದ ದುರಾಚಾರಗಳನ್ನು ಭಾರತೀಯರೇ ಸಾರ್ವಜನಿಕವಾಗಿ ಜಗತ್ತಿನ ವೇದಿಕೆಗೆ ಒಯ್ದುದು ಅದೇ ಮೊದಲು. ಆದರಿಂದ, ಭಾರತವನ್ನೂ ಇತರ ಬ್ರಿಟಿಷ್ ವಿರೋಧಿ ರಾಷ್ಟ್ರಗಳನ್ನೂ ಶಕ್ತಿಗಳನ್ನೂ ಹತ್ತಿರ ತರುವ ಪ್ರಯತ್ನಕ್ಕೆ ನಾಂದಿ ಆಯಿತು. ಅಲ್ಲದೆ, ಅಂದಿನಿಂದ

ಭಾರತೀಯ ಕ್ರಾಂತಿಕಾರಿಗಳ 'ಕಾಶಿ'ಯಾಗಿ ಪ್ಯಾರಿಸ್ ರೂಪುಗೊಂಡಿತು. ಮುಂದೆ ಮೊದಲ ಮಹಾಯುದ್ಧ ಆರಂಭವಾಗುತ್ತಲೇ ಕ್ರಾಂತಿವೀರರು ತಮ್ಮ ಈ 'ಕಾಶಿಕ್ಷೇತ್ರ'ವನ್ನು ಬರ್ಲಿನ್ನಿಗೆ ಬದಲಾಯಿಸಿದರು.

ಮೇ 5ರ ಸಭೆಯ ಮತ್ತೊಂದು ಸಾಧನೆ ಎಂದರೆ, ಪ್ಯಾರಿಸ್‌ನಲ್ಲೆ ನೆಲಸಿದ್ದ ಶ್ರೀಮಂತ ಭಾರತೀಯ ವ್ಯಾಪಾರಿಗಳ ಜಾಗೃತಿ. ಅದುವರೆಗೆ ರಾಜಕೀಯ ಪ್ರಜ್ಞೆಯೇ ಇಲ್ಲದೆ ಕೇವಲ ಹಣ ಸಂಪಾದನೆಯಲ್ಲೇ ಮುಳುಗಿದ್ದ ಅವರು ಭಾರತದ ರಾಜಕೀಯ ಸ್ಥಿತಿಗತಿಗಳ ಬಗ್ಗೆ ಎಚ್ಚೆತ್ತುಕೊಳ್ಳತೊಡಗಿದರು.

ಇನ್ನು ಇಂಗ್ಲೆಂಡಿಗೆ ಬರುತ್ತಿದ್ದ ಭಾರತೀಯ ವಿದ್ಯಾರ್ಥಿಗಳ ಕಡೆ ನೋಡೋಣ. ಆ ತರುಣರು ಪ್ರತಿಭಾವಂತರು; ಪ್ರಭಾವಶಾಲಿ ಮನೆತನಗಳಿಗೆ ಸೇರಿದವರು; ಭಾರತದ ಎಲ್ಲ ಪ್ರಾಂತಗಳಿಗೂ ಸೇರಿದವರು; ಉಚ್ಚ ಸರಕಾರಿ ಹುದ್ದೆಗಳನ್ನು ಪಡೆಯಲಿದ್ದವರು. ಅಂಥವರಲ್ಲಿ ಸ್ವಾತಂತ್ರ್ಯದ ದಾಹ ಹುಟ್ಟಿಸಬೇಕು; ಸಶಸ್ತ್ರ ಕ್ರಾಂತಿಯ ಅನಿವಾರ್ಯತೆ ಮನಗಾಣಿಸಬೇಕು ; ಅದರಿಂದ ಕ್ರಾಂತಿಕಾರ್ಯಕ್ಕೆ ಹೆಚ್ಚು ನಲೀಸು ಎಂಬುದು ನನ್ನ ಉದ್ದೇಶ. ಆ ಭಾರತೀಯ ತರುಣರೇ ನನ್ನ ಆಸೆ, ಭರವಸೆ. ಆದರೆ ನಾನು ಲಂಡನ್ ತಲುಪಿದಾಗ ಅವರ ನಡೆನುಡಿ, ಮನಃಪ್ರವೃತ್ತಿ ಹೇಗಿತ್ತು ಎನ್ನುವಿರಾ ?

ಆಗ ಬ್ರಿಟನ್ನಿನಲ್ಲಿದ್ದ ಭಾರತೀಯ ವಿದ್ಯಾರ್ಥಿಗಳು ಸುಮಾರು ಎರಡು ಸಾವಿರ. ಅದರಲ್ಲಿ ಶೇ. 90 ಜನಕ್ಕೆ ದೇಶಭಕ್ತಿ ಎನ್ನುವುದು ಯಾವುದೋ ಪರಲೋಕದ ವಿಚಾರ ಇದ್ದಂತೆ. ಸ್ವಾತಂತ್ರ್ಯ ಎಂಬ ಶಬ್ದಕ್ಕೇ ಅವರು ಅಪರಿಚಿತರು. ಆಂಗ್ಲನಿಷ್ಠ ಶ್ರೀಮಂತ ವರ್ಗದವರು; ಹುಟ್ಟಿದಂದಿನಿಂದಲೇ ಪಾಶ್ಚಾತ್ಯ ಸಂಸ್ಕಾರ ಪಡೆದವರು. 'ಥೇಟ್ ಸಾಹೇಬ'ರಾಗುವುದೇ ಅವರ ಜೀವನದ ಪರಮೋಚ್ಚ ಸಂಕಲ್ಪ. ಅದಕ್ಕಾಗಿ ಮೂರು ಹೊತ್ತೂ ಇಂಗ್ಲಿಷಿನಲ್ಲೇ ಮಾತು. ತಾಯ್ನುಡಿಯ ನೆನಪೇ ಅವರಿಗೊಂದು ಅಪಮಾನ. 'ಅದನ್ನು ಮರೆತು ಎಷ್ಟೋ ಕಾಲವಾಯಿತು' ಎನ್ನುತ್ತಿದ್ದರು, ಹೆಮ್ಮೆಯಿಂದ! ಇಂಗ್ಲಿಷ್ ನೃತ್ಯ ಕಲಿಯಲು ಬಿಳಿ ಬೀದಿಬಸವಿಯರ ಜತೆ ಕುಣಿಯುತ್ತಿದ್ದರು. ಅದಕ್ಕಾಗಿ ಒಂದಕ್ಕೆರಡು ಹಣವನ್ನು ತೆರುತ್ತಿದ್ದರು. ತಮಗೆ ಮದುವೆಯೇ ಆಗಿಲ್ಲವೆಂದು ಸುಳ್ಳು ಹೇಳುತ್ತಿದ್ದರು. ಶ್ರೀಮಂತ ಬ್ರಿಟಿಷ್ ವಿದ್ಯಾರ್ಥಿಗಳಿಗೂ ತಲೆಯ ಮೇಲೆ ಹೊಡೆಯುವಂತೆ ಅತ್ಯಧಿಕ ಬೆಲೆಯ ಪ್ಯಾಂಟ್, 'ಟಾಪ್ ಹ್ಯಾಟ್', 'ಟೇಲ್ ಕೋಟ್' ಧರಿಸಿ 'ಜಂಟಲ್‌ಮನ್'ಗಳಾಗಲು ಅಹೋರಾತ್ರಿ ಶ್ರಮಿಸುತ್ತಿದ್ದರು!

ಬ್ರಿಟಿಷರದು ಹೇಳಿಕೇಳಿ ಪಕ್ಕಾ ವ್ಯಾಪಾರಬುದ್ಧಿ. ಅದಕ್ಕಾಗಿ ಮಧ್ಯಮ ವರ್ಗದ ಕುಟುಂಬಗಳಲ್ಲಿ 'ಪೇಯಿಂಗ್ ಗೆಸ್ಟ್' (ಸಶುಲ್ಕ ಅತಿಥಿ) ಪದ್ಧತಿ ಇತ್ತು. ಶುಲ್ಕ ಮತ್ತು ಆತಿಥ್ಯದ ಜೋಡಿ ಎಷ್ಟೇ ಹಾಸ್ಯಾಸ್ಪದ ಎನ್ನಿಸಿದರೂ, 'ಭೋಜನಶಾಲೆ' ಎಂದು ಹೀನವಾಗಿ ಹೇಳುವುದು ಹೇಗೆ? ಅದಕ್ಕಾಗಿ ಇದೊಂದು ಸಭ್ಯ ಹೆಸರು, ಅಷ್ಟೆ! ಬಹುಪಾಲು ಭಾರತೀಯ ವಿದ್ಯಾರ್ಥಿಗಳು 'ಸಶುಲ್ಕ ಅತಿಥಿ'ಗಳು ; ಅದರಿಂದ ಹೆಚ್ಚಿನ ಆಂಗ್ಲ ಸಂಸ್ಕಾರ ಕಲಿಯುತ್ತಿದ್ದರು. ಬಿಳಿಯರ ಸಾನ್ನಿಧ್ಯದಲ್ಲೇ ಅವರ ಜೀವನಕ್ಕೆ ಏನೋ ಸಾರ್ಥಕತೆ! 'ಹೋಸ್ಟ್'ಗಳಿಗೆ ಆಗಿಂದಾಗ್ಗೆ 'ಗಿಫ್ಟ್' ಕೊಟ್ಟು ತಮ್ಮ ದೊಡ್ಡಸ್ತಿಕೆ ಪ್ರದರ್ಶಿಸುವ ಹಂಬಲ, ಅದರಿಂದ ಇಡೀ ಇಂಗ್ಲೀಷ್ ಕುಟುಂಬದ ಮದ್ಯಪಾನ - ಧೂಮಪಾನಗಳ ಖರ್ಚು ಸುಖವಾಗಿ ಕಳೆದುಹೋಗುತ್ತಿತ್ತು. ಒಟ್ಟಿನಲ್ಲಿ ಅದೊಂದು ರೀತಿಯ 'ಕಾಗೆ-ನರಿ' ಕಥೆ!

ಇಷ್ಟೆಲ್ಲ ಶತಪ್ರಯತ್ನ ನಡೆಸಿದರೂ, ಬದಲಿಸಲಾಗದ ಸಂಗತಿ ಒಂದಿತ್ತು. ಚರ್ಮದ ಬಣ್ಣ! ಬಿಳಿಯರು ಬಳಸುವ ವಿಲಾಯತಿ ಸಾಬೂನುಗಳನ್ನೇ ಹಾಕಿ ತಿಕ್ಕಿದರೂ ವ್ಯರ್ಥ ! ಬೀದಿಯಲ್ಲಿ ಕಾಲಿಟ್ಟರೆ ಸಾಕು, 'ಬ್ಲಾಕೀ', 'ನಿಗ್ಗರ್' ಬಿರುದುಗಳು ತಪ್ಪುತ್ತಿರಲಿಲ್ಲ. ಅದನ್ನು ಕೇಳಿ ಇವರಿಗೆ ಬದುಕೇ ಭಾರ ಎನಿಸುತ್ತಿತ್ತು.

ಜನ್ಮವಿತ್ತ ತಾಯ್ನೆಲವನ್ನೂ ತಂದೆತಾಯಿಗಳನ್ನೂ ಮನಸ್ಸಿನಲ್ಲೆ ಶಪಿಸುತ್ತಿದ್ದರು. 1869ರಲ್ಲಿ ಸರ್ ಸಯ್ಯದ್ ಅಹಮದರು ನೆಂಟರಿಷ್ಟರಿಗೆ ಬರೆದ ಪತ್ರವೊಂದನ್ನು ನೋಡಿ :

'ಇಂಡಿಯನರು ಪಶುತುಲ್ಯ ಪತಿತ ಪಾಪಿಗಳೆಂದು ಇಂಗ್ಲಿಷರು ಹೇಳುವುದು ಸುಳ್ಳಲ್ಲ. ನಾನು ಇಲ್ಲಿ ಕಂಡಿರುವ, ನಿತ್ಯವೂ ಕಾಣುತ್ತಿರುವ ಸಂಗತಿಗಳನ್ನು ನೇಟೀವ್ ಜನರು ಕಲ್ಪಿಸಿಕೊಳ್ಳಲೂ ಸಾಧ್ಯವಿಲ್ಲ. ಆಧ್ಯಾತ್ಮಿಕವಾಗಿ ಹಾಗೂ ಐಹಿಕವಾಗಿ ಮನುಷ್ಯನಲ್ಲಿ ಏನೇನು ಸದ್ಗುಣಗಳಿರಬೇಕೋ ಅದೆಲ್ಲವನ್ನೂ ದೇವರು ಯುರೋಪಿಗೆ, ಅದರಲ್ಲೂ ಇಂಗ್ಲಿಷರಿಗೆ ಕರುಣಿಸಿದ್ದಾನೆ.'

ಬ್ರಿಟಿಷರು ತಮ್ಮನ್ನು ಪಶುಸಮಾನರೆಂದು ಕರೆದರೆ ಭಾರತೀಯ ವಿದ್ಯಾರ್ಥಿಗಳ ಸ್ವಾಭಿಮಾನ ಸಿಡಿದೇಳುತ್ತಿರಲಿಲ್ಲ. ಬದಲು ಪ್ರಾಮಾಣಿಕತೆಯಿಂದ ಧನ್ಯವಾದ ಅರ್ಪಿಸಿ, 'ಪೂರಾ ನಿಜ! ಸಾಹೇಬರೇ, ನಾವು ನಿಜಕ್ಕೂ ಹಾಗೆಯೇ ಇದ್ದೇವೆ. ಆದ್ದರಿಂದ ನಮ್ಮನ್ನು ಉದ್ಧಾರ ಮಾಡಲು ನಿಮ್ಮಂಥ ದೇವಮಾನವರು ನಮ್ಮನ್ನು ಆಳುತ್ತಿರುವುದು ನಿಜಕ್ಕೂ ಭಗವಂತನ ಕೃಪೆಯೇ ಸರಿ' ಎನ್ನುತ್ತಿದ್ದರು!

ಅವರಿಗೆ ಬ್ರಿಟಿಷರೇ ದೇವಾಧಿದೇವತೆಗಳು ! ಅಂಥವರು ತಮ್ಮ ಆ ದೇವತೆಗಳ ವಿರುದ್ಧ ತಿರುಗಿ ಬಿದ್ದಾರೆಯೆ ? ಕನಸಿನಲ್ಲಿಯಾದರೂ ಆ ರೀತಿ ಆಲೋಚಿಸಿಯಾರೆ ? ಸಶಸ್ತ್ರ ಕ್ರಾಂತಿಯಿಂದ ಬ್ರಿಟಿಷ್ ಭೃತ್ಯಶಾಹಿಯನ್ನು ಧ್ವಂಸಗೊಳಿಸಲು ಸಿದ್ಧರಾದಾರೆ? ಒನಕೆಯ ತುಂಡು ಚಿಗುರೀತೆ? ಅಸಂಭವ ಅಪೇಕ್ಷೆ!

ಆದರೂ ನನ್ನ ಮನಸ್ಸು ಹತಾಶವಾಗಲಿಲ್ಲ. ಏಕೆಂದರೆ ಆ ತರುಣರೂ ನಾನು ಹುಟ್ಟಿದ ನೆಲದಲ್ಲೆ ಹುಟ್ಟಿದವರು. ನನ್ನ ಧಮನಿಗಳಲ್ಲಿ ಕುದಿಯುತ್ತಿದ್ದ ರಕ್ತವೇ ಅವರ ಧಮನಿಗಳಲ್ಲೂ - ಕುದಿಯುತ್ತಿಲ್ಲದಿದ್ದರೂ - ಕೊನೆಯ ಪಕ್ಷ ಹರಿಯುತ್ತಿತ್ತು. ವ್ಯಕ್ತಿಗತ ಪ್ರತಿಭೆಯಲ್ಲಿ ಅವರು ಯಾರಿಗೂ ಕಡಿಮೆ ಇರಲಿಲ್ಲ. ಆದರೆ ಸುಖದ ಸುಪ್ಪತ್ತಿಗೆಯ ಮೇಲೆ ಬೆಳೆದು, ಎಳೆತನದಿಂದ ಬಿಳಿ ಸಾಹೇಬರ ಚರಣ ಚುಂಬನವೇ ಅನ್ನಪ್ರಾಶನ ಆಗಿದ್ದುದರಿಂದ ವಿಲಾಯತಿಯಲ್ಲೂ ಹಾಗೇ ನಡೆದುಕೊಳ್ಳುತ್ತಿದ್ದರು, ಅಷ್ಟೆ. ಅಲ್ಲದೆ, ಸುಖಭೋಗಕ್ಕಿಂತಲೂ ಉನ್ನತವಾದ, ವೈಯಕ್ತಿಕ ಮಹತ್ವಾಕಾಂಕ್ಷೆಗಿಂತಲೂ ಮಹತ್ತರವಾದ, ಸ್ವರಾಷ್ಟ್ರ ಅಥವಾ ಮಾನವತೆಯ ಹಿತಕ್ಕಾಗಿ ಸ್ವಾರ್ಥತ್ಯಾಗ ಮಾಡುವ ದಿವ್ಯ ಧ್ಯೇಯವನ್ನು ಆ ತರುಣ ಹೃದಯಗಳಿಗೆ ಅದುವರೆಗೆ ಯಾರು ತಾನೆ ತೋರಿಸಿದ್ದರು ? ದೈಹಿಕ ಭೋಗಕ್ಕಿಂತಲೂ ಯಾವುದಾದರೊಂದು ದಿವ್ಯ ಧ್ಯೇಯಕ್ಕಾಗಿ ತ್ಯಾಗ ಮಾಡುವುದರಿಂದ ಸಿಕ್ಕುವ ಆತ್ಮಸುಖದ ಮಧುರತಮ ಮಧುವಿನಲ್ಲಿ ಬೆರಳದ್ದಿ ಆ ಬಾಲ ನಾಲಗೆಗಳಿಗೆ ಯಾರು ತಾನೆ ಚೀಪಿಸಿದ್ದರು ? ಭಾರತಭೂಮಿ ನಿನ್ನ ಮಾತೃಭೂಮಿ ; ಅದನ್ನು ಬಲಾತ್ಕಾರದಿಂದ ದಾಸ್ಯದಲ್ಲಿ ಕೆಡಹಿರುವ ಬ್ರಿಟಿಷರು ನಿನ್ನ ಶತ್ರುಗಳು - ಎಂಬುದನ್ನು ನೇರವಾಗಿ ಯಾರು ತಾನೆ ಅವರಿಗೆ ತಿಳಿಸಿ ಮನದಟ್ಟು ಮಾಡಿದ್ದರು ?

ಒಬ್ಬರೂ ಇಲ್ಲ. ಆ ರೀತಿಯ ಜೀವನದ ಉದಾತ್ತ ಅರ್ಥವನ್ನು ಅದುವರೆಗೆ ಯಾರೂ ಅವರ ಕಿವಿಯಲ್ಲಿ ಮೊಳಗಿಸಿರಲಿಲ್ಲ. ಸ್ವಾರ್ಥದ ಅಂಧಕಾರದಿಂದ ತುಂಬಿದ ಅವರ ಅಂತಃಕರಣವನ್ನು ದಿವ್ಯ ಧ್ಯೇಯದ ಪ್ರಕಾಶದಿಂದ ಯಾರೂ ಬೆಳಗಿಸಿರಲಿಲ್ಲ. ಆ ಅರಿಯದ ಯುವಕರ ಮಾತೇನು ? ದಾದಾಭಾಯಿ, ಸುರೇಂದ್ರನಾಥ, ಬಿಪಿನಚಂದ್ರ, ಶ್ಯಾಮಜಿ, ಗಾಂಧಿ, ಲಜಪತರಾಯ್, ನೆಹರೂ ಎಲ್ಲರೂ ಆ ವಯಸ್ಸಿನಲ್ಲಿ ಅದೇ ರೀತಿ ಇದ್ದವರೇ ! ಭಾರತಗಲ್ಲಿ ಬ್ರಿಟಿಷರ ರಾಜ್ಯ ದೈವೀ ವರದಾನವೆಂದೇ ಅವರೆಲ್ಲರೂ ಆಗ ನಂಬಿದ್ದರು. ಕ್ರಮೇಣ ಅವರ ವಿಚಾರ ಬದಲಾಗಿ, ದೇಶಭಕ್ತರ ಸ್ಥಾನಕ್ಕೆ ಅವರು ಏರಲಿಲ್ಲವೇನು ? ಅಂದಮೇಲೆ, ಪ್ರಯತ್ನಿಸಿದ್ದೇ ಆದರೆ, ಈಗ ರಾಷ್ಟ್ರೀಯ ದೃಷ್ಟಿಯಿಂದ ಅಪ್ರಯೋ

ಜಕರಾಗಿ ಕಾಣುವ ವಿದ್ಯಾರ್ಥಿಗಳಿಂದ ಕೊನೆಯ ಪಕ್ಷ ಕೆಲವರಾದರೂ ಅಂಥ ದೇಶಭಕ್ತರು ಹುಟ್ಟಿಕೊಳ್ಳ ಬಹುದಲ್ಲ! ಆ ಕೆಲವರ ಪೈಕಿ ಹಲವರಾದರೂ ಮತ್ತೊಂದು ಹೆಜ್ಜೆ ಮುಂದೆ ಬಂದು ಕ್ರಾಂತಿವೀರರೂ, ಮಹಾತ್ಮರೂ ಆಗಬಹುದಲ್ಲ! ಇಂದು ಅವರಲ್ಲಿ ಬಹುಪಾಲು ಜನರ ನಡೆನುಡಿಗಳು ಅಧೋಗತಿಗೆ ಇಳಿದಿದ್ದರೂ, ಅವರನ್ನು ಕಡೆಗಣಿಸುವಂತಿಲ್ಲ. ಬಾಂಬು, ಪಿಸ್ತೂಲುಗಳು ಬೇಕಾದರೆ ಬೇರೆ ದೇಶದಿಂದ ತರಿಸಿಕೊಳ್ಳಬಹುದು. ಆದರೆ ನಮ್ಮ ದೇಶದ ತರುಣರು ಸ್ವಾಭಿಮಾನ ಶೂನ್ಯರೂ, ಅಪ್ರಯೋಜಕರೂ ಆಗಿದ್ದಾರೆಂದು, ಪರದೇಶಗಳಿಂದ ತರುಣರ ತಂಡ ತರಿಸಿಕೊಳ್ಳಬಂದೀತೆ ? ಆದ್ದರಿಂದ ಸಮಕಾಲೀನ ಸಮಾಜದಿಂದಲೇ ಕ್ರಾಂತಿವೀರರನ್ನು ತಯಾರಿಸಬೇಕೇ ಹೊರತು, ಬೇರೆ ಮಾರ್ಗವಿಲ್ಲ. ಇನ್ನು, ಆ ಸ್ವಾಭಿಮಾನಶೂನ್ಯ ಬ್ರಿಟಿಷ್ ಪೂಜಕರ ಶಂಕೆ ಕುಶಂಕೆಗಳಿಗೆ, ವಾದವಿವಾದಗಳಿಗೆ ಅಭಿನವ ಭಾರತದ ಧಾಟಿಯ ರಾಮಬಾಣದ ಉತ್ತರಗಳು ನನ್ನ ಬತ್ತಳಿಕೆಯಲ್ಲಿ ಸಿದ್ಧವಾಗಿಯೇ ಇದ್ದವು!

ನಾನು ಲಂಡನ್ನಿನ ಭಾರತೀಯ ಸ್ಥಿತಿಗತಿ ಅವಲೋಕಿಸಿದ್ದಾಯಿತು. ಅನಂತರಬ್ರಿಟಿಷರ ಕಡೆ - ಸ್ವದೇಶದ ಸ್ವಾತಂತ್ರ್ಯಕ್ಕಾಗಿ ನಾವು ಯಾರೊಡನೆ ಕೈಕೈ ಮಿಲಾಯಿಸಬೇಕಾಗಿತ್ತೋ ಆ ಪ್ರತ್ಯಕ್ಷ ಶತ್ರುವಿನ ಕಡೆ - ಕಣ್ಣಾಡಿಸಿದೆ. ಹಿಂದುಸ್ಥಾನದಲ್ಲಿ ತಮ್ಮ ಆಡಳಿತ ಸದಾಕಾಲಕ್ಕೂ ನಡೆಯುತ್ತಿರಬೇಕೆಂಬುದೇ ಅವರ ಇಚ್ಛೆ. ಕೇವಲ ಅಲ್ಲಿನ ನಾಯಕರ ಇಚ್ಛೆ ಮಾತ್ರವಲ್ಲ, ಜನಸಾಮಾನ್ಯರೆಲ್ಲರ ಇಚ್ಛೆಯೂ ಅದೇ. ಅವರ ದೃಷ್ಟಿಯಿಂದ, ಅದಕ್ಕೆ ನ್ಯಾಯವಾದ ಕಾರಣಗಳೂ ಇದ್ದವು.

ಮೊಟ್ಟಮೊದಲನೆಯದು ಧನಲಾಭ. ಹಿಂದುಸ್ಥಾನದಿಂದ ವರ್ಷ ವರ್ಷವೂ ಕೊಳ್ಳೆಹೊಡೆದು ತರುತ್ತಿದ್ದ ಅಪಾರ ಧನಸಂಪತ್ತಿನ ಪ್ರವಾಹ ಇಂಗ್ಲೆಂಡಿನ ಅರಮನೆಯಿಂದ ಹಿಡಿದು ಗ್ರಾಮಾಂತರಗಳ ಗುಡಿಸಲುಗಳವರೆಗೂ ಸರಾಗವಾಗಿ ಹರಿದು ಹೋಗುತ್ತಿತ್ತು. ಅಲ್ಲದೆ, ಭಾರತದಲ್ಲಿ ಬ್ರಿಟಿಷರ ಭೂಸೇನೆ-ನೌಕಾಸೇನೆ, ಆಡಳಿತ ಯಂತ್ರದ ನೌಕರ ಚಾಕರ ವರ್ಗ ಇತ್ಯಾದಿಗಳಲ್ಲಿದ್ದ ಸಹಸ್ರಾವಧಿ ಬಿಳಿಯರು ತಾನೆ ಯಾರು ? ಬ್ರಿಟನ್ನಿನ ಹಳ್ಳಿಪಳ್ಳಿಗಳಿಂದ ಹೋದವರೇ ಆಗಿದ್ದರು. ಅದರಿಂದ ಇಂಗ್ಲೆಂಡಿಗೆ ಹಿಂದುಸ್ಥಾನದ ಖರ್ಚಿನಲ್ಲಿ ಒಂದಕ್ಕೆರಡು ಸಂಪಾದನೆ ಹಾಗೂ ನಿರುದ್ಯೋಗ ನಿವಾರಣೆ. ಹಿಂದುಸ್ಥಾನದ ಹತ್ತಿ, ಚರ್ಮ, ಇತ್ಯಾದಿ ಕಚ್ಚಾ ಮಾಲುಗಳನ್ನು ತೀರ ಅಗ್ಗದ ದರದಲ್ಲಿ ಕೊಂಡು ತರುವುದು ; ಅದರಿಂದ ತಯಾರಿಸಿದ ಸಿದ್ಧವಸ್ತುಗಳನ್ನು ಹಿಂದುಸ್ಥಾನದಲ್ಲಿ ಅತ್ಯಧಿಕ ಬೆಲೆಗೆ ಮಾರುವುದು ! ಬ್ರಿಟಿಷ್ ಸರಕಾರದ ಪ್ರಭಾವ ಹಾಗೂ ದಬ್ಬಾಳಿಕೆ ಇಲ್ಲದೆಹೋದರೆ, ಈ ನಯವಂಚನೆ ನಿಂತುಹೋಗಿ, ಇಂಗ್ಲೆಂಡಿನ ಕಾರ್ಖಾನೆಗಳು ನೊಣ ಹೊಡೆಯಬೇಕಾಗುವುದೆಂದೂ, ತಾವು 'ಬ್ರೆಡ್'ಗೆ ಬದಲಾಗಿ ನೊಣವನ್ನೇ ತಿನ್ನಬೇಕಾಗುವುದೆಂದೂ ಮಾಲಿಕರಷ್ಟೇ ಚೆನ್ನಾಗಿ ಸಹಸ್ರಾವಧಿ ಕಾರ್ಮಿಕರಿಗೂ ಗೊತ್ತಿತ್ತು ! ವೈಸ್‌ರಾಯ್ ಇಂದ ಹಿಡಿದು ಗುಮಾಸ್ತೆವರೆಗೆ ಹಿಂದುಸ್ಥಾನಕ್ಕೆ ಹೋಗಿಬರುವ ಸಹಸ್ರಾರು ಜನರ ಸಂಬಳ ಹಾಗೂ ಜೀವನಾಂಶಗಳ ರೂಪದಲ್ಲೂ ಕೋಟ್ಯಂತರ ರೂ. ತನ್ನ ಜೇಬಿಗೆ ಬೀಳುತ್ತಿದೆಯೆಂಬುದನ್ನು ಪ್ರತಿಯೊಬ್ಬ ಬ್ರಿಟಿಷ್ ನಾಗರಿಕನೂ ಅರಿತಿದ್ದ. ಅಲ್ಲಿನ ಅರಸನಿಂದ ಹಿಡಿದು ಆಳಿನವರೆಗೆ ಹಿಂದುಸ್ಥಾನವನ್ನು ಶೋಷಿಸುವ ವಿಷಯದಲ್ಲಿ ಎಲ್ಲರೂ ಒಂದು. ಅವರ ರಾಷ್ಟ್ರೀಯ ಸ್ವಾರ್ಥ, ವೈಯಕ್ತಿಕ ಸ್ವಾರ್ಥ, ಹೊಟ್ಟೆಬಟ್ಟೆಯ ಪ್ರಶ್ನೆ ಎಲ್ಲವೂ ಅದರಲ್ಲಿ ಅಡಗಿತ್ತು.

ನಾನು ಇಂಗ್ಲೆಂಡಿಗೆ ಕಾಲಿಟ್ಟಾಗ ಬ್ರಿಟಿಷ್ ಸಾಮ್ರಾಜ್ಯ ತನ್ನ ಪ್ರಭುತ್ವದ ಪರಮೋಚ್ಚ ಶಿಖರಕ್ಕೇರಿದ್ದ ಕಾಲ. ವೈಭವ, ವೈಶಾಲ್ಯ, ಸೇನಾಶಕ್ತಿಗಳಲ್ಲಿ ಆಗ ಅದಕ್ಕೆ ಸರಿಸಮನಾದ ಸಾಮ್ರಾಜ್ಯ ಇನ್ನೊಂದಿರಲಿಲ್ಲ.

ನೌಕಾಬಲದಲ್ಲಂತೂ ಇಡೀ ಜಗತ್ತಿಗೇ ಅದು ಸಾಗರಾಧಿಪತಿ. ಹಿಂದುಸ್ಥಾನದಂಥ ವಿಶಾಲ, ಸಂಪದ್ಭರಿತ ದೇಶವನ್ನು ಪೂರ್ತಿ ವಶಪಡಿಸಿಕೊಂಡ ಮೇಲಂತೂ ಪ್ರಪಂಚದ ದೃಷ್ಟಿಯಲ್ಲಿ ಬ್ರಿಟನ್ನಿನ ಘನತೆ ಗೌರವಗಳು ಮುಗಿಲು ಮುಟ್ಟಿದವು. ಆದ್ದರಿಂದ, ಏನೇ ಆಗಲಿ, ತಮ್ಮ ಈ ಮಾನಬಿಂದುವನ್ನು ಉಳಿಸಿಕೊಳ್ಳುವುದು ಆದ್ಯ ಕರ್ತವ್ಯವೆಂದು ಅವರು ಭಾವಿಸಿದ್ದರು. ಆದರೆ ಬ್ರಿಟನ್ನಿನ ಸ್ವಾರ್ಥ ಹಾಗೂ ಪ್ರತಿಷ್ಠೆಗಾಗಿ ಪರದೇಶ ವೊಂದರ ಸ್ವಾತಂತ್ರ್ಯ ಹಾಗೂ ಸಂಪತ್ತನ್ನು ಅಪಹರಿಸುವುದು ಅಮಾನುಷ, ಅನಾಗರಿಕ ಪಾಪಕೃತ್ಯವಷ್ಟೆ. ಅದನ್ನು ಮುಚ್ಚಿಕೊಳ್ಳಲು ತಮ್ಮ ಅನ್ಯಾಯದ ಆಕ್ರಮಣಕ್ಕೆ 'ಪರೋಪಕಾರ'ದ ಗಿಲೀಟು ಹಚ್ಚಿದ್ದರು ! ಶಾಲೆಯ ಪಾಠಪ್ರವಚನಗಳಿಂದ ಹಿಡಿದು ಪಾರ್ಲಿಮೆಂಟಿನ ಸರ್ವೋಚ್ಚ ಮಂತ್ರಿ ಮಂಡಲದ ಹೇಳಿಕೆ ಗಳವರೆಗೆ ಒಂದೇ ಘೋಷಣೆ – ಹಿಂದುಸ್ಥಾನದ ಕಲ್ಯಾಣವೇ ನಮ್ಮ ಧ್ಯೇಯ ! ದಾರಿದ್ರ್ಯ ದುರಾಚಾರದ ದವಡೆಗೆ ಸಿಕ್ಕಿ ದುರವಸ್ಥೆಯಲ್ಲಿ ನರಳುತ್ತಿರುವ ಕೋಟಿ ಕೋಟಿ ಅನಾಗರಿಕ ಜನರಿಗೆ ಶಾಂತಿ, ವ್ಯವಸ್ಥೆ, ವಿದ್ಯಾಬುದ್ಧಿಗಳನ್ನು ನೀಡಿ ಉದ್ಧಾರ ಮಾಡುವ ಅಗಾಧ ಹೊಣೆಗಾರಿಕೆಯನ್ನು ಬ್ರಿಟಿಷ್ ಸರಕಾರ ಹೊತ್ತು ಕೊಂಡಿದೆ ! ಅರ್ಥಾತ್ ಹಿಂದುಸ್ಥಾನದ ಕುತ್ತಿಗೆಯ ಮೇಲೆ ದಾಸ್ಯದ ನೊಗ ಹೇರಿದ್ದೇವೆ ಎನ್ನುವುದರ ಬದಲು ಅಪ್ಪಟ ಭೂತದಯೆಯಿಂದ ಪ್ರೇರಿತರಾಗಿ ಅನಾಥ ಹಿಂದುಸ್ಥಾನವನ್ನು ಉದ್ಧರಿಸುವ ಗುರುತಮ ಕರ್ತವ್ಯದ ನೊಗವನ್ನು ನಾವಾಗಿ ಹೊತ್ತುಕೊಂಡಿದ್ದೇವೆ – ಎನ್ನುತ್ತಿದ್ದರು !

ಸಾಮ್ರಾಜ್ಯದ ಅಡಿಪಾಯ ಭದ್ರವಾಗಲು ಇನ್ನೂ ಒಂದು ಸಂಗತಿ ಬಾಕಿ ಇತ್ತು. ಆದರೆ ಅದಕ್ಕೂ 'ಸೇವೆ'ಯ ಕವಚ ತೊಡಿಸದೆ ಇರಲಿಲ್ಲ. ಐಹಿಕವಾಗಿ ಹಿಂದುಸ್ಥಾನದ ಉದ್ಧಾರ ಆದರೆ ಸಾಲದು ; ಅಲ್ಲಿನ ಕಲ್ಲು ಮರ ಪೂಜಿಸುವ ಕೋಟಿ ಕೋಟಿ ಅಧರ್ಮೀಯ ಪಾಪಿಗಳಿಗೆ ಬೈಬಲ್ಲಿನ ನಿಜಧರ್ಮದ ಪವಿತ್ರ ಅಮೃತ ಬಾಯಿಗೆ ಹನಿಸಿ, ಅವರ ಆತ್ಮಗಳಿಗೆ ಸದ್ಗತಿ ತಂದುಕೊಡುವ ಪುಣ್ಯ ಧಾರ್ಮಿಕ ಕಾರ್ಯದ ಸಲು ವಾಗಿಯೂ ನಮ್ಮ ಸಾಮ್ರಾಜ್ಯದ ಬಿಗಿ ಸಡಿಲಿಸಬಾರದು – ಎಂದರು ಕ್ರಿಶ್ಚನ್ ಪಾದ್ರಿಗಳು. ಅದರಂತೆ, ಬಹು ಹಿಂದೆಯೇ ಈಸ್ಟ್ ಇಂಡಿಯಾ ಕಂಪೆನಿಯ ಪ್ರಮುಖನಾಗಿದ್ದ ಮ್ಯಾಂಗಲ್ಸನು '..... ಹಿಂದುಸ್ಥಾನದಾದ್ಯಂತ ಕ್ರಿಸ್ತನ ವಿಜಯಧ್ವಜವನ್ನು ಹಾರಾಡಿಸುವ ಸಲುವಾಗಿ ಭಗವಂತನು ಆ ವಿಶಾಲ ಸಾಮ್ರಾಜ್ಯವನ್ನು ಇಂಗ್ಲೆಂಡಿಗೆ ವಹಿಸಿಕೊಟ್ಟಿದ್ದಾನೆ. ಅದಕ್ಕಾಗಿ ಆ ಶ್ರೇಷ್ಠಕಾರ್ಯವು ಎಳ್ಳಷ್ಟೂ ತಡವಾಗದಂತೆ ನಮ್ಮಲ್ಲಿ ಪ್ರತಿಯೊಬ್ಬರೂ ತಮ್ಮ ಸರ್ವಶಕ್ತಿಯನ್ನೂ ವಿನಿಯೋಗಿಸಬೇಕು' ಎಂದು ಪಾರ್ಲಿಮೆಂಟಿನ ಕೆಳಮನೆಯಲ್ಲಿ ಕರೆನೀಡಿದ್ದ. 1856ರಲ್ಲಿ ಧರ್ಮಾಧಿಕಾರಿ ಕೆನೆಡಿಯೂ ಅದೇ ಧಾಟಿ ಹಿಡಿದು, '.... ಎಷ್ಟೇ ಕಷ್ಟನಷ್ಟಗಳು ಒದಗಲಿ.... ಕನ್ಯಾಕುಮಾರಿಯಿಂದ ಹಿಮಾಲಯದ ವರೆಗೆ ಇಡೀ ಹಿಂದುಸ್ಥಾನ ಕ್ರಿಸ್ತನ ಮತ ಅನುಸರಿಸುವವರೆಗೆ, ಪೂರ್ವದಲ್ಲಿ ಕ್ರಿಸ್ತಮತದ ಭವ್ಯ ಅಭೇದ್ಯ ದುರ್ಗವಾಗಿ ಅದು ರೂಪುಗೊಳ್ಳುವವರೆಗೆ, ಅದಕ್ಕಾಗಿ ನಾವು ನಮ್ಮ ಸರ್ವಶಕ್ತಿಯನ್ನೂ ಸಮಸ್ತ ಅಧಿಕಾರವನ್ನೂ ಉಪಯೋಗಿಸಬೇಕು' ಎಂದಿದ್ದ.

ಒಂದು ಕೈಯಲ್ಲಿ ಬೈಬಲ್, ಮತ್ತೊಂದು ಕೈಯಲ್ಲಿ ಬಂದೂಕು ! ಇದು ಬೈಬಲಿನ ಕ್ರಿಶ್ಚಿಯಾನಿಟಿ ಆಗಿರಲಿಲ್ಲ. ಬ್ರಿಟಿಷರು ಸೃಷ್ಟಿಸಿದ ಬಾಹುಬಲದ ಕ್ರಿಶ್ಚಿಯಾನಿಟಿ ಆಗಿತ್ತು. ಕ್ರಿಸ್ತಮತ ಹರಡುವುದಕ್ಕಾಗಿ ಅವರಿಗೆ ಸಾಮ್ರಾಜ್ಯ ಬೇಕಿತ್ತು ಎಂದಲ್ಲ, ಆದರೆ ತಮ್ಮ ಸಾಮ್ರಾಜ್ಯದ ಉಳಿವಿಗಾಗಿ ಅವರಿಗೆ ಕ್ರಿಸ್ತಮತ ಬೇಕಾಗಿತ್ತು ! 'ಕೈಯಲ್ಲಿ ಒಂದೇ ಒಂದು ಶಸ್ತ್ರ ಮೈಯಲ್ಲಿ ಒಂದೇ ಒಂದು ಹನಿ ರಕ್ತ ಇರುವವರೆಗೆ ನಾವು ಸಾಮ್ರಾಜ್ಯದ ಹಿಡಿತ ಬಿಡುವುದಿಲ್ಲ' ಎಂದು ಲಾರ್ಡ್ ಕರ್ಜನ್ ಸಾರಿಹೇಳುತ್ತಿದ್ದ. ಏಕೆ ? ಹಿಂದುಸ್ಥಾನದ

'ಉದ್ಧಾರ' ಮಾಡುವುದಕ್ಕಾಗಿ!

ಭಾರತೀಯ ರಾಜಕಾರಣದ ಪುಢಾರಿಗಳು ತಮ್ಮಲ್ಲಿದ್ದ ಆಂಗ್ಲ ಅಧಿಕಾರಿಗಳ ದುರ್ವರ್ತನೆ, ದುರಾಡಳಿತಗಳ ವಿರುದ್ಧ ಇಂಗ್ಲೆಂಡಿನಲ್ಲಿದ್ದ 'ಬ್ರಿಟಿಷ್ ಜನಮನದ ನ್ಯಾಯಾಸನ'ದ ಮುಂದೆ ದೂರು ಮಂಡಿಸಲು ಹಾತೊರೆಯುತ್ತಿದ್ದರು. ಆದರೆ ಇಲ್ಲಿನ ದರೋಡೆಯ 'ಕಳ್ಳಮಾಲಿನ' ಒಡೆಯರಾದ ಅವರಿಗೆ - ತಮ್ಮ ದೇಶದ ಯಾವುದಾದರೊಂದು ಸಣ್ಣ ಕ್ರಿಕೆಟ್ ಪಂದ್ಯದಲ್ಲಾಗುವ ಅಪಘಾತದ ಬಗ್ಗೆ ದಿನಗಟ್ಟಲೆ ಕೂತಲ್ಲಿ, ನಿಂತಲ್ಲಿ ಆತಂಕಪಡುತ್ತಿದ್ದ ಬ್ರಿಟಿಷರಿಗೆ - ಹಿಂದುಸ್ಥಾನದಲ್ಲಿ ಜರುಗುತ್ತಿದ್ದ ಭಾರಿ ಭಾರಿ ಕಾಂಗ್ರೆಸ್ ಅಧಿವೇಶನ ಹಾಗೂ ಠರಾವುಗಳ ಬಗ್ಗೆಯಾಗಲಿ, ಭೀಕರ ಕ್ಷಾಮಡಾಮರ, ಭೂಕಂಪ, ಪ್ರವಾಹಗಳಿಂದ ಸಾಯುತ್ತಿದ್ದ ಲಕ್ಷಾಂತರ ಜನರ ಬಗ್ಗೆಯಾಗಲಿ ಲವಲೇಶವೂ ಚಿಂತೆ ಇರಲಿಲ್ಲ. ಅವರ ನಿದ್ದೆ ಕೆಡಿಸುತ್ತಿದ್ದ ಸಂಗತಿಗಳೆಂದರೆ 1857ರ ಸಿಂಹಸ್ವಪ್ನ ; ಫಡಕೆ, ರಾಮಸಿಂಹ, ಚಾಫೇಕರರ ನಾಮೋಚ್ಚಾರ ! ಅವರಿಗೆ ಹಿಂದುಸ್ಥಾನದಲ್ಲಿನ ತಮ್ಮ ದುರಾಡಳಿತ, ದಬ್ಬಾಳಿಕೆ, ಅಸಹನೀಯ ಅನಾಚಾರಗಳ ಅರಿವು ಮಾಡಿಕೊಡುತ್ತಿದ್ದುದೆಂದರೆ ಕ್ರಾಂತಿಕಾರಿಗಳ ಗುಂಡಿನ ಗರ್ಜನೆ !

ಅಂಥ ಕ್ರಾಂತಿವೀರರನ್ನು ಬ್ರಿಟಿಷ್ ಸರಕಾರ ಕಣ್ಣಿಗೆ ಎಣ್ಣೆ ಹಾಕಿಕೊಂಡು ಕಾಯುತ್ತಿತ್ತು. ಅದಕ್ಕೆ ನನ್ನ ಸ್ವಂತ ಅನುಭವವೇ ಸಾಕ್ಷಿ. ನಾನು ಜುಲೈ 1906ರಲ್ಲಿ ಲಂಡನ್ ತಲುಪಿದನಷ್ಟೆ. ಆಗ ನನಗೆ ತಿಳಿಯದಂತೆಯೇ ನನ್ನ 'ಪ್ರಶಸ್ತಿ ಪತ್ರ'ಗಳ ಭಾರಿ ಕಟ್ಟೊಂದು ಭಾರತದಿಂದ ಇಂಗ್ಲೆಂಡಿಗೆ ಆಗಮಿಸಿತ್ತು! ಅದರ ತುಂಬ ಸಾಲುಸಾಲಿನಲ್ಲಿಯೂ ನನ್ನ ನಾಮೋಚ್ಚಾರ ; ಕುಲ ಗೋತ್ರಗಳ ವರ್ಣನೆ ; ಮಹಾರಾಷ್ಟ್ರದಲ್ಲಿ ನನ್ನ ಚಟುವಟಿಕೆಗಳ ತಪ್ಪು ನೆಪ್ಪು ವರದಿಗಳು ; ನನ್ನ ಮೇಲೆ ಸದಾ ಕಣ್ಣಿಡಬೇಕೆಂಬ ಸೂಚನೆ !

ನಾಸಿಕದಲ್ಲಿ ಪ್ರಥಮ ದರ್ಜೆ ಮ್ಯಾಜಿಸ್ಟ್ರೇಟ್ ಆಗಿದ್ದ ಐ.ಸಿ.ಎಸ್. ಅಧಿಕಾರಿ ಮಾಂಟ್ಗೊಮರಿ ಮೊದಲ ರಹಸ್ಯ ವರದಿಯ ತಯಾರಕ. ಅವನು 1903ರ ಮಾರ್ಚ್ ತಿಂಗಳಲ್ಲಿ ಅದನ್ನು ಮುಂಬೈಗೆ ಕಳಿಸಿಕೊಟ್ಟ. ನನ್ನ ಬೆನ್ನುಹತ್ತಿಯೇ ಅದು ಇಂಗ್ಲೆಂಡಿಗೂ ಬಂದಿತು : 'ವಿ.ಡಿ. ಸಾವರಕರ್ ನಾಸಿಕ್ ನಿವಾಸಿ. ಚಿಕ್ಕಂದಿನಿಂದಲೂ ಅವರಿಗೆ ವಾದವಿವಾದದಲ್ಲಿ ಆಸಕ್ತಿ. ಕೇವಲ 22 ವರ್ಷ ವಯಸ್ಸಿನೊಳಗೇ ಅವರೊಬ್ಬ ಈರ್ಷ್ಯಾಸ್ಪದ ವಾಗ್ಮಿಯಾಗಿದ್ದಾರೆ.. ಬಹಳ ವೇಗವಾಗಿ ಮಾತನಾಡುತ್ತಾರೆ; ಬಹಳ ದಿಟ್ಟ ವ್ಯಕ್ತಿ. ಮಾತನಾಡುವ ಶೈಲಿ ತುಂಬ ಪರಿಣಾಮಕಾರಕ... ಈಗಾಗಲೇ ಅವರ ಸಾರ್ವಜನಿಕ ಜೀವನ ಪ್ರಾರಂಭವಾಗಿದೆ ಎನ್ನಲು ಅಡ್ಡಿಯಿಲ್ಲ. ನನ್ನ ಅಭಿಪ್ರಾಯದಲ್ಲಿ, ಅವರು ಇನ್ನೂ ಎಳೆಯರಿದ್ದು ಅನ್ಯಾಯವಾಗಿ ತಮ್ಮ ಜೀವನ ಹಾಳು ಮಾಡಿಕೊಳ್ಳುತ್ತಿದ್ದಾರೆ. ತಾವು ಪ್ರಸಾರ ಮಾಡುತ್ತಿರುವ ವಿಚಾರ ಎಂಥದು ಎಂಬ ಪರಿವೆಯೇ ಅವರಿಗಿಲ್ಲ. ಅಷ್ಟು ಮಾತ್ರವಲ್ಲ, ಇನ್ನೂ ಎಳೆ ವಯಸ್ಸಿನ ಹುಡುಗರ ಮನಸ್ಸಿನಲ್ಲಿ ಹುಚ್ಚು ಹುಚ್ಚು ವಿಚಾರ ತುಂಬಿ ತಲೆಕೆಡಿಸಿ, ಅವರ ಆಯುಷ್ಯವನ್ನೂ ಹಾಳುಗೆಡಹುತ್ತಿದ್ದಾರೆ.....' ಇತ್ಯಾದಿ ಇತ್ಯಾದಿ.

ನನಗೆ ಒಂದು ವೇಳೆ ಮೊದಲೇ ಇದರದೊಂದು ಪ್ರತಿ ಸಿಕ್ಕಿದ್ದಲ್ಲಿ, ಶ್ಯಾಮಜಿಯವರಿಗೆ ಕೊಡಲು ಬೇರೆ ಶಿಫಾರಸು ಪತ್ರದ ಅಗತ್ಯವೇ ಇರುತ್ತಿರಲಿಲ್ಲ !





# ಹವಿಸ್ಸು ಹನ್ನೆರಡು

ಏಳೆಂಟು ದಿನಗಳಲ್ಲಿ ಭಾರತ ಭವನದಲ್ಲಿ ಇದ್ದವರೆಲ್ಲರ ಪರಿಚಯವಾಯಿತು. ಅಷ್ಟುಹೊತ್ತಿಗೆ ನನ್ನ ಲಂಡನ್ ಜೀವನದ ದಿನಚರಿಯೂ ಒಂದು ಹದಕ್ಕೆ ಬಂದಿತ್ತು. ಮುಖರ್ಜಿ ಆ ಭವನದ ಮೇಲ್ವಿಚಾರಕರು. ಒಂದು ದಿನ ಅವರ ಬಳಿ ಸಹಜವಾಗಿ ವಿಚಾರಿಸಿದೆ. 'ಮ್ಯಾಟ್ಸಿನಿಯ ಆತ್ಮಕಥೆ ಮತ್ತು ಆತನ ಬರಹಗಳೆಲ್ಲವೂ ಇಂಗ್ಲಿಷಿಗೆ ಭಾಷಾಂತರಗೊಂಡಿವೆ ಎಂಬುದು ತಿಳಿದುಬಂತು. ನಿಮಗೆ ಲಂಡನ್ನಿನ ದೊಡ್ಡ ದೊಡ್ಡ ಗ್ರಂಥಾಲಯಗಳೆಲ್ಲ ಚೆನ್ನಾಗಿ ಗೊತ್ತು. ದಯವಿಟ್ಟು ಆ ಗ್ರಂಥ ನನಗೆ ತಂದುಕೊಡುತ್ತೀರಾ ?'

'ಮ್ಯಾಟ್ಸಿನಿಯ ಆತ್ಮಕಥೆ ?' - ತಮ್ಮಷ್ಟಕ್ಕೆ ತಾವೇ ಹೇಳಿಕೊಂಡರು. ತಮ್ಮ ನೀಳವಾದ ಗಡ್ಡದ ಮೇಲೆ ಎರಡು ಮೂರು ಬಾರಿ ನಿಧಾನವಾಗಿ ಕೈಯಾಡಿಸಿದರು. ಆಮೇಲೂ ಒಂದು ಕ್ಷಣ ಸ್ತಬ್ಧರಾಗಿ ಕುಳಿತಿದ್ದು ಹೇಳಿದರು. 'ಇಲ್ಲೇ ಇರಬೇಕು, ತಾಳಿ, ನೋಡುತ್ತೇನೆ.' ಹೀಗೆ ಅವರ ಮೂಲಕ ನನಗೆ ಮ್ಯಾಟ್ಸಿನಿಯ ಪುಸ್ತಕದ ಏಳು ಭಾಗಗಳೂ ಕ್ರಮೇಣ ದೊರೆತವು. ಎಲ್ಲವನ್ನೂ ನಾನು ಸರಸರನೆ ಓದಿ ಮುಗಿಸಿದೆ.

ಸ್ವಾತಂತ್ರ್ಯಪೂರ್ವದ ಇಟಲಿ ಹಾಗೂ ಇಂದು ದಾಸ್ಯದಲ್ಲಿದ್ದ ಹಿಂದುಸ್ಥಾನದ ಸ್ಥಿತಿಗತಿಗಳಿಗೆ ಅನೇಕ ಸಾಮ್ಯಗಳಿದ್ದವು. ಮ್ಯಾಟ್ಸಿನಿಯ ಜೀವನಚರಿತ್ರೆ ಓದಿ ಸ್ಫೂರ್ತಿ ಪಡೆದ ನಾಯಕರೂ ಭಾರತದಲ್ಲಿದ್ದರು. ಸುರೇಂದ್ರನಾಥ ಬ್ಯಾನರ್ಜಿಯವರು 1875ರಿಂದ ಮೂರು ವರ್ಷಗಳು ಆ ಬಗ್ಗೆ ಅನೇಕ ಉಪನ್ಯಾಸಗಳನ್ನೂ ಮಾಡಿದ್ದರು. 'ಮ್ಯಾಟ್ಸಿನಿಯ ಬಗ್ಗೆ ಸುರೇಂದ್ರಬಾಬು ಅವರ ಭಾಷಣ ಕೇಳಿಯೇ ಸ್ವದೇಶದ ಸ್ವಾತಂತ್ರ್ಯಕ್ಕಾಗಿ ರಾಜಕಾರಣಕ್ಕೆ ನನಗೆ ಪ್ರೇರಣೆ ದೊರೆಯಿತು' ಎಂದು ಬಿಪಿನ ಚಂದ್ರಪಾಲ್ ಹೇಳಿದ್ದಾರೆ. ಲಾಲಾ ಲಜಪತರಾಯ್ ಸಹ ಸುರೇಂದ್ರಬಾಬು ಅವರ ಭಾಷಣದಿಂದಲೇ ಸ್ಫೂರ್ತಿಗೊಂಡಿದ್ದರು. ಆದರೆ ಇವರೆಲ್ಲರ ಕಲ್ಪನೆಯಲ್ಲಿ 'ಸಶಸ್ತ್ರ ಕ್ರಾಂತಿಕಾರಿ ಮ್ಯಾಟ್ಸಿನಿ' ಕಣ್ಮರೆಯಾಗಿದ್ದ, ಕೇವಲ 'ದೇಶಭಕ್ತ ಮ್ಯಾಟ್ಸಿನಿ' ಮಾತ್ರ ಕಾಣಿಸಿಕೊಂಡಿದ್ದ.

ಮಹಾರಾಷ್ಟ್ರದಲ್ಲಿ ಮ್ಯಾಟ್ಸಿನಿಯ ಪರಿಚಯಕ್ಕೆ ಮೊದಲೇ ಕ್ರಾಂತಿಕಾರಕ ರಾಜಕಾರಣ ಬೇರುಬಿಟ್ಟಿತ್ತು. 1857ರಿಂದ ಹಿಡಿದು ಅಭಿನವ ಭಾರತದವರೆಗೆ ಎಲ್ಲರ ಕುಲದೈವ ಹಾಗೂ ಸ್ಫೂರ್ತಿಕೇಂದ್ರ - ಶ್ರೀರಾಮ, ಶ್ರೀಕೃಷ್ಣ, ಶಿವಛತ್ರಪತಿ ! ಆ ವೀರಾಧಿವೀರರ ಜೀವನದಿಂದಲೇ ನಾವು ಕ್ರಾಂತಿಯ ಸಂದೇಶ ಪಡೆದೆವು. ಮ್ಯಾಟ್ಸಿನಿಯ ಪ್ರಥಮ ಸಂಕ್ಷಿಪ್ತ ಪರಿಚಯ ಆದುದು ಫಾಣೇಕರರ ಪುಸ್ತಕದ ಮೂಲಕ 1904ರಲ್ಲಿ.

ಮಿತ್ರಮೇಳದ ಹೆಸರು ಬದಲಾಗಿ ಅಭಿನವ ಭಾರತ ಆಗುವುದಕ್ಕೂ ಅದೇ ಪ್ರೇರಣೆ.


ಹೊಸ ಉಡುಗೆಯಲ್ಲಿ

ಈಗ ನಾನು ಮ್ಯಾಟ್ಸಿನಿಯ ವಿವರವಾದ ಕೃತಿಯನ್ನು ಓದಿದಂತೆಲ್ಲ ವಿಚಾರಸರಣಿ ಹಾಗೂ ಕಾರ್ಯಸರಣಿ ಎರಡರಲ್ಲೂ 'ತರುಣ ಇಟಲಿ'ಗೂ ಅಭಿನವಭಾರತಕ್ಕೂ ಹೆಜ್ಜೆಹೆಜ್ಜೆಗೂ ಅನಿರೀಕ್ಷಿತ ಹಾಗೂ ಆಶ್ಚರ್ಯಕರ ಹೋಲಿಕೆ ಇದ್ದುದು ಸ್ಪಷ್ಟವಾಗಿ ಗೋಚರಿಸಿತು. ಕೇವಲ ಕೆಲವೇ ವರ್ಷಗಳ ಹಿಂದೆ ಯುರೋಪಿನಲ್ಲಿ ಆ ಸಂಘಟನೆ ಯಶಸ್ಸು ಗಳಿಸಿತ್ತು. ಆದ್ದರಿಂದ ಸ್ವದೇಶದ ಸ್ವಾತಂತ್ರ್ಯಕ್ಕಾಗಿ ನಾನು ಯೋಚಿಸಿದ್ದ ರಾಜ್ಯಕ್ರಾಂತಿಯ ಅಖಿಲ ಭಾರತೀಯ ಯೋಜನೆಯ ಬಗ್ಗೆಯೂ ಸ್ವತಃ ನನ್ನ ಬಗ್ಗೆಯೂ ನನಗೆ ಆತ್ಮವಿಶ್ವಾಸ ನೂರ್ಮಡಿಯಾಯಿತು. ಭಾರತದಲ್ಲಿರುವ ನನ್ನ ಸಹಸ್ರಾರು ಸಹಕಾರಿಗಳೂ ತಮ್ಮದೇ ಭಾಷೆಯಲ್ಲಿ ಈ ಕೃತಿಯನ್ನು ಓದುವಂತಾದರೆ ? ಆಗ ನಮ್ಮ ಮಾರ್ಗದಲ್ಲಿ ಅವರ ನಂಬಿಕೆ ಹಾಗೂ ಸ್ವತಃ ಅವರ ಆತ್ಮಶ್ರದ್ಧೆ ವರ್ಧಿಸುವುದು ನಿಶ್ಚಿತ ಎನ್ನಿಸಿತು.

1906ರ ಆ ಕಾಲದಲ್ಲಿ ನಾನೂ ನನ್ನ ಸಹಕಾರಿಗಳೂ ವಯಸ್ಸಿನಲ್ಲಿ 20ಕ್ಕೆ ಸ್ವಲ್ಪ ಆಚೀಚಿನವರೇ. ಅಂದು ದೇಶದ ನಾಯಕಪಟ್ಟಕ್ಕೆ ಏರಿದ್ದ ವಯಸ್ಸಾದ 'ದೊಡ್ಡಸ್ತಿಕೆ'ಯ ಮುಖಂಡರೆಲ್ಲರೂ ನಮ್ಮ ಕಾರ್ಯವನ್ನು 'ಹುಡುಗಾಟ', 'ಹುಚ್ಚಾಟ' ಎಂದು ಮೂದಲಿಸುತ್ತಿದ್ದುದೂ ಕೇವಲ ಅದೊಂದು ಕಾರಣಕ್ಕಾಗಿಯೇ. ಸುಮಾರು 1830ರಲ್ಲಿ ಮ್ಯಾಟ್ಸಿನಿ, ಗರಿಬಾಲ್ಡಿ ಮುಂತಾದ ತರುಣ ಇಟಲಿಯ ನಾಯಕರೂ ನವಯುವಕರಾಗಿದ್ದಾಗ, ಅವರ ಪ್ರಯತ್ನಗಳನ್ನೂ ಸಹ ಇದೇ ರೀತಿ 'ಹುಡುಗಾಟ', 'ಹುಚ್ಚಾಟ' ಎನ್ನುವ 'ದೊಡ್ಡ ಮನುಷ್ಯರು' ಇದ್ದೇ ಇದ್ದರು. ಹಾಗೆ ಉಪಹಾಸ ಮಾಡುತ್ತಿದ್ದ ಆಗಿನ ಪ್ರೌಢ ಪೀಳಿಗೆಯವರಿಗೆ ಅಂದಿನ ಈ ತರುಣರು ಕೊಡುತ್ತಿದ್ದ ಅಪ್ರತಿಮ 'ಗರಮಾಗರಂ' ಉತ್ತರಗಳೂ ಮ್ಯಾಟ್ಸಿನಿಯ ಪುಸ್ತಕದಲ್ಲಿದ್ದವು. ತಾರುಣ್ಯದಲ್ಲಿ ಹುಡುಗಾಟದವರೆಂದು ದೂಷಿಸಲ್ಪಟ್ಟವರೇ ತಮ್ಮ ಕ್ರಾಂತಿಕಾರಿ ಹುಚ್ಚಾಟಗಳ ಬಲದಿಂದ ಇಟಲಿಯ ರಾಜ್ಯಕ್ರಾಂತಿಯನ್ನು ಯಶಸ್ವಿಗೊಳಿಸಿ ದೊಡ್ಡ ರಾಷ್ಟ್ರನಾಯಕರೆಂದು ಗೌರವಿಸಲ್ಪಡುತ್ತಿದ್ದರು. ಈಗ ಅವರನ್ನು ಹುಡುಗಾಟದವರೆನ್ನುವ ಎದೆಗಾರಿಕೆಯ ಗಂಡು ಹಿಂದುಸ್ಥಾನದ ನಾಯಕವರ್ಗದಲ್ಲಿ ಒಬ್ಬನೂ ಇರಲಿಲ್ಲ. ಅಂದಮೇಲೆ ಹಿರಿಯ ಪುಢಾರಿಗಳಿಗೂ ಈ ಪುಸ್ತಕ ಪಾಠ ಕಲಿಸುವಂತಿತ್ತು.

ಜನಸಾಮಾನ್ಯರ ದೃಷ್ಟಿಯಿಂದಲೂ ನಾನು ಯೋಚಿಸಿದೆ. ನಮ್ಮ ಚಳವಳಿಗೆ ಮ್ಯಾಟ್ಸಿನಿ - ಗರಿಬಾಲ್ಡಿ ಮುಂತಾದವರ ಲೇಖನಗಳ ಆಧಾರ ಇದೆ; ಯಾವ ದಾರಿಯಲ್ಲಿ ಮುನ್ನಡೆದು ಅವರು ವಿಜಯ ಸಾಧಿಸಿ ದರೋ ಅದೇ ದಾರಿಯಿಂದ, ಪರಿಸ್ಥಿತಿಗೆ ತಕ್ಕ ವೇಗದಲ್ಲಿ, ನಾವೂ ಧಾವಿಸುತ್ತಿದ್ದೇವೆ - ಎಂಬ ಸಾಕ್ಷಿ ದೊರೆತು ಶ್ರೀಸಾಮಾನ್ಯರಿಗೂ ನಮ್ಮ ಮಾರ್ಗದ ಬಗ್ಗೆ ಶ್ರದ್ಧೆ ಹುಟ್ಟುವುದು ನಿಶ್ಚಿತ. ಇಷ್ಟೆಲ್ಲ ಆಲೋಚಿಸಿ, ಮ್ಯಾಟ್ಸಿನಿಯ ಆತ್ಮಚರಿತ್ರೆ, ಹಾಗೂ ಲೇಖನಗಳನ್ನು ಮರಾಠಿಗೆ ಭಾಷಾಂತರಿಸಲು ನಾನು ನಿಶ್ಚಯಿಸಿದೆ. ಇನ್ನು ಭಾಷಾಂತರಕ್ಕೆ ಅನುಸರಿಸಬೇಕಾದ ಧೋರಣೆ ಯಾವುದು ?

ಪುಸ್ತಕವು ಜನಸಾಮಾನ್ಯರ ಕೈಸೇರಲು ಕಾನೂನಿನ ಚೌಕಟ್ಟಿನೊಳಗೇ ಇರಬೇಕಾಗಿತ್ತು. ಆದರೆ

ಮ್ಯಾಟ್ಸಿನಿಯ ವ್ಯಕ್ತಿತ್ವವನ್ನು 'ಕ್ರಾಂತಿಕಾರಿ ಮ್ಯಾಟ್ಸಿನಿ' ಮತ್ತು 'ದೇಶಭಕ್ತ ಮ್ಯಾಟ್ಸಿನಿ' ಎಂದು ವಿಭಜಿಸುವುದು ಮೂಲ ಉದ್ದೇಶಕ್ಕೇ ಕೊಡಲಿ ಇಟ್ಟಂತೆ. ಆದ್ದರಿಂದ ಮೂಲಕೃತಿಯಲ್ಲಿ ಅಗತ್ಯವೆನಿಸಿದ ಭಾಗಗಳನ್ನು ಮಾತ್ರ ಆರಿಸಿಕೊಂಡು, ಯಥಾವತ್ ಅನುವಾದಿಸಿ, ಅದೊಂದು ಸಾದಾಸೀದಾ ಐತಿಹಾಸಿಕ ಗ್ರಂಥ ಎಂಬಂತೆ ಮುದ್ರಿಸುವುದು ; ಜತೆಗೆ ಅದಕ್ಕೆ ವಿವರವಾದ ಒಂದು ಮುನ್ನುಡಿ ಬರೆದು, ಅಲ್ಲಲ್ಲಿ ಕೆಲವು ಮಾರ್ಮಿಕ ವಾಕ್ಯಗಳನ್ನು ಸೇರಿಸುವುದು, ಎಂದು ಆಲೋಚಿಸಿದೆ. ಅದರಂತೆ ಜುಲೈ ಕೊನೆಗೆ ಬರವಣಿಗೆ ಪ್ರಾರಂಭಿಸಿದೆ. ನನ್ನ ಪತ್ರ ವ್ಯವಹಾರ, ಕ್ರಾಂತಿ ಪ್ರಚಾರ, 'ಕಾಳ', 'ವಿಹಾರಿ' ಪತ್ರಿಕೆಗಳಿಗೆ ಬಾತ್ಮಿ ಪತ್ರ ಮತ್ತು ಲೇಖನ – ಇತ್ಯಾದಿಗಳ ನಡುವೆಯೂ ಸುಮಾರು ಮುನ್ನೂರು ಪುಟಗಳ ಆ ಪುಸ್ತಕವನ್ನು ಎರಡು ತಿಂಗಳ ಒಳಗೆ ಬರೆದು ಮುಗಿಸಿದೆ. ಅದಕ್ಕೆ 26 ಪುಟಗಳ ಪ್ರೇರಣಾತ್ಮಕ ಪ್ರಸ್ತಾವನೆ ; ಅದು ಪೂರೈಸಿದ್ದು 1906ರ ಸೆಪ್ಟೆಂಬರ್ 28ರಂದು.

ಬರೆದದ್ದೇನೋ ಆಯಿತು. ಮುದ್ರಿಸುವವರು ಯಾರು ? ಅದೇ ಕಷ್ಟ! ಮೊದಲಿಂದ ನನ್ನ ಸಾರ್ವಜನಿಕ ಕಾರ್ಯಗಳಲ್ಲಿ ಅರ್ಧಕ್ಕೂ ಹೆಚ್ಚು ಭಾರ ಹೊತ್ತುಕೊಳ್ಳುತ್ತಿದ್ದ ವ್ಯಕ್ತಿ ಎಂದರೆ ನಮ್ಮ ಅಣ್ಣ ಬಾಬಾ. ಕೀರ್ತಿಯೆಲ್ಲ ನನ್ನ ಪಾಲಿಗೆ ; ಕಷ್ಟವೆಲ್ಲ ಅವನ ಪಾಲಿಗೆ ! ಅಣ್ಣತಮ್ಮಂದಿರ ಸಾಧನೆಯ ಆಸ್ತಿ ವಿಭಾಗವೇ ಹಾಗೆ ಆಗಿಹೋಗಿತ್ತು. ಈಗಲೂ ಹಾಗೆಯೇ ಆಯಿತು. 'ಮುದ್ರಿಸುವುದು' ಎಂಬ ಸೂಚನೆಯೊಡನೆ ಪುಸ್ತಕದ ಹಸ್ತಪ್ರತಿ ಬಾಬಾನಿಗೆ ರಹಸ್ಯವಾಗಿ ರವಾನಿಸಿದೆ. ಅವನು ಅದನ್ನು ತಿಲಕರಿಗೆ ಓದಲು ಕೊಟ್ಟ. ಅವರು, 'ಇಂಥ ಪುಸ್ತಕ ಮುದ್ರಿಸುವುದು ಅಪಾಯಕರ ; ಅದು ನೆನಪಿನಲ್ಲಿ ಇಟ್ಟುಕೊಂಡು ಏನು ಬೇಕಾದರೂ ಮಾಡಿ' ಎಂದರು. 1907ರ ಜೂನಿನಲ್ಲಿ ಪುಸ್ತಕ ಹೊರಬಂತು. 2000 ಪ್ರತಿಗಳೂ ಎರಡೇ ತಿಂಗಳೊಳಗೆ ಮಾರಾಟ ಆಗಿಹೋದವು. ಎರಡನೆ ಮುದ್ರಣ ಮಾಡಬೇಕೆಂಬ ಬೇಡಿಕೆಗಳೂ ಬರತೊಡಗಿದವು. ಎಲ್ಲ ರಾಷ್ಟ್ರೀಯ ಪತ್ರಿಕೆಗಳೂ ಆ ಗ್ರಂಥದ ಬಗೆಗೆ ಅಗ್ರಲೇಖ ಬರೆದವು.

'ಕಾಳ' ಪತ್ರಿಕೆಯ ಕೆಲವು ವಾಕ್ಯಗಳಿವು : 'ಮಹಾರಾಷ್ಟ್ರದ ವಾಚಕರಿಗೆ ಸಾವರಕರರ ಗುರುತು ಇದ್ದೇ ಇದೆ. ತಮ್ಮ ಜನ್ಮಜಾತ ಕಾರ್ಯಪಟುತೆ, ಉಜ್ವಲ ದೇಶಭಕ್ತಿ, ತರ್ಕಬದ್ಧ ಲೇಖನ, ಪ್ರಭಾವಿ ಭಾಷಣ – ಇತ್ಯಾದಿಗಳ ಮೂಲಕ ಈ ಮೊದಲೇ ಜನರಿಗೆ ಅವರ ಪರಿಚಯ ಆಗಿದೆ..... ದೇಶಭಕ್ತ ಸಾವರಕರರು ವಿಲಾಯತಿಯಲ್ಲಿದ್ದರೂ ಸ್ವದೇಶ, ಸ್ವದೇಶಬಾಂಧವರು, ಸ್ವಭಾಷೆ ಇವುಗಳನ್ನು ಕ್ಷಣಮಾತ್ರವೂ ಮರೆತಿಲ್ಲ; ಪ್ರಸ್ತುತ ಪುಸ್ತಕವೇ ಈ ಮಾತಿಗೆ ಸಾಕ್ಷಿ. ನಿಜಕ್ಕೂ ಪರದೇಶಗಳಿಗೆ ಇಂಥವರು ಹೋಗಬೇಕು. ವಿದೇಶದ ಭವ್ಯ ಕಟ್ಟಡಗಳು, ಪ್ರಚಂಡ ಕಾರ್ಖಾನೆಗಳು, ವೈಭವ ಸಂಪತ್ತುಗಳನ್ನು ನೋಡಿ ವ್ಯಾಮೋಹಿತರಾಗದೆ, ದಾಸ್ಯದಲ್ಲಿ ಸಿಲುಕಿರುವ ತಮ್ಮ ದೇಶ ಸಹ ಎಂದಿಗೆ ಅದೇ ರೀತಿ ತಲೆಯೆತ್ತಿ ನಿಂತೀತೆಂದು ಯೋಚಿಸುವವರು ಪರದೇಶಕ್ಕೆ ಹೋದರೂ ಅವರಿಂದ ಸ್ವದೇಶಕ್ಕೆ ಲಾಭವಿದೆ.... ಲಂಡನ್ನಿನಲ್ಲಿ ಕುಳಿತು ನೈಜ ಸ್ವದೇಶೋನ್ನತಿಗಾಗಿ ಮಾರ್ಗದರ್ಶನ ಮಾಡಲು ಮರಾಠಿಯಲ್ಲಿ ಬರೆಯಲ್ಪಟ್ಟ ಗ್ರಂಥಗಳಲ್ಲಿ ಬಹುಶಃ ಇದೇ ಮೊದಲನೆಯದು.

'..... ಮ್ಯಾಟ್ಸಿನಿಯ ಈ ಲೇಖನಗಳೆಂದರೆ ಸ್ವಾತಂತ್ರ್ಯದ ಅಮೃತ ಧಾರೆ ಇದ್ದಂತೆ. ಈ ಸ್ವಾತಂತ್ರ್ಯದ ವೇದಮಂತ್ರಗಳಲ್ಲಿ ವಿಲಕ್ಷಣ ಸಾಮರ್ಥ್ಯ ಅಡಗಿದೆ. ಈ ಮಂತ್ರಗಳನ್ನು ಜಪಿಸಿ, ದಬ್ಬಾಳಿಕೆಯ ಸರ್ಪದ ಮೇಲೆ ಪ್ರಯೋಗಿಸಿದ್ದೇ ಆದರೆ, ಅದರ ವಿಷ ತಟ್ಟನೆ ಇಳಿದುಹೋಗುವುದು ನಿಶ್ಚಿತ... !

ಇನ್ನು, ಪುಸ್ತಕದ ಪ್ರಸ್ತಾವನೆಯಲ್ಲಿ ಕಾನೂನಿನ ಕತ್ತರಿಗೆ ಸಿಕ್ಕದಂತೆ ಜನತೆಗೆ ಕ್ರಾಂತಿಯ ಪ್ರೇರಣೆ

ನೀಡಲು ನಾನು ಅಳವಡಿಸಿಕೊಂಡ ಮಾರ್ಮಿಕ ಕ್ರಮ ಇದು :

'.... ಮ್ಯಾಟ್ಸಿನಿ ಕೇಳುತ್ತಿದ್ದ : ಓ ಧರ್ಮಾಧಿಕಾರಿಗಳೇ, ನಿಮಗೆ ಜನ್ಮ ಇತ್ತುದೂ ಇದೇ ಭೂಮಿ ಅಲ್ಲವೇನು ? ನಿಮ್ಮನ್ನು ಪಾಲಿಸಿ ಪೋಷಿಸಿದ ಭೂಮಿಯೂ ಇದೇ ಅಲ್ಲವೇನು ? ನೀವು ಬೆಳೆದದ್ದು ಇದರ ಎದೆಹಾಲು ಕುಡಿದೇ ಅಲ್ಲವೇನು ? ಅಂದಮೇಲೆ ಈ ಮಾತೆ ದಬ್ಬಾಳಿಕೆಯ ಕಾಲ್ಕೆಳಗೆ ಸಿಲುಕಿ ಚೀರುತ್ತಿರುವಾಗ, ಸುಮ್ಮನೆ ಕೈಕಟ್ಟಿ ಕುಳಿತಿರುವ ನಿಮಗೆ ಸ್ವರ್ಗ ಹೇಗೆ ಸಿಕ್ಕೀತು ? ಧರ್ಮ ಈಗ ನಿಮ್ಮ ಪಕ್ಷ ಬಿಟ್ಟುಬಂದು ನಮ್ಮ ಪಕ್ಷ ಸೇರಿಕೊಂಡಿದೆ. ನಿಮಗೆ ನಿಜಕ್ಕೂ ಧರ್ಮ ಗೆಲ್ಲಬೇಕೆಂಬ ಹಂಬಲ ಇದ್ದಲ್ಲಿ, ನೀವೂ ನಮ್ಮ ಕಡೆಗೇ ಬನ್ನಿ ! ರಾಜಕಾರಣ ಬಿಟ್ಟು ಧರ್ಮ ಇಲ್ಲ; ಧರ್ಮ ಬಿಟ್ಟು ರಾಜಕಾರಣ ಇಲ್ಲ. ಈ ದೈವೀ ಸತ್ಯವನ್ನು ಮನಗಂಡು, ನನ್ನ ಪ್ರಿಯ ಸ್ವದೇಶದ ಎರಡು ಕೋಟಿ ಜನತೆ, ಈಗ ಸ್ವಾತಂತ್ರ್ಯ ಗಳಿಸಲೇಬೇಕು ಎಂಬ ನಿರ್ಧಾರದೊಡನೆ ಮೇಲೆದ್ದುದೇ ಆದರೆ, ಒಂದು ಆಸ್ಟ್ರಿಯವೇ ಏನು, ಮೂರು ಆಸ್ಟ್ರಿಯಗಳು ಒಟ್ಟುಗೂಡಿದರೂ ಅವೆಲ್ಲವನ್ನೂ ಧ್ವಂಸಗೊಳಿಸಿ ಸ್ವಾತಂತ್ರ್ಯವನ್ನು ಮರಳಿ ಪಡೆಯಬಲ್ಲೆವು' - ನೋಡಿ, ತನ್ನ ಎರಡು ಕೋಟಿ ದೇಶಬಾಂಧವರ ಬಗ್ಗೆ ಮ್ಯಾಟ್ಸಿನಿಗೆ ಎಷ್ಟೊಂದು ಹೆಮ್ಮೆ ! ಒಂದು ವೇಳೆ ಅವನ ದೇಶದ ಜನಸಂಖ್ಯೆ ಅದರ ಹದಿನೈದರಷ್ಟು ಇದ್ದು, ಅವನ ಶತ್ರು ಆಸ್ಟ್ರಿಯದಷ್ಟೇ ಇದ್ದಲ್ಲಿ, ಅವನಿಗೆ ದೇಶದ ಸ್ವಾತಂತ್ರ್ಯ ಗಳಿಸಲು ಒಂದು ಕ್ಷಣವೂ ಹಿಡಿಯುತ್ತಿರಲಿಲ್ಲ !

'ಮ್ಯಾಟ್ಸಿನಿ ಹೇಳುತ್ತಾನೆ : '.... ಇಟಲಿಯ ಹಡಗು ತೂತುಬಿದ್ದಿದೆ ; ಇಟಲಿಯ ಧ್ವಜ ಹರಿದು ಚಿಂದಿಯಾಗಿದೆ ಭಿಕ್ಷೆ ಬೇಡಿದರೆ ಸ್ವಾತಂತ್ರ್ಯ ಸಿಕ್ಕುವುದೆಂಬ ಆಸೆ ನಿಮಗಿದೆಯೆ ? ನಿಮ್ಮ ಅರ್ಜಿಯ ಚೀಟಿ ಕಂಡು ಆಸ್ಟ್ರಿಯ ತಾನು ಗೆದ್ದಿರುವುದನ್ನು ಬಿಟ್ಟುಕೊಡುವುದಿಲ್ಲವೆಂಬುದನ್ನು ಮನಗಾಣಿರಿ.'' - ನೋಡಿ, ಬಹುಶಃ ಎಲ್ಲ ರಾಷ್ಟ್ರಗಳ ಇತಿಹಾಸದಲ್ಲೂ ಕಂಡುಬರುವ ಭಿಕ್ಷಾಂದೇಹಿಯ ಜಾಡ್ಯ ಇಟಲಿಗೂ ಅಂಟಿತ್ತು. ಆದರೆ ಬಹುಬೇಗ ಅದು ಹರಿದುಹೋಯಿತು. ಶತಶತಮಾನಗಳವರೆಗೆ ಪರಕೀಯರ ಬಾಗಿಲಲ್ಲಿ ಒದೆತ ತಿನ್ನುತ್ತಾ ಕುಳಿತುಕೊಳ್ಳುವಷ್ಟು, ಸಹಸ್ರಾರು ಸಲ ನಂಬಿಕೆದ್ರೋಹವಾಗುತ್ತಿದ್ದರೂ ಪುನಃ ಪುನಃ ಭಿಕ್ಷಾಪಾತ್ರೆ ಹಿಡಿದು ಕೈಚಾಚುವಷ್ಟು ಇಟಲಿ ದೇಶ ರಾಜನಿಷ್ಠವಾಗಿರಲಿಲ್ಲ. ಆಗ ಪೋಲೆಂಡ್, ಸ್ಪೇನ್ ಇತ್ಯಾದಿ ದೇಶಗಳಲ್ಲಿ ರಾಜ್ಯಕ್ರಾಂತಿಯ ಅಲೆ ಉಕ್ಕೇರುತ್ತಿತ್ತು. ಅದರಿಂದಲೇ ಇಟಾಲಿಯನರಲ್ಲಿ ಆತ್ಮಶ್ರದ್ಧೆ ಹುಟ್ಟಿತು. ಆದರೆ, ಅಕ್ಕಪಕ್ಕಗಳಲ್ಲಿ ಸ್ವಾತಂತ್ರ್ಯಕ್ಕಾಗಿ ಅಂಥ ಭಯಂಕರ ರಾಜ್ಯಕ್ರಾಂತಿಗಳಾಗುತ್ತಿದ್ದರೂ, ಅವುಗಳನ್ನು ನೋಡಿಯೂ ಸಹ ಯಾರಿಗೆ ತಮ್ಮ ಗುಲಾಮಗಿರಿಯ ಹಾಗೂ ಭಿಕ್ಷಾಟನೆಯ ಬಗ್ಗೆ ನಾಚಿಕೆ ಆಗದೋ ಅಂಥ ದೇಶಗಳಿಗೂ ಪ್ರಪಂಚದಲ್ಲಿ ಕಡಿಮೆಯಿಲ್ಲ. ಆದರೆ ಇಟಲಿ ಅಷ್ಟೊಂದು ಮೂದೇವಿ ಆಗಿರಲಿಲ್ಲ....'

'.... 1848ರಲ್ಲಿ ರೋಮಿಗೆ ನುಗ್ಗಿದ್ದ ಫ್ರೆಂಚರೊಡನೆ ಕಾಳಗವಾಗುತ್ತಿತ್ತು. ಮಹಾಸೇನಾನಿ ಗರಿಬಾಲ್ಡಿ ಶತ್ರುಸೇನೆಯ ನಡುವೆ ನುಗ್ಗಿ ಹೋಗಿ ರೋಷಭೀಷಣನಾಗಿ ಮೈಮರೆತು ಹೋರಾಡುತ್ತಿದ್ದ. ಅಷ್ಟರಲ್ಲಿ (ಸೆನೆಟ್‌ಗೆ) ರಾಷ್ಟ್ರೀಯ ಸಮಿತಿಯ ಸಭೆಗೆ ಕರೆ ಬಂದುದರಿಂದ ಯುದ್ಧರಂಗದಿಂದ ಅಲ್ಲಿಗೆ ಹೋದ. ಅವನನ್ನು ಕಾಣುತ್ತಲೇ ಅಲ್ಲಿ ಪ್ರಚಂಡ ಕರತಾಡನ ಕೇಳಿಬಂತು ಏಕೆಂದು ಗರಿಬಾಲ್ಡಿಗೆ ಮೊದಲು ಅರ್ಥವೇ ಆಗಲಿಲ್ಲ. ಆಗ ತನ್ನ ಕಡೆಗೇ ಒಮ್ಮೆ ನೋಡಿಕೊಂಡ. ಗಾಯಗಳಿಂದ ಧಾರಾಕಾರವಾಗಿ ಹರಿಯುತ್ತಿದ್ದ ರಕ್ತ ; ಶತ್ರುವಿನ ಶಸ್ತ್ರಗಳಿಂದ ಹಾಗೂ ಮೈ ಸವರಿಕೊಂಡು ಹೋದ ಗುಂಡುಗಳಿಂದ ಚಿಂದಿಚಿಂದಿಯಾದ ಉಡುಪು; ಎಡೆಬಿಡದ ಹೋರಾಟದಿಂದ ಬಾಗಿಹೋಗಿದ್ದ ರಕ್ತಸಿಕ್ತ ಖಡ್ಗ ! ಅದು

ಅರ್ಧ ಕೂಡ ಒರೆಯೊಳಗೆ ಹೋಗಿರಲಿಲ್ಲ! (ವಿಜಯ ಸಾಧಿಸದೆ ಒಳಕ್ಕೆ ಹೋಗುವುದಿಲ್ಲ ಎಂದು ಹಟ ತೊಟ್ಟಂತಿತ್ತು!) ಅಂಥ ಖಡ್ಗಕ್ಕೆ ಅನಂತ ಪ್ರಣಾಮಗಳು ! ಅಂಥ ಒಂದಾದರೂ ಖಡ್ಗ ಜಗತ್ತಿನಲ್ಲಿ ಇರುವವರೆಗೆ ಪಾರತಂತ್ರ್ಯಕ್ಕೆ ಒಳಗಾದ ದೇಶಗಳು ಸ್ವಾತಂತ್ರ್ಯದ ಆಸೆ ತಾಳಲು ಅಡ್ಡಿಯಿಲ್ಲ...! 1831ರಲ್ಲಿ ಸಾವೋನಾ ಜೈಲಿನಲ್ಲಿ ಕೊಳೆಯುತ್ತಿದ್ದ ತರುಣ ಮ್ಯಾಟ್ಸಿನಿ ಮತ್ತು 1871ರ ಸ್ವತಂತ್ರ ಇಟಲಿಯ ರಾಜಧಾನಿಯನ್ನು ಪ್ರವೇಶಿಸುತ್ತಿದ್ದ ವೃದ್ಧ ಮ್ಯಾಟ್ಸಿನಿ! ಯಾರಾದರೂ ಇಟಲಿಯ ಕಲಾವಿದ ಆ ಎರಡು ದೃಶ್ಯಗಳನ್ನೂ ಚಿತ್ರಿಸ ಬಲ್ಲನೆ? ದೇವರ ಮನೆಯಲ್ಲಿ ಪ್ರತಿಯೊಂದು ದೇಶದ ಸಲುವಾಗಿಯೂ ಒಬ್ಬೊಬ್ಬ ಮ್ಯಾಟ್ಸಿನಿ ಇರುವು ದಾದರೆ, ಆಗ ಇಟಲಿಯ ಬಗ್ಗೆ ಯಾರೂ ಅಸೂಯೆಪಡಬೇಕಾದುದಿಲ್ಲ!'

ಇನ್ನು ಸ್ವತಃ ಮ್ಯಾಟ್ಸಿನಿಯ ಮಾತುಗಳನ್ನು ಸ್ವಲ್ಪ ಆಲಿಸಿ: 'ಮಾನವ ಜನಾಂಗವನ್ನು ಪ್ರೀತಿಸಿ. ಸ್ವದೇಶವು ನಿಮ್ಮ ತೊಟ್ಟಿಲು ; ಮನುಷ್ಯ ಜನಾಂಗವೇ ನಿಮ್ಮ ತಾಯಿ.... ತರುಣರೇ ! ಧ್ಯೇಯವನ್ನು ಪ್ರೀತಿಸಿ ; ಧ್ಯೇಯವನ್ನು ಆರಾಧಿಸಿ; ಧ್ಯೇಯಕ್ಕಾಗಿ ಸ್ವಾರ್ಥವನ್ನು ತ್ಯಜಿಸಿ. ದುಃಖಕ್ಕೆ ದಣಿಯದಿರಿ; ವಿಪತ್ತಿಗೆ ಮಣಿಯ ದಿರಿ. ಜೀವನವೆನ್ನುವುದು ಸುಖಕ್ಕಾಗಿ ಅಲ್ಲ, ಕರ್ತವ್ಯಕ್ಕಾಗಿ!

'ಸ್ವಾತಂತ್ರ್ಯ, ಸ್ವದೇಶ ಮತ್ತು ಮಾನವತೆಗಳನ್ನು ಪೂಜಿಸುತ್ತೇನೆ ಎಂದು ಒಮ್ಮೆ ಮನುಷ್ಯನು ನಿರ್ಧಾರ ಕೈಗೊಂಡನೆಂದರೆ ತೀರಿತು, ಸ್ವಾತಂತ್ರ್ಯಕ್ಕಾಗಿ, ಸ್ವದೇಶಕ್ಕಾಗಿ ಮತ್ತು ಮಾನವತೆಗಾಗಿ ಅವನು ಹೋರಾಡಲೇ ಬೇಕು. ಅಖಂಡರಾಗಿ ಹೋರಾಡಬೇಕು, ಆಯುಷ್ಯಪೂರ್ತಿ ಹೋರಾಡಬೇಕು, ಸಾಧ್ಯವಿರುವ ಸರ್ವಶಸ್ತ್ರ ಗಳಿಂದಲೂ ಹೋರಾಡಬೇಕು. ದ್ವೇಷ, ನಿಂದೆಗಳಿಗೆ ಎದೆಗೊಡಬೇಕು. ಜನರು ತೋರುವ ತಿರಸ್ಕಾರದಿಂದ ಮೊದಲುಮಾಡಿ ಸ್ವಂತ ಮರಣದವರೆಗೆ ಎಲ್ಲ ಸಂಕಟಗಳನ್ನೂ ತುಚ್ಛವಾಗೆಣಿಸಬೇಕು. ಇತರ ಯಾವುದೇ ಫಲಕ್ಕಾಗಿ ಬಾಯಿಬಿಡದೆ ಕೇವಲ ಕರ್ತವ್ಯಬುದ್ಧಿಯಿಂದ ಕಾರ್ಯತತ್ಪರನಾಗಬೇಕು!'

ಬೇಸಿಗೆಯ ಕೊನೆಯಲ್ಲಿ ಬಾಯಾರಿ ಬಿರಿದ ಭೂಮಿ ಮೊದಲ ಮಳೆಯ ನೀರನ್ನು ಗಟಗಟನೆ ಹೀರುವಂತೆ - ಸ್ವಾತಂತ್ರ್ಯೋತ್ಸುಕರಾಗಿದ್ದರೂ ಪ್ರತಿಕೂಲ ಪರಿಸ್ಥಿತಿಯ ಒತ್ತಡದಿಂದ ಕಿಂಕರ್ತವ್ಯ ಮೂಢರಾಗಿದ್ದ ದೇಶಭಕ್ತರ ಮನೋಭೂಮಿಯು ಮ್ಯಾಟ್ಸಿನಿಯ ಕ್ರಾಂತಿಕಾರಕ ಉಪದೇಶಾಮೃತವನ್ನು ಕಂಠಪೂರ್ತಿ ಹೀರಿಕೊಂಡಿತು. ಒಂದೊಂದು ಪ್ರತಿಯನ್ನೂ 20-30 ಜನರು ಓದುತ್ತಿದ್ದರೆಂದು ಸರಕಾರಿ ಗುಪ್ತಚರರೇ ವರದಿ ಮಾಡಿದ್ದರು. ಅನೇಕ ಊರುಗಳಲ್ಲಿ ಪುಸ್ತಕವನ್ನು ಪಲ್ಲಕ್ಕಿಯಲ್ಲಿಟ್ಟು ಮೆರವಣಿಗೆ ಮಾಡಲಾಯಿತು. ಹಿರಿಯರನೇಕರು ತಮ್ಮ ಮಕ್ಕಳಿಗೆ ಮುನ್ನುಡಿಯ ಭಾಗಗಳನ್ನು ಬಾಯಿಪಾಠ ಮಾಡಿಸುತ್ತಿದ್ದರು; ಅತಿಥಿಗಳ ಹಾಗೂ ನೆಂಟರಿಷ್ಟರ ಎದುರಿಗೆ ಅದನ್ನು ಹೇಳಿ ಆನಂದಿಸುತ್ತಿದ್ದರು. ಎಷ್ಟೋ ಯುವಕರು 26 ಪುಟಗಳ ಮುನ್ನುಡಿಯನ್ನೂ ಚಾಚೂ ತಪ್ಪದೆ ಹೃದ್ಗತ ಮಾಡಿಕೊಂಡಿದ್ದರು!

ಆಂಗ್ಲಶಾಹಿಯು ಆ ಪುಸ್ತಕದ ಲೇಖಕ, ಪ್ರಕಾಶಕ ಮತ್ತು ಮುದ್ರಕರನ್ನು ಶಿಕ್ಷಿಸಲು ನಾನಾ ರೀತಿಯಲ್ಲಿ ಪ್ರಯತ್ನಿಸಿತು. ಆದರೆ ಮುನ್ನುಡಿ ಬರೆಯುವಾಗ ವಹಿಸಿದ ಜಾಗರೂಕತೆಯಿಂದಾಗಿ, ಮೊಕದ್ದಮೆ ಹೂಡುವಂಥ ಒಂದು ಶಬ್ದವೂ ಸರಕಾರಕ್ಕೆ ಸಿಗಲಿಲ್ಲ! ಕಡೆಗೆ, ಎರಡನೆಯ ಮುದ್ರಣದ ಜಾಹಿರಾತು ಪತ್ರಿಕೆಯಲ್ಲಿ ಬರುತ್ತಲೇ ಸರಕಾರದ ಕ್ರೋಧ ತಡೆಯದಾಯಿತು. ಪುಸ್ತಕದ ಮೇಲೆಯೇ ತನ್ನ ಸೇಡು ತೀರಿಸಿಕೊಳ್ಳಲು ಹೊರಟಿತು ಮೊದಲ ಮುದ್ರಣವನ್ನೂ 'ರಾಜಹೃತ' (ಜಪ್ತು) ಎಂದು ಸರಕಾರ ಸಾರಿತು. ಪುಸ್ತಕದ ಪ್ರತಿಗಳ 'ಬಂಧನ' ಹಾಗೂ 'ಮರಣ ದಂಡನೆ' ಶುರುವಾಯಿತು! ನೂರಾರು ಊರುಗಳಲ್ಲಿ ಅಂಗಡಿಗಳ, ಮನೆಗಳ ಝಡತಿ ನಡೆಯಿತು. ಎಷ್ಟೋ ಕಡೆ ಗೋಡೆಯ ಗೂಡಿನಲ್ಲಿ ಹತ್ತಾರು ಪ್ರತಿಗಳ

ನ್ನಿಟ್ಟು ಇಟ್ಟಿಗೆಯಿಂದ ಮುಚ್ಚಿ ಗಾರೆ ಹಾಕಿದ್ದರು. ಪೊಲೀಸರಿಗೆ ಬಹುಪಾಲು ಪುಸ್ತಕಗಳು ಪತ್ತೆಹತ್ತಲಿಲ್ಲ. ಸುಮಾರು ಎರಡು ಮೂರು ಪೀಳಿಗೆಯ ತರುಣರು ಅವನ್ನು ರಹಸ್ಯವಾಗಿ ರಕ್ಷಿಸಿಕೊಂಡು ಪಾರಾಯಣ ಮಾಡಿದರು.

ನಡುನಡುವೆ ಆ ಪುಸ್ತಕದ ಮೇಲಿನ ನಿಷೇಧ ತೆಗೆಸುವ ಪ್ರಯತ್ನಗಳೂ ನಡೆದವು. ಜನರು ಸಭೆಗಳಲ್ಲಿ ಅದರ ಭಾಗಗಳನ್ನು ಬಹಿರಂಗವಾಗಿ ಓದಿ ಕಾಯಿದೆ ಮುರಿದರು ; ಸೆರೆಮನೆಗೆ ಹೋದರು, ಶಿಕ್ಷೆ ಅನುಭವಿಸಿದರು. ಆದರೆ ನಿಷೇಧ ಹೋಗಲಿಲ್ಲ. ಮೂವತ್ತು ವರ್ಷಗಳ ನಂತರ, ಹಿಂದುಸ್ಥಾನಕ್ಕೆ ಪ್ರಾಂತೀಯ ಸ್ವಾಯತ್ತತೆ ದೊರೆತು ಕಾಂಗ್ರೆಸ್ ಮಂತ್ರಿಮಂಡಲ ಅಧಿಕಾರಕ್ಕೆ ಏರಿತು. ಆಗಲಾದರೂ ನ್ಯಾಯ ದೊರೆಯುವುದೆಂಬ ಆಸೆ ಅನೇಕರಿಗೆ ಚಿಗುರಿತು. ಆದರೆ ನಿಷೇಧಾಜ್ಞೆ ತೆರೆಯುವುದಂತಿರಲಿ, 'ಅಹಿಂಸಕ' ಕಾಂಗ್ರೆಸಿಗರು ಈ ಕ್ರಾಂತಿಕಾರಿ ಪುಸ್ತಕಕ್ಕೂ, ಅದನ್ನು ಹೊಂದಿದ್ದವರಿಗೂ ಇಂಗ್ಲಿಷರಿಗಿಂತ ಹೆಚ್ಚಿನ 'ಹಿಂಸೆ' ಕೊಟ್ಟರು ! ಕಡೆಗೆ, (ತಮ್ಮ ತಾರುಣ್ಯದಲ್ಲಿ ಅಭಿನವಭಾರತದ ಶಪಥಬದ್ಧ ಸದಸ್ಯರಾಗಿದ್ದ) ಬಾಳಾರಾವ್ ಖೇರ್ 1946ರಲ್ಲಿ ಮುಂಬೈ ಮುಖ್ಯಮಂತ್ರಿ ಆದಾಗ ಇಡೀ 'ಸಾವರಕರ ವಾಙ್ಮಯ'ವನ್ನು ನಿರ್ಬಂಧಗಳಿಂದ ಮುಕ್ತಗೊಳಿಸಿದರು. ಆಗ 'ಮ್ಯಾಟ್ಸಿನಿಯ ಆತ್ಮಕಥೆ ಮತ್ತು ರಾಜಕೀಯ ಲೇಖನಗಳ' ಪುಸ್ತಕವನ್ನು ಪುನರ್ಮುದ್ರಿಸುವ ಸೌಭಾಗ್ಯ ನನ್ನ ಪಾಲಿಗೇ ಬಂತು !

  

ಮೊದಲು ಇಂಗ್ಲೆಂಡಿನಲ್ಲಿದ್ದ ಭಾರತೀಯ ತರುಣರ ಸಂಪರ್ಕ ; ಅನಂತರ ಅವರಿಗೆ ಸ್ವಾತಂತ್ರ್ಯದ ಕಲ್ಪನೆ, ಕೊನೆಗೆ ಸಶಸ್ತ್ರ ಕ್ರಾಂತಿಯ ಪ್ರೇರಣೆ - ಇದು ನನ್ನ ಯೋಜನೆ. ಅದಕ್ಕಾಗಿ ವ್ಯಕ್ತಿಗತ ಸಂಭಾಷಣೆ, ಸಾರ್ವಜನಿಕ ಭಾಷಣ, ಗ್ರಂಥರಚನೆ, ಪ್ರಚಾರ ಲೇಖನ, ಆ ಕಾಲದಲ್ಲಿ ಅತ್ಯಾಧುನಿಕವಾಗಿದ್ದ ಬಾಂಬ್ ಮತ್ತಿತರ ಅಗತ್ಯ ಶಸ್ತ್ರಾಸ್ತ್ರಗಳ ಶಿಕ್ಷಣ ಮತ್ತು ಸಂಗ್ರಹ ಇತ್ಯಾದಿ ಪ್ರತ್ಯಕ್ಷ ಹಾಗೂ ಪರೋಕ್ಷ ಕಾರ್ಯಗಳನ್ನು ಒಮ್ಮೆಗೇ ಆರಂಭಿಸಬೇಕಾಯಿತು.

ಆಗ ಭಾರತೀಯ ವಿದ್ಯಾರ್ಥಿಗಳು ಆಕ್ಸ್‌ಫರ್ಡ್, ಕೇಂಬ್ರಿಜ್, ಮ್ಯಾಂಚೆಸ್ಟರ್, ಸಯರೆನ್ಸ್ಟರ್, ಎಡಿನ್‌ಬರೋ ಮುಂತಾದ ವಿವಿಧ ವಿದ್ಯಾಕೇಂದ್ರಗಳಲ್ಲಿ ಹಂಚಿಹೋಗಿದ್ದರು. ಅವರೆಲ್ಲರ ನಡುವೆ ನನ್ನ ಓಡಾಟ, ಕ್ರಾಂತಿಯ ವಿಚಾರ ಪ್ರಚಾರ ಆರಂಭವಾಗುತ್ತಲೇ ಇಂಗ್ಲಿಷರಿಗೆ ಇದರ ಬಿಸಿ ತಟ್ಟತೊಡಗಿತು. ಸೆಪ್ಟೆಂಬರ್ 28ರಂದು ನಾನು 'ಮ್ಯಾಟ್ಸಿನಿ' ಪುಸ್ತಕ ಮುಗಿಸಿ ಲೇಖನಿ ಕೆಳಗಿಟ್ಟ ದಿನವೇ 'ಲಂಡನ್ ಟೈಂಸ್' ಪತ್ರಿಕೆಯಲ್ಲಿ ಒಂದು ಪತ್ರ ಕಾಣಿಸಿಕೊಂಡಿತು : 'ಹಿಂದುಸ್ಥಾನದಲ್ಲಿರುವ ಬ್ರಿಟಿಷ್ ಸರಕಾರದ ವಿರುದ್ಧ ಇಲ್ಲಿನ ಹಿಂದು ವಿದ್ಯಾರ್ಥಿಗಳನ್ನು ಎತ್ತಿಕಟ್ಟುವ ಏಕಮಾತ್ರ ಉದ್ದೇಶವುಳ್ಳ ಚಳವಳಿಗಾರರು ಭೇಟಿ ಕೊಡುವುದನ್ನು ತಪ್ಪಿಸಲು ಏನಾದರೂ ಕ್ರಮ ಕೈಗೊಳ್ಳುವುದು ಅಗತ್ಯ.... ಭಾರತೀಯ ವಿದ್ಯಾರ್ಥಿಗಳ ನಡುವೆ ವ್ಯವಸ್ಥಿತ ರೂಪದಲ್ಲಿ ನಡೆಯುತ್ತಿರುವ ರಾಜದ್ರೋಹದ ರಹಸ್ಯ ಪ್ರಚಾರವನ್ನು ಹತ್ತಿಕ್ಕಲು ಸರ್ವ ಪ್ರಯತ್ನ ಹಾಕಬೇಕು.' ಎಂ.ಎ. ಕ್ಯಾಂಟಬ್ ಎಂಬ ಹೆಸರಿನಲ್ಲಿ ಯಾರೋ ಬರೆದಿದ್ದರು. ಪರವಾಗಿಲ್ಲ, ನನ್ನ ಕಾರ್ಯಪದ್ಧತಿ ಪರಿಣಾಮಕಾರಿ ಆಗುತ್ತಿದೆ ಎಂದುಕೊಂಡೆ.

ಕೆಲವೇ ದಿನಗಳಲ್ಲಿ 'ಫ್ರೀ ಇಂಡಿಯಾ ಸೊಸೈಟಿ' ಪ್ರಾರಂಭಿಸಿದೆ. ಸಾರ್ವಜನಿಕ ಕಾರ್ಯಕ್ರಮಗಳನ್ನು ನಡೆಸುವುದು ; ಅದರಲ್ಲಿ ಅರ್ಹತೆಯುಳ್ಳವರನ್ನು ಆರಿಸಿ ಅಭಿನವಭಾರತಕ್ಕೆ ಸೇರಿಸುವುದು - ಇದು ಗುರಿ.


ಲಾಲಾ ಹರದಯಾಳ್

ಫ್ರೀ ಇಂಡಿಯಾ ಸೊಸೈಟಿಯ ಆಶ್ರಯದಲ್ಲಿ ಪ್ರತಿ ಭಾನುವಾರ ಅಧ್ಯಯನಗೋಷ್ಠಿ. ಅಲ್ಲಿ ಭಾರತೀಯ ಇತಿಹಾಸ, 1857ರ ಸ್ವಾತಂತ್ರ್ಯ ಸಮರ, ಪ್ರಚಲಿತ ರಾಜಕಾರಣ, ಮ್ಯಾಟ್ಸಿನಿಯ ಜೀವನ ಇತ್ಯಾದಿ ವಿಷಯಗಳ ಬಗ್ಗೆ ಭಾಷಣ ಮಾಡುತ್ತಿದ್ದೆ. ಅನಂತರ ಚರ್ಚೆ, ಪ್ರಶ್ನೋತ್ತರ ನಡೆಯುತ್ತಿತ್ತು. ಸಭೆಗಳಲ್ಲಿ ಭಾರತ ಭವನದಲ್ಲಿದ್ದ ಹಾಗೂ ಅಲ್ಲಿಗೆ ಬಂದು ಹೋಗುತ್ತಿದ್ದ ವಿದ್ಯಾರ್ಥಿಗಳೂ, ಭಾರತೀಯ ನಾಯಕರೂ, ಶ್ಯಾಮಜಿಯವರ 'ಹೋಂ ರೂಲ್ ಸೊಸೈಟಿ'ಯ ಸದಸ್ಯರೂ ಭಾಗವಹಿಸುತ್ತಿದ್ದರು. ವಾರದಿಂದ ವಾರಕ್ಕೆ ಸಭಾಸದರ ಸಂಖ್ಯೆ ಬೆಳೆಯುತ್ತಾ ಹೋಯಿತು. 1907ರ ಡಿಸೆಂಬರಿನಲ್ಲಿ ಅಭಿನವಭಾರತದ ಲಂಡನ್ ಶಾಖೆ ರಹಸ್ಯವಾಗಿ ಪ್ರಾರಂಭವಾಯಿತು.

ಪ್ರಾರಂಭದಲ್ಲೆ ಭಾಯಿ ಪರಮಾನಂದ ಮತ್ತು ಲಾಲಾ ಹರದಯಾಳರ ಪರಿಚಯವಾಗಿತ್ತು. ಹರದಯಾಳ್ ಹುಟ್ಟಿದ್ದು 1884; ದಿಲ್ಲಿಯಲ್ಲಿ. 1904ರಲ್ಲಿ ಪಂಜಾಬ್ ವಿಶ್ವವಿದ್ಯಾನಿಲಯದ ಎಂ.ಎ. ಪರೀಕ್ಷೆಯಲ್ಲಿ ಪ್ರಪ್ರಥಮ ಸ್ಥಾನ ಗಳಿಸಿದರು. ಉಚ್ಚ ಶಿಕ್ಷಣಕ್ಕಾಗಿ ಲಂಡನ್ನಿಗೆ ಅವರು ಬಂದಿದ್ದರು. ಅಚಲ ಹಿಂದುತ್ವನಿಷ್ಠರು. ಅಪ್ರತಿಮ ಪ್ರತಿಭೆ, ಯೋಜನಾಶಕ್ತಿ; ಲೇಖನ ಹಾಗೂ ಭಾಷಣ ಸಾಮರ್ಥ್ಯ ಇದ್ದವರು. ಗ್ಯಾನಚಂದ ವರ್ಮಾ ಅಭಿನವ ಭಾರತದ ಲಂಡನ್ ಶಾಖೆಯ ಕಾರ್ಯದರ್ಶಿ. ಜನಿಸಿದ್ದು ಬಡಕುಟುಂಬದಲ್ಲಿ. ಆದರೆ ಪ್ರಚಂಡ ಕರ್ತೃತ್ವ ಹಾಗೂ ಎದೆಗಾರಿಕೆಯುಳ್ಳ ವ್ಯಕ್ತಿ. ಭಾರತದಲ್ಲಿ ಪದವೀಧರರಾದ ಮೇಲೆ ಬ್ಯಾರಿಸ್ಟರ್ ಪರೀಕ್ಷೆಗೆ ಓದಬೇಕೆಂಬ ಆಸೆ ; ಆದರೆ ಕೈಲಿ ಕಾಸಿಲ್ಲ. ಒಂದು ಹಡಗಿನಲ್ಲಿ ಸೇರಿಕೊಂಡು ಏಡನ್ ತಲುಪಿದರು. ಅಲ್ಲಿಂದ ಲಂಡನ್ ಸೇರಿದ್ದರು. ಅವರಿಗೆ ಪರ್ಶಿಯನ್ ಭಾಷೆಯ ಪರಿಚಯವಿತ್ತು. ಆದ್ದರಿಂದ 'ಪರ್ಶಿಯನ್ ಬಲ್ಲ ಹಿಂದು ಪಂಡಿತರು' ಎಂದು ಪರ್ಶಿಯಾ ರಾಯಭಾರಿ ಕಚೇರಿಯವರಿಗೆಲ್ಲ ಗೌರವ ಹುಟ್ಟಿತು. ಅಲ್ಲಿಯೇ ಅವರಿಗೆ ಒಂದು ಕೆಲಸವೂ ಸಿಕ್ಕಿತು.

ಮುಂದೆ ಸೇನಾಪತಿ ಬಾಪಟ್ ಎಂದು ಪ್ರಸಿದ್ಧರಾದ ಪಾಂಡುರಂಗ ಮಹಾದೇವ ಬಾಪಟರು ಇಂಗ್ಲೆಂಡಿಗೆ ಬಂದದ್ದು 1904ರಲ್ಲಿ. ಅವರಿಗೆ ಮುಂಬೈ ವಿಶ್ವವಿದ್ಯಾಲಯದ 'ಮಂಗಳದಾಸ್ ನಥೂಭಾಯ್ ತಾಂತ್ರಿಕ ವಿದ್ಯಾರ್ಥಿ ವೇತನ' ದೊರಕಿತ್ತು. ಅವರು ಎಡಿನ್‌ಬರೋ ಇಂಜಿನಿಯರಿಂಗ್ ಕಾಲೇಜಿನ ವಿದ್ಯಾರ್ಥಿಯಾಗಿದ್ದರು. 1906ರಲ್ಲಿ ಹಿಂದುಸ್ಥಾನದ ಸ್ವಯಮಾಡಳಿತಕ್ಕಾಗಿ ಒತ್ತಾಯಿಸುವ ಒಂದು ಕೈಹೊತ್ತಗೆಯನ್ನು ಅವರು ಪ್ರಕಟಿಸಿದರು. ಆ ಅಪರಾಧಕ್ಕಾಗಿ ಅವರ ಶಿಷ್ಯವೃತ್ತಿ ಮೊಟಕಾಯಿತು! ಮುಂದಿನದನ್ನು ಅವರೇ ಬರೆದಿದ್ದಾರೆ : 'ಆಗ ನಾನು ಶ್ಯಾಮಜಿ ಕೃಷ್ಣವರ್ಮರಿಗೆ ಪತ್ರ ಬರೆದೆ. ಅವರು ನನಗೆ ಭಾರತಭವನಕ್ಕೆ ಬರುವಂತೆ ಕರೆ ಕಳಿಸಿದರು. ಭಾರತ ಭವನದಲ್ಲಿ ಸಾವರಕರರನ್ನು ಮೊದಲ ಬಾರಿಗೆ ಸಂಧಿಸಿದೆ. ನನಗೆ ಶಿಷ್ಯವೃತ್ತಿ ನಿಂತುಹೋದ ಸುದ್ದಿ ಕೇಳಿ ಅವರು, ಹಾಗಾದರೆ ಅದೇನು ಹಿಂದುಸ್ಥಾನದ ಶಾಶ್ವತ ಗುಲಾಮಗಿರಿ ಯಾಚಿಸುವ ವಿದ್ಯಾರ್ಥಿಗಳಿಗಾಗಿ ಇರುವ ಶಿಷ್ಯವೃತ್ತಿ ಏನು? – ಎಂದು ಸರಕಾರವನ್ನು ಮೂದಲಿಸಿದರು. ಅವರು ಪ್ರತಿ ಭಾನುವಾರ 1857ರ ಸ್ವಾತಂತ್ರ್ಯ ಸಂಗ್ರಾಮದ ಬಗ್ಗೆ ಇಂಗ್ಲಿಷಿನಲ್ಲಿ ಪ್ರಭಾವಿಯಾಗಿ ಭಾಷಣ ಮಾಡುತ್ತಿದ್ದರು. ಶ್ರೋತೃಗಳ ಪೈಕಿ ತಮಗೆ ಸರಿಕಂಡವರನ್ನು ತಮ್ಮ ಅಭಿನವ

ಭಾರತದ ಸದಸ್ಯರಾಗಿ ಮಾಡಿಕೊಳ್ಳುತ್ತಿದ್ದರು ಅವರ ಪ್ರಭಾವಿ ಮಾತು ಕೇಳಿ, ಸ್ವಾತಂತ್ರ್ಯದ ಬಗ್ಗೆ ಅವರ ತಳಮಳ ಕಂಡು, ಇಂಗ್ಲೆಂಡಿನಲ್ಲಿ ಇರುವಷ್ಟು ದಿನ ನಾನೂ ದೇಶಕ್ಕಾಗಿ ಏನಾದರೂ ಮಾಡಲೇಬೇಕೆಂಬ ಮನಸ್ಸಾಯಿತು ಈ ವಿಷಯದಲ್ಲಿ ಸಾವರಕರರನ್ನು ವಿಚಾರಿಸಿ, ಅವರ ಸಮ್ಮತಿ ಪಡೆಯಲು ನಿರ್ಧರಿಸಿದೆ; ಅವರ ನಾಯಕತ್ವ ಸ್ವೀಕರಿಸಿದೆ.'



ವೀರೇಂದ್ರನಾಥ

ವೀರೇಂದ್ರನಾಥ ಚಟ್ಟೋಪಾಧ್ಯಾಯರು ಶ್ರೀಮತಿ ಸರೋಜಿನಿ ನಾಯಿಡು ಅವರ ಸೋದರ. ಸೈದ್ಧಾಂತಿಕವಾಗಿ ಸೋದರನಿಗೂ ಸೋದರಿಗೂ ಅಜಗಜಾಂತರ. ವೀರೇಂದ್ರನಾಥರು ಕಲ್ಕತ್ತಾ ವಿಶ್ವವಿದ್ಯಾಲಯದ ಪದವೀಧರರು. ಕಾನೂನು ಅಭ್ಯಾಸ ಮಾಡುತ್ತಿದ್ದರು. ಪ್ರತಿಭಾಶಾಲಿ ಪತ್ರಿಕೋದ್ಯಮಿ ಹಾಗೂ ಪ್ರಖರ ದೇಶಭಕ್ತರು. ಹೀಗೆಯೇ ಅನೇಕ ಸಾಹಸಿ ತರುಣರ ಗುಂಪು ಅಭಿನವ ಭಾರತದಲ್ಲಿ ಒಗ್ಗೂಡಿತು.



ಗ್ಯಾನಚಂದ ವರ್ಮಾ

1907ರಲ್ಲಿ ಒಂದು ದಿನ ಭಾರತ ಭವನದಲ್ಲಿ ಊಟಕ್ಕಾಗಿ ಹೊರಟಿದ್ದೆ. ಅಷ್ಟರಲ್ಲೇ ಅಂದವಾಗಿ ಯುರೋಪಿಯನ್ ಉಡುಪು ತೊಟ್ಟ ಸೊಗಸುಗಾರ ವ್ಯಕ್ತಿಯೊಬ್ಬರು ಬಾಗಿಲು ತೆಗೆದುಕೊಂಡು ಒಳಗೆ ಬಂದರು. ಲಗುಬಗೆಯಿಂದ ಹಸ್ತಾಂದೋಲನ ನೀಡಿದರು. ಅವರ ವಯಸ್ಸು ಸುಮಾರು ಮೂವತ್ತು ಮೀರಿತ್ತು. ನನ್ನ ಬಗ್ಗೆ ಬಹಳಷ್ಟು ಕೇಳಿದ್ದರು. 'ನೀವು ಇಷ್ಟು ಚಿಕ್ಕ ವಯಸ್ಸಿನವರಾಗಿರುವುದನ್ನು ನೋಡಿ ಆಶ್ಚರ್ಯಕರವೆನಿಸುತ್ತದೆ' ಎಂದು ಅಚ್ಚರಿಯ ಜತೆಗೆ ಮೆಚ್ಚುಗೆಯನ್ನೂ ವ್ಯಕ್ತಪಡಿಸಿದರು. 'ರಂಗೂನಿನಲ್ಲಿ ಪ್ಲೀಡರ್ ಆಗಿದ್ದೇನೆ. ಈಗ ಪೂರ್ಣ ಬ್ಯಾರಿಸ್ಟರ್ ಆಗುವ ಉದ್ದೇಶದಿಂದ ಇಲ್ಲಿಗೆ ಬಂದಿದ್ದೇನೆ. ನಾನು ಇಂಗ್ಲಿಷ್ ಸಂಗೀತ ಕಲಿಯಬೇಕು; ಜತೆಗೆ ಆಂಗ್ಲ ನೃತ್ಯ ಕಲಿಯಲು ತುಂಬ ಆಸಕ್ತಿ' ಎಂದರು. ನಾನು ಯಥಾಪ್ರಕಾರ ಆ ಬಗ್ಗೆ ಅಸಮ್ಮತಿ ಸೂಚಿಸಿದೆ. ಅತ್ಯಂತ ಮಹತ್ವದ ಸಂಗತಿಗಳು ಕಣ್ಣೆದುರಿಗಿರುತ್ತಾ ಅಂಥ ಮನೋರಂಜನೆಗಳಲ್ಲಿ ಯೌವನದ ಶಕ್ತಿ ಸಮಯಗಳನ್ನು ವ್ಯರ್ಥಗೊಳಿಸುವುದು ಸರಿಯಲ್ಲವೆಂದೆ. ನನ್ನ ಮಾತಿನ ರೀತಿಯಿಂದ ಅವರು ಪ್ರಭಾವಿತರಾದರೂ ನನ್ನ ಅಭಿಪ್ರಾಯ ಅವರಿಗೆ ಒಪ್ಪಿಗೆಯಾಗಲಿಲ್ಲ. ಆಗಾಗ್ಗೆ ಬರುತ್ತಿರುತ್ತೇನೆ ಎಂದು ಮಾತು ಕೊಟ್ಟು ಹೊರನಡೆದರು. ಅವರೇ ವಿ.ವಿ.ಎಸ್. ಅಯ್ಯರ್!



ವಿ.ವಿ.ಎಸ್. ಅಯ್ಯರ್

ಕೆಲವೇ ದಿನಗಳಲ್ಲಿ ಅಯ್ಯರ್ ಅತ್ಯಂತ ಆಪ್ತಮಿತ್ರರಾದರು. ಅವರ ಹಳೆಯ ವಿಚಾರಗಳೆಲ್ಲ ತಲೆ ಕೆಳಗಾದವು. ಅಭಿನವ ಭಾರತದ ಮಹತ್ವದ ಜವಾಬ್ದಾರಿಗಳನ್ನೂ ಅವರು ನಿರ್ವಹಿಸತೊಡಗಿದರು. ಅವರ ಮುಖದಲ್ಲಿ ಗಡ್ಡ ಹುಲುಸಾಗಿ ಶೋಭಿಸತೊಡಗಿತು. ನಾವೆಲ್ಲರೂ ಅವರನ್ನು ಗೌರವದಿಂದ 'ಋಷೀಜಿ' ಎಂದೇ ಕರೆಯಲಾರಂಭಿಸಿದೆವು. ಮದರಾಸಿನ ಡಾ. ರಾಜನ್, ಕೆ.ವಿ.ಆರ್. ಸ್ವಾಮಿ, ಡಬ್ಲ್ಯು.ವಿ. ಫಡಕೆ, ಸುಖಸಾಗರ ದತ್ತ, ಹರನಾಮಸಿಂಗ್, ಸಿಕಂದರ್ ಹಯಾತ್‌ಖಾನ್, ಜಯಸ್ವಾಲ್, ಮಣಿಲಾಲ್, ಬಾಬಾ ಜೋಷಿ, ಮಹೇಶಚರಣ ಸಿಂಹ ಮುಂತಾದ ನೂರಾರು ತರುಣರು ನಮ್ಮ ಗುಪ್ತಸಂಸ್ಥೆಯ ಶಪಥಬದ್ಧ ಸದಸ್ಯರಾದರು.

ಹಿಂದುಸ್ಥಾನದಿಂದ ಬರುತ್ತಿದ್ದ ಮುಸ್ಲಿಂ ವಿದ್ಯಾರ್ಥಿಗಳು ಸ್ವಾತಂತ್ರ್ಯ ಗಳಿಕೆಯ ಪ್ರಯತ್ನಗಳಿಗೆ ತೋರುತ್ತಿದ್ದ ಪ್ರತಿಕ್ರಿಯೆಯೂ ಗಮನಾರ್ಹ. ಅಬ್ದುಲ್ಲಾ ಸುಹ್ರಾವರ್ದಿ ಹೋಂ ರೂಲ್ ಸೊಸೈಟಿಯ ಉಪಾಧ್ಯಕ್ಷರಾಗುತ್ತಲೇ ಅವರಿಗೆ ಜರ್ಮನಿಯಲ್ಲಿದ್ದ ಅವರ ಮಿತ್ರ ಜಿಯಾ ಉದ್ದೀನ್ ಅಹಮದ್ 1906ರ ಏಪ್ರಿಲ್ 6ರಂದು ಬರೆದ ಪತ್ರ ಹೀಗಿತ್ತು : 'ಅಲಿಘಡದಿಂದ ಬಂದಿರುವ ನಮಗೊಂದು ನಿಶ್ಚಿತ ರಾಜಕೀಯ ಧೋರಣೆಯಿದೆ. ಅದೇ ಸರ್ ಸಯ್ಯದ್ ಅಹಮದರು ರೂಪಿಸಿರುವ ಧೋರಣೆ. ಅದು ನಿಮಗೆ ಗೊತ್ತಿರಬೇಕು.... ಶ್ರೀ ಕೃಷ್ಣವರ್ಮ ಇಂಡಿಯನ್ ಹೋಂ ರೂಲ್ ಸೊಸೈಟಿ ಸ್ಥಾಪಿಸಿದ್ದಾರೆಂದೂ, ಅದರ ಉಪಾಧ್ಯಕ್ಷರಲ್ಲಿ ನೀವೂ ಒಬ್ಬರೆಂದೂ ತಿಳಿದುಬಂತು. ಹಿಂದುಸ್ಥಾನಕ್ಕೆ ಹೋಂ ರೂಲ್ ಸಿಕ್ಕಿದರೆ ಅದರಿಂದ ಮುಸಲ್ಮಾನರಿಗೆ ಲಾಭವಾಗುತ್ತದೆಂದು ನಿಜಕ್ಕೂ ನಿಮಗೆ ನಂಬಿಕೆ ಇದೆಯೆ ? ........ ಅಲಿಘಡದ ನೀತಿಗೆ ''ಹೋಂ ರೂಲ್'' ತದ್ವಿರುದ್ಧವಾಗಿದೆ ಎಂಬುದರಲ್ಲಿ ಸಂದೇಹವೇ ಇಲ್ಲ..... ಅಲಿಘಡದ ಧೋರಣೆ ಎನ್ನುವುದು ಸರ್ವಸಾಮಾನ್ಯ ಮುಸಲ್ಮಾನರೆಲ್ಲರ - ಅದರಲ್ಲೂ ಉತ್ತರ ಭಾರತದ ಮುಸಲ್ಮಾನರ - ಧೋರಣೆಯಾಗಿದೆ.'

ಪಂ|| ಶ್ಯಾಮಜಿಯವರ ನೆರವು ಪಡೆದಿದ್ದ ಅಸಫ್ ಅಲಿಯವರು 14.4.1909ರಂದು ಶ್ಯಾಮಜಿಯವರಿಗೆ ಬರೆದ ಪತ್ರ ಇದು : 'ನಾನು ಕೆಲವು ಮುಸಲ್ಮಾನ ಸ್ನೇಹಿತರೊಡನೆ ವಾಸಿಸುತ್ತಿದ್ದೇನೆ. ರಾಷ್ಟ್ರೀಯವಾದಿಗಳೊಡನೆ ನಾನು ಸಂಪರ್ಕ ಇಟ್ಟುಕೊಳ್ಳುವುದು ಅವರಿಗೆ ಇಷ್ಟವಿಲ್ಲ. ಅನೇಕ ಅನಿಷ್ಟ ಪರಿಣಾಮಗಳನ್ನು ತಪ್ಪಿಸುವ ದೃಷ್ಟಿಯಿಂದ, ಅನಗತ್ಯವಾಗಿ ಅವರ ಮನನೋಯಿಸಲು ನನಗೆ ಇಷ್ಟವಿಲ್ಲ.'

ದಕ್ಷಿಣ ಆಫ್ರಿಕದಲ್ಲಿದ್ದ ಮೋಹನದಾಸ ಗಾಂಧಿಯವರೂ ಶ್ಯಾಮಜಿಯವರಿಗೆ ಪರಿಚಿತರು. ಗಾಂಧೀಜಿ 1906ರ ನವೆಂಬರಿನಲ್ಲಿ ಲಂಡನ್ನಿಗೆ ಬಂದಿದ್ದರು. ಆಗ ಅವರು ಭಾರತ ಭವನದಲ್ಲಿ ಜರುಗುತ್ತಿದ್ದ ಭಾನುವಾರದ ಚರ್ಚೆಗಳಲ್ಲೂ ಭಾಗವಹಿಸುತ್ತಿದ್ದರು. ಆಗ ಸ್ವಾತಂತ್ರ್ಯ ಸಾಧನೆಗಾಗಿ ಅವರು ಮಂಡಿಸುತ್ತಿದ್ದ ಸತ್ಯಾಗ್ರಹದ ಸಿದ್ಧಾಂತವನ್ನು ಬೆಂಬಲಿಸಲು ಯಾರೂ ಮುಂದೆ ಬರುತ್ತಿರಲಿಲ್ಲ. ವೈಜ್ಞಾನಿಕವಾಗಿ ಹಾಗೂ ವ್ಯಾವಹಾರಿಕವಾಗಿ ಅದು ಹೇಗೆ ಸೀಮಿತವೂ, ದೋಷಪೂರ್ಣವೂ ಆಗಿದೆಯೆಂಬುದನ್ನು ರಾಷ್ಟ್ರನಿಷ್ಠ ತರುಣರು ತೋರಿಸಿಕೊಡುತ್ತಿದ್ದರು. ತಮ್ಮ ಆಪ್ತಮಿತ್ರರೆಲ್ಲರೂ ಶ್ಯಾಮಜಿಯವರ ಪಂಗಡ ಸೇರಿರುವುದನ್ನು ಕಂಡು ಗಾಂಧೀಜಿ ಸಹಜವಾಗಿ ಖೇದಗೊಳ್ಳುತ್ತಿದ್ದರು. ಆ ಬಗ್ಗೆ ಅವರು ಗೆಳೆಯರಿಗೆ ಪತ್ರಗಳನ್ನೂ ಬರೆಯುತ್ತಿದ್ದರು.





# ಹವಿಸ್ಸು ಹದಿಮೂರು

'ಲಂಡನ್ ಟವರ್' ಕಟ್ಟಡ ಬಹು ಪ್ರಸಿದ್ಧ ಅಲ್ಲೊಂದು ಶಸ್ತ್ರ ಸಂಗ್ರಹಾಲಯವಿದೆ ಅಲ್ಲಿ ಶಿವಛತ್ರಪತಿಯ ವ್ಯಾಘ್ರನಖವನ್ನು ಪ್ರದರ್ಶನಕ್ಕೆ ಇಟ್ಟಿದ್ದಾರೆ ಎಂಬ ಮಾತು ಜನಜನಿತವಾಗಿತ್ತು 1907ರ ಪ್ರಾರಂಭದ ಮಾತು , ಒಮ್ಮೆ ಅಲ್ಲಿ ಹೋಗಿ ಅದನ್ನು ನೋಡಬೇಕೆಂಬ ಉತ್ಸಾಹ ಬಂತು ಆದರೆ ಮರುಕ್ಷಣವೇ ನನ್ನ ಉತ್ಸಾಹವೆಲ್ಲ ತಣ್ಣಗೆ ಹೆಪ್ಪುಗಟ್ಟಿಹೋಯಿತು ! ಏಕೆ ಅನ್ನುವಿರೊ ? ಅದಾದರೋ ಹಿಂದುಸ್ಥಾನದ ಪಾರತಂತ್ರ್ಯದ ಕರುಳನ್ನೇ ಬಗೆದು ಹೊರಗೆ ಹಾಕಿದಂಥ ವ್ಯಾಘ್ರನಖ , ಮರಾಠಾ ವ್ಯಾಘ್ರ ಶಿವ ಭೂಪತಿಯ ಪಾವನ ಕರಸ್ಪರ್ಶದಿಂದ ಪವಿತ್ರವಾದ ವ್ಯಾಘ್ರನಖ ! ಶ್ರೀಕೃಷ್ಣನು ಅರ್ಜುನನಿಗೆ ದಿವ್ಯದೃಷ್ಟಿ ಕೊಟ್ಟಾಗಲೂ, ವಿಶ್ವರೂಪವನ್ನು ಸರಿಯಾಗಿ ನೋಡಲು ಅರ್ಜುನನಿಂದಾಗಲಿಲ್ಲ ಇನ್ನು ನನ್ನ ಈ ಗುಲಾಮಗಿರಿಯ ದೃಷ್ಟಿಗೆ ಆ ವ್ಯಾಘ್ರನಖದ ಕಡೆಗೆ ನೋಡುವ ಧೈರ್ಯವಾದರೂ ಎಲ್ಲಿ ಬರಬೇಕು ? ಅದನ್ನು ನೆನಸಿಕೊಂಡೇ ನನಗೆ ನಡುಕ ಹುಟ್ಟಿತು. ಕೈಕಾಲು ಕುಸಿಯತೊಡಗಿತು. ಗುಲಾಮಗಿರಿಯಲ್ಲಿ ಬಿದ್ದಿರುವ ನಾನು ಯಾವ ಮುಖದಿಂದ ಅದನ್ನು ನೋಡಲಿ ? ಇತಿಹಾಸ ಓದಿದ್ದುದರಿಂದ ಒಂದು ಸಂಗತಿಯಂತೂ ಮನದಟ್ಟಾಗಿತ್ತು ಆ ನಖಕ್ಕೆ ಗುಲಾಮಗಿರಿ ಯಾರಲ್ಲಿದ್ದರೆ ಅವರ ರಕ್ತ ಹೀರುವ ಚಟ ಹತ್ತಿಬಿಟ್ಟಿತ್ತು ಆ ವಿಷಯ ಗೊತ್ತಿದ್ದೂ ಅತ್ತಕಡೆ ಹೇಗೆ ಸುಳಿಯಲಿ ? ಹೇಗೋ ಅವಿತುಕೊಂಡಾದರೂ ಅದರ ದರ್ಶನ ಪಡೆಯೋಣ ಎಂದರೆ, ಅದರ ಕಡೆಗಣ್ಣಿನ ನೋಟ ನನ್ನ ಮೇಲೆ ಬಿದ್ದರೆ ಏನು ಗತಿ ? ನಾನು ಅದರ ಕಣ್ಣಿಗೆ ಬೀಳದಿದ್ದರೂ ಗುಲಾಮಗಿರಿಯ ವಾಸನೆ ತಾಗುತ್ತಲೇ - ಕಂಬ ಸೀಳಿಕೊಂಡು ಬಂದ ನರಸಿಂಹನಂತೆ ಅದು ಸಿಡಿದು ನಿಂತು ಗರ್ಜಿಸದೆ ಇದ್ದೀತೆ ?

ಅಫಜಲಖಾನನ ರಕ್ತವನ್ನು ಯಥೇಚ್ಛವಾಗಿ ಕುಡಿದಿದ್ದರೂ, ಅದು ನಿದ್ರೆಹೋಗಿ ಬಹುಕಾಲವಾಯಿತು. ಈಗ ಆಗಿನದೆಲ್ಲ ಜೀರ್ಣವಾಗಿ, ಅದರ ಕ್ಷುತ್ಪಿಪಾಸೆ ಕೆರಳುವ ಸಮಯ , ಇನ್ನೇನು ಅದು ಏಳುವ ಗಳಿಗೆ ಸಮೀಪಿಸುತ್ತಿದೆ ಜತೆಗೆ ಅದಕ್ಕೆ ಒಮ್ಮೆ ಗುಲಾಮಗಿರಿಯ ರಾಕ್ಷಸನ ರಕ್ತದ ರುಚಿ ಬೇರೆ ಹತ್ತಿದೆ ನಾನು ಸಮೀಪಿಸುತ್ತಲೇ ಮೇಲೆ ಹಾರಿ, ದಾಸ್ಯದ ಕಲಂಕ ಹತ್ತಿರುವ ನನ್ನ ರಕ್ತವನ್ನೆಲ್ಲ ಗಟಗಟನೆ ಹೀರದೆ ಇದ್ದೀತೆ ? ಭಯವಾಯಿತು. ಆದರೆ ಕ್ಷಣಾರ್ಧದಲ್ಲಿ ಭಯವೆಲ್ಲ ಓಡಿಹೋಯಿತು ಈ ಅಸಹ್ಯ ದಾಸ್ಯದಲ್ಲಿ ಕೊಳೆಯುವುದಕ್ಕಿಂತ ಶಿವಾಜಿ ಮಹಾರಾಜರ ವ್ಯಾಘ್ರನಖದಿಂದ ಸಾಯುವುದೇ ಎಷ್ಟೋ ಮೇಲ


ಲಂಡನ್ನಿನಲ್ಲಿ

ಲ್ಲವೆ? ಉತ್ಸಾಹದಿಂದ ಅದರ ದರ್ಶನಕ್ಕೆ ಹೊರಟೆ. ಅಷ್ಟರಲ್ಲೆ ಅದಕ್ಕೆ ಒಪ್ಪಿಸಲು ಏನಾದರೂ ಕಾಣಿಕೆ ತೆಗೆದುಕೊಂಡು ಹೋಗಬೇಕೆನಿಸಿತು. ಆದರೆ ಅದಕ್ಕೆ ಬೇಕಾದ ಕಾಣಿಕೆ ಒಂದೇ ಒಂದು - ಶತ್ರುವಿನ ರಕ್ತ! ಅದನ್ನು ಎಲ್ಲಿಂದ ತರಲಿ? ಹೇಗೆ ಸಿಕ್ಕೀತು?

ವ್ಯಾಘ್ರನಖದ ಕಡೆ ನೋಡಿದೆ. ಅದು ಅಲುಗಾಡಲಿಲ್ಲ. ನನಗೆ ಸಂಶಯವಾಯಿತು. ಇನ್ನೂ ಹತ್ತಿರ ಹೋದೆ; ಅಲ್ಲಿದ್ದ ವಿವರಣೆಯನ್ನೂ ಓದಿದೆ; 'ವ್ಯಾಘ್ರನಖ ಅಥವಾ ಹುಲಿಯ ಉಗುರು; ಕೈಯೊಳಗೆ ಅಡಗಿಸಿಟ್ಟುಕೊಳ್ಳುವ ಆಯುಧ. ಇಂತಹ ಆಯುಧದಿಂದಲೇ ಸುಪ್ರಸಿದ್ಧ ಶಿವಾಜಿಯು ಬಿಜಾಪುರದ ಸೇನಾಧಿಪತಿ ಅಫಜಲಖಾನನನ್ನು ಕೊಂದಿದ್ದು. ಇಲ್ಲಿರುವುದು ಮೈಸೂರು ಕಡೆಯಿಂದ ತಂದಿದ್ದು; ಅಲ್ಲಿನ ದರೋಡೆಗಾರರು ಉಪಯೋಗಿಸುವಂಥದು.'

ಫುಸ್! ಇಷ್ಟೇ ಏನು? ನಿರಾಶೆಯಾಯಿತು. ಆದರೆ ಕೂಡಲೆ ಮನಸ್ಸಿಗೆ ಸಮಾಧಾನವೂ ಆಯಿತು. ಛತ್ರಪತಿಯ ಪ್ರಚಂಡ ವ್ಯಾಘ್ರನಖ 'ಲಂಡನ್ ಟವರ್'ನ ಸೆರೆಯಲ್ಲಿ ಬಿದ್ದಿರುವುದಕ್ಕಿಂತ ಹೊರಗಿರುವುದೇ ಒಳ್ಳೆಯದು. ನನಗಿಂದ ಹಿಂದುಸ್ಥಾನಕ್ಕೆ ಅದರ ದರ್ಶನ ಹೆಚ್ಚು ಅಗತ್ಯವಿದೆ. ದಾಸ್ಯದ ಹೊಟ್ಟೆಯನ್ನು ಸೀಳುವುದಕ್ಕಾಗಿಯೇ - ಸೀಳಿಕೊಂಡೇ - ಅದು ಪ್ರತ್ಯಕ್ಷವಾಗುವಂಥದು. ನಿಜಕ್ಕೂ ವ್ಯಾಘ್ರನಖ ಇರುವುದು ಪ್ರದರ್ಶನಕ್ಕಲ್ಲ, ಕೈಯಲ್ಲಿ ಧರಿಸುವುದಕ್ಕೆ; ಪಾರತಂತ್ರ್ಯದ ಸಂಹಾರಕ್ಕೆ! ಆ ಕಾರ್ಯಕ್ಕೆ ಸಿದ್ಧರಾದವರಿಗೆ ವ್ಯಾಘ್ರನಖ ಪ್ರತ್ಯಕ್ಷವಾಗುವುದು ಎಷ್ಟು ಹೊತ್ತು? ನಕಲ ಸಿದ್ಧತೆಗಳನ್ನೂ ಮಾಡಿಕೊಂಡು, ಪ್ರತಾಪಗಡದ ಭವಾನಿ ದೇವಿಯ ದರ್ಬಾರಿಗೆ ಅರ್ಜಿ ಹಾಕಿಕೊಂಡರೆ, ಅದು ಸಿಕ್ಕುವುದು ಎಷ್ಟು ಹೊತ್ತು?

ಹೀಗೆಯೇ ಭಾವಸಮಾಧಿಯಲ್ಲಿ ಮುಳುಗಿಹೋಗಿದ್ದೆ. ಆಂಗ್ಲನೊಬ್ಬ ಭುಜ ಅಲುಗಿಸಿ ಹೇಳಿದ: 'ನೋಡಿ, ನಿಮ್ಮ ದೇಶದ ಶೂರನೊಬ್ಬನ ಖಡ್ಗ ಅದು.' ಕಣ್ಣರಳಿಸಿ ನೋಡಿದೆ. ಛೀ, ಶೂರನಲ್ಲ, ಅವನೊಬ್ಬ ಕ್ರೂರ! ಆ ದೈತ್ಯ ಟಿಪ್ಪು ಸುಲ್ತಾನ ಹಿಂದುಗಳ ಮೇಲೆ ಧಾರ್ಮಿಕ ಅತ್ಯಾಚಾರ ನಡೆಸಿದ. ಹಿಂದು ಸ್ತ್ರೀಯರನ್ನು ಕೆಡಿಸಿದ. ಹಿಂದು ದೇವತೆಗಳನ್ನು ಒಡೆಸಿದ. ಒಮ್ಮೆಯಂತೂ 24 ಗಂಟೆಯೊಳಗೆ 50 ಸಾವಿರ ಹಿಂದುಗಳನ್ನು ಮತಾಂತರಗೊಳಿಸಿದ. ಅದೊಂದು ಹೆಮ್ಮೆಯ ಸಾಧನೆ ಎಂದು ಘೋಷಿಸಿದ. ಶೌರ್ಯಕ್ಕೂ, ಕ್ರೌರ್ಯಕ್ಕೂ ಬ್ರಿಟಿಷರು ಭೇದ ಅರಿಯರು. ಏಕೆಂದರೆ ಟಿಪ್ಪು ಸುಲ್ತಾನನಂತೆಯೇ ಅವರೂ ಆಕ್ರಮಕ ಜಾತಿಯವರು. ನಾನು ಭಾರವಾದ ಮನಸ್ಸಿನಿಂದ ಭಾರತ ಭವನಕ್ಕೆ ಮರಳಿದೆ.

ಆ ದಿನಗಳಲ್ಲಿ ಹಿಂದುಸ್ಥಾನವನ್ನು ಸಂಬೋಧಿಸಿ ಮನಸ್ಸಿನಲ್ಲಿ ಮಾತನಾಡಿಕೊಳ್ಳುತ್ತಿದ್ದೆ: 'ದೇವರು ನಿನಗೆ ಭಾರತದಂತಹ ವಿಸ್ತೀರ್ಣ ಭೂಮಿ ಕೊಟ್ಟಿದ್ದಾನೆ. ಗಂಗೆ, ಯಮುನೆ, ಗೋದಾವರಿ, ಕಾವೇರಿ, ಸಿಂಧು, ಬ್ರಹ್ಮಪುತ್ರಾ ಮುಂತಾದ ಅಖಂಡ ನಾಲೆಗಳನ್ನು ನಿರ್ಮಿಸಿಟ್ಟಿದ್ದಾನೆ. ಆ ಭೂಮಿಯಲ್ಲಿ ಆ ನೀರಿನಿಂದ ನಿನ್ನ ಪೂರ್ವಜರು ಧನಧಾನ್ಯ ಮಾತ್ರವಲ್ಲ, ಪ್ರತ್ಯಕ್ಷ ಬಂಗಾರವನ್ನೇ ಬೆಳೆದಿದ್ದಾರೆ. ನೀನೇ ಸ್ವತಃ ಬೇಸಾಯ ಮಾಡಿದ್ದಾದರೆ ಅದೇ ಬಗೆಯ ಹೊನ್ನು ಬೆಳೆದೀತು. ಆದರೆ ಬೇರೆಯವರ ಕೈಗೆ ಬಿಟ್ಟಿದ್ದಾದರೆ ಪ್ಲೇಗು, ಕ್ಷಾಮ, ಪಾರತಂತ್ರ್ಯ ಬೆಳೆದೀತು! ಇದು ಭಗವಂತನ ಆದೇಶ. ಅದನ್ನು ಪಾಲಿಸಿದ್ದೇ ಆದರೆ,

ಹೇ ಹಿಂದುಸ್ಥಾನ! ಮುಂದಿನ ಬೆಳೆಗೆ ಈ ದಿವ್ಯ ಹೊಲದಲ್ಲಿ - ಮಳೆ ಬರಲಿ, ಬಾರದಿರಲಿ - ಕೊಹಿನೂರು ಬೆಳೆಯಬಲ್ಲೆ, ಮಯೂರಾಸನ ಬೆಳೆಯಬಲ್ಲೆ; ಕಾಳಿದಾಸನನ್ನು ಪಡೆಯಬಲ್ಲೆ, ಶಿವಾಜಿಯನ್ನೂ ಪಡೆಯ ಬಲ್ಲೆ!'

1907ರ ಪ್ರಾರಂಭದ ಹೊತ್ತಿಗೆ ಲಂಡನ್ನಿನಲ್ಲಿದ್ದ ಭಾರತೀಯ ತರುಣರು ಸಾಕಷ್ಟು ಜಾಗೃತ ಗೊಂಡಿದ್ದರು. ಹಿಂದುಸ್ಥಾನದಂತಹ ಭಾಗ್ಯಶಾಲಿ, ನಿಸರ್ಗಸುಂದರ ದೇಶ ; ಅದರಲ್ಲಿ ಹಿಂದುಗಳಂತಹ ಪ್ರಾಚೀನರೂ, ನೀತಿ ಸಂಪನ್ನರೂ, ಪ್ರೇಮ ಹೃದಯರೂ, ಶೂರರೂ ಆದ ಶ್ರೇಷ್ಠ ಜನಾಂಗ - ಇವೆರಡರ ಜೋಡಿ ದೊರೆತಿರುವುದು ನಿಜಕ್ಕೂ ಅದೃಷ್ಟಕರ ಎಂದು ಅವರು ಅರಿತುಕೊಂಡರು. ಸ್ವದೇಶಾಭಿಮಾನದ ಜ್ಯೋತಿ ಅವರ ಹೃದಯಮಂದಿರದಲ್ಲಿ ಬೆಳಗತೊಡಗಿತ್ತು. ಆಂಗ್ಲ ಸಾಮ್ರಾಜ್ಯನಿಷ್ಠರ ಸಭೆಗಳಲ್ಲಿ ವಿರೋಧದ ಸ್ವರ ಏಳತೊಡಗಿತು. ಐಷಾರಾಮವಾಗಿ ತಿರುಗಾಡಿಕೊಂಡು, ಬ್ರಿಟಿಷರ ಕುನ್ನಿಗಳಂತೆ ಬಾಲ ಮುದುರಿಕೊಂಡಿದ್ದ ಭಾರತೀಯ ವಿದ್ಯಾರ್ಥಿಗಳಿಗೂ ಈಗ ಗಂಡಸುತನ ಬಂದಿತ್ತು. ಅದರ ಕೀರ್ತಿಯೆಲ್ಲ ಭಾರತಭವನದಲ್ಲಿ ನಡೆಯುತ್ತಿದ್ದ ಭಾನುವಾರದ ಉಪನ್ಯಾಸಗಳಿಗೆ ಸಲ್ಲಬೇಕು.

  

1857ರ ಸ್ವಾತಂತ್ರ್ಯ ಸಂಗ್ರಾಮ ಪ್ರಾರಂಭವಾದದ್ದು ಮೇ 10ರಂದು. ಕ್ರಾಂತಿ ಸೈನಿಕರು ಮೀರತ್ತಿನಲ್ಲಿ ಬಿಳಿ ಸೈನಿಕರ ವಿರುದ್ಧ ಕತ್ತಿ ಹಿರಿದ ದಿನ ಅದು. ಆ ಕ್ರಾಂತಿಯನ್ನು ಅಡಗಿಸಿದ 1859ರ ಮೇ 1ನ್ನು ಅಭಿನಂದನಾ ದಿನ *(Thanksgiving Day)* ಆಗಿ ಎಲ್ಲೆಡೆ ಆಚರಿಸಲು ಆಂಗ್ಲ ಸರಕಾರ ನಿರ್ಧರಿಸಿತ್ತು. ಇಂಗ್ಲೆಂಡಿಗೆ ಅದೊಂದು ರೀತಿಯಲ್ಲಿ ಹೆಮ್ಮೆಯಿಂದ ಬೀಗುವ ವಿಜಯೋತ್ಸವದ ದಿನ ! 1859ರ ಏಪ್ರಿಲ್‌ನಲ್ಲಿ ಲಂಡನ್ನಿನ ಡಾ. ರಿಚರ್ಡ್ ಕಾಂಗ್ರೀವ್ ಎಂಬ ವಿಚಾರವಂತ ವ್ಯಕ್ತಿ ಅದನ್ನು ವಿರೋಧಿಸಿದ್ದ; ಒಂದು ನಿರ್ಭೀಕ ಪತ್ರ ಪ್ರಕಟಿಸಿ ಹಂಚಿದ್ದ :

'ನನ್ನ ಅಭಿಪ್ರಾಯದಲ್ಲಿ ಹಿಂದುಸ್ಥಾನದಲ್ಲಿ ಬ್ರಿಟಿಷರು ಮಾಡಿದ್ದು ನಿಜಕ್ಕೂ ಅನ್ಯಾಯ. ಹಿಂದುಗಳು ತಮ್ಮನ್ನು ಮೆಟ್ಟಿ ಆಳುತ್ತಿರುವ ಪರಕೀಯ ಶಾಸನದ ನೊಗವನ್ನು ಕಿತ್ತೆಸೆಯಲು ನೀತಿಸಮ್ಮತವಾಗಿ ನಡೆಸಿದ ರಾಷ್ಟ್ರೀಯ ಪ್ರಯತ್ನವು ನ್ಯಾಯಸಮ್ಮತವೂ ಆಗಿದೆ. ಆದ್ದರಿಂದ ಇಂಗ್ಲಿಷರ ಜಯವೆಂದರೆ ನ್ಯಾಯದ ಮೇಲೆ ಆಸುರೀ ಶಕ್ತಿಯ ಗೆಲುವು.

'ಎರಡನೆಯದಾಗಿ, ಒಂದು ವೇಳೆ ನ್ಯಾಯ ನಮ್ಮ ಕಡೆಗಿದ್ದರೂ, ಅದಕ್ಕೂ ಕಳಂಕ ಹತ್ತಿದೆ. ಸುಳ್ಳು ಹಾಗೂ ತಪ್ಪು ತಿಳಿವಳಿಕೆಯ ಪ್ರಚಾರ, ಭೀಕರ ದ್ವೇಷಬುದ್ಧಿ ಇತ್ಯಾದಿಗಳಿಂದ ಇಂಗ್ಲೆಂಡಿನ ರಾಜಕಾರಣವು ಕುಲಗೆಟ್ಟು ಹೋಗಿದೆ. ಹಿಂದುಸ್ಥಾನದಲ್ಲಿ ನಾವು ಅಮಾನುಷ ಕ್ರೂರಕೃತ್ಯಗಳನ್ನು ಎಸಗಿದ್ದರಿಂದ, ಅಲ್ಲಿನ ರಾಜ್ಯಾಡಳಿತಕ್ಕೂ ಮಸಿ ಹತ್ತಿದೆ. ಅದರಿಂದ ಇಂಗ್ಲಿಷರಾದ ನಾವು ನೈತಿಕವಾಗಿ ಅಧಃಪತನ ಹೊಂದಿ ಇಡೀ ಜಗತ್ತಿನ ಕಣ್ಣಿನಲ್ಲಿ ಮಾನಹೀನರಾಗಿದ್ದೇವೆ.

'ಕೊನೆಯದಾಗಿ, ಇಂಗ್ಲಿಷರಿಗೆ ದೊರೆತ ವಿಜಯದಿಂದ ಇಂಗ್ಲೆಂಡ್‌ಗೆ ಅನೇಕ ಗಂಡಾಂತರಗಳು ಪ್ರಾರಂಭವಾಗಲಿವೆ. ಮೊದಲೇ ಕರಭಾರದಿಂದ ಕುಗ್ಗುತ್ತಿರುವ ಹಾಗೂ ಈ ದೇಶದ ಔದ್ಯೋಗಿಕ ರಂಗ ದಲ್ಲಿ ಜೀವ ತೇಯುತ್ತಿರುವ ಬಡಜನರ ಹೊರೆ ಈ ವಿಜಯದಿಂದ ಇನ್ನಷ್ಟು ಹೆಚ್ಚುತ್ತದೆ. ಅಲ್ಲದೆ, ಸೈನ್ಯಕ್ಕೆ ಸೇರುವವರೂ ಆ ವರ್ಗದವರೇ ಆದುದರಿಂದ ಇನ್ನೂ ಹೆಚ್ಚಿನ ಪ್ರಾಣಹಾನಿಯ ಗಂಡಾಂತರವೂ ಅವರಿಗೆ

ತಪ್ಪಿದ್ದಲ್ಲ.

'ಈ ಎಲ್ಲ ಅಪರಾಧಗಳಿಂದ ಸ್ವತಃ ಮುಕ್ತನಾಗಲು ಮತ್ತು ಆ ಬಗ್ಗೆ ಇತರರೂ ಆಲೋಚಿಸುವಂತೆ ಮಾಡಲು ನಾನು ಈ ಮೂಲಕ ಕೈಲಾದ ಮಟ್ಟಿಗೂ ಪ್ರಯತ್ನಿಸುತ್ತಿದ್ದೇನೆ ಮೇ 1ರ ಅಭಿನಂದನಾ ದಿನವನ್ನು ಸರ್ವ ಮಾನವಜಾತಿಯ ಹೆಸರಿನಲ್ಲಿ ನಾನು ಧಿಕ್ಕರಿಸುತ್ತೇನೆ. ಸ್ವತಂತ್ರ ಜನಾಂಗವೆಂದು ಬಡಾಯಿ ಕೊಚ್ಚುವ ನಮ್ಮ ರಾಷ್ಟ್ರೀಯ ನಡವಳಿಕೆಗೂ ಅದು ಒಪ್ಪುವಂಥದಲ್ಲ. ನಮ್ಮ ರಾಷ್ಟ್ರವು ಇನ್ನೂ ಗೌರವಿಸುವ ಈಸಾಯಿ ತತ್ವಗಳಿಗೂ ಅದು ವಿರುದ್ಧವಾಗಿದೆ ಮತ್ತು ಮಾನವ ಸಮಾಜದ ಸಕಲ ಉದಾತ್ತ ಭಾವನೆಗಳಿಗೂ ಮಾರಕವಾಗಿದೆ.'

ಪಂ. ಶ್ಯಾಮಜಿ ಕೃಷ್ಣವರ್ಮರು ಈ ಪತ್ರಕವನ್ನು 1905ರ ಏಪ್ರಿಲ್‌ನಲ್ಲಿ ಪುನರ್ಮುದ್ರಿಸಿದ್ದರು. ಒಂದು ಹಳೆಯ ವಿಚಾರಕ್ಕೆ ಹೊಸ ಚಾಲನೆ ನೀಡಿದ್ದರು ಹಿಂದುಸ್ಥಾನವು ಸ್ವತಂತ್ರವಾಗುವುದನ್ನು ತಮ್ಮ ಕಣ್ಣೆದುರಿಗೇ ನೋಡಬೇಕೆಂಬುದು ಶ್ಯಾಮಜಿಯವರ ಉತ್ಕಟೇಚ್ಛೆ. 23-2-1907ರಂದು ಇಂಡಿಯನ್ ಹೋಂ ರೂಲ್ ಸೊಸೈಟಿಯ ಎರಡನೆ ವಾರ್ಷಿಕ ಸಭೆ ನಡೆದಾಗ ತಮ್ಮ ಮನದಾಸೆಯನ್ನು ಅವರು ಬಿಚ್ಚಿ ಹೇಳಿದರು. ಹಿಂದುಸ್ಥಾನದಾದ್ಯಂತ ಸ್ವಾತಂತ್ರ್ಯ ಮಂತ್ರವನ್ನು ಸಾರುತ್ತಾ ಸಂಚರಿಸಬಲ್ಲ ರಾಷ್ಟ್ರೀಯ ಸಂನ್ಯಾಸಿಗಳ ನೆರವಿಗಾಗಿ 10 ಸಹಸ್ರ ರೂ.ಗಳನ್ನು ತಾವು ನೀಡುವುದಾಗಿಯೂ ಅವರು ಘೋಷಿಸಿದರು. ಅದಕ್ಕೂ ಎರಡು ತಿಂಗಳ ಮೊದಲು, ಸ್ವತಂತ್ರ ಹಿಂದುಸ್ಥಾನದಲ್ಲಿ ಸ್ವರಾಜ್ಯ ರಚನೆ ಹೇಗಿರಬೇಕೆಂಬ ಮಹತ್ವದ ವಿಷಯದ ಬಗ್ಗೆ ಉತ್ತಮ ಪ್ರಬಂಧ ಬರೆಯುವವರಿಗಾಗಿ ಅವರು 750 ರೂ. ಪುರಸ್ಕಾರ ಧನ ತೆಗೆದಿಟ್ಟಿದ್ದರು.

ಮೇ 9ರಂದು ಲಾಲಾ ಲಜಪತರಾಯ್ ಬಂಧಿಸಲ್ಪಟ್ಟರು. ಅವರನ್ನು ಬ್ರಹ್ಮದೇಶದ ಮಂಡಾಲೆ ಸೆರೆಮನೆಯಲ್ಲಿಡಲಾಯಿತು. ಅದರ ವಿರುದ್ಧವಾಗಿ ಲಂಡನ್ನಿನಲ್ಲೂ ನಾವು ಭಾರಿ ಪ್ರತಿಭಟನಾ ಸಭೆ ನಡೆಸಿದೆವು. ಆ ವೇಳೆಗೆ ಶ್ಯಾಮಜಿ ಅಭಿನವಭಾರತದ ಶಪಥಬದ್ಧ ಸದಸ್ಯರಾಗಿದ್ದರು. ಸರಕಾರದ ಆಕ್ರೋಶವನ್ನು ಗಮನಿಸಿದ ಅವರಿಗೆ, ತಾವಿನ್ನು ಇಂಗ್ಲೆಂಡಿನಲ್ಲಿರುವುದು ಕ್ಷೇಮವಲ್ಲ ಎನಿಸಿತು. 'ಕೆಸರಿನಲ್ಲಿ ಕಾಲಿಟ್ಟು ಅನಂತರತೊಳೆದುಕೊಳ್ಳುವುದಕ್ಕಿಂತ, ಕಾಲಿಡದಿರುವುದೇ ಉತ್ತಮ' ಎಂಬುದು ಅವರ ಸಿದ್ಧಾಂತ. ಅದಕ್ಕಾಗಿ ಮೇ ಮೂರನೆಯ ವಾರದಲ್ಲಿ ಅವರು ಸಂಸಾರ ಸಮೇತ ಪ್ಯಾರಿಸಿಗೆ ಹೋಗಿ ನೆಲಸಿದರು. ಭಾರತ ಭವನದ ಸಮಸ್ತ ಮೇಲ್ವಿಚಾರಣೆಯನ್ನು ನನಗೆ ವಹಿಸಿದರು.

ಅದೇ ವೇಳೆಗೆ ಆಂಗ್ಲ ಪತ್ರಿಕೆಗಳು ಶ್ಯಾಮಜಿಯವರನ್ನು 'ರಾಜದ್ರೋಹಿ' ಎಂದು ಶಪಿಸತೊಡಗಿದವು. ಚಿರೋಲ್ ಸಾಹೇಬನು ತನ್ನ 'ಇಂಡಿಯನ್ ಅನ್‌ರೆಸ್ಟ್' ಪುಸ್ತಕದಲ್ಲಿ, 'ಕೃಷ್ಣವರ್ಮರು ಇಂಗ್ಲಿಷ್ ಕಡಲ್ಗಾಲುವೆಯನ್ನು ದಾಟಿ ಆ ಕಡೆಗೆ ವಲಸೆ ಹೋದಾಗಿನಿಂದ ಅಲ್ಲೊಂದು ಸಂಸ್ಥೆ ಸ್ಥಾಪಿಸಿದ್ದಾರೆ. ಇಂಗ್ಲೆಂಡಿಗೆ ಬರುವ ಯುವಕರನ್ನು ನಡುದಾರಿಯಲ್ಲೇ ಹಿಡಿದುಹಾಕಿ, ಅವರ ತಲೆಗೆ ತಮ್ಮ ವಿಚಾರ ತುಂಬಿ, ಅವರು ಲಂಡನ್ನಿಗೆ ಬರುವ ಹೊತ್ತಿಗೆ ಇಲ್ಲಿ ಅವರ ಸ್ನೇಹಿತರಾಗಲಿಚ್ಛಿಸುವವರಿಂದ ಅವರನ್ನು ದೂರ ಉಳಿಯುವಂತೆ ಮಾಡುವುದೇ ಶ್ಯಾಮಜಿಯವರ ಉದ್ದೇಶ' ಎಂದು ವಿಷ ಕಾರಿದ.

ಅದೇ ಸುಮಾರಿನಲ್ಲಿ ಸರದಾರಸಿಂಹಜಿ ರಾಣಾ ಬ್ರಿಟಿಷರ ವಸಾಹತುಶಾಹಿಯ ವಿರುದ್ಧ ಫ್ರೆಂಚ್ ಭಾಷೆಯಲ್ಲಿ ಒಂದು ಲೇಖನ ಬರೆದರು. ಅದರಲ್ಲಿ ಅವರು ಫ್ರಾನ್ಸಿನ ಸೇನಾಧಿಕಾರಿಯೊಬ್ಬನ ಕೆಲವು ಮಾತುಗಳನ್ನೂ ಉದ್ಧರಿಸಿದ್ದರು

'ಹಿಂದುಗಳು ಸ್ವತಂತ್ರವಾಗಿ, ಸಂತೋಷವಾಗಿ ಇದ್ದಾರೇನು? ಭೂತದಯೆಯ ಸೋಗು ಹಾಕಿರುವ ಕಪಟಿಗಳೇ, ಅವರನ್ನು ಗುಲಾಮಗಿರಿಯಲ್ಲಿಟ್ಟು ಅರೆಯುತ್ತಿರುವವರು ಯಾರು ? ಇಡೀ ಜಗತ್ತಿನ ದಾಸ್ಯವನ್ನೇ ಪರಿಹರಿಸಹೊರಟಿರುವ ಓ ಇಂಗ್ಲಿಷರೇ ! ಹಿಂದುವೂ ತನ್ನ ಅಂತಃಕರಣವನ್ನು ತೋಡಿ ಕೊಳ್ಳಬಲ್ಲನಾದರೆ? ನಿಮ್ಮ ವಿಶ್ವಾಸಘಾತುಕ ಕೃತ್ಯಗಳನ್ನೂ, ನೀವು ಅವನನ್ನು ಯಾವ ದುಃಸ್ಥಿತಿಗೆ ಇಳಿಸಿದ್ದೀ ರೆಂಬುದನ್ನೂ ಅವನು ಜಗತ್ತಿಗೆ ಬಹಿರಂಗಗೊಳಿಸಬಲ್ಲನಾದರೆ? ಇನ್ನೂ ನಿಮ್ಮ ಧೂರ್ತ ಧೋರಣೆಗಳಲ್ಲಿ ನಂಬಿಕೆ ಇಟ್ಟಿರುವ ರಾಷ್ಟ್ರಗಳೆದುರಲ್ಲಿ ಅದೆಂತಹ ರಮಣೀಯ ದೃಶ್ಯ ಆದೀತು! ಆದರೆ, ನಿಮ್ಮ ಸಂಕೋಲೆ ಗಳ ಭಾರ ಹೊತ್ತು, ದಾಸ್ಯದ ನೊಗ ಹೊತ್ತು, ನೆಲಕ್ಕೆ ಕುಸಿದುಹೋಗಿ ಮಸಣಶಾಂತಿ ಅನುಭವಿಸುತ್ತಿರುವ ಹಿಂದುಗಳಿಗೆ ಸ್ವರವೇ ಇಲ್ಲ. ಅವರು ತಮ್ಮ ನರವಳಿಗಳನ್ನು ಕಿತ್ತೆಸೆದು ಮೇಲೆದ್ದರೆ ಏನಾದೀತೆಂಬುದು ಜ್ಞಾಪಕವಿರಲಿ ! ಅಂಥ ದಿನ ಬಂದಾಗ, ನಿಮ್ಮೆಲ್ಲ ಅನ್ಯಾಯದ ಗಳಿಕೆಗೆ ಕಾರಣವಾದ ನಿಮ್ಮ ಕ್ರೂರ ಕೃತ್ಯಗಳನ್ನು ಕಣ್ಣಾರೆ ಕಂಡಿರುವ ಏಷ್ಯದ ಉದರದಲ್ಲಿ ನಿಮಗೆ ಯಾವ ಗತಿ ಬಂದೀತೆಂಬುದನ್ನು ಯೋಚಿಸಿ ದ್ದೀರಾ ?'

ಶ್ರೀಮತಿ ಕಾಮಾ ಒಂದು ಪತ್ರಕ ಮುದ್ರಿಸಿ ಮೇ 24ರಂದು ಕ್ರಾಂತಿಯ ಕರೆ ನೀಡಿದರು : '.... ರಜಪೂತರೇ, ಸೀಖರೇ, ಮರಾಠರೇ, ಪಠಾಣರೇ, ಗೂರ್ಖರೇ, ಬಂಗಾಲಿಗಳೇ, ಫಾರಸಿಗಳೇ, ಎಚ್ಚರ ಗೊಂಡು ಮೇಲೇಳಿ! ಪರಕೀಯ ಆಡಳಿತಗಾರರು ನೀಡುವ ಭರವಸೆಗಳಿಂದ ವಂಚಿತರಾಗದಿರಿ. ಏಕೆಂ ದರೆ, ಅವರು ಭಾರತದಲ್ಲಿರುವುದು ನಿಮ್ಮ ನೆರವಿಗೋಸ್ಕರ ಅಲ್ಲ, ನಿಮ್ಮ ಸುಲಿಗೆಗಾಗಿ!'

1907 ಸಮೀಪಿಸುತ್ತಿದ್ದಂತೆಯೇ ಇಂಗ್ಲೆಂಡಿಗೆ ಅನಿಷ್ಟ ಸ್ವಪ್ನಗಳು ಬೀಳತೊಡಗಿದ್ದವು. ಇಂಗ್ಲಿಷರ ಕಣ್ಣಿಗೆ ಹಗ್ಗವೂ ಹಾವಾಗಿ ತೋರತೊಡಗಿತು ; ಕಡ್ಡಿಯೂ ಗುಡ್ಡವಾಗಿ ಕಾಣತೊಡಗಿತು. 1857ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಹೊಡೆತವನ್ನು ಯಾರು ಮರೆತರೂ ಇಂಗ್ಲೆಂಡ್ ಮರೆತೀತೆ ? ಭಾರತದಲ್ಲಿ ಅಲ್ಲಲ್ಲೆ ಕೇಳಿಬರುತ್ತಿದ್ದ ಕ್ರಾಂತಿಗರ್ಜನೆಗಳು 'ಸೂರ್ಯ ಮುಳುಗದ ಸಾಮ್ರಾಜ್ಯ'ಕ್ಕೆ ಎದೆನಡುಕ ಹುಟ್ಟಿಸಿ ದ್ದವು. ಲಂಡನ್ನಿನ 'ದಿ ಸ್ಟಾಂಡರ್ಡ್' ಪತ್ರಿಕೆ ಬರೆದಿದ್ದ ಸುದೀರ್ಘ ಲೇಖನವೊಂದರಲ್ಲಿ ಹೀಗೆಂದಿತ್ತು : 'ನಾವೀಗ ಇನ್ನೇನು ಸ್ಫೋಟಿಸಲಿರುವ ಅಗ್ನಿಪರ್ವತದ ಮೇಲಿದ್ದೇವೋ ಎನಿಸುತ್ತಿದೆ. ಈ ಸ್ಫೋಟದ ರೂಪ ಬೇರೆ ಆದರೂ, ಅದರ ಭೀಷಣತೆ ಅರ್ಧ ಶತಮಾನದ ಹಿಂದೆ ಕುದಿಗೊಂಡ ಸ್ಫೋಟಕ್ಕೆ ಏನೂ ಕಡಿಮೆ ಇರಲಾರದು.'

1907ರ ಏಪ್ರಿಲ್ 16ರ ಸುದ್ದಿಯೊಂದು ಹಿಂದುಸ್ಥಾನದಿಂದ ಬಂದಿತ್ತು. ಅಂದು ಲಾಹೋರಿನ 'ಪಂಜಾಬಿ' ಪತ್ರಿಕೆಯ ಸಂಪಾದಕರಿಗೂ ಪ್ರಕಾಶಕರಿಗೂ ಶಿಕ್ಷೆಯಾಯಿತು. ಆಗ ಸಹಸ್ರಾವಧಿ ಜನ ನೇರಿದರು. ಕೈದಿಗಳಿಗೆ ಹೂಮಾಲೆ ಅರ್ಪಿಸಿದರು, ಪುಷ್ಪವೃಷ್ಟಿ ಕರೆದರು. ಅಲ್ಲಿದ್ದ ಪೊಲೀಸರಿಗೆ ರಸ್ತೆಯಲ್ಲಿದ್ದ ಧೂಳು, ಕೆಸರು ತೆಗೆದು ಅಭಿಷೇಕ ಮಾಡಿದರು ! ಬ್ರಿಟಿಷರನ್ನು ಚೆನ್ನಾಗಿ ಥಳಿಸಿದರು. ಎರಡೇ ದಿನದಲ್ಲಿ ಇಡೀ ಇಂಗ್ಲೆಂಡ್ ಚಿಂತಾಗ್ರಸ್ತವಾಯಿತು. 'ಲಂಡನ್ ಟೈಂಸ್'ನಲ್ಲಿ ದಿ. 20ರಂದು ಅಗ್ರಲೇಖನವೇ ಬಂತು:

'ಭಾರತದ ದೊಡ್ಡ ಕೇಂದ್ರವೊಂದರಲ್ಲಿ, ಆ ಸಿಪಾಯಿ ದಂಗೆ ಆದಮೇಲೆ, ಇಷ್ಟು ದೊಡ್ಡ ಬ್ರಿಟಿಷ್ ವಿರೋಧಿ ಆಸ್ಫೋಟ ಆಗಿರಲಿಲ್ಲ...... ಇದೀಗ ಪಂಜಾಬ್ ಪ್ರಾಂತವನ್ನೂ ಪ್ರವೇಶಿಸಿದೆ.'

ಪಂಜಾಬ್ ಪ್ರಾಂತವೇ ಏಕೆ ? ಬ್ರಿಟಿಷ್ ಸಾಮ್ರಾಜ್ಯದ ಗರ್ಭಗೃಹಕ್ಕೂ ಅದು ಪ್ರವೇಶಿಸಿತ್ತು ! ಸಂಪಾದಕರಿಗೆ ಶಿಕ್ಷೆಯಾದ ಸುದ್ದಿ ಕೇಳುತ್ತಲೇ ಇಂಗ್ಲೆಂಡಿನಲ್ಲಿದ್ದ ಭಾರತೀಯ ತರುಣರ ಸ್ವಾಭಿಮಾನವೂ

ಸಿಡಿದೆದ್ದಿತು. ಆದರೆ ತಮ್ಮ ದುರ್ಬಲತೆಯ ಬಗ್ಗೆ ನಾಚಿಕೆಯೂ ಆಯಿತು. ಮನಸ್ಸಿನ ಶಿಥಿಲತೆಯೇ ನಮ್ಮ ದುರ್ಬಲತೆಗೂ ಕಾರಣ ; ಗಟ್ಟಿಮನಸ್ಸು ಮಾಡಿದರೆ ಸಾಮರ್ಥ್ಯವೂ ಬೆಳೆಯುತ್ತದೆ ಎನ್ನುವ ಮಾತು ಮನಸ್ಸಿನಲ್ಲಿ ಸುಳಿಯಿತು. 'ಪಂಜಾಬಿ' ಸಹಾಯಾರ್ಥವಾಗಿ 'ಪೆನ್ನಿ ಫಂಡ್' ಏರ್ಪಡಿಸಿದೆವು. ಸಹಾನುಭೂತಿಯ ತಂತಿ ವಾರ್ತೆಗಳೂ ನಮ್ಮಿಂದ ಹೋದವು. ಭಾರತದಲ್ಲಿದ್ದ 'ಪೈಸಾ ಫಂಡ್' ನಲುವಾಗಿಯೂ ನಿಧಿಸಂಗ್ರಹ ಆರಂಭಿಸಿದೆವು

ಇನ್ನೂ ಒಂದು ಉತ್ಸಾಹದ ಘಟನೆ ಜರುಗಿತು. ಒಂದು ದಿನ ಅಮೆರಿಕದಿಂದ ಕೃಷಿಶಾಸ್ತ್ರದಲ್ಲಿ ಉಚ್ಚ ಶಿಕ್ಷಣ ಪಡೆದ ದೇವ್ ಎಂಬ ಬಂಗಾಲಿ ವ್ಯಕ್ತಿಯು ನಮ್ಮಲ್ಲಿಗೆ ಬಂದರು. ಲಂಡನ್ನಿನಲ್ಲಿ ಪೇಟ ಖರೀದಿಗೆ ಸಿಕ್ಕೀತೇ ಎಂದು ನನ್ನನ್ನು ಕೇಳಿದರು ! 'ಹೇಗೂ ಹಿಂದುಸ್ಥಾನಕ್ಕೆ ಹೋಗುತ್ತಿದ್ದೀರಿ ; ಅಲ್ಲೇ ಏಕೆ ತೆಗೆದುಕೊಳ್ಳಬಾರದು ?' ಎಂದೆ. ಅದಕ್ಕೆ ಅವರೆಂದರು : 'ಕಲ್ಕತ್ತೆಯಲ್ಲಿ ಇಳಿಯುತ್ತಲೇ ತಲೆಯಲ್ಲಿ ಮೇಲೆ ಹ್ಯಾಟು ಕಂಡರೆ, ಹುಡುಗರು ಗೇಲಿ ಮಾಡುತ್ತಾರೆ. ಅದಕ್ಕಿಂತ ಮುಖ್ಯವಾಗಿ, ಸ್ವದೇಶಕ್ಕೆ ಹಿಂದಿರುಗುವಾಗ ನಾವು ಸ್ವದೇಶಿ ಉಡುಪಿನಲ್ಲಿದ್ದರೇ ಹೆಚ್ಚು ಶೋಭೆ !' ಘಟನೆ ಸಣ್ಣದಾದರೂ ಎಷ್ಟು ಅರ್ಥಗರ್ಭಿತ ! ಕೆಲವೇ ವರ್ಷಗಳ ಮೊದಲು ಇಂಗ್ಲೆಂಡಿನಿಂದ ಭಾರತಕ್ಕೆ ಮರಳುತ್ತಿದ್ದ ಭ್ರಷ್ಟ ಜನ ಸ್ವದೇಶಿ ವಸ್ತುಗಳನ್ನೇ ದ್ವೇಷಿಸುತ್ತಿದ್ದರು. ವಿದೇಶಿ ಸೂಟುಗಳಲ್ಲೇ ಆಟಾಟೋಪದಿಂದ ಮೆರೆಯುತ್ತಿದ್ದರು. ಹಿಂದುಸ್ಥಾನದ ಅಂಗಡಿಗಳಲ್ಲಿ ವಿಲಾಯತಿಯ 'ಮಕ್ಕರಿ ಟೋಪಿ' ಸಿಕ್ಕೀತೇನೋ ಎಂದು ಹುಡುಕಾಡುತ್ತಿದ್ದರು. ಇಂದು, ಸ್ವದೇಶದ ಹುಡುಗರು ಚುಡಾಯಿಸುತ್ತಾರೆ ಎಂಬ ಭಯದಿಂದಲೋ ಅಥವಾ ಯಥಾರ್ಥ ಸ್ವಾಭಿಮಾನದಿಂದಲೋ ಉಚ್ಚ ಪದವೀಧರರು ಲಂಡನ್ನಿನ ಪೇಟೆಯಲ್ಲಿ ಭಾರತೀಯ ಪೇಟಕ್ಕಾಗಿ ಹುಡುಕಾಡುತ್ತಿದ್ದರು!

ಹಿಂದುಸ್ಥಾನವು ಸತ್ತಿರಲಿಲ್ಲ. ಈ ವರ್ಷ ಲಂಡನ್ನಿನ ರಸ್ತೆಗಳಲ್ಲಿ ಇಂಗ್ಲಿಷರ ನಡುವೆ ಓಡಾಡುವಾಗ ಭಾರತೀಯ ತರುಣರ ಹೃದಯ ಹಿಗ್ಗುತ್ತಿತ್ತು. ಬಿಳಿಯರ ಕಡೆ ತಿರಸ್ಕಾರದಿಂದ ನೋಡಬೇಕೆಂಬ ಸ್ಫೂರ್ತಿ ಉಕ್ಕಿಬಂದಿತ್ತು. ಇದುವರೆಗೂ ನಾವು ಅವರೊಡನೆ ದಾಸಯ್ಯಗಳಂತೆ, 'ನೀವು ನಮ್ಮನ್ನು ತುಳಿದು ಆಳುತ್ತಿದ್ದೀರಿ', 'ನೀವು ನಮ್ಮಿಂದ ತೆರಿಗೆ ಹಿಂಡುತ್ತಿದ್ದೀರಿ', 'ನಮ್ಮನ್ನು ಕ್ರಿಮಿಕೀಟಗಳಂತೆ ಕೊಂದು ಹಾಕುತ್ತಿದ್ದೀರಿ' ಎಂದು ಹಾಡಿದ್ದೇ ಹಾಡುತ್ತಿದ್ದೆವು. ನಮ್ಮ ಗುಲಾಮತನ, ಷಂಡತನಗಳನ್ನೇ ತೋಡಿಕೊಳ್ಳುತ್ತಿದ್ದೆವು! ಆದರೆ ಈ ವರ್ಷ ಆ ವಿಷಯ ಬದಲಿಸಬಹುದು ; ಸ್ವಾತಂತ್ರ್ಯಕ್ಕಾಗಿ ನಾವೂ ರಣರಂಗದಲ್ಲಿ 'ಹರಹರ ಮಹಾದೇವ' ಗರ್ಜಿಸಿದ್ದೆವು ; ಕಾನಪುರದಲ್ಲಿ ನಾವು ನಿಮ್ಮನ್ನು ಹಲಸಿನಕಾಯಿಯಂತೆ ಕೊಚ್ಚಿ ಹಾಕಿದ್ದೆವು ; ನಮ್ಮ ಧೀರ ನಾನಾನ ಹೆಸರು ಕೇಳುತ್ತಲೇ ಕಲ್ಕತ್ತದಲ್ಲೂ ನಿಮ್ಮ ಸಾಹೇಬರು ಕಚೇರಿ ಬಿಟ್ಟು ಓಡುತ್ತಿದ್ದರು. 50 ವರ್ಷದ ಹಿಂದೆ ನಮ್ಮ ಹಿಂದುಸ್ಥಾನದಲ್ಲಿ ಹುಟ್ಟಿದಂತಹ ಸ್ತ್ರೀರತ್ನ ನಿಮ್ಮ ಇಂಗ್ಲೆಂಡಿನ ಇತಿಹಾಸದಲ್ಲಿ ತಾತ ಮುತ್ತಾತನ ಕಾಲದಿಂದಲೂ ಹುಟ್ಟಿಲ್ಲ ; ಇಡೀ ಇಂಗ್ಲೆಂಡಿನ ಇತಿಹಾಸದಲ್ಲಿ ಒಬ್ಬ ಝಾನ್ಸಿರಾಣಿಯನ್ನು ತೋರಿಸಬಲ್ಲಿರಾ - ಎಂದು ಸವಾಲು ಹಾಕಬಹುದು. ಎದೆ ಉಬ್ಬಿಸಿ, ತೊಡೆ ತಟ್ಟಿ, ಮೀಸೆ ತಿರುಗಿಸುತ್ತಾ ಹೇಳಬಹುದು. 1857 ಹಿಂದುಸ್ಥಾನಕ್ಕೆ ನಿರ್ವೀರ್ಯತೆಯ ಆಪಾದನೆ ತಪ್ಪಿಸಿತು ; ಗತಕಾಲದ ಗೌರವ ಉಳಿಸಿತು ; ಭವಿಷ್ಯಕ್ಕೂ ಒಂದು ರೀತಿಯ ಆಸೆಯನ್ನು ಜೀವಂತವಾಗಿ ಉಳಿಸಿತು !

ಹಿಂದುಸ್ಥಾನದಲ್ಲಿ ಈ ವರ್ಷ ಏನೋ ಆಗುತ್ತದೆ ಎಂಬ ಭಯದ ಮುಸಲಪ್ರಹಾರ ಇಂಗ್ಲಿಷರ ಎದೆಯಲ್ಲಿ ಅವಲಕ್ಕಿ ಕುಟ್ಟುತ್ತಿದೆ. ಇಲ್ಲಿನ ಪತ್ರಿಕೆಗಳು 1857ರ ಪ್ರಸ್ತಾಪ ಎತ್ತುತ್ತಿದ್ದಂತೆಯೇ 'ರಾವಲಪಿಂಡಿ

ದಂಗೆ' ಯ ಸದ್ದು ಕೇಳಿಸಿತು ! ಉಸಿರಾಡುವಷ್ಟರಲ್ಲೆ ಪುನಃ ತಂತಿ ! ಸರದಾರ ಅಜಿತಸಿಂಹರು ಸಹಸ್ರಾರು ಜನರನ್ನು ಲಾಹೋರಿನಲ್ಲಿ ಸೇರಿಸಿ ಅವರ ಕೈಗೆ ಲಾಠಿ ಕೊಟ್ಟಿದ್ದಾರೆಂದು ! ಆ ದಿನ ಮಾತ್ರ ಇಂಗ್ಲೆಂಡಿನ ಜಂಘಾಬಲವೇ ಉಡುಗಿಹೋಯಿತು. ಹಿಂದುಸ್ಥಾನವು ಪುನಃ 1857ನ್ನು ಆಚರಿಸಿಯೇ ಬಿಡುತ್ತದೆ ಎನ್ನಿಸಿತು. ಅಂದು ಪೇಟೆಯಲ್ಲಿ ಸರಕಾರಿ ನೋಟಿನ ಮೌಲ್ಯ ಸಹ ಬಿದ್ದುಹೋಯಿತು. ಸೌಮ್ಯವಾದಿ ಸಜ್ಜನರ ಸಹಸ್ರಾರು ಭಾಷಣಗಳು, ಲೇಖನಗಳು, ಅರ್ಜಿಗಳು ಮಾಡದಿದ್ದ ಕೆಲಸವನ್ನು ಆ ಒಂದು ತಂತಿ ವಾರ್ತೆ ಮಾಡಿತ್ತು !

ರಸ್ತೆ, ರೈಲು, ಟ್ರಾಂ, ಹೋಟೆಲು - ಎಲ್ಲೆಡೆಗಳಲ್ಲೂ ಅದೇ ಮಾತು. ಭಾರತೀಯರು ಕಣ್ಣಿಗೆ ಬಿದ್ದರೆ ಸಾಕು, ಬಿಳಿಯರು ಬೆಲ್ಲಕ್ಕೆ ನೊಣ ಮುತ್ತಿದಂತೆ ಮುತ್ತಿಕೊಳ್ಳುತ್ತಿದ್ದರು. ಭಯಮಿಶ್ರಿತ ಗೌರವದಿಂದ ಭಾರತದ ಸ್ಥಿತಿಗತಿ ವಿಚಾರಿಸುತ್ತಿದ್ದರು. ನಮ್ಮ ಜನಕ್ಕೆ ಏನೂ ಭಯವಿಲ್ಲ ತಾನೆ ? ಎಂದು ಆರ್ತಸ್ವರ ಎತ್ತುತ್ತಿದ್ದರು. ಕತ್ತಿಯಿಲ್ಲ, ಬಂದೂಕವಿಲ್ಲ, ಕೇವಲ ದೊಣ್ಣೆ ಹಿಡಿದ ಮಾತ್ರಕ್ಕೆ ಇಷ್ಟೊಂದು ಗಲಿಬಿಲಿ ! 'ಆ ಜನರಿಗೆ ಸ್ವಾತಂತ್ರ್ಯದ ಗೀಳು ಹತ್ತಿರುವುದೇ ಇಷ್ಟಕ್ಕೆಲ್ಲ ಮೂಲ' ಎಂದು ಕಡೆಗೂ ಪತ್ರಿಕೆಗಳು ಸಂಶೋಧನೆ ನಡೆಸಿ ಹೇಳಿದವು. ಇಷ್ಟೆಲ್ಲ ಗಡಿಬಿಡಿಗೆ ಮಂದಗಾಮಿಗಳ ಭಿಕ್ಷಾಟನೆ ಕಾರಣವಲ್ಲ - 1857ರ ಸುವರ್ಣ ಮಹೋತ್ಸವದ ನೆನಪು ! ಆ ನಾನಾ ಸಾಹೇಬ ಹಾಗೂ ತಾತ್ಯಾಟೋಪೆಯ ನೆನಪು !

ಅವರ ನೆನಪು ಕೇವಲ ಬ್ರಿಟಿಷರಿಗೆ ಮಾತ್ರವಲ್ಲ, ಭಾರತೀಯ ತರುಣರಿಗೂ ಇತ್ತು. ಮೇ 10ರಂದು ನಾವೂ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಅರ್ಧ ಶತಮಾನೋತ್ಸವವನ್ನು ಸಣ್ಣದಾಗಿ ಆಚರಿಸಿದೆವು. ಆಕ್ಟನ್ ಬಡಾವಣೆಯಲ್ಲಿ ಶ್ಯಾಮಜಿ ಕೃಷ್ಣವರ್ಮರ ಭಾವಮೈದುನ ನೀತಿಸೇನ ದ್ವಾರಕಾದಾಸರ ಮನೆಯಿದೆ. ಲೋಕಮಾನ್ಯ ತಿಲಕರ ಬಗ್ಗೆ ಅವರಿಗೆ ಅಪಾರ ಗೌರವ. ಆದ್ದರಿಂದ ಅವರ ಮನೆಯ ಹೆಸರು 'ತಿಲಕ ಭವನ.' ಅಲ್ಲಿ ಅಭಿನವಭಾರತದ 15-20 ಸದಸ್ಯರು ಸೇರಿದೆವು. ಗೆಳೆಯರೆಲ್ಲರ ಇಚ್ಛೆಯಂತೆ ಅಧ್ಯಕ್ಷ ಪೀಠದಲ್ಲಿ ನಾನೇ ಕೂರಬೇಕಾಯಿತು. ಮುಖ್ಯ ಭಾಷಣಕಾರರಾದ ಗ್ಯಾನಚಂದ ವರ್ಮಾ ಸಂದರ್ಭೋಚಿತವಾಗಿ, ಸ್ಫೂರ್ತಿಯುತ ಶೈಲಿಯಲ್ಲಿ ಮಾತನಾಡಿದರು.





# ಹವಿಸ್ಸು ಹದಿನಾಲ್ಕು

ಸಾಪ್ತಾಹಿಕ ಸಭೆಗಳಲ್ಲಿ ಯುರೋಪಿನ ಕ್ರಾಂತಿಗಳ ಇತಿಹಾಸವನ್ನು ನಾನು ವಿವರಿಸುತ್ತಿದ್ದೆ. ಅದೇ ರೀತಿ ಭಾರತದಲ್ಲೂ ರಾಜಕೀಯ ಸ್ವಾತಂತ್ರ್ಯಕ್ಕಾಗಿ ಕ್ರಾಂತಿ ಅಗತ್ಯವೆಂಬುದನ್ನು ಒತ್ತಿಹೇಳುತ್ತಿದ್ದೆ. ಆದರೆ ಶ್ರೋತೃಗಳಿಗೆ ಅದು ತಟ್ಟನೆ ಹಿಡಿಸುತ್ತಿರಲಿಲ್ಲ. ಅವರಲ್ಲಿ ಬಹುಪಾಲು ಭಾರತದ ಬೌದ್ಧಿಕ ಸಂಪತ್ತಿನ ಪ್ರತೀಕರಾಗಿದ್ದ ಪ್ರತಿಭಾನ್ವಿತ ವಿದ್ಯಾರ್ಥಿಗಳು. ಅವರು ದೇಶದ ಮನೋದೌರ್ಬಲ್ಯದ ಪ್ರತಿನಿಧಿಗಳಾಗಿದ್ದರೆಂಬುದೂ ಅಷ್ಟೇ ನಿಜ. ಪ್ರಗತಿ ಹೊಂದಿದ ಯುರೋಪಿಗೂ ಹಿಂದುಳಿದ ಭಾರತಕ್ಕೂ ಎಲ್ಲಿಯ ಸಂಬಂಧ - ಎನ್ನುತ್ತಿದ್ದರು.

ಹಿಂದುಸ್ಥಾನದಲ್ಲಿ ಶಸ್ತ್ರಗಳಾದರೂ ಎಲ್ಲಿವೆ ? ಇಂಗ್ಲಿಷರ ಬಂದೂಕು ಮತ್ತು ತೋಪುಗಳ ಮುಂದೆ ನಾವು ನಿಂತೇವೆಯೊ ? ಸೇನೆಯಲ್ಲಿರುವವರು ಇಂಗ್ಲಿಷರ ಬಗ್ಗೆ ಸ್ವಾಮಿನಿಷ್ಠರು , ಅಂಥವರು ದಂಗೆ ಏಳುವುದೆಂದರೇನು ? ಇದು ಅವರ ಪ್ರಶ್ನೆ. ಆದ್ದರಿಂದ ಅವರ ದೃಷ್ಟಿಯಲ್ಲಿ ಸಶಸ್ತ್ರಕ್ರಾಂತಿ ಮಾರ್ಗ ಕೇವಲ ಸ್ವಪ್ನರಂಜನೆ , ಪೂರಾ ಅವ್ಯಾವಹಾರಿಕ, ಅವಶ್ಯ ಹಾಗೂ ಹಾಸ್ಯಾಸ್ಪದ ; ಅಷ್ಟು ಮಾತ್ರವಲ್ಲ, ತೀವ್ರ ಆತ್ಮಘಾತಕ ! ಇದು ಅವರ ತೀರ್ಮಾನ.

ಅದಕ್ಕೆ ನನ್ನ ಉತ್ತರವಂತೂ ಸಿದ್ಧವಾಗಿತ್ತು. ಈಗ ಇಂಗ್ಲಿಷರ ಕೈಕೆಳಗಿರುವ ನಮ್ಮ ಸೈನಿಕರ ಕೈಯೊಳಗಿರುವ ಶಸ್ತ್ರಗಳೆಂದರೆ ಯಾರದೆಂದುಕೊಂಡಿದ್ದಿರಿ ? ನಮ್ಮದೇ ! ಆ ಸೈನಿಕರು ಅಶಿಕ್ಷಿತರಾದರೂ ಅವರ ಎದೆಯಾಳದಲ್ಲೂ ಸ್ವಾತಂತ್ರ್ಯದ ಬಯಕೆ ಇದ್ದೇ ಇರುತ್ತದೆ. ಅಂತಃಕರಣದ ಆ ಸ್ವಾತಂತ್ರ್ಯ ಜ್ಯೋತಿಯನ್ನು ಇನ್ನೂ ಸ್ವಲ್ಪ ಪ್ರಜ್ವಲಗೊಳಿಸಿ , ಸೈನ್ಯದಲ್ಲಿ ನವಚೈತನ್ಯ ನಿರ್ಮಿಸಿ ; ಆಮೇಲೆ ನೋಡಿ, ಪರಕೀಯ ಇಂಗ್ಲಿಷರ ಶಸ್ತ್ರಗಳು ಅವರ ವಿರುದ್ಧವೇ ಹೇಗೆ ತಿರುಗುತ್ತವೆ !

ಅದಕ್ಕೆ ನಮ್ಮ ದೇಶದ್ದೇ ಒಂದು ನಿದರ್ಶನ ಮುಂದಿಡುವ ಅಗತ್ಯವಿತ್ತು. ನಾನು ಕೇವಲ 50 ವರ್ಷಗಳ ಹಿಂದೆ ನಡೆದಿದ್ದ 1857ರ ಸ್ವಾತಂತ್ರ್ಯ ಸಮರ ಆರಿಸಿಕೊಂಡೆ. ಅದರ ಬಗ್ಗೆ ಸ್ಫೂರ್ತಿಪ್ರದ ಇತಿಹಾಸ ಬರೆಯಲು ನಿರ್ಧರಿಸಿದೆ. ಅಧಿಕೃತ ಮಾಹಿತಿಗಳನ್ನು ಕಲೆಹಾಕತೊಡಗಿದೆ. ಪುಸ್ತಕಗಳಿಗಾಗಿ ಪುನಃ ಮುಖರ್ಜಿ ಮಹಾಶಯರನ್ನೇ ಮೊರೆಹೊಕ್ಕೆ. ಅವರು ಪುನಃ ಗಡ್ಡದ ಮೇಲೆ ಬೆರಳಾಡಿಸುತ್ತಾ ಆಲೋಚಿಸಿದರು. ಪ್ರೌಢ ವಯಸ್ಸಿನ ಅನುಭವಿ ವ್ಯಕ್ತಿ ; ನಮ್ಮ ಭಾಷಣಗಳನ್ನು ಪ್ರತಿವಾರವೂ ತಪ್ಪದೆ ಕೇಳುತ್ತಿದ್ದರು. ನನ್ನಿಂದಲೇ

ಅಭಿನವ ಭಾರತದ ಶಪಥವನ್ನೂ ಸ್ವೀಕರಿಸಿದ್ದರು. ಲಂಡನ್ನಿನಲ್ಲಿ ಅವರಿಗೆ ಗೊತ್ತಿಲ್ಲದ ಜಾಗವಿಲ್ಲ. ಅವರ ಹೆಂಡತಿ ಇಂಗ್ಲಿಷ್ ಮಹಿಳೆ. ಇಬ್ಬರೂ ಸೇರಿ 'ಇಂಡಿಯಾ ಆಫೀಸ್' ಪ್ರವೇಶಕ್ಕೆ ನನಗೆ ಅನುಮತಿ ದೊರಕಿಸಿಕೊಟ್ಟರು.

ಬಹು ಕಷ್ಟಸಾಧ್ಯವಾದ ಕಾರ್ಯ ಮುಗಿದಿತ್ತು. ಮೊದಲ ದಿನ ಪ್ರಮುಖ ಅಧಿಕಾರಿ ನನ್ನ ಅನುಮತಿ ಪತ್ರವನ್ನು ಮೇಲಿನಿಂದ ಕೆಳಕ್ಕೆ ನಾಲ್ಕು ಬಾರಿ ನೋಡಿದ. ಅನಂತರ ಗ್ರಂಥಾಲಯದ ಒಳಭಾಗಕ್ಕೆ ಕರೆದುಕೊಂಡು ಹೋದ. ಅಲ್ಲಿನ ಬೃಹತ್ ವ್ಯವಸ್ಥೆ ಕಂಡು ನಾನು ದಂಗಾಗಿಹೋದೆ. 'ಇಲ್ಲಿ 1857ಕ್ಕೆ ಸಂಬಂಧಿಸಿದ ವಿಭಾಗ ಯಾವುದು, ದಯವಿಟ್ಟು ತೋರಿಸುವಿರಾ ?' ಎಂದೆ.

'ಇಲ್ಲಿ ಕಾಣುವುದಷ್ಟೂ ಅದೇ. ಇಲ್ಲಿನ ಪುಸ್ತಕ ಹಾಗೂ ಪತ್ರಗಳ ಪುಟಪುಟದಲ್ಲೂ ಕ್ರೂರ ಸಿಪಾಯಿಗಳ ಪಾಪ ತುಂಬಿದೆ' ಎಂದ ! ನನ್ನ ರಕ್ತ ಬಿಸಿಯಾಯಿತು. ಆದರೂ, 'ಸಾವರಕರ್, ಸದ್ಯಕ್ಕೆ ಸುಮ್ಮನಿರು' ಎಂದು ನನಗೆ ನಾನೇ ಸಮಾಧಾನ ಹೇಳಿಕೊಂಡೆ! ಆ ಅಧಿಕೃತ ಸಂಗ್ರಹಾಲಯದಲ್ಲಿ 1857ಕ್ಕೆ ಸಂಬಂಧಿಸಿದ ಕಾಗದಪತ್ರಗಳು, ಪುಸ್ತಕಗಳು, ಸಮಸ್ತ ದಾಖಲೆಗಳೂ ಇದ್ದವು. ಎಲ್ಲವನ್ನೂ ಓದಿ ಮುಗಿಸಲು ಮನಸ್ಸು ಮಾಡಿದೆ. ದಿನವೂ ಬಾಗಿಲು ತೆಗೆಯುವ ಮುಂಚೆಯೇ ಅಲ್ಲಿ ಹಾಜರು ; ಬಾಗಿಲು ಮುಚ್ಚುವವರೆಗೂ ಅಧ್ಯಯನ, ಟಿಪ್ಪಣಿ ತಯಾರಿಕೆ.

ನನ್ನ ತಲ್ಲೀನತೆ, ವ್ಯಾಸಂಗಶೀಲತೆ ಕಂಡು ಅಲ್ಲಿನ ಅಧಿಕಾರಿಗೂ ಕೌತುಕವೆನಿಸಿತು ; ಗೌರವ ಮೂಡಿತು. ಏನೇ ಸಹಾಯ ಕೇಳಲಿ, ಕೂಡಲೆ ಒದಗಿಸುತ್ತಿದ್ದ. ಆಗಾಗ್ಗೆ ಹತ್ತಿರ ಬಂದು ಕುಳಿತು - ದಂಗೆಕಾರರು ಹೇಗೆ ಹುಚ್ಚರೂ ಕ್ರೂರ ರಾಕ್ಷಸರೂ 'ನಮಕ್ ಹರಾಂ' ಗಳು ಆಗಿದ್ದರು ; ಇಂಗ್ಲಿಷರ ಹೆಂಗಸರು ಮಕ್ಕಳನ್ನು ಅವರು ನಿರ್ದಯವಾಗಿ ಕೊಂದು ಹೇಗೆ ಮಾನವತೆಗೇ ಕಲಂಕ ಹಚ್ಚಿದರು ; ಇಷ್ಟೆಲ್ಲ ಮಾಡಿಯೂ ಕಡೆಗೆ ಹೇಗೆ ಸೋತು ಮಣ್ಣುಮುಕ್ಕಿದರು - ಎಂಬುದನ್ನೆಲ್ಲ ವರ್ಣಿಸುತ್ತಿದ್ದ. ನನ್ನಂತೆ ಅಧ್ಯಯನನಿಷ್ಠ ಉತ್ಸಾಹಿ ಭಾರತೀಯ ತರುಣನು ಸಿಪಾಯಿಗಳ ವಿರುದ್ಧವಾಗಿ 'ಆಧಾರಪೂರ್ಣ' ಗ್ರಂಥ ಬರೆದದ್ದೇ ಆದರೆ ಭಾರತೀಯರೆಲ್ಲರೂ ಅನಾಯಾಸವಾಗಿ ತಮ್ಮ ಸ್ವಾತಂತ್ರ್ಯವೀರರನ್ನು ಹಳಿಯುತ್ತಾರೆ; ಸಶಸ್ತ್ರಕ್ರಾಂತಿಯ ಬಗ್ಗೆ ಜಿಗುಪ್ಸೆ ತಾಳುತ್ತಾರೆ ; ಇದು ಆ ಅಧಿಕಾರಿಯ ಆಶಯ ! ಅವನು ಏನೇ ಹೇಳಲಿ, ಉತ್ಸಾಹದಿಂದ ಕಿವಿಗೊಟ್ಟು ಕೇಳುತ್ತಿದ್ದೆ. ಅಥವಾ ಹಾಗೆ ನಟಿಸುತ್ತಿದ್ದೆ. ಅವನ ಒಲವು ಗಳಿಸಿ, ದುರ್ಲಭವಾದ ರಹಸ್ಯ ದಾಖಲೆಗಳನ್ನೂ ದೊರಕಿಸಿಕೊಳ್ಳುವುದು ನನ್ನ ಆಶಯ. ನಾನು ಕೇಳಿದ್ದೇ ತಡ ಆ ನನ್ನ ನಲ್ಮೆಯ ಮೂರ್ಖಶಿಖಾಮಣಿ - ಸಾಧಾರಣ ಬ್ರಿಟಿಷ್ ನಾಗರಿಕರಿಗೂ ಎಟುಕದಿದ್ದ - ದಂಗೆಯ ಸಮಯದಲ್ಲಾದ ಪಾರ್ಲಿಮೆಂಟ್ ಚರ್ಚೆಯ ವರದಿಗಳು, ಆಗ ಭಾರತದಲ್ಲಿದ್ದು ಹೋರಾಡಿದ ಹಿರಿಯ ಬ್ರಿಟಿಷ್ ಸೇನಾಧಿಕಾರಿಗಳೂ ಇತರರೂ ಬರೆದ ಗುಪ್ತಪತ್ರಗಳು, ವಿರೋಧಿ ಪಕ್ಷದ ನಾಯಕರ ಭಾಷಣಗಳು, ಎಲ್ಲವನ್ನೂ ತೋರಿಸಿದ ! ಅದರಿಂದ ಕ್ರಾಂತಿಯ ಸಮಗ್ರ ಚಿತ್ರವನ್ನು ಕಲ್ಪಿಸಿಕೊಳ್ಳಲು ನನಗೆ ಸಾಧ್ಯವಾಯಿತು.

ಇಂಡಿಯಾ ಆಫೀಸ್‌ನಲ್ಲಿ ನನ್ನ ಅಧ್ಯಯನ ಸಾಂಗವಾಗಿ ಮುಗಿಯುತ್ತ ಬಂದಿತ್ತು. ಭಾರತೀಯ ತರುಣರ ಗುಪ್ತಸಭೆಗಳಲ್ಲಿ ನಾನು 1857ರ ಸ್ವಾತಂತ್ರ್ಯ ಸಮರದ ಕಥೆ ಆರಂಭಿಸಿದೆ. ಇಂದಿನ ನವಪೀಳಿಗೆಯೂ ಆಗಿನವರಂತೆ ಆತ್ಮಾರ್ಪಣೆಗೆ ಸಿದ್ಧರಾಗಬೇಕೆಂದು ಕರೆನೀಡಿದೆ. ಗ್ರಂಥರಚನೆ ಪ್ರಾರಂಭಿಸಿದ್ದೂ ಅದೇ ಸಮಯಕ್ಕೆ. ಇದ್ದಕ್ಕಿದ್ದಂತೆ ಮರಾಠಿ ಹಸ್ತಪ್ರತಿಯ ಒಂದೆರಡು ಅಧ್ಯಾಯಗಳು ಕಣ್ಮರೆ


ಲಂಡನ್ನಿನಲ್ಲಿ

ಯಾದವು. ಅದು ಸ್ಕಾಟ್‌ಲೆಂಡ್ ಯಾರ್ಡ್‌ನವರ ಕೈವಾಡ; ಪೊಲೀಸರೇ ಕಳ್ಳರಾಗಿದ್ದರು ! ನನ್ನ ಗ್ರಂಥ ಎಷ್ಟು ಪ್ರಕ್ಷೋಭಕ ವಾದೀತು ಎನ್ನುವುದಕ್ಕೆ ಅವರಿಗೆ ಸಾಕ್ಷಿ ಸಿಕ್ಕಿತು. 'ಇಂಡಿಯಾ ಆಫೀಸ್'ನ ಗ್ರಂಥಪಾಲಕನಿಗೆ ಸರಕಾರದ ಆಜ್ಞೆ ಹೋಯಿತು. ಇನ್ನು ನನ್ನನ್ನು ಗ್ರಂಥಾಲಯಕ್ಕೆ ಸೇರಿಸಬಾರದೆಂದು! ಅದನ್ನು ಕೇಳಿ ಆ ಅಧಿಕಾರಿಗೆ ಅಚ್ಚರಿ; ನನ್ನಂಥ ಪ್ರಾಮಾಣಿಕ ಹಾಗೂ ಉತ್ಸಾಹಿ ತರುಣನ ಅಧ್ಯಯನಕ್ಕೆ ಏಕೆ ಈ ಅಡ್ಡಿ, ಎಂದು! ಸರಕಾರ ತಪ್ಪು ಆಜ್ಞೆ ಹೊರಡಿಸಿದೆಯಲ್ಲಾ, ಎಂದು ! ಪಾಪ, ಆತ ಸಂಕೋಚ ದಿಂದಲೂ ನೊಂದ ಮನಸ್ಸಿನಿಂದಲೂ ನನಗೆ ಆಜ್ಞೆ ತಿಳಿಸಿದ. ಪರವಾಗಿಲ್ಲ, ಚಿಂತಿಸಬೇಡಿ ಎಂದು ನಾನೂ ಅವನಿಗೆ ಸಮಾಧಾನ ಹೇಳಿ, ಗಂಭೀರವಾಗಿ ವಾಪಸು ಬಂದೆ.

1908ರ ಏಪ್ರಿಲ್ ಹೊತ್ತಿಗೆ ನನ್ನ ಗ್ರಂಥವೇನೋ ಪೂರೈಸಿತು. ಆದರೆ ಇನ್ನೂ ಸ್ವಲ್ಪ ಕೆಲಸ ಬಾಕಿಯಿತ್ತು. ಪುಸ್ತಕದಲ್ಲಿ ಯಥೇಚ್ಛವಾಗಿ ಸಂದರ್ಭ ಗ್ರಂಥಗಳನ್ನು ಉಲ್ಲೇಖಿಸಿದ್ದೆ. ಅವೆಲ್ಲವೂ ಸರಿ ಇದೆಯೋ ಇಲ್ಲವೋ ಎಂಬುದನ್ನು ಇನ್ನೊಮ್ಮೆ ತಾಳೆ ನೋಡಬೇಕಿತ್ತು. ಆ ಕಾರ್ಯವನ್ನು ನಮ್ಮ ಋಷೀಜಿ (ವಿ.ವಿ. ಎಸ್.ಅಯ್ಯರ್) ಅವರಿಗೆ ವಹಿಸಿದೆ. ಅವರು ಚಾಕಚಕ್ಯತೆಯಲ್ಲಿ ಎತ್ತಿದ ಕೈ. ಹೇಗೋ ಗ್ರಂಥಾಲಯದ ಪ್ರವೇಶಕ್ಕೆ ಅನುಮತಿ ಗಿಟ್ಟಿಸಿಕೊಂಡರು. ನನ್ನ ಉಲ್ಲೇಖಗಳೆಲ್ಲವನ್ನೂ ಹೋಲಿಸಿ ಸರಿಪಡಿಸಿಕೊಂಡು ತಂದರು.

ಮುಂದಿನದು ಮುದ್ರಣಕಾರ್ಯ. ಮುಂಬೈ ಸುಂಕದ ಅಧಿಕಾರಿಗಳ ಗೃಧ್ರ ದೃಷ್ಟಿಯನ್ನೂ ದಾಟಿ ಕೊಂಡು ಪುಸ್ತಕದ ಹಸ್ತಪ್ರತಿ ಸುರಕ್ಷಿತ ಹಸ್ತ ಸೇರಿತು. ಆದರೆ ಮಹಾರಾಷ್ಟ್ರದ ಯಾವ ಮುದ್ರಣಾಲಯವೂ ಅದನ್ನು ಅಚ್ಚುಮಾಡಲು ಒಪ್ಪಲಿಲ್ಲ. ಕೊನೆಗೆ ಸೋಲಾಪುರದ 'ಸ್ವರಾಜ್ಯ' ಸಾಪ್ತಾಹಿಕದ ಸಂಪಾದಕರೂ, ಅಭಿನವಭಾರತದ ಸದಸ್ಯರೂ ಆದ ಬ.ಶಂ. ಲಿಮಯೆ ಪ್ರಕಟಣೆಯ ಹೊಣೆ ಹೊತ್ತರು. ಅಷ್ಟರಲ್ಲೆ ಮಹಾ ರಾಷ್ಟ್ರದ ಎಲ್ಲ ಮುದ್ರಣಾಲಯಗಳ ಮೇಲೆ ಏಕಕಾಲದಲ್ಲಿ ಪೊಲೀಸರ ಅನಿರೀಕ್ಷಿತ ದಾಳಿಯಾಯಿತು. ಆದರೆ ಪುಸ್ತಕ ಸಿಗಲಿಲ್ಲ. ದಾಳಿಗೆ ಮೊದಲೇ ಸಹಾನುಭೂತಿಪರನಾದ ಪೊಲೀಸ್ ಅಧಿಕಾರಿಯೊಬ್ಬ ಲಿಮಯೆ ಅವರಿಗೆ ಸೂಚನೆ ನೀಡಿದ್ದ! ಇನ್ನು ಭಾರತದಲ್ಲಿ ಮುದ್ರಿಸುವ ಆಸೆ ಕಿಂಚಿತ್ತೂ ಉಳಿಯಲಿಲ್ಲ. ಆಗ ನಮ್ಮ ಅಣ್ಣ ಬಾಬಾ ಹಸ್ತಪ್ರತಿಯನ್ನು ರಹಸ್ಯವಾಗಿ ಪ್ಯಾರಿಸ್ಸಿನ ಕ್ರಾಂತಿಕೇಂದ್ರಕ್ಕೆ ಕಳುಹಿಸಿದ.

ಯುರೋಪಿನಲ್ಲಿ ಮರಾಠಿ ಗ್ರಂಥ ಅಚ್ಚುಮಾಡುವುದು ಸಾಧ್ಯವಿರಲಿಲ್ಲ. ಕೊನೆಯ ಪಕ್ಷ ಅದನ್ನು ಇಂಗ್ಲಿಷಿನಲ್ಲಾದರೂ ಪ್ರಕಟಿಸಬೇಕೆಂದು ಅಭಿನವ ಭಾರತದ ಕಾರ್ಯಕಾರಿ ಸಮಿತಿ ನಿರ್ಧರಿಸಿತು. ಸಂಸ್ಥೆಯ ಕಾರ್ಯಕರ್ತರಾದ ಕೋರೆಗಾವ್‌ಕರ್, ಫಡಕೆ, ಕುಂಟೆ ಮುಂತಾದ ಪ್ರತಿಭಾವಂತ ವಿದ್ಯಾರ್ಥಿ ಗಳು ಅದರ ಭಾಷಾಂತರಕ್ಕೆ ನೆರವಾದರು. ಋಷೀಜಿಯವರ ಮೇಲ್ವಿಚಾರಣೆಯಲ್ಲಿ ಇಂಗ್ಲಿಷ್ ಹಸ್ತಪ್ರತಿ ತಯಾರಾಯಿತು. ಅದನ್ನು ಇಂಗ್ಲೆಂಡಿನಲ್ಲೆ ಗುಟ್ಟಾಗಿ ಪ್ರಕಟಿಸಲು ಪ್ರಯತ್ನಿಸಿದೆವು. ಆದರೆ ಬ್ರಿಟಿಷ್ ಗೂಢ ಚಾರರು ಸುಮ್ಮನೆ ಕುಳಿತಿರಲಿಲ್ಲ. ಮುದ್ರಕರಿಗೆಲ್ಲ ಮೊದಲೆ ಬೆದರಿಕೆ ಹಾಕಿದ್ದರು. ಅನಂತರ ಪ್ಯಾರಿಸ್ಸಿನಲ್ಲಿ ಪ್ರಯತ್ನ ನಡೆಯಿತು. ಆದರೆ ಆ ವೇಳೆಗೆ ಇಂಗ್ಲೆಂಡ್ ಮತ್ತು ಫ್ರಾನ್ಸ್ ಮಿತ್ರರಾಷ್ಟ್ರಗಳಾಗಿದ್ದವು ಎರಡು

ದೇಶಗಳ ಪೊಲೀಸರೂ ನಮ್ಮ ಕ್ರಾಂತಿ ಚಟುವಟಿಕೆಗಳನ್ನು ಹತ್ತಿಕ್ಕಲು ಸಹಕರಿಸುತ್ತಿದ್ದರು. ಆದ್ದರಿಂದ ಅಲ್ಲಿನ ಮುದ್ರಕರೂ ಹೆದರಿದರು. ಕಡೆಗೆ ಕ್ರಾಂತಿಕಾರರು ಕೌಶಲ್ಯದಿಂದ ಹಾಲೆಂಡಿನ ಒಂದು ಮುದ್ರಣ ಸಂಸ್ಥೆಗೆ ಆ ಕೆಲಸ ಒಪ್ಪಿಸಿದರು. ಅತ್ತ ಮುದ್ರಣ ಶುರುವಾಗುತ್ತಲೇ ಇತ್ತ - 1857ರ ಇಂಗ್ಲಿಷ್ ಪುಸ್ತಕವು ಫ್ರಾನ್ಸ್‌ನಲ್ಲಿ ಮುದ್ರಣಗೊಳ್ಳುತ್ತಿದೆ - ಎಂದು ಸುದ್ದಿ ಹರಡಲಾಯಿತು ! ಇಂಗ್ಲೆಂಡ್ ಹಾಗೂ ಫ್ರಾನ್ಸ್‌ನ ಬೇಹುಗಾರರ ಪರದಾಟ ಹೇಳತೀರದು. ಅವರಿಗೆ ರವೆಯಷ್ಟಾದರೂ ಸುಳಿವು ಹತ್ತುವುದಕ್ಕೆ ಮೊದಲೇ ಹಾಲೆಂಡಿನಲ್ಲಿ ಅಚ್ಚಾದ ಪ್ರತಿಗಳೆಲ್ಲವೂ ಗುಪ್ತವಾಗಿ ಪ್ಯಾರಿಸ್ ತಲುಪಿದವು.

ಮ್ಯಾಟ್ಸಿನಿಯ ಬಗ್ಗೆ ಪುಸ್ತಕ ಹೊರಬಂದ ಮೇಲೆ, ಸಾವರಕರರ ಬರಹಗಳೆಂದರೆ ಭಾರತದಲ್ಲೂ ಇಂಗ್ಲೆಂಡಿನಲ್ಲೂ ಒಮ್ಮೆಗೇ ಬ್ರಿಟಿಷ್ ಸರಕಾರ ಬೆಚ್ಚಿ ಕೂರುತ್ತಿತ್ತು. '1857ರ ಭಾರತೀಯ ಸ್ವಾತಂತ್ರ್ಯ ಸಮರ'ದ ಹಸ್ತಪ್ರತಿ ಭಾರತದಿಂದ ಯುರೋಪಿಗೆ ಹಿಂದಿರುಗಿದೆಯೆಂದು ಕೇಳುತ್ತಲೆ ಎರಡೂ ಕಡೆ ಸರಕಾರಗಳು ಪುಸ್ತಕದ ಮೇಲೆ ನಿಷೇಧಾಜ್ಞೆ ಹೊರಡಿಸಿದವು. ಇನ್ನೂ ಪ್ರಕಟವಾಗದಿದ್ದ ಪುಸ್ತಕದ ಮೇಲೆ ನಿಷೇಧಾಜ್ಞೆ! ಅದೂ ಲೇಖನ ಸ್ವಾತಂತ್ರ್ಯದ ಬಗ್ಗೆ ಜಂಭ ಕೊಚ್ಚಿಕೊಳ್ಳುತ್ತಿದ್ದ ಇಂಗ್ಲೆಂಡ್ ಸರಕಾರದಿಂದ! ಇಡೀ ಜಗತ್ತಿನ ಇತಿಹಾಸದಲ್ಲೆ ಅದುತನಕ ನಡೆಯದಿದ್ದಂತಹ ವಿಚಿತ್ರ ಘಟನೆ. ಬ್ರಿಟಿಷ್ ಸರಕಾರಕ್ಕೆ ನನ್ನ ಸವಾಲು ಸಿದ್ಧವಾಗಿತ್ತು : 'ಹಸ್ತಪ್ರತಿಯು ಮುದ್ರಣಕ್ಕೆ ಹೋಗಿದೆಯೋ ಇಲ್ಲವೋ ಸರಿಯಾಗಿ ತಿಳಿಯದೆಂದು ಸರಕಾರ ಒಪ್ಪಿಕೊಂಡಿದೆ. ಹಾಗಿದ್ದರೆ, ಪ್ರಕಟಣೆ ಹಾಗೂ ಮುದ್ರಣಕ್ಕಿಂತಲೂ ಮೊದಲೇ ಆ ಪುಸ್ತಕವು ಭೀಕರ ರಾಜದ್ರೋಹದ ವಿಚಾರವನ್ನು ಒಳಗೊಂಡಿದೆಯೆಂದು ಸರಕಾರಕ್ಕೆ ಹೇಗೆ ಗೊತ್ತಾಯಿತು? ಸರಕಾರದ ಬಳಿಯೂ ಒಂದು ಹಸ್ತಪ್ರತಿ ಇರುವುದಾದರೆ, ಅವರಿಗುಳಿದಿರುವ ಏಕಮಾತ್ರ ನ್ಯಾಯೋಚಿತ ಮಾರ್ಗವೆಂದರೆ ರಾಜದ್ರೋಹಕ್ಕಾಗಿ ನನಗೆ ಶಿಕ್ಷೆ ವಿಧಿಸುವುದು. ಹಾಗೇಕೆ ಮಾಡಬಾರದು? ಒಂದು ವೇಳೆ ಪುಸ್ತಕದ ಪ್ರತಿ ಇಲ್ಲದೆಹೋದರೆ, ಅದರ ಬಗ್ಗೆ ಅನಧಿಕೃತ ಗಾಳಿ ವರ್ತಮಾನಕ್ಕಿಂತ ಹೆಚ್ಚಾಗಿ ಸರಕಾರಕ್ಕೆ ಏನೂ ತಿಳಿಯದು. ಅಂಥದನ್ನು ರಾಜದ್ರೋಹಕರವೆಂದು ಸರಕಾರ ಯಾವ ನಾಲಗೆಯಿಂದ ಸಾರುತ್ತಿದೆ ?' ನನ್ನ ಈ ಹೇಳಿಕೆ 'ದಿ ಲಂಡನ್ ಟೈಂಮ್ಸ್' ಪತ್ರಿಕೆಯಲ್ಲೂ ಪ್ರಕಟಗೊಂಡಿತು. ಬ್ರಿಟಿಷ್ ಸಾಮ್ರಾಜ್ಯದ ಮಹಾ ಮೇಧಾವಿ ಆಡಳಿತಗಾರರೂ ತಲೆ ಕೆರೆದುಕೊಂಡರು. ಆದರೆ ಉತ್ತರ ಹೊಳೆಯಲಿಲ್ಲ.

ಫ್ರಾನ್ಸ್‌ನಿಂದ ಇಂಗ್ಲಿಷ್ ಪುಸ್ತಕದ ಸಹಸ್ರಾರು ಪ್ರತಿಗಳು ಭಾರತಕ್ಕೆ ರಹಸ್ಯ ಪ್ರಯಾಣ ಬೆಳೆಸಿದವು. ಸಾಮಾನಿನ ಪೆಟ್ಟಿಗೆಗಳ ಕೃತ್ರಿಮ ತಳದಲ್ಲಿ ಕೆಲವು ಹೊರಟರೆ, ಇನ್ನು ಕೆಲವು 'ಪಿಕ್ ವಿಕ್ ಪೇಪರ್ಸ್', 'ಸ್ಕಾಟ್ಸ್ ವರ್ಕ್ಸ್', 'ಡಾನ್ ಕ್ವಿಕ್ಸೋಟ್' ಮುಂತಾದ ಹೆಸರುಗಳ ಆಕರ್ಷಕ ರಕ್ಷಾಪುಟಗಳನ್ನು ಹೊದ್ದು ಹೊರಟವು! ಭಾರತದಾದ್ಯಂತ ಪ್ರಮುಖ ನಾಯಕರಿಗೆ, ಅಭಿನವ ಭಾರತದ ಶಾಖೆಗಳಿಗೆ, ಪ್ರಸಿದ್ಧ ಪುಸ್ತಕ ಭಂಡಾರಗಳಿಗೆ, ಕಾಲೇಜುಗಳಿಗೆ ಎಲ್ಲಕ್ಕಿಂತ ಮುಖ್ಯವಾಗಿ ಸೈನಿಕ ಶಿಬಿರಗಳೊಡನೆ ಸಂಪರ್ಕವಿದ್ದ ಗುಪ್ತ ಹಿತೈಷಿಗಳ ಕೈಗೆ ಪುಸ್ತಕದ ಪ್ರತಿಗಳು ತಲುಪಿದವು. ಬೆಲೆಯ ಜತೆಗೆ ಅವುಗಳ ಅಂಚೆ ವೆಚ್ಚವನ್ನೂ ಅಭಿನವ ಭಾರತ ಕ್ರಾಂತಿಸಂಸ್ಥೆಯೇ ವಹಿಸಿತು. ಅನಂತರ ಉಳಿದ ಪ್ರತಿಗಳನ್ನು ಫ್ರಾನ್ಸ್‌ನಲ್ಲೆ ಬಹಿರಂಗವಾಗಿ ವಿತರಣೆ ಮಾಡಲಾಯಿತು. ಚರಿತ್ರಕಾರರೂ ರಾಜಕಾರಣಿಗಳೂ ಆತ್ಯಾಸಕ್ತಿಯಿಂದ ಅದನ್ನು ಓದತೊಡಗಿದರು. ಐರ್ಲೆಂಡ್, ಫ್ರಾನ್ಸ್, ರಶ್ಯ, ಅಮೆರಿಕ, ಈಜಿಪ್ಟ್ ಹಾಗೂ ಜರ್ಮನಿಯ ಕ್ರಾಂತಿಕಾರಿ ವಲಯಗಳಲ್ಲಿ ಅದರ ಪಾರಾಯಣ ಪ್ರಾರಂಭವಾಯಿತು.

ಶ್ರೀಮತಿ ಕಾಮಾ ಮತ್ತು ಎಂ ಪಿ. ಟಿ. ಆಚಾರ್ಯರು ಈ ಇತಿಹಾಸವನ್ನು ಫ್ರೆಂಚ್ ಭಾಷೆಗೆ ಅನುವಾದಿಸಿ, 1910ರಲ್ಲಿ ಪ್ರಕಟಿಸಿಯೂಬಿಟ್ಟರು.

ಕೆಲ ವರ್ಷಗಳ ನಂತರ ಲಾಲಾ ಹರದಯಾಳರು ಅಮೆರಿಕದಲ್ಲಿ ಅಭಿನವ ಭಾರತದ ಶಾಖೆಯನ್ನೂ, 'ದಿ ಗದರ್' ಪತ್ರಿಕೆಯನ್ನೂ ಪ್ರಾರಂಭಿಸಿದರು. ಆಗ ಸಂಸ್ಥೆಗಾಗಿ ನಿಧಿ ಕೂಡಿಸಲು ಮತ್ತು ಕ್ರಾಂತಿಯ ಪ್ರಚಾರಕ್ಕಾಗಿ '1857ರ ಭಾರತೀಯ ಸ್ವಾತಂತ್ರ್ಯ ಸಮರ' ಇಂಗ್ಲಿಷಿನಲ್ಲಿ ಎರಡನೆಯ ಬಾರಿಗೆ ಮುದ್ರಣಗೊಂಡಿತು. ಅದರ ಹಿಂದೆಯೇ ಹಿಂದಿ, ಪಂಜಾಬಿ, ಉರ್ದು ಭಾಷಾಂತರಗಳೂ ಹೊರಬಂದವು. ಒಂದೊಂದು ಪ್ರತಿಯ ಬೆಲೆ 300 ರೂ. ಗಳವರೆಗೂ ಏರಿತು. ಭಾರತದ ಅನೇಕ ಸೈನಿಕ ಕೇಂದ್ರಗಳಿಗೆ ಅವು ತಲಪಿದವು; ಭಾರತೀಯ ಯೋಧರ ಹೃದಯದಲ್ಲಿ ಸ್ವಾತಂತ್ರ್ಯದಾಹ ಕೆರಳಿಸಿದವು. ಹಾಂಕಾಂಗ್, ಸಿಂಗಾಪುರ, ಬರ್ಮಾ ಮುಂತಾದ ಕಡೆಗಳಲ್ಲಿದ್ದ ಭಾರತೀಯ ಸೇನಾಪಡೆಗಳೂ 1857ರ ಕ್ರಾಂತಿಯಿಂದ ಸ್ಫೂರ್ತಿಗೊಂಡು ಹಿಂದುಸ್ಥಾನವನ್ನು ಮುಕ್ತಗೊಳಿಸಲು ಸಿದ್ಧತೆ ನಡೆಸಿದವು ಆಗಿನ ಪ್ರಯತ್ನಕ್ಕೆ ಯಶಸ್ಸು ಸಿಕ್ಕದಿದ್ದರೂ, ಅಲ್ಲಿಂದ ಎರಡು ದಶಕಗಳ ನಂತರ ಸುಭಾಷಚಂದ್ರ ಬೋಸರ ಯೋಜನೆಗೆ ಅದೊಂದು ದಾರಿದೀಪವಾಯಿತು.

1857ರ ಇತಿಹಾಸವು ಇಂಗ್ಲಿಷಿನಲ್ಲಿ ಮೂರನೆಯ ಬಾರಿ ಮುದ್ರಣಗೊಂಡುದು ಚಂದ್ರಶೇಖರ ಆಜಾದ್ ಮತ್ತು ಭಗತಸಿಂಹರ ನೇತೃತ್ವದಲ್ಲಿ ಸಶಸ್ತ್ರ ಕ್ರಾಂತಿ ಪುನರುಜ್ಜೀವನಗೊಂಡಾಗ. ಎರಡು ಭಾಗಗಳಲ್ಲಿ ಮುದ್ರಣಗೊಂಡ ಆ ಗ್ರಂಥದ ಮಾರಾಟದಿಂದ ಕ್ರಾಂತಿಸಂಸ್ಥೆಗೆ ನಿಧಿ ಕೂಡಿತು ; ಜತೆಗೆ ಜನಮನದಲ್ಲಿ ಮತ್ತೊಮ್ಮೆ ದಾಸ್ಯದ ವಿರುದ್ಧ ಅಶಾಂತಿ ಹಬ್ಬಿತು. ಮಾತೃಭೂಮಿಯ ಮುಕ್ತಿಗಾಗಿ ಸಶಸ್ತ್ರ ಹೋರಾಟವನ್ನು ರೂಪುಗೊಳಿಸಲು ಕ್ರಾಂತಿಕಾರಿಗಳಿಗೆ ಸ್ಫೂರ್ತಿ ದೊರೆಯಿತು.

ಅನಂತರದ ವರ್ಷಗಳಲ್ಲಿ ನೇತಾಜಿ ಸುಭಾಷಚಂದ್ರ ಬೋಸರು ಐ.ಎನ್.ಎ ಪಡೆಗಳ ನೇತೃತ್ವ ವಹಿಸಿದಾಗ ಆ ಪುಸ್ತಕ ಪುನರ್ಮುದ್ರಣಗೊಂಡಿತು. ಆಜಾದ್ ಹಿಂದ್ ಫೌಜಿನ ಯೋಧರೂ ಅಧಿಕಾರಿಗಳೂ ಪಠ್ಯಪುಸ್ತಕದಂತೆ ಅದನ್ನು ಸೇನಾಶಿಬಿರಗಳಲ್ಲಿ ಓದುತ್ತಿದ್ದರು ಜಯಮಣಿ ಸುಬ್ರಹ್ಮಣ್ಯಂ ಎಂಬ ಲೇಖಕರಿಂದ ಅದು ತಮಿಳಿಗೂ ಭಾಷಾಂತರವಾಯಿತು. ನೇತಾಜಿಯವರ ಸಮ್ಮತಿ ಹಾಗೂ ಶುಭಾಶೀರ್ವಾದಗಳೊಡನೆ ಮೊದಲು ತಮಿಳು ಆವೃತ್ತಿಯನ್ನು ಐ. ಎನ್. ಎ. ಪ್ರಕಟಿಸಿತು.

ಭಾರತದಲ್ಲಿ 1937ರಲ್ಲಿ ಕಾಂಗ್ರೆಸ್ ಮಂತ್ರಿಮಂಡಲಗಳು ಅಸ್ತಿತ್ವಕ್ಕೆ ಬಂದವು ಆದರೆ 1857ರ ಇತಿಹಾಸದ ಮೇಲಿನ ನಿಷೇಧಾಜ್ಞೆ ಮಾತ್ರ ದೂರವಾಗಲಿಲ್ಲ. ಆದ್ದರಿಂದ ಆ ನಿರ್ಬಂಧವನ್ನು ಮುರಿಯಲು ಅನೇಕ ದೇಶಭಕ್ತರು ಗುಪ್ತವಾಗಿ ನಿಧಿ ಕೂಡಿಸಿದರು ; ಮುಂಬೈನಲ್ಲಿ ಮತ್ತೊಮ್ಮೆ ಇಂಗ್ಲಿಷ್ ಪ್ರತಿಗಳನ್ನು ಮುದ್ರಿಸಿದರು. ಅವನ್ನು ಬಹಿರಂಗವಾಗಿ ಮಾರಾಟ ಮಾಡಿ ಬಂಧನಕ್ಕೆ ಒಳಗಾಗುವುದು ಅವರ ಉದ್ದೇಶವಾಗಿತ್ತು. ಹೀಗೆ ಅಭಿನವಭಾರತದ ಕ್ರಾಂತಿಕಾರ ತಂಡಗಳು ಭಾರತದ ಸ್ವಾತಂತ್ರ್ಯಕ್ಕಾಗಿ ಸಶಸ್ತ್ರ ಹೋರಾಟ ಪ್ರಾರಂಭಿಸಿದಾಗಿನಿಂದ ಹಿಡಿದು, ನೇತಾಜಿ ಸುಭಾಷಚಂದ್ರ ಬೋಸರ ನೇತೃತ್ವದಲ್ಲಿ ಸುಸಜ್ಜಿತ ಸೇನೆಗಳು ರಣಾಂಗಣವನ್ನು ಪ್ರವೇಶಿಸುವವರೆಗೆ 1857ರ ಇತಿಹಾಸವು ಹಿಂದುಸ್ಥಾನದ ಕ್ರಾಂತಿವೀರರೆಲ್ಲರ ಪಾರಾಯಣ ಗ್ರಂಥವಾಯಿತು. ಭಾರತದ ವಿಮೋಚನೆಯ ಹೋರಾಟದಲ್ಲಿ ಕನಿಷ್ಠ ಎರಡು ಪೀಳಿಗೆಗಳಿಗಾದರೂ ಅದು ಪ್ರೇರಣೆ, ಸ್ಫೂರ್ತಿ ಹಾಗೂ ಮಾರ್ಗದರ್ಶನ ನೀಡಿತು. ಅದನ್ನು ಹತ್ತಿಕ್ಕಿ ಕೊನೆಗಾಣಿಸಲು ಹೊರಟ ಪರಕೀಯ ಸರಕಾರದ ಕ್ರೂರ ಪ್ರಯತ್ನಗಳನ್ನು ಪ್ರತಿಭಟಿಸಿ, ಆ ಪುಸ್ತಕವನ್ನೊಂದು

ರಾಷ್ಟ್ರೀಯ ಸಂಪತ್ತಿನಂತೆ ಹಾಗೂ ಮಾನಬಿಂದುವಿನಂತೆ ಇಡೀ ರಾಷ್ಟ್ರ ಉಳಿಸಿಕೊಂಡು ಬಂದಿತು.

ಈ ಸಂದರ್ಭದಲ್ಲಿ 1857ರ ಇತಿಹಾಸದ ಮಹತ್ವದ ಪಾತ್ರ ವಿವರಿಸಲು 'ಗೋಷ್ಠಿ' ಪತ್ರಿಕೆಯ ಸಂಪಾದಕರಾಗಿದ್ದ ಸುಬ್ಬರಾಯರ ಲೇಖನ ಉಲ್ಲೇಖನೀಯ :

'ಭಾರತದಲ್ಲಿ ತನ್ನ ಆಡಳಿತಕ್ಕೆ ಸಾವರಕರರ ಪುಸ್ತಕಗಳು ಅತ್ಯಂತ ಅಪಾಯಕರವೆಂದು ಬ್ರಿಟಿಷ್ ಸರಕಾರ ಭಾವಿಸಿದೆ. ಆದರೆ ನನ್ನಂಥ ಲಕ್ಷಾಂತರ ಸ್ವದೇಶ ಬಾಂಧವರು ಅದನ್ನು ಓದಿದ್ದೇವೆ. ಪಟ್ಟಭದ್ರ ಹಿತಾಸಕ್ತಿಯುಳ್ಳ ಚರಿತ್ರಕಾರರೂ, ಆಡಳಿತಗಾರರೂ ದಶಮಾನಗಳ ಕಾಲ ಕೇವಲ "ಸಿಪಾಯಿ ದಂಗೆ" ಎಂದು ಕರೆಯಲು ಹೇಸದಿದ್ದ 1857ರ ಘಟನೆಗಳಿಗೆ ಸಹಜವಾಗಿ ಸಲ್ಲಬೇಕಾದ "ಭಾರತೀಯ ಸ್ವಾತಂತ್ರ್ಯ ಸಮರ'ದ ಸ್ಥಾನ ಸಿಕ್ಕಿದೆ. ವಿರೋಧಿಗಳ ಪ್ರಯತ್ನಗಳೆಲ್ಲ ಮಣ್ಣುಗೂಡಿವೆ. ಕೇವಲ ಹೊಲಸು ದಂಗೆ ಎನಿಸಿಕೊಂಡಿದ್ದುದು ಉದಾತ್ತ ಕ್ರಾಂತಿಕಾರ್ಯದ ಸ್ವರೂಪ ತಾಳಿರುವುದು ದೇಶಭಕ್ತ ರಸಾಯನಜ್ಞನೊಬ್ಬನ ಕೈಚಳಕದಿಂದ ಅಲ್ಲವೇನು ? ಈಗಲೂ ಸಹ, ಸಾವರಕರರ ರಸಶಾಸ್ತ್ರಜ್ಞತೆ ಅಂದು ಕೆಲಸ ಮಾಡದೆ ಹೋಗಿದ್ದಲ್ಲಿ, ಸುಭಾಷ ಬೋಸರ ಆಜಾದ ಹಿಂದ ಫೌಜಿನ ಪ್ರಯತ್ನಗಳನ್ನು ಮಹಾತ್ಮರ ವಿಚಾರಧಾರೆ ಉಳ್ಳವರು ಯಾವ ಹೆಸರಿನಿಂದ ಕರೆಯುತ್ತಿದ್ದರೊ ? 1857 ಮತ್ತು 1943ರ ನಮ್ಮ ಸಮರಗಳಿಗೆ ಸೋಲೊದಗಿತು, ನಿಜ. ಆದರೆ ಅವುಗಳ ಹಿಂದಿದ್ದ ಉದ್ದೇಶವೇನು ? ಕೇವಲ ದಂಗೆಯೆ ಅಥವಾ ಸ್ವಾತಂತ್ರ್ಯ ಸಮರವೆ? 1857ಕ್ಕೂ 1943ಕ್ಕೂ ನಡುವೆ ಸಾವರಕರ್ ಪ್ರವೇಶಿಸದೆ ಹೋಗಿದ್ದಲ್ಲಿ, ಇತ್ತೀಚಿನ ಐ.ಎನ್.ಎ ನಡೆಸಿದ ಹೋರಾಟಕ್ಕೂ ಸಹ - ಬ್ರಿಟಿಷ್ ಹಾಗೂ ಕಾಂಗ್ರೆಸ್ ಶಕ್ತಿಗಳು ತಮ್ಮ ಸಶಸ್ತ್ರ ಹಾಗೂ ನಿಶ್ಶಸ್ತ್ರಗಳಿಂದ ಪರಿಣಾಮಕಾರಿಯಾಗಿ ಬಗ್ಗುಬಡಿದ ಅವಮಾನಕರ ಬಂಡಾಯ - ಎಂಬ ಹೆಸರು ಬಂದುಹೋಗುತ್ತಿತ್ತು. ಆದರೆ - ಸಾವರಕರರ ಗ್ರಂಥಕ್ಕೆ ಧನ್ಯವಾದಗಳು - ಭಾರತೀಯರ ದೃಷ್ಟಿಯಲ್ಲಿ "ದಂಗೆ" ಯ ಅರ್ಥವೇ ಕ್ರಾಂತಿಕಾರಕವಾಗಿ ಬದಲಾವಣೆ ಹೊಂದಿದೆ. ಈಗ ಸುಭಾಷರ ಹೋರಾಟವನ್ನು ಲಾರ್ಡ್ ವೇವೆಲ್ ಸಹ ದಂಗೆಯೆಂದು ಕರೆಯಲಾರ. ಹೀಗೆ, ಮೌಲ್ಯ ಪರಿವರ್ತನೆ ಮಾಡಿದ ಕೀರ್ತಿ ಸಾವರಕರರಿಗೆ, ಅವರಿಗೆ ಮಾತ್ರವೇ, ಸಲ್ಲಬೇಕು. ಆದರೆ, ಸಾವರಕರರ ಗ್ರಂಥವು ರಾಷ್ಟ್ರಕ್ಕೆ ನೀಡಿದ ಅತ್ಯುಚ್ಚ ಕೊಡುಗೆ ಒಂದಿದೆ - ಸ್ವಾತಂತ್ರ್ಯದ ಜ್ಯೋತಿ ! ನಾನೂ, ಸಹಸ್ರಾರು ಭಾರತಿಯರೂ ನಮ್ಮ ಪ್ರೀತಿಯ ಹೆಣ್ಣುಮಕ್ಕಳಿಗೆ ಝಾನ್ಸಿರಾಣಿ ಲಕ್ಷ್ಮೀಬಾಯಿಯ ಹೆಸರಿಟ್ಟುದು ಆ ಜ್ಯೋತಿಯ ಸ್ಫೂರ್ತಿಯಿಂದಲೇ. ನೇತಾಜಿ ಬೋಸರು ಸಹ ಒಂದು ಮಹತ್ವದ ಸನ್ನಿವೇಶದಲ್ಲಿ ಆ ರಾಣಿಯ ಹೆಸರಿನಿಂದ ಒಂದು ಸೇನಾ ಪಡೆಯನ್ನೇ ರೂಪಿಸಿದರು. ಸಾವರಕರರ ಅನ್ವೇಷಣೆ ಇಲ್ಲವಾಗಿದ್ದಲ್ಲಿ ಆ ಪರಾಕ್ರಮಿ ಸ್ವಾತಂತ್ರ್ಯಲಕ್ಷ್ಮಿ ಝಾನ್ಸಿರಾಣಿಯು 19ನೇ ಶತಮಾನದ ಯಾರೋ ಒಬ್ಬ ಅಜ್ಞಾತ ದಂಗೆಕೋರಳೆಂದು ಮೂಲೆಗುಂಪಾಗಿ ಹೋಗುತ್ತಿದ್ದಳು.'

*- ('ಫ್ರೀ ಹಿಂದುಸ್ಥಾನ್' ವಿಶೇಷಾಂಕ, 28 ಮೇ 1946)*

1857ರಲ್ಲಿ ಹೋರಾಡುತ್ತಾ ಮಡಿದ ಪರಮ ಪ್ರತಾಪಿ ನಾಯಕರ ಹಾಗೂ ಸೈನಿಕರ ಆತ್ಮಗಳನ್ನು ಈ ಇತಿಹಾಸವು ಅಕ್ಷರಶಃ ಪುನರುಜ್ಜೀವಿಸಿತು. ನಾನಾಸಾಹೇಬ್, ಬಾಳಾಸಾಹೇಬ್, ಕುಮಾರಸಿಂಹ, ಮಂಗಳ ಪಾಂಡೆ, ಅಹಮದ್ ಶಹಾ, ಝಾನ್ಸಿ ರಾಣಿ, ಸೇನಾಪತಿ ತಾತ್ಯಾಟೋಪೆ ಹಾಗೂ ಇತರ ಅಸಂಖ್ಯ ಕಲಿಗಳನ್ನು ಜನರು ಮೆಚ್ಚಿ, ನಿಷ್ಠೆಯಿಂದ ಅವರಿಗೆ ತಲೆಬಾಗುವಂತೆ ಮಾಡಿತು.

1857ರ ಇತಿಹಾಸದ ಮೂಲ ಮರಾಠಿ ಹಸ್ತಪ್ರತಿಗಳು ಎರಡಿದ್ದವು - ಒಂದು ನಾನು ಬರೆದ ಕರಡು

ಪ್ರತಿ, ಇನ್ನೊಂದು ಮುದ್ರಣಕ್ಕೆ ಕೊಡಲು ತಯಾರಿಸಿದ ಅಂದವಾದ ಪ್ರತಿ. ಅದರ ಮುದ್ರಣ ಅಸಾಧ್ಯವೆಂದು ಕಂಡುಬಂದುದರಿಂದ ಅಂದವಾದ ಪ್ರತಿಯನ್ನು ಶ್ರೀಮತಿ ಕಾಮಾ ಅವರಿಗೆ ಕೊಟ್ಟಿದ್ದೆ ಅವರು ಅದನ್ನು 'ಬ್ಯಾಂಕ್ ಆಫ್ ಫ್ರಾನ್ಸ್'ನಲ್ಲಿದ್ದ ತಮ್ಮ 'ಸೇಫ್'ನಲ್ಲಿ ಇಟ್ಟರು. ಅಲ್ಲಿಗೆ ಇಂಗ್ಲಿಷ್ ಗುಪ್ತಚರರ ಕರಾಳ ಕೈಯಿಂದ ಅದು ದೂರ ಉಳಿಯಿತು. ಆದರೆ ಫ್ರಾನ್ಸ್ ಮೇಲೆ ಜರ್ಮನಿಯ ಆಕ್ರಮಣವಾದ ನಂತರ ಅದು ಮತ್ತೆ ಸಿಕ್ಕಲಿಲ್ಲ

ಮೂಲ ಕರಡುಪ್ರತಿಯನ್ನು ಡಾ. ಕೊಟಿನೋ ಅವರಿಗೆ ನಾನು ಕೊಟ್ಟಿದ್ದೆ. ಅವರು ಗೋವಾದವರು; ಅಭಿನವ ಭಾರತದ ಸದಸ್ಯರು ; ಪೋರ್ಚುಗೀಸ್ ಪ್ರಜೆಯಾದ್ದರಿಂದ ಬ್ರಿಟಿಷ್ ಸರಕಾರಕ್ಕೆ ಅವರ ಬಗ್ಗೆ ಸಂದೇಹವಿರಲಿಲ್ಲ. ಗೋವಾದಲ್ಲಿ ಒತ್ತಾಯಕ್ಕೆ ಸಿಕ್ಕಿ ಕ್ರಿಶ್ಚನ್ ಆಗಿದ್ದ ಅವರಿಗೆ ಹಿಂದು ಧರ್ಮಕ್ಕೆ ಪುನಃ ಸೇರುವ ಇಚ್ಛೆ ಬಲವಾಗಿತ್ತು. ಇಂಗ್ಲೆಂಡಿನಿಂದ ಅವರು ಕೆಲಸಕ್ಕಾಗಿ ಅಮೆರಿಕಕ್ಕೆ ಹೋದಾಗ ಹಸ್ತಪ್ರತಿಯೂ ಅವರ ಜತೆಗೇ ಹೋಯಿತು. ಅವರು 1948ರ ವರೆಗೂ ಸುರಕ್ಷಿತವಾಗಿ ಅದನ್ನು ರಕ್ಷಿಸಿಟ್ಟಿದ್ದರು. ಅನಂತರ ಅವರ ಮಿತ್ರ ಡಿ.ವೈ. ಗೊಹೋಕರ್ ಅಮೆರಿಕದಿಂದ ಭಾರತಕ್ಕೆ ಬಂದಾಗ ಅವರ ಮೂಲಕ ನನಗೆ ಅದನ್ನು ವಾಪಸು ಕಳಿಸಿಕೊಟ್ಟರು ನನ್ನ ಬರವಣಿಗೆಯಲ್ಲೇ ಇದ್ದ ಅದು 1949ರ ಫೆಬ್ರವರಿಯಲ್ಲಿ ಕೈಸೇರಿತು. ನಾನು ಕೊಟಿನೋ ಅವರಿಗೆ ಪತ್ರ ಬರೆದೆ :

'....ನೀವು ಸುಮಾರು ನಲವತ್ತು ವರ್ಷಗಳ ಕಾಲ ರಾಷ್ಟ್ರೀಯ ಸಂಪತ್ತಿನಂತೆ ಜೋಪಾನವಾಗಿ ಕಾಪಾಡಿದ್ದ 1857ರ ಇತಿಹಾಸದ ಮರಾಠಿ ಹಸ್ತಪ್ರತಿಯನ್ನು ಡಾ. ಗೊಹೋಕರ್ ನನಗೆ ತಲುಪಿಸಿದರು. ಪ್ರತಿಭಾಶಾಲಿ ವಿದ್ವಾಂಸರು ಹಾಗೂ ಸಂಪಾದಕರನ್ನೊಳಗೊಂಡ ಸಹಸ್ರಾರು ಜನರು ನಿಮಗೆ ಅದಕ್ಕಾಗಿ ಕೃತಜ್ಞರಾಗಿದ್ದಾರೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.'

ಹೀಗೆ ಹಿಂದುಸ್ಥಾನದ ಸ್ವಾತಂತ್ರ್ಯೋದಯ ಆಗುತ್ತಿದ್ದಂತೆಯೇ ಮೂಲ ಮರಾಠಿ ಪ್ರತಿಯೂ ಕಾಲಗರ್ಭದಿಂದ ಉದಯವಾಗಿ ಬಂದು ಕೈಸೇರಿತು !





# ಹವಿಸ್ಸು ಹದಿನೈದು

1907ರ ಮೂರನೆಯ ವಾರ ಜರ್ಮನಿಯ ಸ್ಟಟಗಾರ್ಟ್‌ನಲ್ಲಿ ಅಂತಾರಾಷ್ಟ್ರೀಯ ಸಮಾಜವಾದಿ ಸಮ್ಮೇಳನ ಜಗತ್ತಿನ ನಾನಾ ರಾಷ್ಟ್ರಗಳಿಂದ ಆಗಮಿಸಿದ್ದ ಪ್ರತಿನಿಧಿಗಳ ಸಂಖ್ಯೆ ಒಂದು ಸಹಸ್ರ ಭಾರತದ ಹೆಸರು ಬಂದಾಗ ವೇದಿಕೆ ಹತ್ತಿನಿಂತ ವ್ಯಕ್ತಿ ಓರ್ವ ಮಹಿಳೆ ವರ್ಣರಂಜಿತ ಸೀರೆ ; ಆಕರ್ಷಕ ಗಂಭೀರ ನಿಲುವು. 'ಯಾರಿವಳು ?' ಎಂಬ ಅಚ್ಚರಿಯ ಗೆರೆ ಇಡೀ ಸಭೆಗೆ ಮೂಡಿತು 'ಇವಳೊಬ್ಬ ಭಾರತದ ರಾಜಕುವರಿ' ಎಂದು ಪ್ರತಿನಿಧಿಗಳೆಲ್ಲ ಪರಸ್ಪರ ಪಿಸುಗುಟ್ಟಿದರು. ಇಂಗ್ಲೆಂಡಿನ ಓರ್ವ ಪ್ರತಿನಿಧಿ ರ್‍ಯಾಮ್ಸೆ ಮ್ಯಾಕ್‌ಡೊನಾಲ್ಡ್ ಆಕೆಗೆ ಅವಕಾಶ ಕೊಡಬಾರದೆಂದ ಅವನ ಪ್ರತಿಭಟನೆಗೆ ಯಾರೂ ಕಿವಿಗೊಡಲಿಲ್ಲ ಮತ್ತೋರ್ವ ಪ್ರತಿನಿಧಿ ಹೈಂಡ್‌ಮನ್ ಮತ್ತು ಫ್ರಾನ್ಸಿನ ಜೀನ್ ಜಾರಿಸ್ ಆಕೆಗೆ ಬೆಂಬಲ ನೀಡಿದರು.

'ಹಿಂದುಸ್ಥಾನದಲ್ಲಿ ಬ್ರಿಟಿಷರ ಆಡಳಿತ ಮುಂದುವರಿಯುವುದು ಹಿಂದುಸ್ಥಾನದ ಹಿತಕ್ಕೆ ಬಹು ಹಾನಿಕರ ಹಾಗೂ ತೀರ ವಿಪತ್ಕಾರಕ ಈ ಪದದಲಿತ ದೇಶದಲ್ಲಿರುವ ಐದರಲ್ಲೊಂದು ಪಾಲು ಮಾನವ ಜನಾಂಗವನ್ನು ದಾಸ್ಯದಿಂದ ಮುಕ್ತಗೊಳಿಸಲು ಜಗತ್ತಿನ ಸ್ವಾತಂತ್ರ್ಯ ಪ್ರೇಮಿಗಳೆಲ್ಲರೂ ಸಹಕರಿಸಬೇಕು' ಎಂಬ ನಿರ್ಣಯವನ್ನು ದಿಟ್ಟವಾಗಿ ಮಂಡಿಸಿದಳು ಆ ಮಹಿಳೆ. ಅದರ ಜತೆಗೆ ತಟ್ಟನೆ ಒಂದು ಧ್ವಜ ಬಿಚ್ಚಿ ಹಿಡಿದಳು

'ಭಾರತೀಯ ಸ್ವಾತಂತ್ರ್ಯದ ಧ್ವಜ ಇದು ! ನೋಡಿ, ಇದೀಗ ಜನ್ಮ ತಾಳಿದೆ ! ಹುತಾತ್ಮರಾದ ಭಾರತೀಯ ಯುವಕರ ರಕ್ತದಿಂದ ಇದು ಪಾವನಗೊಂಡಿದೆ ಮಹಾಶಯರೇ, ಮೇಲೇಳಿ ; ಭಾರತೀಯ ಸ್ವಾತಂತ್ರ್ಯದ ಈ ಧ್ವಜಕ್ಕೆ ಪ್ರಣಾಮ ಸಲ್ಲಿಸಿ ಭಾರತದ ವಿಮೋಚನೆಗೆ ತಾವೆಲ್ಲರೂ ನೆರವಾಗಬೇಕು ; ಈ ಧ್ವಜದ ಸಾಕ್ಷಿಯಾಗಿ ನಾನು ಪ್ರಾರ್ಥಿಸಿಕೊಳ್ಳುತ್ತಿದ್ದೇನೆ' ಎಂದಳು

ಸಭೆಗೆ ಸಭೆಯೇ ಮಂತ್ರಮುಗ್ಧವಾಗಿ ಮೇಲೆದ್ದು ಆ ಧ್ವಜಕ್ಕೆ ಗೌರವ ಸಲ್ಲಿಸಿತು. ವಿರೋಧದ ಸ್ವರ ಎತ್ತಿದ್ದ ಬ್ರಿಟಿಷ್ ಪ್ರತಿನಿಧಿಗಳಿಗೂ ಬೇರೆ ಮಾರ್ಗ ಉಳಿಯಲಿಲ್ಲ 'ಸಜ್ಜನರೇ, ಇಷ್ಟು ಹೊತ್ತೂ ನೀವು ಸಣ್ಣಪುಟ್ಟ ಪಸಾಹತುಗಳ ಬಗ್ಗೆ ಮಾತ್ರ ಚರ್ಚಿಸುತ್ತಿದ್ದಿರಿ ಆದರೆ ದೇಶಕ್ಕೆ ದೇಶವೇ ಪಾರತಂತ್ರ್ಯಕ್ಕೆ ಸಿಕ್ಕಿದ್ದಲ್ಲಿ ಅದರ ಪಾಡೇನು ? ನ್ಯಾಯದ ಪಕ್ಷ ಹಿಡಿಯಿರಿ , ಪ್ರತಿಯೊಂದು ಸಮಾಜವಾದಿ ಸಮ್ಮೇಳನದಲ್ಲೂ

ಭಾರತದ ಪ್ರಶ್ನೆಯನ್ನು ಮುಂದೆ ತನ್ನಿ' ಎಂದು ಆ ಮಹಿಳೆ ಆದೇಶವನ್ನೇ ನೀಡಿದಳು.

ಶ್ರೀಮತಿ ಕಾಮಾ ಮತ್ತು ಸರದಾರಸಿಂಗಜಿ ರಾಣಾರನ್ನು ನಾವು ಸಮ್ಮೇಳನಕ್ಕೆ ಕಳುಹಿಸಿದ್ದೆವು. ಅಂತಾರಾಷ್ಟ್ರೀಯ ವೇದಿಕೆಗಳಲ್ಲಿ ಭಾರತವನ್ನು ಪ್ರತಿನಿಧಿಸಿ ಪ್ರಚಾರ ಮಾಡುವುದು ; ನಮ್ಮ ಸ್ವಾತಂತ್ರ್ಯ ಪ್ರಯತ್ನಕ್ಕೆ ಜಾಗತಿಕ ಸಹಾನುಭೂತಿ, ಸಹಕಾರ ಗಳಿಸುವುದು, ನಮ್ಮ ಉದ್ದೇಶ. ಅಂದು ಶ್ರೀಮತಿ ಕಾಮಾ ಪ್ರದರ್ಶಿಸಿದ ಧ್ವಜದ ನಡುವೆ 'ವಂದೇ ಮಾತರಂ' ಅಂಕಿತವಾಗಿತ್ತು. ಅದರ ಮೇಲ್ಭಾಗದಲ್ಲಿ ಹಿಂದು ಸ್ಥಾನದಲ್ಲಿ ಆಗ ಇದ್ದ ಎಂಟು ಪ್ರಾಂತಗಳ ಸಂಕೇತವಾಗಿ ಎಂಟು ಕಮಲಗಳು. ಕೆಳಗೆ ಸೂರ್ಯ ಮತ್ತು ಚಂದ್ರ. ಇಡೀ ಧ್ವಜಕ್ಕೆ ತ್ರಿವರ್ಣದ ಹಿನ್ನೆಲೆ- ಶಕ್ತಿಯ ಪ್ರತೀಕವಾದ ಕೆಂಪು, ವಿಜಯದ ಪ್ರತೀಕವಾದ ಕೇಸರಿ, ಧೈರ್ಯೋತ್ಸಾಹಗಳ ಪ್ರತೀಕವಾದ ಹಸಿರು. 'ಈ ಧ್ವಜದ ನಮೂನೆ ತಯಾರಿಸಿದ ವ್ಯಕ್ತಿ ಓರ್ವ ಶ್ರೇಷ್ಠ ನಿಃಸ್ವಾರ್ಥಿ ಭಾರತೀಯ ತರುಣ ದೇಶಭಕ್ತ' ಎಂದು ಕಾಮಾ ಸಾರಿದರು. ಆಕೆ ನನ್ನ ಕುರಿತು ಆಡಿದ ಅಭಿಮಾನದ ಮಾತುಗಳು, ಅವು.


ಮೇಡಂ ಕಾಮಾ

ನಮ್ಮ ಪ್ರಪ್ರಥಮ ಪ್ರಯತ್ನ ಯಶಸ್ವಿಯಾಯಿತು ; ನಿರ್ಣಯವನ್ನು ಸಮ್ಮೇಳನ ಅಂಗೀಕರಿಸಿತು. ನಾನು ಊಹಿಸಿದ್ದ ದೂರಗಾಮಿ ಪರಿಣಾಮಗಳೂ ಆಗದಿರಲಿಲ್ಲ. ಮುಂದೆ ಜರ್ಮನಿಯ ಕೈಸರ್ ಅಮೆರಿಕದ ಅಧ್ಯಕ್ಷ ವಿಲ್ಸನ್‌ಗೆ ನೀಡಿದ ಉತ್ತರದಲ್ಲಿ, ಭಾರತದ ಸಂಪೂರ್ಣ ರಾಜಕೀಯ ಸ್ವಾತಂತ್ರ್ಯವು ವಿಶ್ವಶಾಂತಿಯ ಅನಿವಾರ್ಯ ಷರತ್ತುಗಳಲ್ಲಿ ಒಂದೆಂದು ಸ್ಪಷ್ಟಪಡಿಸಿದರು.

ಯುರೋಪಿನ ರಾಷ್ಟ್ರಗಳ ವಿದ್ಯಮಾನಗಳನ್ನೂ ನಾನು ಸೂಕ್ಷ್ಮವಾಗಿ ಅವಲೋಕಿಸುತ್ತಿದ್ದೆ. ನಾಲ್ಕಾರು ವರ್ಷಗಳಲ್ಲೆ ಮಹಾಯುದ್ಧ ಸಂಭವಿಸುವುದೆಂಬ ಸುಳಿವು ನನಗೆ ಹತ್ತಿತ್ತು. ಅದಕ್ಕಾಗಿ ಯುದ್ಧದ ಸಂದರ್ಭದಲ್ಲೆ ಭಾರತವನ್ನು ಮುಕ್ತಗೊಳಿಸುವ ಯೋಜನೆಯನ್ನು ರೂಪಿಸಿದೆ. ಏಕೆಂದರೆ, ಬ್ರಿಟನ್ನಿನ ವಿಪತ್ಕಾಲವೇ ನನಗೆ ಸದವಕಾಶ. ಭಾರತದಲ್ಲಿ ಕ್ರಾಂತಿ ವಿಚಾರದ ಪ್ರಚಾರ ; ನೆರೆಹೊರೆಯ ದೇಶಗಳಲ್ಲಿ ಶಸ್ತ್ರಾಸ್ತ್ರಗಳ ಖರೀದಿ ಮತ್ತು ಸಂಗ್ರಹ ; ಸಣ್ಣ ಬಾಂಬ್ ಕಾರ್ಖಾನೆಗಳ ಸ್ಥಾಪನೆ ; ಪರದೇಶಗಳಲ್ಲಿ ಶಸ್ತ್ರಗಳ ಖರೀದಿ ಮತ್ತು ರಹಸ್ಯವಾಗಿ ಭಾರತಕ್ಕೆ ರವಾನೆ ; ಸಾಧ್ಯವಾದಾಗಲೆಲ್ಲಾ 'ವೃಕಯುದ್ಧ' ತಂತ್ರ ಬಳಸುವುದು; ಕ್ರಾಂತಿಗೆ ಸಮಯಾವಕಾಶ ಕಾಯುವುದು ; ಸೇನೆಗೂ ದೇಶಭಕ್ತಿ ಹಾಗೂ ರಾಜಕಾರಣ ಕಾವನ್ನು ಮುಟ್ಟಿಸಿ ಸೈನಿಕರ ಮನಸ್ಸನ್ನೂ ತಿರುಗಿಸುವುದು - ಮುಂತಾದ ಅಂಶಗಳ ಆಧಾರದ ಮೇಲೆ ಯೋಜನೆ ತಯಾರಾಯಿತು.

ಆದರೆ ಯುರೋಪಿನಲ್ಲಿ ಯುದ್ಧ ಪ್ರಾರಂಭವಾಗುವ ಮೊದಲೇ ಭಾರತದ ಕ್ರಾಂತಿಕಾರರು ದುಡುಕಿದರೆ ? ಏನಾದರೂ ಅನಾಹುತ ನಡೆಸಿದರೆ ? ಅದಕ್ಕಾಗಿ ನಮ್ಮ ಅಣ್ಣ ಬಾಬಾನಿಗೆ ಕಾಗದ ಬರೆದು ಎಚ್ಚರಿಸುತ್ತಿದ್ದೆ :

'......ನೀವೆಲ್ಲರೂ ಒಂದು ಸಂಗತಿ ಚೆನ್ನಾಗಿ ನೆನಪಿನಲ್ಲಿಡಬೇಕು. ರಾಮನ ಜನನಕ್ಕೆ ಮುಂಚೆ ಕೌಸಲ್ಯೆ

ಪ್ರಸವ ವೇದನೆ ಅನುಭವಿಸಬೇಕಾಯಿತು. ಸಿಂಹಾಸನ ಏರುವುದಕ್ಕೆ ಮೊದಲು ಪಾಂಡವರು ವನವಾಸ ಮತ್ತು ಅಜ್ಞಾತವಾಸ ಮಾಡಬೇಕಾಗಿ ಬಂತು. ಆದ್ದರಿಂದ ನಾನು ಹಿಂದಿರುಗಿ ಬರುವವರೆಗೆ ನಿಮ್ಮ ಅಜ್ಞಾತವಾಸದ ಕಾಲ ಎಂದು ತಿಳಿದುಕೊಂಡು, ನಿರಂತರವಾಗಿ ಕಾರ್ಯ ಮುಂದುವರಿಸಿ '

1906ರ ಕೊನೆಯ ಭಾಗದಿಂದಲೇ ನಾವು ಪಿಸ್ತೂಲುಗಳ ಸಂಗ್ರಹ, ಗುರಿಹೊಡೆಯುವ ಅಭ್ಯಾಸ ಇತ್ಯಾದಿ ಪ್ರಾರಂಭಿಸಿದೆವು. ದಪ್ಪದಪ್ಪ ಬೈಬಲ್ ಪುಸ್ತಕಗಳ ಹಾಳೆಗಳನ್ನು ಕೊರೆಯುವುದು; ಅವುಗಳೊಳಗೆ ಪಿಸ್ತೂಲನ್ನು ಅಡಗಿಸಿಟ್ಟು ಭಾರತಕ್ಕೆ ರವಾನಿಸುವುದು! ಸೇನಾಪತಿ ಬಾಪಟ್ ಎಲ್ಲರಿಗಿಂತ ಉಗ್ರಗಾಮಿ 1907ರ ಮೇ ತಿಂಗಳಲ್ಲಿ ಲಾಲಾ ಲಜಪತರಾಯರ ಗಡಿಪಾರು ಆಯಿತಷ್ಟೆ. ಆಗ ಮುಂದೇನು ಮಾಡ ಬೇಕೆಂದು ಯೋಚಿಸಲು ಭಾರತ ಭವನದಲ್ಲಿ ಸಭೆ ಸೇರಿದ್ದೆವು. ಬಾಪಟ್ ತಮ್ಮ ಸಲಹೆ ಮುಂದಿಟ್ಟರು: 'ಮೂರು ತಿಂಗಳಲ್ಲಿ ಅವರನ್ನು ಬಿಡುಗಡೆ ಮಾಡುವಂತೆ ಸರಕಾರಕ್ಕೆ ಒಳ್ಳೆಯ ಮಾತಿನಲ್ಲಿ ತಿಳಿಸೋಣ. ಅವರು ಅಷ್ಟರೊಳಗೆ ಬಿಡದಿದ್ದರೆ, ನಾನು ಸ್ಟೇಟ್ ಸೆಕ್ರೇಟರಿ ಮಾರ್ಲೆಯ ಮೇಲೆ ಪಿಸ್ತೂಲು ಚಲಾಯಿಸುತ್ತೇನೆ.'

ಅಭಿನವಭಾರತದ ಮುಖ್ಯಸ್ಥನಾದ ನಾನು ಬಾಪಟರ ಯೋಜನೆ ತಳ್ಳಿ ಹಾಕಬೇಕಾಯಿತು. ಆದರೂ, ಅವರ ಸಾಹಸವೃತ್ತಿಗೆ ತಕ್ಕಂಥ ಕಾರ್ಯ ಅವರಿಗೆ ವಹಿಸಲೇಬೇಕಷ್ಟೆ. ಬಾಂಬ್ ತಯಾರಿಕೆಯ ವಿದ್ಯೆ ಕಲಿಯಲು ಅವರನ್ನು ನಿಯೋಜಿಸಿದೆ. ಅವರೇ ಹೇಳುವಂತೆ, 'ಜೂನ್ 11ರಂದು ನಾನು ಸ್ವಾತಂತ್ರ್ಯವೀರ ಸಾವರಕರರ ಅನುಮತಿ ಹಾಗೂ ಸಹಾಯ ಪಡೆದು ಪ್ಯಾರಿಸ್ಸಿಗೆ ಹೋದೆ. ಸಾವರಕರ್ ಇಂಗ್ಲೆಂಡಿನಲ್ಲಿದ್ದ ಭಾರತೀಯರಿಂದ ಹಣ ಸಂಗ್ರಹಿಸಿಕೊಟ್ಟಿದ್ದರು'. ಅಲ್ಲಿ ಬಾಪಟ್, ಹೇಮಚಂದ್ರ ದಾಸ್, ಹೋತಿಲಾಲ ವರ್ಮಾ ಒಟ್ಟುಗೂಡಿದರು. ಪ್ಯಾರಿಸ್ಸಿನಲ್ಲಿ ಭೂಗತರಾಗಿ ಜೀವಿಸುತ್ತಿದ್ದ ಕೆಲವು ರಶ್ಯನ್ ಕ್ರಾಂತಿಕಾರಿಗಳಿಗೆ ಬಾಂಬ್ ತಯಾರಿಕೆ ಗೊತ್ತಿತ್ತು. ಅವರ ಪೈಕಿ ಓರ್ವ ವೃದ್ಧ ರಸಾಯನಜ್ಞನಿಂದ ಬಾಪಟ್ ವಿವರಗಳ ಪುಸ್ತಕ ಸಂಪಾದಿಸಿದರು. ಆದರೆ ಅದು ಇದ್ದುದು ರಶ್ಯನ್ ಭಾಷೆಯಲ್ಲಿ. ಬಾಪಟರಿಗೆ ಎಡಿನ್‌ಬರೋದಲ್ಲಿ ಇದ್ದಾಗಲೇ ಕುಮಾರಿ ಅನ್ಯಾ ಎಂಬ ರಶ್ಯನ್ ವಿದ್ಯಾರ್ಥಿನಿಯ ಪರಿಚಯವಾಗಿತ್ತು. ಬಾಪಟ್ ಕೂಡಲೆ ಬರ್ಲಿನ್‌ಗೆ ಹೋಗಿ ಅವಳನ್ನು ಕರೆತಂದರು. ಅನ್ಯಾ ಅದನ್ನು ಇಂಗ್ಲಿಷಿಗೆ ಭಾಷಾಂತರಿಸಿದಳು ಅಭಿನವಭಾರತದ ಯೋಜನೆಯ ಮೇರೆಗೆ ಅದರ ಪ್ರತಿಗಳು ತಯಾರಾದವು. ಭಾರತದ ಕ್ರಾಂತಿಕಾರಿಗಳಿಗೆ ಅದನ್ನು ರಹಸ್ಯವಾಗಿ ಮುಟ್ಟಿಸಲು ಲಾಲ್ ಮತ್ತು ವರ್ಮಾ ಪ್ರಯಾಣ ಬೆಳೆಸಿದರು.

ಬಾಂಬ್ ತಯಾರಿಕೆ ಗೊತ್ತಾಗುತ್ತಲೇ ಬಾಪಟ್ ಲಂಡನ್ನಿನಲ್ಲಿ ಪ್ರತ್ಯಕ್ಷರಾದರು. 'ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಮೊದಲ ಬಾಂಬ್ ಪ್ರಯೋಗಿಸುತ್ತೇನೆ, ಅನುಮತಿ ಕೊಡಿ' ಎಂದು ನನ್ನ ಮೇಲೆ 'ಸಮಸ್ಯೆಯ ಬಾಂಬ್' ಎಸೆದರು! ಆ ರೀತಿಯ ವೈಯಕ್ತಿಕ ಸಾಹಸ ಪ್ರದರ್ಶನದ ಅನರ್ಥಗಳನ್ನು ಅವರಿಗೆ ನಾನು ತಿಳಿಸಿ ಹೇಳಿದೆ: 'ಅದು ಕ್ಷಣಿಕ ಮಿಂಚಿನಂತೆ; ಪುನಃ ಮೊದಲಿಗಿಂತ ಹೆಚ್ಚಿನ ಕತ್ತಲು ಕವಿಯುತ್ತದೆ. ಅದರ ಬದಲು ನೀವೀಗ ಹಿಂದುಸ್ಥಾನಕ್ಕೆ ಹಿಂದಿರುಗುವುದು ಅಗತ್ಯ. ಅಲ್ಲಿ ಕ್ರಾಂತಿಕೇಂದ್ರಗಳೆಲ್ಲಕ್ಕೂ ಬಾಂಬ್ ವಿದ್ಯೆ ಕಲಿಸಿಕೊಡಿ. ನಾವೆಲ್ಲರೂ ಒಂದು ಶಿಸ್ತಿಗೆ ಒಳಪಟ್ಟು ಅದರಂತೆ ನಡೆದುಕೊಳ್ಳಬೇಕು' ಎಂದು ಹೇಳಿ ಅವರನ್ನು ಒಪ್ಪಿಸಿದೆ.

ಲಂಡನ್ನಿನಲ್ಲಿ ಬಾಂಬ್ ತಯಾರಿಕೆ ಆರಂಭಿಸಬೇಕಾಗಿತ್ತು. ನನ್ನ ಕೊಠಡಿಯ ಪಕ್ಕದಲ್ಲಿದ್ದ ಖಾಲಿ ಕೊಠಡಿಯೇ ಪ್ರಯೋಗಶಾಲೆಯಾಯಿತು. ಬಾಂಬ್ ಮಾಡುವಲ್ಲಿ ಪಿಕ್ರಿಕ್ ಆಮ್ಲದ ತಯಾರಿಕೆ ಅತಿ

ಮಹತ್ವದ ಭಾಗ. ಆದರೆ ಅದು ಅತ್ಯಂತ ಅಪಾಯಕರ. ಆ ಆಮ್ಲ ತಗುಲಿದ ಕಾಗದಗಳನ್ನು ಕೂಡಲೆ ನಾಶಗೊಳಿಸಬೇಕು. ಆ ಬಗ್ಗೆ ನಾನು ವಿಶೇಷ ಎಚ್ಚರಿಕೆ ವಹಿಸುತ್ತಿದ್ದೆ. ಬಾಪಟ್ ಇದ್ದಾಗ, ಒಮ್ಮೆ ಕೆಲವು ಕಾಗದದ ಚೂರುಗಳನ್ನು ಸುಮ್ಮನೆ ಅಗ್ಗಿಷ್ಟಿಕೆಯ ಒಳಕ್ಕೆ ಎಸೆದರು. ಇದಕ್ಕಿದ್ದಂತೆ ಭೀಕರ ಆಸ್ಫೋಟವಾಗಿ ಜ್ವಾಲೆ ಎದ್ದಿತು. ಆದರೆ ಹೊಗೆ, ಉರಿ ಎಲ್ಲವೂ ಅಲ್ಲಿದ್ದ ಹೊಗೆಗೂಡಿನ ಮೂಲಕ ಕ್ಷಣಮಾತ್ರದಲ್ಲಿ ಕಣ್ಮರೆಯಾಯಿತು ಹೊಗೆಗೂಡು ಇಲ್ಲವಾಗಿದ್ದಲ್ಲಿ ಇಡೀ ಪ್ರಯೋಗಾಲಯವೇ ಭಸ್ಮವಾಗಿ ಹೋಗುತ್ತಿತ್ತು; ಜೊತೆಗೆ ನಾವೂ ಸಹ !

ಆ ಶಬ್ದ ಕೇಳಿ ಭಾರತಭವನದ ನೆರೆಹೊರೆಯವರೆಲ್ಲ ಬಾಗಿಲ ಬಳಿ ಗುಂಪು ಸೇರಿದರು. ತತ್‌ಕ್ಷಣವೇ ನಾನು ಕೆಳಕ್ಕೆ ಧಾವಿಸಿದೆ. 'ನಾನೂ ಇದೇ ತಾನೆ ಸದ್ದು ಕೇಳಿದೆ. ಇಲ್ಲೆ ಎಲ್ಲೋ ಹತ್ತಿರದಲ್ಲೆ ಭಾರೀ ಆಸ್ಫೋಟ ಆಗಿರಬೇಕು. ನಡೆಯಿರಿ, ಹುಡುಕಿ ನೋಡೋಣ' ಎಂದು ಹೇಳುತ್ತಾ ಅವರೆಲ್ಲರನ್ನೂ ಸಾಗ ಹಾಕಿದ್ದಾಯಿತು ! ಪ್ರಯೋಗಾಲಯದಲ್ಲಿ ಕೇವಲ ಆರಿಸಿದ ತರುಣರಿಗೆ ಮಾತ್ರ ಪ್ರವೇಶಾವಕಾಶ. ಅಲ್ಲಿ ಎಷ್ಟೋ ವೇಳೆ ಹೊತ್ತು ಕಳೆದುದು ಗೊತ್ತೇ ಆಗುತ್ತಿರಲಿಲ್ಲ. ಎಷ್ಟೋ ವೇಳೆ, ಅಲ್ಲಿಂದ ನೇರವಾಗಿ ಫ್ರೀ ಇಂಡಿಯಾ ಸೊಸೈಟಿಯ ಸಭೆಗಳಿಗೆ ಹೋಗಿ, ಇತಿಹಾಸ, ರಾಜಕಾರಣ, ಸ್ವಾತಂತ್ರ್ಯ ಕ್ರಾಂತಿ ಇತ್ಯಾದಿ ವಿಷಯಗಳ ಬಗ್ಗೆ ಭಾಷಣ ಪ್ರಾರಂಭಿಸುತ್ತಿದ್ದೆ. ಆಗ ಪಿಕ್ರಿಕ್ ಆಮ್ಲದ ಹಳದಿ ಹಾಗೂ ಕಂದು ಕಲೆಗಳು ಕೈಯಲ್ಲಿ ಹಾಗೇ ಇರುತ್ತಿದ್ದವು. ಭಾವೀ ಸ್ವಾತಂತ್ರ್ಯ ಸಮರದ ದೃಷ್ಟಿಯಿಂದ ಕೆಲವು ಗೆಳೆಯರಿಗೆ ಸೈನಿಕ ಶಿಕ್ಷಣಕ್ಕೂ ಏರ್ಪಾಟು ಮಾಡಿದೆವು.

1908 ಮೇ 2ರಂದು ಶಿವಜನ್ಮೋತ್ಸವ. ಲಂಡನ್ ನಗರದಲ್ಲಿ ಶಿವ ಛತ್ರಪತಿಯ ಪ್ರಪ್ರಥಮ ಜಯಕಾರ ಮೊಳಗಿತು. ಉಚ್ಚಾಸನದಲ್ಲಿ ಶಿವಾಜಿಯ ಮೂರ್ತಿ ಹಾಗೂ ಉನ್ನತವಾಗಿ ಹಾರಾಡುವ ಭಗವಾಧ್ವಜ ಶೋಭಿಸಿತು. ಅದರಡಿಯಲ್ಲಿ ನಾನಾ ಪ್ರಾಂತಗಳಿಗೆ ಸೇರಿದ ಹಿಂದು, ಮುಸಲಮಾನ್, ಪಾರಸಿ, ಯಹೂದಿ ಇತ್ಯಾದಿ ಸಕಲರೂ ಸೇರಿದ್ದೆವು. ಅನೇಕರಿಗೆ ಅಶಕ್ಯ ಎನಿಸುವಂಥ ಹಿಂದು ರಾಷ್ಟ್ರೈಕ್ಯ ಅಂದು ಅಲ್ಲಿ ಸಾಕಾರಗೊಂಡಿತ್ತು. ಪ್ರಮುಖ ವಕ್ತಾರ ದೇಶಭಕ್ತ ಅಯ್ಯರ್ ಮಾತನಾಡುತ್ತಾ, 'ಶಿವಾಜಿಯಂಥ ವಿಭೂತಿಯ ಜನ್ಮ ಎಂದರೆ, ನಮ್ಮ ಆರ್ಯಜಾತಿ ಇಂದಿಗೂ ವೇದಕಾಲದಲ್ಲಿದ್ದಷ್ಟೇ ಮಾತ್ರವಲ್ಲ, ಅದಕ್ಕಿಂತಲೂ ಹೆಚ್ಚು ಚೈತನ್ಯಯುಕ್ತವಾಗಿದೆ ಎಂದು ತೋರಿಸಿಕೊಡುವ ಗರ್ಜನೆ ಇದ್ದಂತೆ. ಅಂದು ಶಿವಾಜಿ ಹೋರಾಡಿದ್ದು ಯಾವುದೇ ಜಾತಿಯ ವಿರುದ್ಧ ಅಲ್ಲ ; ಅನ್ಯಾಯ ಹಾಗೂ ದಾಸ್ಯದ ವಿರುದ್ಧ ; ಯಾವ ಬತ್ತಳಿಕೆಯಿಂದ ಶಿವಾಜಿಯಂಥ ಬಾಣ ಹೊರಬಂತೋ ಅಂಥ ಮಹಾರಾಷ್ಟ್ರದ ಬತ್ತಳಿಕೆಯ ಕಡೆಗೆ ಇಡೀ ಹಿಂದುಸ್ಥಾನವು ಮತ್ತೊಮ್ಮೆ ಆಶಾದೃಷ್ಟಿಯಿಂದ ನೋಡುತ್ತಿದೆ' ಎನ್ನುತ್ತಾ ನನ್ನತ್ತ ಅರ್ಥಪೂರ್ಣವಾಗಿ ನೋಡಿದರು.

ಕೊನೆಗೆ ನನ್ನ ಅಧ್ಯಕ್ಷ ಭಾಷಣ :'ಮನುಷ್ಯ ಸತ್ತರೂ ಅವನ ಸತ್ಕಾರ್ಯಗಳು ಜೀವಂತವಾಗಿ ಉಳಿಯುತ್ತವೆ. ಮರಣದ ಬುತ್ತಿ ಕಟ್ಟಿಟ್ಟ ಈ ನಶ್ವರ ಜಗತ್ತಿನಲ್ಲೂ ಅಮರತ್ವ ನೀಡುವ ಅಪೂರ್ವ ರಸಾಯನವೇ ಸತ್ಕಾರ್ಯ. ಎಳ್ಳುಕಾಳಿನಷ್ಟು ಒಳ್ಳೆಯ ಕೆಲಸ ಮಾಡಿದರೂ ಶಾಶ್ವತ ಕೀರ್ತಿ ನಿಶ್ಚಿತ. ಅಂದಮೇಲೆ ಆ ಒಳ್ಳೆಯ ಕೆಲಸಗಳೆಲ್ಲ ಅತ್ಯಂತ ಶ್ರೇಷ್ಠವಾದ ಸ್ವದೇಶ ಸ್ವಾತಂತ್ರ್ಯವನ್ನು ಪ್ರಸ್ಥಾಪಿಸಿದ ಶಿವಭೂಪತಿಯ ಹೆಸರು ವರ್ಷ ವರ್ಷವೂ ಹೊಸ ಹೊಸ ತಾಮ್ರಪಟಗಳನ್ನು ಗಳಿಸುತ್ತಿರುವುದರಲ್ಲಿ ಏನಾಶ್ಚರ್ಯ ? ಶಿವನೇರಿಯ ಅರಣ್ಯದಲ್ಲಿ 1630ರಲ್ಲಿ ಹುಟ್ಟಿದ ಬಾಲಕ 1908ರಲ್ಲೂ ಜೀವಂತ

ವಾಗಿದ್ದಾನೆ; ತಾರುಣ್ಯದಿಂದ ತುಂಬಿ ತುಳುಕುತ್ತಿದ್ದಾನೆ; ಹೊಸ ಹೊಸ ದಿಗ್ವಿಜಯಗಳಲ್ಲಿ ಮಗ್ನನಾಗಿದ್ದಾನೆ. ಹೊಸ ಹೊಸ ದಡಗಳನ್ನು ಮುಟ್ಟುತ್ತಿದ್ದಾನೆ, ಹೊಸ ಹೊಸ ನಾಡುಗಳನ್ನು ಮೆಟ್ಟುತ್ತಿದ್ದಾನೆ ; ಹೊಸ ಹೊಸ ಬಾಷೆಗಳಲ್ಲಿ ಪ್ರಕಟಗೊಳ್ಳುತ್ತಿದ್ದಾನೆ. ಹೊಸ ಹೊಸ ಹೃದಯಗಳಲ್ಲಿ ಅವನ ಸಿಂಹಾಸನ ಏಳುತ್ತಿದೆ, ಹೊಸ ಹೊಸ ಕಂಠಗಳಲ್ಲಿ ಅವನ ಜಯಕಾರ ಕೇಳುತ್ತಿದೆ. ಮೃತ್ಯುಪಾಶದಿಂದ ಯಾರಾದರೂ ಮುಕ್ತಿ ಪಡೆಯಬೇಕೇನು ? ಕಾಲನ ದವಡೆಯಿಂದ ಪಾರಾಗಿ ನಿಸ್ಸೀಮ ಅಮರತ್ವ ಪಡೆಯಬೇಕೇನು ? ಹಾಗಿದ್ದರೆ ಅದಕ್ಕಿರುವುದು ಏಕಮಾತ್ರ ಉಪಾಯ. ಸ್ವದೇಶ ಸ್ವಾತಂತ್ರ್ಯದ ರಣಾಂಗಣದಲ್ಲಿ ಅವನು ಹೋರಾಡಬೇಕು. ಎಂದೆಂದಿಗೂ ಮರಣದಿಂದ ಪಾರಾಗುವ ಏಕಮಾತ್ರ ಸಾಧನವೆಂದರೆ, ಸ್ವದೇಶದ ಸ್ವಾತಂತ್ರ್ಯಕ್ಕಾಗಿ ಪ್ರಾಣಾರ್ಪಣೆ ಮಾಡುವುದು !'

ಹೀಗೆ, ಉಳಿಯುವುದಕ್ಕಾಗಿ ಅಳಿದ ಶಿವಭೂಪಾಲನ ಜಯಂತಿಯನ್ನು ನಾವು ಆಚರಿಸಿದೆವು. ಸ್ವಾತಂತ್ರ್ಯ ಯೋಧರ ನೆನಪು ಅಜರಾಮರವೆಂಬುದಕ್ಕೆ, ಅವರ ಪ್ರೇರಣೆ ನದಿಪರ್ವತಗಳನ್ನೂ ಸಾಗರ ಮರುಭೂಮಿಗಳನ್ನೂ ದಾಟಿ ಹೋಗಬಲ್ಲದೆಂಬುದಕ್ಕೆ ಮತ್ತೊಂದು ಸಾಕ್ಷಿಯನ್ನು ನಿರ್ಮಿಸಿದೆವು.

ಒಮ್ಮೆ ನಾವೊಂದು ನಾಟಕಕ್ಕೆ ಹೋಗಿದ್ದೆವು. ಆ ದಿನಗಳಲ್ಲಿ ಇಂಗ್ಲೆಂಡಿನಾದ್ಯಂತ ನಡೆಯುತ್ತಿದ್ದ ನಾಟಕ ಅದೊಂದೇ - '1857ರ ದಂಗೆ' ! ಲಾರ್ಡ್ ರಾಬರ್ಟ್‌ಸನ್ ಹಿಂದುಸ್ಥಾನದಲ್ಲಿ ಭಾರತೀಯರಿಂದಲೇ 'ಇಂಗ್ಲಿಷ್ ವೆಟರನ್ಸ್ ಫಂಡ್' ಸಂಗ್ರಹಿಸಿದ್ದ! ಆ ನಿಧಿಯ ಖರ್ಚಿನಲ್ಲಿ ಈ ನಾಟಕ ನಡೆಯುತ್ತಿತ್ತು. ಅಂತೂ ವ್ಯಾಪಾರಿ ಬುದ್ಧಿಯ ಇಂಗ್ಲಿಷರು ನಾಟಕ ಆಡುವುದರಲ್ಲೂ ನಿಸ್ಸೀಮರು ! ಮೊದಲ ದೃಶ್ಯದಲ್ಲಿ ವಿಕಾರಿ, ಕಪ್ಪು ದಂಗೆಕೋರರ ರಹಸ್ಯ ಸಭೆ. ಅವರಿಗೆ 'ಮಾರೋ ಫಿರಂಗೀಕೋ' ಎಂಬ ಉಪದೇಶ. ಸರಿ, ದಂಗೆ ಪ್ರಾರಂಭ. ಬಹಾದ್ದೂರ ಶಾಹ ಪ್ರವೇಶಿಸುತ್ತಾನೆ. ಬಂಡುಗಾರರೆಲ್ಲರೂ ಸೇರಿ ಹಿಂದುಸ್ಥಾನದ ರಾಜಮುಕುಟವನ್ನು ಅವನ ತಲೆಯ ಮೇಲೆ ಇಡುತ್ತಾರೆ. ಅದನ್ನು ನೋಡುತ್ತಿದ್ದಂತೆ ಇಂಗ್ಲಿಷ್ ಪ್ರೇಕ್ಷಕರೆಲ್ಲ ಒಂದೇ ಸಮನೆ 'ಧಿಕ್ಕಾರ' ಹಾಕುತ್ತಾ ನರಿನಾಯಿಗಳಂತೆ ಒರಲುತ್ತಾರೆ. ಆಮೇಲೆ ಕಾನಪುರದ ಕಗ್ಗೊಲೆಯ ದೃಶ್ಯ. ದಂಗೆಕೋರರು 'ಫಿರಂಗಿ, ಫಿರಂಗಿ! ಮಾರೋ ಫಿರಂಗೀಕೋ' ಎಂದು ಬೊಬ್ಬೆ ಹಾಕುತ್ತಾ ವಿಧ್ವಂಸ ನಡೆಸುತ್ತಾರೆ. ಬಳಿಕ ಹಿಂದುಸ್ಥಾನದ ಸ್ವತಂತ್ರ ಧ್ವಜವನ್ನು ಹಾರಿಸುತ್ತಾ ಮೆರವಣಿಗೆ ಮಾಡುತ್ತಾರೆ. ಅದನ್ನು ಕಂಡು ಆಂಗ್ಲ ಪ್ರೇಕ್ಷಕರಿಂದ ಹೊಟ್ಟೆಯುರಿಯ ಮಾತುಗಳು ! ಅವಾಚ್ಯ ಶಬ್ದಗಳ ಸುರಿಮಳೆ. ಪುನಃ ಯುದ್ಧ ಪ್ರಾರಂಭ; ದಂಗೆಕೋರರಿಗೆ ಚಿತ್ರಹಿಂಸೆ. ಅವರನ್ನು ತೋಪಿನ ಬಾಯಿಗೆ ಕಟ್ಟಿ ಉಡಾಯಿಸಲಾಗುತ್ತದೆ. ಇಡೀ ನಾಟ್ಯಮಂದಿರ ಇಂಗ್ಲಿಷರ ಚಪ್ಪಾಳೆಗಳಿಂದ ದುಮದುಮಿಸುತ್ತದೆ

ನಾಟಕ ಆಡಿ ಇಂಗ್ಲಿಷರು ಆನಂದಪಟ್ಟರೇನೋ ನಿಜ. ಆದರೆ ಅದಕ್ಕಿಂತ ಮುಖ್ಯವಾಗಿ '1857ರ ದಂಗೆ' ಅಂದರೆ ಏನು ಎಂಬ ಕುತೂಹಲ ಭಾರತೀಯರಲ್ಲಿ ಬೆಳೆಯಿತು. ಅದೇ ಸಮಯಕ್ಕೆ ನಾವೂ ಅಭೂತಪೂರ್ವ ಪ್ರಚಾರ, ಚಳವಳಿ ಆರಂಭಿಸಿದೆವು. ಮೇ ತಿಂಗಳು ಆರಂಭವಾಗುತ್ತಿದ್ದಂತೆಯೇ ಪ್ರತಿನಿತ್ಯ ಭಾರತೀಯರು ವಾಸಿಸುತ್ತಿದ್ದ ಗಲ್ಲಿಗಳಿಗೂ, ಕ್ಷೇತ್ರಗಳಿಗೂ ಗುಂಪಾಗಿ ಹೋಗುವುದು. ಜನರನ್ನು ಸೇರಿಸಿ ಸಣ್ಣಪುಟ್ಟ ಸಭೆಗಳನ್ನು ನಡೆಸುವುದು. ಅಲ್ಲಿ ದೇಶಭಕ್ತ ಯುವಕರು ಸ್ಫೂರ್ತಿಯುಕ್ತವಾಗಿ ಮಾತನಾಡುತ್ತಿದ್ದರು. ಅವರಿಗೆ ದಿನವಿಡೀ ಇದೇ ಕೆಲಸ. ಕೆಲವೊಮ್ಮೆ ಲಂಡನ್ ಹೊರಗೆ ಭಾರತೀಯ ಜನವಸತಿಗಳು ಇರುವಲ್ಲಿಗೂ ಹೋಗಿಬರುತ್ತಿದ್ದರು. ಭಾನುವಾರ ಮೇ 10ರಂದು ಭಾರತ ಭವನದಲ್ಲಿ ಆಚರಿಸಲಿದ್ದ 1857ರ ಜನ್ಮದಿನೋತ್ಸವದ ಮಹತ್ವ, ಅದರ ಅಂಗವಾಗಿ ಆಚರಿಸಲಿದ್ದ ತಪಸ್ಯಾಮಾನ, 1857ರ

ಇತಿಹಾಸದ ನಿಜಸ್ವರೂಪ ಇತ್ಯಾದಿಗಳನ್ನು ವಿವರಿಸುತ್ತಿದ್ದರು ಆಮಂತ್ರಣ ಪತ್ರಿಕೆ ಹಂಚುತ್ತಿದ್ದರು.

**ವಂದೇ ಮಾತರಂ**

1857ರ ಭಾರತದ ರಾಷ್ಟ್ರೀಯ ಹೋರಾಟದ
ಜನ್ಮದಿನೋತ್ಸವದ ಜ್ಞಾಪಕಾರ್ಥವಾಗಿ
ಭಾನುವಾರ 1908 ಮೇ 10ರಂದು ಮಧ್ಯಾಹ್ನ 4 ಗಂಟೆಗೆ ಸರಿಯಾಗಿ
**65 ಕ್ರಾಮ್‌ವೆಲ್ ಅವಿನ್ಯೂ, ಹೈಗೇಟ್ (ನಾರ್ತ್)**
ಭಾರತಭವನದಲ್ಲಿ
ಇಂಗ್ಲೆಂಡಿನಲ್ಲಿರುವ ಭಾರತೀಯರ ಸಭೆಯನ್ನು ಏರ್ಪಡಿಸಲಾಗಿದೆ.
ನಿಮಗೂ ನಿಮ್ಮೆಲ್ಲ ಭಾರತೀಯ ಗೆಳೆಯರಿಗೂ ಆದರದ ಸ್ವಾಗತ.
ಕಾರ್ಯಕ್ರಮ

1. ರಾಷ್ಟ್ರೀಯ ಗೀತೆಗಳು
2. ರಾಷ್ಟ್ರೀಯ ಪ್ರಾರ್ಥನೆ
3. ಚಕ್ರವರ್ತಿ ಬಹಾದ್ದೂರ್ ಶಾಹ,
   ಶ್ರೀಮಂತ ನಾನಾಸಾಹೇಬ
   ರಾಣಿ ಲಕ್ಷ್ಮೀಬಾಯಿ
   ಮೌಲವಿ ಅಹಮದ್ ಶಾಹ
   ರಾಜಾ ಕುಮಾರಸಿಂಹ
   ಮತ್ತಿತರ ಹುತಾತ್ಮರ ಪವಿತ್ರ ಸ್ಮರಣೆ
   ಹಾಗೂ ಗೌರವ ಸಮರ್ಪಣೆ
4. ತಪಸ್ಯಾಮಾನದ ಘೋಷಣೆ
5. ಅಧ್ಯಕ್ಷ ಭಾಷಣ
6. ಪ್ರಸಾದ ವಿನಿಯೋಗ
7. ರಾಷ್ಟ್ರೀಯ ಗೀತೆಗಳು.

ಮೇ 10ರಂದು ಭಾರತ ಭವನದ ಬಾಗಿಲಲ್ಲಿ ತಳಿರು ತೋರಣ. ಒಳಹೊರಗೆಲ್ಲ ಹಬ್ಬದ ಸಿರಿಸಿರಿಯ ವಾತಾವರಣ. ಸಭಾಭವನದ ತುಂಬ ಬಣ್ಣ ಬಣ್ಣದ ಅಲಂಕಾರಗಳ ಶೋಭೆ. ಉನ್ನತ ವ್ಯಾಸಂಗಕ್ಕಾಗಿ ಲಂಡನ್ನಿಗೆ ಬಂದಿದ್ದ ಉತ್ಸಾಹಿ ತರುಣರು ಅದಕ್ಕಾಗಿ ಹಗಲಿರುಳು ಪರಿಶ್ರಮಿಸಿದ್ದರು ; ಹೂವಿನ ಕುಂಡ ಹಾಗೂ ಗಿಡಬಳ್ಳಿಯಿಂದ ವೇದಿಕೆಯನ್ನು ಶೃಂಗರಿಸಿದ್ದರು. ಪ್ರೇಕ್ಷಕರಿಗೆ ಎದುರಾಗಿ ರಕ್ತವರ್ಣದ ವಿಶಾಲವಸ್ತ್ರದ ಹಿನ್ನೆಲೆ. ಅದರ ಮೇಲೆ ಸುನೇರಿ, ಹಸಿರು, ಬಿಳಿ, ಗುಲಾಬಿ ಬಣ್ಣಗಳಲ್ಲಿ ಅರ್ಧ ಅಡಿ ಎತ್ತರದ ಅಕ್ಷರಗಳು ; ನಾನಾಸಾಹೇಬ್, ಅಹಮದ್ ಶಾಹ, ಲಕ್ಷ್ಮೀಬಾಯಿ, ಕುಮಾರಸಿಂಹ ಮುಂತಾದವರ ಹೆಸರುಗಳು. ಮೇಲ್ಭಾಗದಲ್ಲಿ ಕಮಲಪುಷ್ಪ ಮತ್ತು 'ಸ್ವಾತಂತ್ರ್ಯ ಲಕ್ಷ್ಮೀ ಕೀ ಜೈ' ಘೋಷವಾಕ್ಯ. ಆ ಭವ್ಯ ಸ್ಮೃತಿಫಲಕದ ಅಕ್ಕಪಕ್ಕಗಳಲ್ಲಿ ದೇಶಭಕ್ತರ ಭಾವಚಿತ್ರಗಳು. ಧೂಪದೀಪಗಳ ಪರಿಮಳ. ಹಿನ್ನೆಲೆಯಲ್ಲಿ

ಸಂಗೀತ ವಾದ್ಯಗಳ ಮಂಜುಳ ಶ್ರುತಿ. ಅದಕ್ಕೆ ಓಗೊಡಲೋ ಎಂಬಂತೆ ನಗರದ ನಾನಾ ದಿಕ್ಕುಗಳಿಂದ ಭಾರತೀಯರು ಹೆಂಗಸರು - ಮಕ್ಕಳೊಡನೆ ಬರತೊಡಗಿದರು. ಇಡೀ ಕ್ರಾಮ್‌ವೆಲ್ ರಸ್ತೆ 'ವಂದೇ ಮಾತರಂ' ಘೋಷಣೆಯಿಂದ ದುಮದುಮಿಸತೊಡಗಿತು. ನಮ್ಮೆಲ್ಲರ ಚಿರಪರಿಚಿತ ಹಾಗೂ ಸುಪ್ರಸಿದ್ಧ ದೇಶಭಕ್ತ ಸರದಾರಸಿಂಹಜಿ ರಾಣಾ ಅಧ್ಯಕ್ಷಪೀಠ ಅಲಂಕರಿಸಿದರು. ಪ್ಯಾರಿಸ್ಸಿನಿಂದ ಹಾಗೂ ಕೇಂಬ್ರಿಜ್, ಆಕ್ಸ್‌ಫರ್ಡ್, ಸಯರನ್‌ಸ್ಟರ್, ರೇಡಿಂಗ್ ಇತ್ಯಾದಿ ಸ್ಥಾನಗಳಿಂದಲೂ ಭಾರತೀಯರು ನೂರಾರು ಜನ ಆಗಮಿಸಿದ್ದರು. ದೇಶಭಕ್ತ ಅಯ್ಯರ್ ಅವರಿಂದ ರಾಷ್ಟ್ರೀಯ ಪ್ರಾರ್ಥನೆ. ಕಿವಿಗೊಟ್ಟ ಸಭಿಕರ ಹೃದಯಗಳಲ್ಲಿ ಉದಾತ್ತ ಸ್ಫೂರ್ತಿಯ ಸಂಚಾರ.

ಅಷ್ಟು ಹೊತ್ತಿಗೆ ಇಡೀ ಸಭಾಭವನ ತುಂಬಿ ಹೋಗಿ, ಹೊರಗಿನ ಆವರಣವೂ ಭರ್ತಿಯಾಗಿ ರಸ್ತೆಯವರೆಗೂ ಜನ ನಿಂತಿದ್ದರು. 1857ರ ಇತಿಹಾಸದ ನಿಜಸ್ವರೂಪವನ್ನೂ ನಾನು ತಿಳಿಸಿದೆ. ಸಭೆಗೆ ಸಭೆಯೇ 'ವಂದೇ ಮಾತರಂ' ಜಯಘೋಷ ಮಾಡುತ್ತಾ ಎದ್ದು ನಿಂತುಬಿಟ್ಟಿತು. ಅನಂತರ ಕ್ರಾಂತಿವೀರರ ಬಗ್ಗೆ ನಾಲ್ಕೈದು ಗೆಳೆಯರು ಮಾತನಾಡಿ, ಕೃತಜ್ಞತೆ ಅರ್ಪಿಸಿದರು. ಅಧ್ಯಕ್ಷರು ಶ್ರೀಮತಿ ಕಾಮಾ ಅವರ ಸಂದೇಶವನ್ನು ಸಭೆಗೆ ಓದಿ ಹೇಳಿದರು :

'ನನ್ನ ಒಲುಮೆಯ ಹಿಂದುಸ್ಥಾನದ ಯುವಕರೇ ! ಭೂತ ಭವಿಷ್ಯಗಳ ನಡುವೆ ನೀವು ನಿಂತಿದ್ದೀರಿ. ಧ್ಯೇಯೋದ್ದೇಶಗಳಿಗಾಗಿ ಪರಿಶ್ರಮಿಸಿ. ನಾವು ಗುರಿ ಮುಟ್ಟದಿದ್ದರೂ ಚಿಂತೆಯಿಲ್ಲ, ಇಷ್ಟು ದೂರದಿಂದಲೇ ಸ್ವಾತಂತ್ರ್ಯಕ್ಕೆ ಸ್ವಾಗತ ಬಯಸುತ್ತಾ ಧ್ಯೇಯಕ್ಕಾಗಿ ಪ್ರಾಣಾರ್ಪಣೆ ಮಾಡೋಣ. ಮರೆಯದಿರಿ - ಸ್ವಾತಂತ್ರ್ಯ ಎನ್ನುವುದು ಪರಾಕ್ರಮದ ಗಳಿಕೆಯೇ ಹೊರತು, ಭಿಕ್ಷಾಟನೆಯ ಕೂಳಲ್ಲ. ಕಣ್ಣು ತೆರೆಯಿರಿ; ದೇವರಾಣೆ - ನಿಮ್ಮ ಕಣ್ಣು ತೆರೆಯಿರಿ. ಮುಂದೆ ಧಾವಿಸಲು ಹಾತೊರೆಯುತ್ತಿರುವ ಕೋಟ್ಯಂತರ ಜನರ ಒಡಲ ಸ್ವರಕ್ಕೆ ಕಿವಿಗೊಡಿ. ಮಾತೃಭೂಮಿಯಲ್ಲಿ ಬಲಿದಾನ ನೀಡುತ್ತಿರುವ ದೇಶಭಕ್ತರಿಗೆ ಜಯವಾಗಲಿ. ಮಾತೃ ಮಂದಿರದ ಬಲಿವೇದಿಯ ಮೇಲೆ ತಮ್ಮ ಸರ್ವಸ್ವವನ್ನೂ, ಪ್ರಾಣಕಮಲವನ್ನೂ ಸಹ, ಅರ್ಪಿಸುತ್ತಿರುವ ಆ ವೀರಾಧಿವೀರರಿಗಾಗಿ ನಮ್ಮ ಹೃದಯ ತಳಮಳಿಸದೆ ಹೇಗಿದ್ದೀತು ?'

ದೇಶಭಕ್ತೆ ಶ್ರೀಮತಿ ಕಾಮಾ, ಹುತಾತ್ಮರ ಸ್ಮಾರಕ ನಿಧಿಗಾಗಿ 50 ರೂ. ಕಳಿಸಿದ್ದರು. ಸಭಾಧ್ಯಕ್ಷ ರಾಣಾಜಿ ತಮ್ಮ ಮೇ ತಿಂಗಳ ಆದಾಯವಷ್ಟನ್ನೂ ಅರ್ಪಿಸುವುದಾಗಿ ಘೋಷಿಸಿದರು. ತದನಂತರ ಸ್ವಾರ್ಥತ್ಯಾಗದ ಶಪಥವಿಧಿ ನಡೆಯಿತು. ವಕೀಲರು, ವೈದ್ಯರು, ವ್ಯಾಪಾರಿಗಳು, ಪದವೀಧರ ವಿದ್ಯಾರ್ಥಿಗಳು, ಸ್ತ್ರೀಯರು, ವೃದ್ಧರು ಎಲ್ಲರೂ ಒಬ್ಬೊಬ್ಬರಾಗಿ ಬಂದು ಪ್ರತಿಜ್ಞೆ ತೊಡಲಾರಂಭಿಸಿದಾಗ ಅವರ್ಣನೀಯ ಉತ್ಸಾಹದಲ್ಲಿ ಸಭೆ ತೇಲಾಡಿತು. ಪ್ರತಿಯೊಬ್ಬರ ಎದೆಯ ಮೇಲೂ ತವಸ್ಯಾಮಾಸದಲ್ಲಿ ಧರಿಸಲು ತಯಾರಿಸಿದ್ದ ಸ್ವಾತಂತ್ರ್ಯ ಸಮರದ ಸ್ಮೃತಿಬಿಲ್ಲೆ (ಬ್ಯಾಜ್)ಗಳು ಥಳಥಳಿಸುತ್ತಿದ್ದವು. ಕೆಲವರು ಒಂದು ತಿಂಗಳು ಉಪವಾಸವಿರುವುದಾಗಿ ಮಾತು ಕೊಟ್ಟರು. ಕೆಲವರು ಮದ್ಯಪಾನ ಬಿಟ್ಟರು, ಇನ್ನು ಕೆಲವರು ಧೂಮಪಾನ ಬಿಟ್ಟರು. ಮತ್ತೆ ಕೆಲವರು ನಾಟಕ ಅಥವಾ ಯಾವುದೇ ಮನರಂಜನೆಯಲ್ಲೂ ಭಾಗವಹಿಸುವುದಿಲ್ಲ ವೆಂದರು. ಅದರಿಂದ ಉಳಿಯುವ ಹಣವೆಲ್ಲ ಹುತಾತ್ಮರ ನಿಧಿಗೆ ಅರ್ಪಣೆ ಎಂದರು. ಅನೇಕ ಉಚ್ಚ ಪದವೀಧರರು ಭಾರತೀಯರ ಮನೆಮನೆಗೂ ಹೋಗಿ ಸ್ಮಾರಕ ನಿಧಿಗಾಗಿ ಭಿಕ್ಷೆ ಎತ್ತಲು ಮುಂದಾದರು; ಅಂಥವರಿಗಾಗಿ ಜೋಳಿಗೆಗಳನ್ನು ಮೊದಲೇ ತಯಾರಿಸಿಡಲಾಗಿತ್ತು. ಕುಮಾರಿ ದತ್ತಾ ರಾಷ್ಟ್ರಗೀತೆ ಹಾಡಿದಳು. ಪ್ರಸಾದಕ್ಕಾಗಿ ಸಾಂಕೇತಿಕ ಮಹತ್ವವುಳ್ಳ ಚಪಾತಿ ! ಏಕೆಂದರೆ 1857ರ ಸಮಯದಲ್ಲೂ

ಕ್ರಾಂತಿಯ ಗೂಢ ಸಂದೇಶ ಹರಡಲು ದೇಶದಾದ್ಯಂತ ಚಪಾತಿ ವಿತರಣೆ ನಡೆದಿತ್ತು. 'ವಂದೇ ಮಾತರಂ' ಜಯಘೋಷ ಹಾಗೂ ದೇಶವೀರರ ಸ್ಮೃತಿಘೋಷದೊಡನೆ ಸಮಾರಂಭವು ಯಶಸ್ವಿಯಾಗಿ ಕೊನೆಗೊಂಡಿತು.

ಅಲ್ಲಿ ಬಂದಿದ್ದವರಿಗೆಲ್ಲರಿಗೂ ಸ್ಮೃತಿಬಿಲ್ಲೆಗಳ ಜತೆಗೆ 'ಓ, ಹುತಾತ್ಮರೇ !' ಎಂಬ ಪತ್ರಕ ಹಂಚಲಾಯಿತು. ಅದನ್ನು ಬರೆದ ನನ್ನ ನೆನಪಿನಂಗಳದಲ್ಲಿ ಅದರ ಸಾಲುಗಳು ಆಡುತ್ತಲೇ ಇರುತ್ತವೆ :

**ಶುರುವಾದರದೊಮ್ಮೆಗೆ ಸ್ವಾತಂತ್ರ್ಯದ ಶ್ರೀಯುದ್ಧ**
**ತಲೆ ತಲೆ ಕಳೆದುರುಳಿದರೂ ನಾಡಿದು ಕಟಿಬದ್ಧ !**
**ಹಲವೊಮ್ಮೆಗೆ ಕೈಸೋತರು ಅಂತಿಮ ಜಯ ಶತಸ್ಸಿದ್ಧ !**

'ಓ ಹುತಾತ್ಮರೇ ! ಇಂದು ಮೇ 10. ಇದೇ ದಿನವೇ 1857ರ ಚಿರಸ್ಮರಣೀಯ ವರ್ಷದಲ್ಲಿ ನೀವು ಹಿಂದುಸ್ಥಾನದ ರಣಾಂಗಣದಲ್ಲಿ ಸ್ವಾತಂತ್ರ್ಯ ಸಮರದ ಪ್ರಥಮ ಹೋರಾಟ ಉದ್ಘಾಟಿಸಿದಿರಿ. ಭರತಮಾತೆ ತನ್ನ ದಾಸ್ಯಕ್ಕೆ ಹೇಸಿ ಎಚ್ಚೆತ್ತಳು. ತನ್ನ ಖಡ್ಗವನ್ನು ಒರೆಯಿಂದ ಹೊರಗೆಳೆದು ಸ್ವಾತಂತ್ರ್ಯ ಸಮ್ಮಾನಗಳ ರಕ್ಷಣೆಗಾಗಿ ಪ್ರಥಮ ಪ್ರಹಾರ ಗೈದಳು. ಸಹಸ್ರಾರು ಕಂಠಗಳಿಂದ ''ಮಾರೋ ಫಿರಂಗೀಕೋ'' ಗರ್ಜನೆ ಸಿಡಿದದ್ದು ಇದೇ ದಿನವೇ. ಇದೇ ದಿನವೇ ಮೀರತ್ತಿನ ಸಿಪಾಯಿಗಳು ರೌದ್ರಾವತಾರ ತಾಳಿ ದಿಲ್ಲಿಯ ಮೇಲೆ ದಂಡೆತ್ತಿ ಹೋದರು. ಸೂರ್ಯಕಿರಣಗಳ ಝಳಕ್ಕೆ ಥಳಥಳಿಸುತ್ತಿದ್ದ ಯಮುನಾ ನದಿಯ ಪ್ರವಾಹವನ್ನು ಕಂಡರು. ಹಳೆಯ ಅಧ್ಯಾಯಕ್ಕೆ ಮಂಗಳ ಹಾಡಿ ಹೊಸದನ್ನು ಆರಂಭಿಸುವ ಐತಿಹಾಸಿಕ ಅಮೃತ ಗಳಿಗೆಯನ್ನು ಸ್ಪರ್ಶಿಸಿ, ಕ್ಷಣ ಮಾತ್ರದಲ್ಲಿ ಒಬ್ಬನ ನೇತೃತ್ವ ಪಡೆದರು ; ಒಂದು ಧ್ವಜ, ಒಂದು ಧ್ಯೇಯ ಹಿಡಿದರು ; ಕೇವಲ ದಂಗೆಯಾಗಿದ್ದುದನ್ನು ರಾಷ್ಟ್ರೀಯ ಹಾಗೂ ಧಾರ್ಮಿಕ ಸಂಗ್ರಾಮವಾಗಿ ಪರಿವರ್ತಿಸಿದರು.

'ಓ ಹುತಾತ್ಮರೇ! ನಿಮ್ಮ ಘೋಷಣೆಗೆ ನಾವು ಓಗೊಡುತ್ತೇವೆ. ನಿಮ್ಮ ಧ್ವಜಕ್ಕೆ ಪೊಡಮಡುತ್ತೇವೆ.... ಸುಂದರ ಹಿಂದುಸ್ಥಾನ ನಮ್ಮ ವಿಜಯದ ಪ್ರಭೆಯಿಂದಲೋ ವೀರಮರಣದ ಪ್ರಭಾವಳಿಯಿಂದಲೋ ಅಲಂಕೃತವಾಗುವ ಮೇ 10 ಬರುವವರೆಗೆ ಈ ಸ್ವಾತಂತ್ರ್ಯದ ಸಮರವು ಮುಗಿಯುವುದಿಲ್ಲ.

'ಓ, ಅತೃಪ್ತ ಆತ್ಮಗಳೇ ! ನಾವು ನಮ್ಮ ರಕ್ತವನ್ನೇ ಪ್ರಮಾಣವಾಗಿಟ್ಟುಕೊಂಡು ಪ್ರತಿಜ್ಞೆ ಮಾಡಿ ಹೇಳುತ್ತೇವೆ.... 1917ರಲ್ಲಿ ನಿಮ್ಮ ವಜ್ರ ಮಹೋತ್ಸವದ ವೇಳೆಗೆ ಭಾರತವು ವಿಜಯಭೇರಿ ಬಾರಿಸುತ್ತಾ ಜಗತ್ತಿನಲ್ಲಿ ತಲೆಯೆತ್ತಿ ಮೆರೆಯುವುದು ನಿಶ್ಚಿತ. ಝಾನ್ಸಿರಾಣಿಯ ನೆತ್ತರು ಕ್ರೋಧದಿಂದ ಕುದಿಯುತ್ತಿದೆ. ಹುತಾತ್ಮರೇ ! ನಿಮ್ಮ ರಕ್ತದ ಸೇಡು ತೀರಿಸಿಕೊಳ್ಳುತ್ತೇವೆ !'

ಇದರ ಜತೆಗೆ 'ಗಂಭೀರ ಎಚ್ಚರಿಕೆ!' ಎಂಬ ಪತ್ರಕವನ್ನೂ ಭಾರತ ಭವನಕ್ಕೆ ಬಂದ ಭಾರತೀಯರೆಲ್ಲರಿಗೂ ಹಂಚುತ್ತಿದ್ದೆವು. ಭಾರತಕ್ಕೆ ರವಾನಿಸಲು 'ಓ ಹುತಾತ್ಮರೇ !' ಮತ್ತು 'ಗಂಭೀರ ಎಚ್ಚರಿಕೆ !' ಪತ್ರಕಗಳನ್ನು ರಾತ್ರಿಯ ಹೊತ್ತು ಸಿದ್ಧಪಡಿಸುತ್ತಿದ್ದೆವು. ಆಗ ಚತುರ್ಭುಜ ಅಮೀನ ನನ್ನ ಸಹಾಯಕ. 'ಸಾವರಕರ್‌ಜೀ, ನೀವೇ ಏಕೆ ವಿಳಾಸ ಬರೆಯುವುದಿಲ್ಲ ?' ಎಂದ, ಒಮ್ಮೆ. 'ಹಿಂದುಸ್ಥಾನದ ಸರಕಾರಿ ಅಧಿಕಾರಿಗಳಿಗೆ ನನ್ನ ಹಸ್ತಾಕ್ಷರ ಪರಿಚಿತವಾಗಿರುವುದರಿಂದ!' ಎಂದೆ. ದೂರದೂರದ ಅಂಚೆ ಡಬ್ಬಗಳಲ್ಲಿ ಅವನ್ನು ಹಾಕಬೇಕು ; ಎಲ್ಲವನ್ನೂ ಒಂದೇ ಕಡೆ ಹಾಕಬಾರದು – ಎಂದು ಎಚ್ಚರಿಕೆ ನೀಡುತ್ತಿದ್ದೆ.

ಮೇ 10ರ ನಂತರ ಇಂಗ್ಲೆಂಡಿನಾದ್ಯಂತ ಯಾವ ಭಾರತೀಯನ ಎದೆಯ ಮೇಲೆ ನೋಡಿದರೂ

1857ರ ಸ್ಮೃತಿಮುದ್ರೆ! ರಸ್ತೆ, ರೈಲು, ಕಾರ್ಖಾನೆಗಳಲ್ಲಿ ಬ್ರಿಟಿಷರಿಗೆ ಅದರ ದರ್ಶನ! ಎಲ್ಲೆಲ್ಲೂ ವಾಗ್ವಾದ ಎದ್ದಿತು. ಅಭಿನವ ಭಾರತದ ತರುಣರು ಮಾತಿಗೆ ಮಾತು ಕೈಗೆ ಕೈ ಮಿಲಾಯಿಸಲು ಹಿಂಜರಿಯಲಿಲ್ಲ. ಸಯರನ್‌ಸ್ಟರ್ ಕಾಲೇಜಿನ ಪ್ರಕರಣ ಸ್ಮಾರಣೀಯ. ಸ್ಮೃತಿಮುದ್ರೆ ಧರಿಸಿದ್ದ ಹರನಾಮ ಸಿಂಹ ಮತ್ತು ಆರ್.ಎಂ. ಖಾನ್ ಮೇಲೆ ಅಧ್ಯಾಪಕರ ವಕ್ರದೃಷ್ಟಿ ಬಿತ್ತು. 1857ರ ಕ್ರಾಂತಿನಾಯಕರನ್ನು 'ದರೋಡೆಗಾರರು, ಖೂನಿಗಾರರು' ಎಂದು ಪ್ರಿನ್ಸಿಪಾಲ್ ನಿಂದಿಸಿದ. ಅಂಥವನ ಕಾಲೇಜಿನೊಳಕ್ಕೆ ಕಾಲಿಡುವುದಿಲ್ಲ ಎಂದು ಭಾರತೀಯ ವಿದ್ಯಾರ್ಥಿಗಳಿಬ್ಬರೂ ಹೊರಗೆ ಬಂದರು. ಅವರು ಇನ್ನಾವ ಮತದವರಾದರೂ ಆಗಿದ್ದರೆ ಇಂಗ್ಲೆಂಡ್ ಅಷ್ಟು ಚಿಂತಿಸುತ್ತಿರಲಿಲ್ಲ. ಆದರೆ ಬ್ರಿಟಿಷರ ದುರ್ದೈವಕ್ಕೆ ಒಬ್ಬ ಸೀಖ, ಇನ್ನೊಬ್ಬ ಮುಸಲ್ಮಾನ! ಸಾಮ್ರಾಜ್ಯದ ಆಧಾರಸ್ತಂಭಗಳೆಂದು ನಂಬಿಕೊಂಡಿದ್ದ ಗುಂಪಿನವರು! ತಮ್ಮ ನಂಬಿಕೆಯ ಕಂಬಗಳಿಗೂ ಸ್ವಾತಂತ್ರ್ಯದ ಗೆದ್ದಲು ಹತ್ತುತ್ತಿರುವುದನ್ನು ಕಂಡು ಪಾರ್ಲಿಮೆಂಟ್ ಸದಸ್ಯರೂ ಬೆಚ್ಚಿದರು. ಇವರಿಬ್ಬರಿಗೂ ಬೇಕಾದಷ್ಟು ಸಮಾಧಾನದ ಬೆಣ್ಣೆ ಹಚ್ಚಿದರು; ಬೆದರಿಕೆಯ ದೊಣ್ಣೆಯನ್ನೂ ಎತ್ತಿದರು! ಆದರೆ ಆ ಯುವಕರು ಯಾವುದಕ್ಕೂ ಜಗ್ಗಲಿಲ್ಲ.

'ಫ್ರೀ ಇಂಡಿಯಾ ಸೊಸೈಟಿ'ಯ ಆಶ್ರಯದಲ್ಲಿ ಅವರಿಬ್ಬರಿಗೂ ಭಾರಿ ಸನ್ಮಾನಸಭೆ ಏರ್ಪಡಿಸಿದ್ದೆವು. ದೇಶಭಗಿನಿ ಧನದೇವಿ ಅಂದಿನ ಅಧ್ಯಕ್ಷೆ. ಅವರು ಲಂಡನ್ನಿನ ಭಾರತೀಯರ ಪರವಾಗಿ ಸಿಂಗ್ ಮತ್ತು ಖಾನ್ ಇಬ್ಬರಿಗೂ 'ಯಾರ್-ಏ-ಹಿಂದ್' ಪದವಿ ನೀಡಿದರು. ಇಬ್ಬರೂ ಬೆಳ್ಳಿಯ ಪದಕಗಳನ್ನು ಧರಿಸುತ್ತಲೇ ಪ್ರಚಂಡ ಕರತಾಡನ! ಧನದೇವಿ ಘೋಷಿಸಿ ನುಡಿದರು :

'ಪದವಿಗಳನ್ನು ಕೊಡುವ ಹಕ್ಕು ಜನಗಳಿಗೆ ಸೇರಿದ್ದು. ಅಷ್ಟು ಮಾತ್ರವಲ್ಲ, ಸ್ವದೇಶವು ನೀಡದಿರುವ ಹಾಗೂ ಲಕ್ಷಿಸದಿರುವ ಪದವಿ ಪದವಿಯೇ ಅಲ್ಲ. ಅದೆಷ್ಟೋ ವರ್ಷಗಳಿಂದ ಜನತೆ ಹೊಂದಿದ್ದ ಹಕ್ಕನ್ನು ಇಂದು ಚಲಾಯಿಸುವಂತೆ ಸ್ಫೂರ್ತಿ ನೀಡಿದ ಈ ತರುಣರು ನಿಜಕ್ಕೂ ಅಭಿನಂದನಾರ್ಹರು. ನನಗೆ ಮೂವರು ಗಂಡುಮಕ್ಕಳಿದ್ದಾರೆ. ಅವರೆಲ್ಲರೂ ಈ ರೀತಿಯ ಸ್ವದೇಶದ ಪದಕಗಳನ್ನು ಪಡೆದದ್ದೇ ಆದರೆ ನಾನು ಅವರ ತಾಯಿ ಆದದ್ದಕ್ಕೂ ಸಾರ್ಥಕ. ಹಾಗಲ್ಲದೆ, ಪರಕೀಯರು ನೀಡುವ ಪದವಿಗಳು ಮಕ್ಕಳ ಎದೆಯ ಮೇಲೆ ಮೆರೆಯುವುದನ್ನು ನೋಡುವುದಕ್ಕಿಂತ, ಬಂಜೆಯಾಗಿರುವುದೇ ಮೇಲು!'

ಗ್ಯಾನಚಂದ ವರ್ಮಾ ಆಗ ಬಾರಿಕ್ ಸ್ಟ್ರೀಟ್‌ನಲ್ಲಿ ವಾಸಿಸುತ್ತಿದ್ದರು. ಅವರ ಮನೆಯೇ ಅಭಿನವ ಭಾರತದ ರಹಸ್ಯ ಕಾರ್ಯಾಲಯ. ಜುಲೈ ತಿಂಗಳಲ್ಲಿ ಪ್ರಮುಖರ ಗುಪ್ತಸಭೆ ಜರುಗಿತು. ಬದಲಾಗುತ್ತಿದ್ದ ಪರಿಸ್ಥಿತಿಯ ಬೆಳಕಿನಲ್ಲಿ ವಿಚಾರ ವಿಮರ್ಶೆ ಹಾಗೂ ಕಾರ್ಯಯೋಜನೆ ನಡೆಯಿತು. ವರ್ಮಾ ಪಿಸ್ತೂಲಿನ ಮೇಲೆ ಕೈಯಿಟ್ಟು ಶಪಥ ಉಚ್ಚರಿಸುತ್ತಾ ಹೋದರು. ಉಳಿದವರೂ ಅದನ್ನು ಪುನರುಚ್ಚರಿಸಿದೆವು. ವರ್ಮಾ ಕಾರ್ಯದರ್ಶಿಯಾಗಿಯೂ ನಾನು ಅಧ್ಯಕ್ಷನಾಗಿಯೂ ಪುನರಾಯ್ಕೆಗೊಂಡೆವು.

ವಿಕ್ಟರ್ ಇಮಾನ್ಯುಯಲ್ ಇಟಲಿ ದೇಶದ ಸಣ್ಣ ಪ್ರಾಂತವೊಂದರ ದೊರೆಯಾಗಿದ್ದ. ಮ್ಯಾಟ್ಸಿನಿಯ ಕಾಲದಲ್ಲಿ ಅವನು ತನ್ನ ಸ್ವಂತ ಸುಖದ ಚಿಂತೆ ಬಿಟ್ಟ; ಕ್ರಾಂತಿವೀರರಿಗೆ ಬೆಂಬಲ ಕೊಟ್ಟ. ತನ್ನ ರಾಷ್ಟ್ರದ ಸ್ವಾತಂತ್ರ್ಯ ಸಮರ ಯಶಸ್ವಿಯಾಗಲು ಕಾರಣಕರ್ತನಾದ. ಭಾರತದಲ್ಲೂ ಈ ರೀತಿಯ ಪ್ರಯತ್ನ ಆಗಬಾರದೇಕೆ ? ಅದಕ್ಕಾಗಿ ಸಂಸ್ಥಾನಾಧಿಪತಿಗಳು ಲಂಡನ್ನಿಗೆ ಬಂದಾಗ ಅವರನ್ನು ರಹಸ್ಯವಾಗಿ ಭೇಟಿ ಮಾಡುತ್ತಿದ್ದೆವು. ಆದರೆ ಯಾರೂ ಧೈರ್ಯ ಮಾಡಲಿಲ್ಲ. ಭಾರತದ 'ವಿಕ್ಟರ್ ಇಮಾನ್ಯುಯಲ್' ಆಗಲು ತಯಾರಾಗಲಿಲ್ಲ.

1908ರ ಉತ್ತರಾರ್ಧದಲ್ಲಿ ತಿಲಕರ ಅನುಯಾಯಿ ದಾದಾಸಾಹೇಬ ಕರಂದೀಕರ್ ಲಂಡನ್ನಿಗೆ ಬಂದಿದ್ದರು. ಭಾರತ ಭವನಕ್ಕೂ ಆ ಹಿರಿಯರು ಆಗಾಗ್ಗೆ ಭೇಟಿ ಕೊಡುತ್ತಿದ್ದರು. ಬಹಳ ಸಂಪ್ರದಾಯಸ್ಥರು; ಆದರೆ ಅವರಿಗೆ ಯುವಕರಾದ ನಮ್ಮ ನಡುವೆ ಇರಬೇಕೆಂಬ ಇಚ್ಛೆ. ಲಂಡನ್ನಿನಲ್ಲೂ ಅವರು ಚಾತುರ್ಮಾಸ್ಯ ವ್ರತ ಬಿಡಲಿಲ್ಲ! ನಮ್ಮೊಡನೆ ಊಟ ಮಾಡದಿದ್ದರೂ ನಮ್ಮ ಊಟ ನೋಡುವ ಕುತೂಹಲ. ಈರುಳ್ಳಿ ಕಂಡರೇ ಹತ್ತು ಮಾರು ದೂರ ಹಾರುತ್ತಿದ್ದರು. ಇನ್ನೂ ನೆನಪಿದೆ; ಅಕ್ಟೋಬರ್ 12. ಊಟದ ಸಮಯವಾಯಿತು ನಾನು ಅವರನ್ನು ಕೆಣಕಲು, 'ಅತಿವಿನಯ' ದಿಂದ ಪ್ರಾರ್ಥಿಸಿದೆ ; 'ದಾದಾಸಾಹೇಬ್, ನೀವು ಊಟ ಮಾಡದಿದ್ದರೆ ಬೇಡ, ಒಂದೆರಡು ಮೊಟ್ಟೆಗಳನ್ನಾದರೂ ತೆಗೆದುಕೊಳ್ಳಿ!' ಆಗ ಅವರ ಗಾಬರಿ ಹೇಳತೀರದು. ಸದ್ಯ ಅವರಿಗೆ ಹೃದಯಾಘಾತ ಆಗದಿದ್ದುದು ನಮ್ಮ ಪುಣ್ಯ!

ಅಕ್ಟೋಬರ್ 18ರಂದು ಈರುಳ್ಳಿ ಹೆಚ್ಚುತ್ತಿದ್ದುದನ್ನು ಕಂಡು ಅವರು ತಮ್ಮ ಅನುಭವ ವರ್ಣಿಸಿದ್ದಾರೆ: 'ಹೇಗೋ ಕೈಲಿ ಮೂಗು ಹಿಡಿದುಕೊಂಡು ಚಾತುರ್ಮಾಸ್ಯ ಕಳೆಯುವ ಮೊದಲೇ - ಮೇಲಿಂದ ಕತ್ತರಿಸಿದರೆ ಶಂಖ, ಅಡ್ಡ ಕತ್ತರಿಸಿದರೆ ಚಕ್ರ - ಇತ್ಯಾದಿ ದೃಶ್ಯಗಳನ್ನು ಹತ್ತಿರದಿಂದಲೇ ನೋಡಬೇಕಾಯಿತು. ಆದರೂ ಹೇಗೋ ನಿಭಾಯಿಸಿದೆ, ಅನ್ನಿ!'

ಭಾರತ ಭವನದಲ್ಲಿ ಅವರ ಮನಸ್ಸಿಗೆ ಮೆಚ್ಚಿಗೆಯಾಗುವ ಸಂಗತಿಗಳನ್ನು ಅವರು ಮನಬಿಚ್ಚಿ ಹೇಳಿದ್ದಾರೆ : 'ಅಷ್ಟರಲ್ಲಿ ಭವನದ ಮೇನೇಜರ್ ವಾಮನರಾವ್ ಫಡಕೆ ನನ್ನನ್ನು ಊಟಕ್ಕೆ ಕರೆಯಲು ಬಂದರು. ಅಲ್ಲಿ ಊಟಕ್ಕೆ ಏಳುವುದೆಂದರೆ ಉಭಯತ್ರರಿಗೂ ಸಂಕಟ! ಆದರೆ ಊಟಕ್ಕೆ ಕೂರದೆ, ಆ ಹುಡುಗರೊಡನೆ ಮುಕ್ತವಾಗಿ ಬೆರೆಯದೆ, ಅವರ ಮನಸ್ಸಿನಲ್ಲಿ ಏನಿದೆ ಎನ್ನುವುದು ಗೊತ್ತಾಗುವಂತಿಲ್ಲ!.... ಅವರಾದರೋ ಸಂಸಾರದ ಜವಾಬ್ದಾರಿಯಿಲ್ಲದ ತರುಣರು ; ಉಜ್ವಲ ಭವಿತವ್ಯ ಉಳ್ಳವರು. ಉಚ್ಚ ವಿದ್ಯಾಪೀಠಗಳಲ್ಲಿ ಅಧ್ಯಯನ ಮಾಡಿದ್ದರೂ, ಅದರ ವ್ಯಾಮೋಹದಿಂದ ಮುಕ್ತರಾಗಿದ್ದವರು ; ಪರಿಸ್ಥಿತಿಯ ಬಗ್ಗೆ ತೀವ್ರ ತಳಮಳ ಎಚ್ಚೆತ್ತಿದ್ದವರು ; ರಾಷ್ಟ್ರ ವಿಮೋಚನವ್ರತ ತೊಟ್ಟವರು ಅಥವಾ ತೊಡುವ ಬಗ್ಗೆ ಆಸಕ್ತಿಯುಳ್ಳವರು ; ಅವರು ನಿಸ್ಸಂಕೋಚವಾಗಿ ಪರಸ್ಪರರಲ್ಲಿ ದೇಶದ ವಿಷಯ ಮಾತನಾಡುವುದನ್ನು ಕೇಳಿದರೆ, ಅದರಲ್ಲೆ ಮಗ್ನನಾಗಿಹೋಗಿ, ನಾನೂ ಅವರಂತೆಯೇ ತರುಣನಾಗಿರುವೆನೊ ಏನೊ ಎಂದು ಭ್ರಮಿಸುವಂತಾಗುತ್ತಿತ್ತು.'

ಅಕ್ಟೋಬರ್ 16ರಂದು ಸಂಜೆ 'ವಂಗಭಂಗ ದಿನಾಚರಣೆ' ಷಡೆಸಿದೆವು. ಅಂದು ಮೊದಲು 'ರಕ್ಷಾಬಂಧನ' ; ನೀತಿಸೇನ ದ್ವಾರಕಾದಾಸರು ಅದನ್ನು ಶಾಸ್ತ್ರೀಯವಾಗಿ ನಡೆಸಿಕೊಟ್ಟರು.

**ಯೇನ ಬದ್ಧೋ ಬಲೀ ರಾಜಾ ದಾನವೇಂದ್ರೋ ಮಹಾಬಲೀ ।**
**ತೇನ ತ್ವಾಮ್ ಪ್ರತಿಬಧ್ನಾಮಿ ರಕ್ಷ ಮಾ ಚರ ಮಾ ಚರ ॥**

  

**ಏಕ ದೇಶ ಏಕ ಭಗವಾನ್**
**ಏಕ ಜಾತಿ ಏಕ ಮನಃ ಪ್ರಾಣ್**
**ಭಾಯಿ ಭಾಯಿ ಏಕ ಠಾಯಿ**
**ಭೇದ ನಾಹಿ ಭೇದ ನಾಹಿ ॥**

ಎಂಬ ಶ್ಲೋಕಗಳನ್ನು ಒಕ್ಕೊರಲಿನಿಂದ ಹಾಡಿದೆವು.

ಕಾಕ್ಸ್‌ಟನ್ ಸಭಾಭವನದಲ್ಲಿ ಡಿಸೆಂಬರ್ 20 ಮತ್ತು 21ರಂದು ಇಂಗ್ಲೆಂಡಿನ ಭಾರತೀಯರೆಲ್ಲರ ರಾಷ್ಟ್ರೀಯ ಪರಿಷತ್ತು, ಪ್ಯಾರಿಸ್ಸಿನಿಂದ ಬ್ಯಾರಿಸ್ಟರ್ ರಾಣಾಜಿ ಸಹ ಆಗಮಿಸಿದ್ದರು. ಸ್ವರಾಜ್ಯದ ಬಗ್ಗೆ ನಿರ್ಣಯ ಮಂಡನೆಯಾದಾಗ ಸಭಿಕರಿಗೆ ನಾನು ಅರಿವು ಮಾಡಿಕೊಟ್ಟೆ : 'ಇಲ್ಲಿ ಸ್ವರಾಜ್ಯದ ಅರ್ಥ ಪೂರ್ಣಸ್ವಾತಂತ್ರ್ಯ ಎಂದು. ಅದಕ್ಕೆ ಸಮ್ಮತಿ ನೀಡುವ ಮೊದಲು ಈ ಸ್ಪಷ್ಟ ಅರ್ಥ ನೆನಪಿನಲ್ಲಿರಲಿ. ಆ ಅಂತಿಮ ಉದ್ದೇಶಕ್ಕೆ ಬೆಂಬಲ ಕೊಡುವ ಮೊದಲು ಕಾರಾಗೃಹದ ಗೋಡೆಗಳನ್ನೂ ಕತ್ತಲು ಸೆರೆಮನೆಗಳನ್ನೂ ಕಣ್ಣುಮುಂದೆ ತಂದುಕೊಳ್ಳಿ. ಆ ಭಯಾನಕ ದೃಶ್ಯದಲ್ಲಿ ನಿಮ್ಮನ್ನು ಆಕರ್ಷಿಸುವಂತಹ ಸೌಂದರ್ಯ ಉಂಟೋ ಇಲ್ಲವೋ ನೋಡಿ. ಕೆಂಡದ ಮೇಲೆ ಕಾಲಿಟ್ಟು - ಮೃದು ಹಾಸಿಗೆಯ ಮೇಲೆ ಹೇಗಿರಬಲ್ಲಿರೋ ಅಷ್ಟೇ ಅವಿಚಲಿತರಾಗಿ ಇರಬಲ್ಲಿರಾ ನೋಡಿಕೊಳ್ಳಿ; ಎದೆ ಮುಟ್ಟಿ ನಿಶ್ಚಯಿಸಿಕೊಳ್ಳಿ. ಅನಂತರವೂ, ಈ ಯಜ್ಞದಲ್ಲಿ ಆನಂದದಿಂದ ಬಲಿ ನೀಡುವ ಇಚ್ಛೆ ಇದೆ ಎಂದು ಮನಸ್ಸಿಗೆ ಅನಿಸಿದರೆ ಮಾತ್ರ ಈ ನಿರ್ಣಯಕ್ಕೆ ಸಮ್ಮತಿ ನೀಡಿ. ಹಾಗಿಲ್ಲವಾದರೆ ದುಡುಕುವ ಕಾರಣವಿಲ್ಲ. ಸ್ವರಾಜ್ಯವೊಂದು ಅಗ್ನಿಪರೀಕ್ಷೆ ; ಅಗ್ನಿಸಮ ಅಂತಃಕರಣಗಳಲ್ಲಿ ಮಾತ್ರ ಸ್ವರಾಜ್ಯ ಬೆಳೆಯಬಲ್ಲದು.

ಅದೇ ಜಾಗದಲ್ಲೇ ಡಿಸೆಂಬರ್ 29ರಂದು 'ಗುರುಗೋವಿಂದ ಸಿಂಹ ಜಯಂತಿ.' ಬೃಹತ್ ಪ್ರಮಾಣದಲ್ಲಿ, ಭವ್ಯರೀತಿಯಲ್ಲಿ ಆಚರಿಸಲು ನಿರ್ಧರಿಸಿದೆವು. ಭರದಿಂದ ಸಿದ್ಧತೆ ನಡೆಯಿತು. ಬಿಪಿನಚಂದ್ರ ಪಾಲ್ ಸಭಾಧ್ಯಕ್ಷರು. ಅಂದು ಸಂಜೆ ನನ್ನ ರಚನೆ -

**ಸಕಲ ಜಗಾಮಧಿ ಛಾನ್**
**ಆಮುಚೇ ಪ್ರಿಯಕರ ಹಿಂದುಸ್ಥಾನ್**
**ಪುಣ್ಯಭೂಮಿ ತೂ ಪಿತೃಭೂಮಿ ಹಿ ತೂ**
**ತೂ ಆಮುಚಾ ಅಭಿಮಾನ್**

- ಎಂಬ ಆರಂಭಗೀತೆ ಮೊಳಗಿತು. ಲಾಲಾ ಲಜಪತರಾಯ್ ಸಹ ಭಾಷಣ ಮಾಡಿದರು. ಕೊನೆಗೆ ಎಲ್ಲರ ಒತ್ತಾಯಕ್ಕೆ ನಾನೂ ಮೇಲೇಳಬೇಕಾಯಿತು. ಮಾತು ಕೊನೆಗೊಳಿಸುತ್ತಾ ಹೇಳಿದೆ : 'ಗುರುವಿನ ಧ್ವಜದ ಮೇಲೆ ಅಂಕಿತವಾಗಿರುವ ದೇಗ್, ತೇಗ್ ಮತ್ತು ಫತ್ತೆ ಎಂಬ ಶಬ್ದಗಳ ಅರ್ಥ ಬಹುಶಃ ಬಹುಜನಕ್ಕೆ ತಿಳಿದಿಲ್ಲ. ಸೀಖ ಪಂಥ ಮತ್ತು ಗುರುಗೋವಿಂದ ಸಿಂಹರ ಜೀವನ ಎಂದರೆ ಈ ಮೂರು ಶಬ್ದಗಳ ವಿಕಸಿತ ರೂಪವೇ ಸರಿ. ಸ್ವತಃ ಗುರು ಗೋವಿಂದರೇ ಈ ಮಾತು ಹೇಳಿದ್ದಾರೆ. ದೇಗ್ ಎಂದರೆ ತತ್ವ ; ತೇಗ್ ಎಂದರೆ ಖಡ್ಗ ; ಫತ್ತೆ ಎಂದರೆ ವಿಜಯ. ಖಡ್ಗದ ಬಲವಿಲ್ಲದ ತತ್ವ ಒಂಟಿ ಕಾಲಿನ ಕುಂಟನಂತೆ. ಅದನ್ನು ಕಂಡುಕೊಂಡ ಗುರು ಗೋವಿಂದ ಸಿಂಹರು ಖಡ್ಗಗಳನ್ನು ಒರೆಗಳಚಿದರು ; ಕೊನೆಗೆ ಹಿಂದು ಧರ್ಮ ವಿಜಯಿಯಾಯಿತು.'

ಭಾರತದಲ್ಲಿ ಬಾಂಬಿನ ಯುಗ ಆರಂಭವಾಗಿತ್ತು 1908ರ ಏಪ್ರಿಲ್ 30ರಂದು ಮುಜಫರಪುರದಲ್ಲಿ ಖುದಿರಾಮ ಬಸು ಅದನ್ನು ಉದ್ಘಾಟಿಸಿದ್ದ. ನನ್ನ ಲಂಡನ್ನಿನ ನಿರಂತರ ಚಟುವಟಿಕೆಗಳೂ ಇಂಗ್ಲಿಷ್ ಪತ್ರಿಕೆಗಳ ಕಣ್ಣು ಚುಚ್ಚತೊಡಗಿದ್ದವು ಕೆಲವೇ ವರ್ಷಗಳ ಮೊದಲು ಇಂಗ್ಲೆಂಡಿಗೆ ಬರುತ್ತಿದ್ದ ಭಾರತೀಯ ವಿದ್ಯಾರ್ಥಿಗಳು, ಭಾರತದಲ್ಲಿನ 'ಬ್ರಿಟಿಷ್ ಸಾಮ್ರಾಜ್ಯ'ದ ಆಶಾಜ್ಯೋತಿಗಳಂತೆ ಸ್ವದೇಶಕ್ಕೆ ಹಿಂದಿರುಗುತ್ತಿದ್ದರು. ಆದರೆ ಈಗ ಪರಿಸ್ಥಿತಿ ಬದಲಾಗಿತ್ತು. ಈಗಿನ ವಿದ್ಯಾರ್ಥಿಗಳು ಅದೇ ಸಾಮ್ರಾಜ್ಯವನ್ನು ಭಸ್ಮಗೊಳಿಸುವ ಕಾಳ್ಗಿಚ್ಚಿನ ಕಿಡಿಗಳಂತೆ ಸಿಡಿಯತೊಡಗಿದ್ದರು ! 1909ರ ಫೆಬ್ರವರಿಯಲ್ಲಿ ಲಂಡನ್ನಿನ 'ಸ್ಟಾಂಡರ್ಡ್'

ಪತ್ರಿಕೆ ಬರೆಯಿತು; 'ನಮ್ಮ ವಿಶ್ವವಿದ್ಯಾನಿಲಯಗಳಲ್ಲಿರುವ ಹಾಗೂ ಕಾನೂನು ಅಧ್ಯಯನ ಮಾಡುತ್ತಿರುವ ಅತ್ಯಂತ ಪ್ರತಿಭಾವಂತ ಭಾರತೀಯರು ಕೆಲವರು ಅಂಥ ಸಾಧನ (ರಾಜದ್ರೋಹಿ ಪತ್ರಕ) ಗಳ ಮೂಲಕ, ವಿಶೇಷವಾಗಿ ಭಾವೀ ತರುಣ ಪೀಳಿಗೆಯ ಮನಸ್ಸಿನಲ್ಲಿ ಸಶಸ್ತ್ರ ಬಂಡಾಯದ ವಿಚಾರ ಬಿತ್ತಲು ಸರ್ವ ಪ್ರಯತ್ನವನ್ನೂ ನಡೆಸುತ್ತಿರುವರೆಂಬುದರಲ್ಲಿ ಸಂದೇಹವಿಲ್ಲ.

ಆಗ ಭಾರತದಲ್ಲಿ ಸಂಚಾರ ಮಾಡುತ್ತಿದ್ದ 'ಲಂಡನ್ ಟೈಮ್ಸ್' ಪತ್ರಿಕೆಯಲ್ಲಿ ವಿಖ್ಯಾತ ವರದಿಗಾರ ವ್ಯಾಲೆಂಟೈನ್ ಚಿರೋಲ್ ಕಳುಹಿಸುತ್ತಿದ್ದ ವರದಿಗಳೂ ಪ್ರಕಟವಾಗತೊಡಗಿದ್ದವು: 'ಬ್ರಿಟಿಷ್ ಆಡಳಿತವು ಶಾಶ್ವತವಾಗಿ ಮುಂದುವರಿಯಲು ಮಾರಕವಾದ ಕ್ರಾಂತಿ ಚಳವಳಿ ಸತ್ತಿಲ್ಲ, ಸಾಯುವಂತೆಯೂ ಇಲ್ಲ. ಅದರ ಕೆಲವು ನಾಯಕರು ಬಂಧನದಲ್ಲಿದ್ದರೂ ಅದು ಮಾತ್ರ ಮುಂದುವರಿಯುತ್ತಿದೆ. ಅದರ ದುರ್ದಮ್ಯ ಚಟುವಟಿಕೆಗಳನ್ನು ಜಗತ್ತಿನ ಯಾವುದೇ ಸುಧಾರಣೆಗಳಿಂದಲೂ ಶಮನಗೊಳಿಸಲಾಗುವುದಿಲ್ಲ. ಅತಿರೇಕ ವಾದಿಗಳು ಯುವಕರನ್ನು ಆಕರ್ಷಿಸುತ್ತಾರೆ; ಅವರ ಶ್ರದ್ಧೆಗೂ ಅನಿಯಂತ್ರಿತ ಶಕ್ತಿಗೂ ಅವಕಾಶ ನೀಡುವಂಥ ತತ್ವ ಬೋಧಿಸುತ್ತಾರೆ. ಅವರ ಅನುಯಾಯಿಗಳ ಸಂಖ್ಯೆ ಸಾಮಾನ್ಯ ಅಂದಾಜಿಗಿಂತ ಎಷ್ಟೋ ಪಾಲು ಹೆಚ್ಚಾಗಿದೆ; ಅವರ ಪರೋಕ್ಷ ಹಿತೈಷಿಗಳ ಸಂಖ್ಯೆ ಇನ್ನೂ ದೊಡ್ಡದಿರಲೇಬೇಕು. ಸದ್ಯಕ್ಕೆ ಬಹಿರಂಗ ಕಣಕ್ಕೆ ಇಳಿಯುವ ಇಚ್ಛೆ ಅತಿರೇಕ ವಾದಿಗಳಿಗಿಲ್ಲ. ಇದುವರೆಗಿನಂತೆ ರಹಸ್ಯವಾಗಿ ಜಾಗರೂಕತೆಯಿಂದ ಕೆಲಸ ಮಾಡುವುದೇ ಅದರ ಉದ್ದೇಶ.'

'ಭಾವಾವೇಶಭರಿತನಾದ ಬಂಗಾಲಿ ಮನುಷ್ಯ ತನ್ನ ಕೃತಿಯತ್ತ ಇಡೀ ಜಗತ್ತೇ ನೋಡಬೇಕೆಂದು ಬಯಸುತ್ತಾನೆ. ಹೆಚ್ಚು ವ್ಯಾವಹಾರಿಕ ಬುದ್ಧಿಯುಳ್ಳ ಚಿತ್ಪಾವನ ಬ್ರಾಹ್ಮಣ ನಿಶ್ಶಬ್ದವಾಗಿ ಪಟ್ಟುಹಿಡಿದು ಕೆಲಸ ಮಾಡುತ್ತಾನೆ.'

'ಬಂಗಾಲದಲ್ಲಿ ಸಹ, ಗದ್ದಲ ಮಾಡಿದವರು ಬಂಗಾಲಿಗಳು; ಆದರೆ ಬಂಗಾಲಿ ಕ್ರಾಂತಿಕಾರಿಗಳನ್ನು ನಿರ್ದೇಶಿಸುತ್ತಿದ್ದುದು ಪುಣೆಯ ಮಿದುಳು!'

'ಮಹಾರಾಷ್ಟ್ರದ ತುಂಬ ಗುಪ್ತಸಂಸ್ಥೆಗಳು ಗಜಬಜಿಸುತ್ತಿವೆ' ಇತ್ಯಾದಿ ಇತ್ಯಾದಿ.

ನಾನು ಲಂಡನ್ ತಲಪಿದ ಕೆಲವೇ ದಿನಗಳಲ್ಲಿ ಭಾರತ ಭವನಕ್ಕೆ ಒಂದು ವಿಶೇಷ 'ಸೌಲಭ್ಯ' ಒದಗಿತ್ತು. ಗುಪ್ತ ಪೊಲೀಸರ ಪಹರೆ! ಹೊರಗೆ ಹೊರಟರೆ ನಾಕು, ಅಪರಿಚಿತ ನೆರಳುಗಳು ನನ್ನ ಬೆನ್ನುಹತ್ತುತ್ತಿದ್ದವು. ಗುಪ್ತಚರ ಖಾತೆ ನಮ್ಮ ಮೇಲೆ ಇಷ್ಟೊಂದು ನಿಗ ಇಡತೊಡಗಿದಾಗ, ಆ ಬಗ್ಗೆ ನಾವೂ ಸ್ವಲ್ಪ ದೃಷ್ಟಿ ಹರಿಸದಿರುವುದು ನ್ಯಾಯವಾದೀತೆ?

ಎಂ.ಪಿ. ತಿರುಮಲಾಚಾರ್ಯರು ಓರ್ವ ತಮಿಳು ಪತ್ರಿಕೋದ್ಯಮಿ. ದೇಶಭಕ್ತ ಕವಿ ಸುಬ್ರಹ್ಮಣ್ಯ ಭಾರತಿಯವರ ಸಹಕಾರಿ. ಭಾರತಿಯವರ ಬಂಧನವಾದ ನಂತರ ಆಚಾರ್ಯರು ಮದರಾಸಿನಿಂದ ಪಾಂಡಿಚೆರಿಗೆ ಹೋದರು. ಆದರೆ ಅಲ್ಲೂ ಗುಪ್ತಚರರ ಕಾಟ ಶುರುವಾಯಿತು. ಆಗ ಭಾರತದಿಂದಲೇ ಅದೃಶ್ಯರಾದರು. ಕೊಲಂಬೋ ಮಾರ್ಗವಾಗಿ ಯುರೋಪಿಗೆ ಬಂದರು. 1908ರ ಅಂತ್ಯದಲ್ಲಿ ಲಂಡನ್ನಿನಲ್ಲಿ ಅವರ ಪರಿಚಯವಾಯಿತು. ವಿ.ವಿ.ಎಸ್. ಅಯ್ಯರ್ ಮತ್ತು ಅವರು ಪೂರ್ವಪರಿಚಿತರು. ಅದರಿಂದ ಭಾರತ ಭವನದಲ್ಲೆ ಆಚಾರ್ಯರನ್ನು ಕೆಲಸಕ್ಕೆ ನೇಮಿಸಿಕೊಂಡೆವು. ಕೆಲವೇ ದಿನಗಳಲ್ಲಿ ಅವರನ್ನು ಅಯ್ಯರ್ ಲಂಡನ್ನಿನ ಗುಪ್ತಚರ ವಿಭಾಗದ ಮುಖ್ಯಾಧಿಕಾರಿಯ ಬಳಿ ಕಳಿಸಿಕೊಟ್ಟರು. 'ಭಾರತ ಭವನದಲ್ಲಿ ಜರುಗುವ ಸಮಸ್ತ ಸಂಗತಿಗಳನ್ನೂ ಇದ್ದುದು ಇದ್ದಂತೆ ವರದಿ ಮಾಡುತ್ತೇವೆ' ಎಂದು ಆಚಾರ್ಯವರ್ಯರು ಮಾತು


ಎಂ.ಪಿ.ಟಿ. ಆಚಾರ್ಯ

ಕೊಟ್ಟರು ! ಅದಕ್ಕಾಗಿ ಪೊಲೀಸ್ ಖಾತೆಯಿಂದ ಅವರಿಗೆ ತಿಂಗಳಿಗೆ ಐದು ಪೌಂಡ್ ಸಂಬಳ ಸಿಕ್ಕತೊಡಗಿತು ಕ್ರಾಂತಿಕಾರ್ಯಕ್ಕೆ ಇಂಥ ಅಮೂಲ್ಯ ಧನಸಹಾಯ ಮಾಡಿದ ಪೊಲೀಸ್ ಖಾತೆಗೆ ನಿಜಕ್ಕೂ ಕೃತಜ್ಞತೆ ಸಲ್ಲಬೇಕು ! ಆಚಾರ್ಯರು ವಾರವಾರವೂ ತಯಾರಿಸುತ್ತಿದ್ದ ವರದಿಯನ್ನು ಅಯ್ಯರ್ ಪರಿಶೀಲಿಸುತ್ತಿದ್ದರು. ಅವರ ಸಮ್ಮತಿ ಪಡೆದು ಎಂ.ಪಿ.ಟಿ. ಆಚಾರ್ಯರು ಅದನ್ನು ತಮ್ಮ ಮುಖ್ಯಾಧಿಕಾರಿಗೆ 'ವಿನಮ್ರತೆ'ಯಿಂದ ಒಪ್ಪಿಸಿ ಬರುತ್ತಿದ್ದರು. ಜತೆಗೆ, ಗುಪ್ತಚರ ಖಾತೆಯ ರಹಸ್ಯಗಳನ್ನೂ ಶೋಧಿಸಿ ತರುತ್ತಿದ್ದರು ! 1909ರ ಜುಲೈವರೆಗೂ ಅವರು ಹೀಗೆ ಬ್ರಿಟಿಷ್ ಸಿಂಹಾಸನದ 'ಏಕನಿಷ್ಠ ಪ್ರಾಮಾಣಿಕ' ನೌಕರನಾಗಿ ದುಡಿದರು !

ಮತ್ತೊಂದು ಸ್ವಾರಸ್ಯದ ಪ್ರಸಂಗ. ನಾವು ಮಾತುಕತೆ ಆಡುತ್ತಿದ್ದುದೆಲ್ಲ ಭಾರತೀಯ ಭಾಷೆಗಳಲ್ಲಿ. ಅದು ಬ್ರಿಟಿಷ್ ಗುಪ್ತಚರರಿಗೆ ಅರ್ಥವಾಗುತ್ತಿರಲಿಲ್ಲ. ಅದಕ್ಕಾಗಿ ಭಾರತದಿಂದ ಏಳು ಭಾಷೆಗಳನ್ನು ಬಲ್ಲ ಒಬ್ಬ ಚೇಲಾನನ್ನು ತಂದರು. ಅವನು ಭಾರತಭವನಕ್ಕೆ ಬಂದು ತಳವೂರಿದ. ತಾನು 'ದಂತವೈದ್ಯ'ದ ವಿದ್ಯಾರ್ಥಿ ಎಂದು ಪರಿಚಯ ಹೇಳಿದ. ಹೆಸರು ಕೀರ್ತಿಕರ್. ನನ್ನ ಬಗ್ಗೆ ಹೆಚ್ಚಿನ ಗಮನ ವಹಿಸಬೇಕೆಂದು ಅವನಿಗೆ ಸೂಚನೆಯಿತ್ತು. ಸಾಪ್ತಾಹಿಕ ಸಭೆಗಳಲ್ಲಿ ಅವನಿಗೆ ಅದೆಷ್ಟು ಆಸಕ್ತಿ ! ತನ್ಮಯತೆಯಿಂದ ಕೇಳುತ್ತಾ ತಲೆದೂಗುತ್ತಿದ್ದ. ನನ್ನ ಮೇಲಿದ್ದ ಅವನ ಎರಡು ಕಣ್ಣುಗಳಿಗೆ ಮಣ್ಣೆರಚುವುದು ಅಷ್ಟೇನೂ ನನಗೆ ಕಷ್ಟವಾಗಲಿಲ್ಲ. ಆದರೆ ಅದಕ್ಕೂ ಮೊದಲೇ ಅವನ ಮೇಲಿದ್ದ ನಾಲ್ಕು ಕಣ್ಣುಗಳಿಂದ ತಪ್ಪಿಸಿಕೊಳ್ಳುವುದು ಅವನಿಗೆ ಕಷ್ಟವಾಗಿತ್ತು ! ಅಯ್ಯರ್ ಮತ್ತು ಡಾ. ರಾಜನ್ ಒಮ್ಮೆ ಅವನ ಕೋಣೆ ಶೋಧಿಸಿದರು. ಅವರಿಗೆ ಸಿಕ್ಕಿದ ವರದಿಗಳಲ್ಲಿ ಭಾರತಭವನದ ಚಟುವಟಿಕೆಗಳನ್ನು ಅತ್ಯಂತ ವಿದ್ರೂಪಗೊಳಿಸಿ ಬರೆಯಲಾಗಿತ್ತು. ಅಯ್ಯರ್ ಅದನ್ನು ತಂದು ನನ್ನ ಕೈಲಿಟ್ಟರು.

ಮರುದಿನ ನಡುರಾತ್ರಿ. ನಾವು ಮೂವರೂ ಅವನ ಕೋಣೆಯ ಬಾಗಿಲು ಬಡಿದೆವು. ಬಹಳ ಹೊತ್ತಿನ ನಂತರ ಅವನು ಬಾಗಿಲು ತೆರೆಯಬೇಕಾಯಿತು. ನೇರವಾಗಿ ಒಳಗೆ ಹೋಗಿ ಬಾಗಿಲು ಮುಚ್ಚಿದೆವು. 'ಅರ್ಧರಾತ್ರಿಯಲ್ಲಿ ಬಾಗಿಲು ಬಡಿದು ನಿದ್ರೆ ಕೆಡಿಸುವುದು ಸಭ್ಯತೆಯ ಲಕ್ಷಣವಲ್ಲ!' ಎಂದು ಹಾರಾಡಿದ, ಆ ಸಭ್ಯಸ್ಥ ! 'ನೀವು ನನಗೆ ಅವಮಾನ ಮಾಡುತ್ತಿದ್ದೀರಿ' ಎಂದು ಕೂಗಾಡಿದ ಆ ಮಾನವಂತ ! ನಾನು ಅವನು ಬರೆದಿದ್ದ ವರದಿಪತ್ರ ತೆಗೆದು ಮುಂದೆ ಹಿಡಿದೆ. ತಟ್ಟನೆ ಸದ್ದಿಲ್ಲದೆ ಸ್ತಂಭೀಭೂತನಾಗಿ ನಿಂತುಬಿಟ್ಟ. ಅವನ ಗರ್ಜನೆಯೆಲ್ಲ ತಣ್ಣಗಾಗಿಹೋಯಿತು. ಏನು ಕೇಳಿದರೂ ಉತ್ತರವಿಲ್ಲ ! ಅಯ್ಯರ್ ಎಲ್ಲದಕ್ಕೂ ಸಿದ್ಧರಾಗಿಯೇ ಬಂದಿದ್ದರು. ಅವರು ಜೇಬಿನಿಂದ ಪಿಸ್ತೂಲು ತೆಗೆಯುತ್ತಲೇ, ಮಾಂತ್ರಿಕನೆದುರು ಭೂತ ಬಾಯಿಬಿಡುವಂತೆ, ಬಡಬಡನೆ ಜವಾಬು ಕೊಡತೊಡಗಿದ. ಅವರು ಕಾಗದ ಮುಖಕ್ಕೆ ಹಿಡಿದಾಗ, ಅಪರಾಧ ಒಪ್ಪಿಕೊಂಡ. 'ಈಗಲೇ ಹೊರಟು ಹೋಗುತ್ತೇನೆ, ಜೀವ ಉಳಿಸಿ' ಎಂದು ಕಾಲುಕಟ್ಟಿಕೊಂಡ. ಆದರೆ ಅಂಥ 'ಸಾಚಾ ಸ್ನೇಹಿತ'ನನ್ನು ನಾವು ಬಿಟ್ಟುಕೊಡುತ್ತೇವೆಯೆ ? 'ಇಲ್ಲಿಯೇ ಇರು. ವರದಿಗಳನ್ನು ಬರೆದು ಕಳುಹಿಸು. ಆದರೆ ಅಯ್ಯರ್‌ಗೆ ತೋರಿಸಿ ಕಳುಹಿಸಬೇಕು' ಎಂದೆ. ಒಪ್ಪಿಕೊಳ್ಳದಿದ್ದರೆ

ಏನಾದೀತೆಂಬುದನ್ನು ಅವನು ಬಲ್ಲ; ತಾನು ಪತ್ತೆಯೇ ಇಲ್ಲದಂತಾಗುವುದು ಅವನಿಗೆ ಬೇಕಿರಲಿಲ್ಲ! ನಮಗೂ ನಿಶ್ಚಿಂತೆ. ಇಂದು ಈ ಶನಿ ತೊಲಗಿದರೆ, ನಾಳೆ ಇನ್ನೊಂದು ಬಂದು ವಕ್ಕರಿಸುವುದು ನಿಶ್ಚಿತವಿತ್ತು. ಗುರುತು ಕಾಣದ ದೆವ್ವಕ್ಕಿಂತ ಗುರುತುಕಂಡ ಪೀಡೆಯೇ ಉತ್ತಮವಷ್ಟೆ!

ಭಾರತಭವನ ಹಾಗೂ ಭಾರತೀಯ ವಿದ್ಯಾರ್ಥಿಗಳ ವಿಷಯ ಬ್ರಿಟಿಷ್ ಪಾರ್ಲಿಮೆಂಟಿನಲ್ಲೂ ಚರ್ಚೆಗೆ ಬಂತು. ಒಂದೇ ಸಮನೆ ಪ್ರಶ್ನೋತ್ತರಗಳು ಆರಂಭವಾದವು. ನಮ್ಮ ಪೈಕಿಯೇ ಇದ್ದ 'ಕಿಲಾಡಿ' ಓರ್ವ ಗುಪ್ತಚರನನ್ನು ಭೇಟಿಯಾದ. ಭಾರತಭವನದ ವಿದ್ಯಾರ್ಥಿಗಳನ್ನು ದೂಷಿಸಿದ. ತಾನು ತ್ರಯಸ್ಥನೆಂದು ತೋರಿಸಿಕೊಳ್ಳುತ್ತಾ, 'ಭವನದ ಸುತ್ತ ಗುಪ್ತ ಪಹರೆಯ ಪರಿಣಾಮ ಹೇಗಿದೆ? ಅದರಿಂದ ಉಪಯೋಗ ಆಗುತ್ತಿಲ್ಲವೆ?' ಎಂದು ಪ್ರಶ್ನಿಸಿದ. ಅದಕ್ಕೆ ಆ ಗುಪ್ತಚರ ಹೇಳಿದ: 'ಅದರಿಂದ ಭಾರತೀಯ ವಿದ್ಯಾರ್ಥಿಗಳು ಹೆದರಿಕೊಂಡು ರಾಜಕಾರಣದಿಂದ ಕೈತೊಳೆದುಕೊಳ್ಳುವರೆಂದು ಸರಕಾರ ಎಣಿಸಿತ್ತು. ಆದರೆ ಈಗ ಪ್ರತಿ ಭಾನುವಾರದ ಸಭೆಗೆ ಎಲ್ಲೆಡೆಗಿಂತ ಹೆಚ್ಚು ಜನ 'ಇಂಡಿಯಾ ಹೌಸ್'ಗೆ ಬರಲಾರಂಭಿಸಿದ್ದಾರೆ!'

'ಸಾವರಕರ್' ಮೇಲೆ ಲಂಡನ್ನಿನ ಪತ್ರಿಕೆಗಳು ದಾಳಿ ಪ್ರಾರಂಭಿಸಿದವು. 'ಈವನಿಂಗ್ ಸ್ಟಾಂಡರ್ಡ್' ಅಂತೂ, ಸಹಸ್ರನಾಮಾವಳಿಯನ್ನೇ ಪಠಿಸಿತು. 'ಮಾತಾಪಿತೃಗಳ ಭವಿಷ್ಯದ ಆಶಾದೀಪವಾಗಿ ಇಂಗ್ಲೆಂಡಿಗೆ ಬರುವ ಮುಗ್ಧರೂ ಸಭ್ಯರೂ ಆದ ಪ್ರತಿಭಾವಂತ ಭಾರತೀಯ ವಿದ್ಯಾರ್ಥಿಗಳನ್ನು ಕುಲಗೆಡಿಸಿ ಹಾಳುಮಾಡುವ ಇವನು ಎಂಥ ಜಂಟಲ್‌ಮನ್?' ಎಂದು ಪ್ರಶ್ನಿಸಿತು. ನನ್ನ ಗೆಳೆಯರೊಬ್ಬರು ಅದಕ್ಕೆ ಬಿಸಿ ತಟ್ಟುವಂತೆ ಉತ್ತರ ಬರೆದು ಕಳುಹಿಸುತ್ತಲೇ ಸಂಪಾದಕ ಮಹಾಶಯರು ಬಾಲ ಮುದುರಿಕೊಂಡರು. ಇದ್ದಕ್ಕಿದ್ದಂತೆ ಆ ಪತ್ರಿಕೆಯ ಪ್ರತಿನಿಧಿಯೊಬ್ಬ ನನ್ನ ಭೇಟಿಗಾಗಿ ಪ್ರಾರ್ಥಿಸಿಕೊಂಡು ಬಂದ. ಮರುದಿನದ ಪತ್ರಿಕೆಯಲ್ಲಿ ಭೇಟಿಯ ಅರೆಸತ್ಯದ ವರದಿ ಪ್ರಕಟವಾಯಿತು. ಆದರೂ ಕೊನೆಯಲ್ಲಿ, 'ವಿ. ಡಿ. ಸಾವರಕರರ ಮುಖದ ಮೇಲೆ ಯೌವನ ಹಾಗೂ ಜಾಣತನದ ಹೊಳಪು ಎದ್ದುಕಾಣುತ್ತದೆ' ಎಂದು ಮೆಚ್ಚುಗೆ ವ್ಯಕ್ತಪಡಿಸಿದ್ದ.

ಮತ್ತೊಂದು ದಿನ 'ಸನ್‌ಡೇ ಕ್ರಾನಿಕಲ್' ಪತ್ರಿಕೆಯ ಪ್ರತಿನಿಧಿ ಕ್ಯಾಂಪೆಲ್ ಗ್ರೀನ್ ಭೇಟಿಗೆ ಬಂದ. ಭಾರತ ಭವನದ ಬಗ್ಗೆ ಅವನ ಅಭಿಪ್ರಾಯ: 'ಬಹುಶಃ ನನಗೇ ದೃಷ್ಟಿಭ್ರಮಣೆ ಇದ್ದೀತು! ಅದೊಂದು ರಹಸ್ಯ ನಿಲಯ..... ವಿ. ಡಿ. ಸಾವರಕರೊಡನೆ ದೀರ್ಘವಾದ ಸ್ನೇಹಸಂಭಾಷಣೆ ನಡೆಸುವ ಸದವಕಾಶ ನನಗೆ ಸಿಕ್ಕಿತ್ತು. ಅವರು ಕೇವಲ ವಿದ್ಯಾರ್ಥಿಗಳ ವಕ್ತಾರ ಮಾತ್ರವಲ್ಲ, ಶ್ಯಾಮಜಿ ಕೃಷ್ಣವರ್ಮರ ಪ್ರತಿನಿಧಿ ಎಂದೂ ಕಾಣುತ್ತದೆ. ಅವರು "ಗ್ರೇಸ್ ಇನ್"ನ ಎಳೆಹರೆಯದ ಕಾನೂನು ವಿದ್ಯಾರ್ಥಿ; 23 ವರ್ಷಗಳೆಂದು ನೋಡುತ್ತಲೇ ಹೇಳಬಹುದು. ಅಚ್ಚ ಹಿಪ್ಪೆಯ ಮೈಬಣ್ಣ; ನಿಚ್ಚಳವೂ ಆಳವೂ ಆದ ಮರ್ಮಭೇದಕ ಕಣ್ಣುಗಳು; ನಾನು ಎಲ್ಲೋ ಕೆಲವರಲ್ಲಿ ಮಾತ್ರವೇ ನೋಡಿರುವಂತಹ ಎದ್ದುಕಾಣುವ ದವಡೆ. ಇಂಗ್ಲಿಷಿನಲ್ಲಿ ಸೊಗಸಾಗಿ ಮಾತನಾಡುತ್ತಾರೆ. ಮಿಸ್ಟರ್ ಸಾವರಕರ್ ತಮ್ಮ ಉದ್ದೇಶ ಸಾಧನೆಗೆ ಎಷ್ಟು ದೂರ ಬೇಕಾದರೂ ಹೋಗುತ್ತಾರೆ - ನನ್ನ ಅಭಿಪ್ರಾಯದಲ್ಲಿ ಅವರು ಸರಿಯಾದ ದಿಕ್ಕಿನಲ್ಲೇ ಮುಂದುವರಿಯುತ್ತಾರೆ.... ಅವರೆನ್ನುವಂತೆ, ಭಾರತಭವನ ಕೇವಲ ಒಂದು ವಿದ್ಯಾರ್ಥಿ ನಿವಾಸ. ಅಲ್ಲಿ ಬರುವವರ ರಾಜಕೀಯ ಅಭಿಪ್ರಾಯ ಹೀಗೇ ಇರಬೇಕೆಂಬ ನಿಯಮವಿಲ್ಲ. ಊಟ ಮತ್ತು ವಸತಿಗೆ ವಾರಕ್ಕೆ ಒಂದು ಪೌಂಡ್ ಕೊಡಬೇಕೆಂಬುದಷ್ಟೆ ನಿಯಮ..... ರಾಜಕಾರಣದ ಬಗ್ಗೆ ವಾದವಿವಾದಗಳು

ನಡೆಯುತ್ತವೆ ನಿಜ ಸರಕಾರಿ ವಸತಿಗೃಹ ತೆರೆದರೂ, ಅಲ್ಲಿ ಸಹ ಅದು ನಡೆಯದಿರುವುದಿಲ್ಲ. ಇಂದಿನ ಪರಿಸ್ಥಿತಿಯಲ್ಲಿ ರಾಜಕಾರಣವೇ ಅವರ ಪ್ರಾಣ. ಬ್ರಿಟಿಷ್ ರಾಜ್ಯವೇ ಕಲ್ಯಾಣಕರ ಎಂದು ವಾದಿಸುವವರೂ ಅಲ್ಲಿಗೆ ಬರುತ್ತಾರೆ. ವಾದವಿವಾದ ನಡೆಯುತ್ತದೆ. ಸತ್ಯ ಹಾಗೂ ವಿವೇಚನೆ ಯಾರ ಕಡೆಗಿರುತ್ತದೋ ಅವರ ವಿಚಾರ ಪ್ರಚಾರವಾಗುತ್ತದೆ... ಭಾರತವು ಬ್ರಿಟಿಷ್ ಶಾಸನದಿಂದ ಪೂರ್ಣ ಮುಕ್ತವಾಗಬೇಕೆಂದೂ, ಭಾರತ ಭಾರತೀಯರಿಗಾಗಿಯೇ ಎಂಬುದೂ ಮಿಸ್ಟರ್ ವಿ. ಡಿ. ಸಾವರಕರರ ನಂಬಿಕೆ ''ಇಂಗ್ಲಿಷರಿಗೆ ಧನ್ಯವಾದ ಅರ್ಪಿಸಬೇಕೆಂದರೆ, ಅವರು ಹಿಂದುಗಳ ರಾಷ್ಟ್ರೀಯತೆಯನ್ನು ಭ್ರಷ್ಟಗೊಳಿಸಿರುವುದಕ್ಕಾಗಿ ಅರ್ಪಿಸಬೇಕು, ಅಷ್ಟೆ'' ಎನ್ನುತ್ತಾರೆ!'

''ಭಾರತಭವನದ ಹೊರಗೆ ಗುಪ್ತಚರರು ಕಾವಲಿದ್ದರೆ ಅಥವಾ ನಮ್ಮನ್ನು ಹಿಂಬಾಲಿಸಿದರೆ ನಮಗೇನೂ ಅದರ ಚಿಂತೆಯಿಲ್ಲ. ಅವರಿಗೆ ಹವಾ ಒಗ್ಗುವಂತಿದ್ದರೆ ಹಾಗೇ ಮಾಡಲಿ'' - ಎನ್ನುತ್ತಾರೆ ಸಾವರಕರ್. ಆ ಕೊನೆಯ ಮಾತಿನಲ್ಲಿ ಆಂಗ್ಲ ಪ್ರಯೋಗ ಎದ್ದುಕಾಣುತ್ತದೆ.... ಭಾರತಭವನದ ಈ ಕುಶಾಗ್ರಮತಿ ತರುಣ ನಾಯಕನ ಹೇಳಿಕೆಯನ್ನು ಹೆಚ್ಚುಕಡಿಮೆ ಮಾಡಲು ನನಗೆ ಸಾಧ್ಯವೇ ಇಲ್ಲ.'

ಇದೇ ಸಮಯದಲ್ಲಿ ಎಷ್ಟೋ ಗುಪ್ತ ಪೊಲೀಸರು ತಾವು ಪತ್ರಿಕಾ ವರದಿಗಾರರೆಂದು ಹೇಳಿಕೊಂಡು ಸಂದರ್ಶನಕ್ಕೆ ಬರುತ್ತಿದ್ದುದೂ ಉಂಟು. 'ನನಗೇ ನೇರವಾಗಿ ಪತ್ರ ಬರೆಯುವಂತೆ ನಿಮ್ಮ ಸಂಪಾದಕರಿಗೆ ತಿಳಿಸಿ. ಅವರಿಗೆ ಏನು ಬೇಕಾದರೂ ನಾನು ಬರೆದು ಕಳುಹಿಸಿಕೊಡುತ್ತೇನೆ. ಪಾಪ, ನಿಮಗೇಕೆ ವೃಥಾ ತೊಂದರೆ!' ಎಂದು ನಾನು ಅವರಿಗೆ ಅಭಯವಚನ ನೀಡಿ ಗೌರವದಿಂದಲೇ ಕಳುಹಿಸಿಕೊಡುತ್ತಿದ್ದೆ.

1908 ಮೇ 1ರಂದು ಶ್ಯಾಮಜಿಯವರ ಬ್ಯಾರಿಸ್ಟರ್‌ಗಿರಿ ರದ್ದಾಯಿತು. ಅನಂತರ 'ಗ್ರೇನ್ ಇನ್' ಅಧಿಕಾರಿಗಳೂ ನನ್ನ ಹಾಗೂ ಹರನಾಮ ಸಿಂಹನ ಪದವಿ ಕೊಡದೆ ತಡೆಹಿಡಿದರು.





# ಹವಿಸ್ಸು ಹದಿನಾರು

ನಿಮಗೆ ನನ್ನ ಸ್ನೇಹಿತನೊಬ್ಬನ ಪರಿಚಯ ಮಾಡಿಕೊಡಬೇಕು ಪಂಜಾಬಿನ ಗಂಡುಶಿಶು ಅವನು ; ಹಿಂದು ಕ್ಷತ್ರಿಯ ಮನೆತನದವನು. ಅವನ ತಂದೆ ಜಿಲ್ಲಾ ಪೊಲೀಸ್ ಅಧಿಕಾರಿ. ಮೂವರು ಗಂಡುಮಕ್ಕಳಲ್ಲಿ ಇವನು ಮಧ್ಯಮ. ಓದಿನಲ್ಲಿ ಬುದ್ಧಿವಂತ , ಹಟವಾದಿ, ಶೋಕಿಲಾಲ ! ಮದುವೆಯಾಗಿ, ಒಂದು ಗಂಡುಮಗುವಿತ್ತು. ಅವನು ಇಂಗ್ಲೆಂಡಿಗೆ ಇಂಜಿನಿಯರಿಂಗ್ ಶಿಕ್ಷಣ ಪಡೆಯಲು ಬಂದದ್ದು 1906ರ ನವೆಂಬರ್ ಹೊತ್ತಿಗೆ ಆಗ ವಯಸ್ಸು ಸುಮಾರು 21 ಮನೆಯವರು ಬೇಡ ಎಂದರೂ ಹಟ ಹಿಡಿದು ಬಂದಿದ್ದ ಇಂಗ್ಲೆಂಡು ಅವನನ್ನು ಬಲವಾಗಿ ಆಕರ್ಷಿಸಿತ್ತು - ಯಾವ ಮಹತ್ಕಾರ್ಯಕ್ಕಾಗಿ ಎಂಬುದು ಮಾತ್ರ ಆಗ ಅವನಿಗೆ ತಿಳಿಯದು !

ಲಂಡನ್ನಿನಲ್ಲಿ ಅವನಿಗೆ ಅನೇಕ ಕಾರ್ಯಗೌರವಗಳು. ಕಾಲೇಜಿಗೆ ಹೋಗುವುದು ಅದರಲ್ಲಿ ಒಂದು ಸಣ್ಣಭಾಗ ಮಾತ್ರ ಅದಲ್ಲದೆ ಅವನಿಗಿದ್ದ ಮಹತ್ವದ ರಾಜಕಾರ್ಯಗಳಾವುವು ? ಅತ್ಯಾಧುನಿಕ ಶೈಲಿಯಲ್ಲಿ ಉಡುಪು ತೊಡುವುದು ; ರಸ್ತೆಗಳಲ್ಲಿ ಗಟ್ಟಿಯಾಗಿ ಪ್ರೇಮಗೀತೆ ಹಾಡಿಕೊಂಡು ಸುತ್ತಾಡುವುದು ; ದಾರಿಹೋಕರನ್ನು ಕೆಣಕಿ ಗದ್ದಲ ಎಬ್ಬಿಸುವುದು ! ಮಾತು ಮಾತಿಗೂ 'ಅರೇ ಯಾರ್' ಎನ್ನುವುದು ಅವನ ಪದ್ಧತಿ. ಇಷ್ಟಾದರೂ, ಕಾಲೇಜಿನ ಪರೀಕ್ಷೆಗಳಲ್ಲಿ ಅವನಿಗೆ ಮೊದಲ ಸ್ಥಾನ ಗಟ್ಟಿ !

1907ರಲ್ಲಿ ಭಾರತಭವನಕ್ಕೂ ಅವನಿಗೂ ನಂಟು ಬೆಳೆಯಿತು ಅಚ್ಚುಕಟ್ಟಾಗಿ ಬಟ್ಟೆ ತೊಟ್ಟು, ಠೀವಿಯಿಂದ ಬರುತ್ತಿದ್ದ ಅವನ ಕಡೆಗೇ ಎಲ್ಲರ ಗಮನ 'ಸಾವರಕರ್ ಭಾಷಣ' ಎಂದರೆ ಅವನಿಗೆ ಅಚ್ಚುಮೆಚ್ಚು ಶ್ರದ್ಧೆಯಿಂದ ಕುಳಿತು ಕೇಳುತ್ತಿದ್ದ ಚರ್ಚೆ, ವ್ಯಾಖ್ಯಾನ ಕಂಡರಾಗದು ಅವುಗಳ ಬಗ್ಗೆ ನಿಸ್ಸಂಕೋಚವಾಗಿ ಗೇಲಿ, ಕುಚೋದ್ಯ ಮಾಡುವುದು ಅವನ ಸ್ವಭಾವ

ಒಮ್ಮೆ, ಜಪಾನೀಯರ ಶೌರ್ಯ, ಸಾಹಸ ಕುರಿತ ವಿಚಾರಗೋಷ್ಠಿ ಆ ಯುವಕನೂ ಕೆಲನಿಮಿಷಗಳು ಶಾಂತವಾಗಿ ಕೇಳಿದ ಆದರೆ ಕೇವಲ ಜಪಾನೀಯರ ಹೊಗಳಿಕೆ ಅವನಿಗೆ ಸಹನವಾಗಲಿಲ್ಲ 'ಅದೇನು ಮಹಾ ? ನಮ್ಮ ಹಿಂದು ರಾಷ್ಟ್ರದ ಸಾಹಸ ಏನೂ ಕಡಿಮೆಯಿಲ್ಲ. ನಮ್ಮ ಪರಾಕ್ರಮದ ಬಗ್ಗೆಯೂ ಸದ್ಯದಲ್ಲೇ ಜಗತ್ತು ಕೊಂಡಾಡುತ್ತದೆ, ನೋಡುತ್ತಾ ಇರಿ' ಎಂದ ಉಳಿದವರೆಲ್ಲ ಗೊಳ್ಳನೆ ನಕ್ಕರು 'ಇದು ಉತ್ತರನ ಪೌರುಷ. ಕಷ್ಟಸಹಿಷ್ಣುತೆ ಹಾಗೂ ಬಲಿದಾನಕ್ಕೆ ನಮ್ಮ ಜನ ಲಾಯಕ್ಕಿಲ್ಲ' ಎಂದರು

ಆ ತರುಣ ಆದಕ್ಕೆ ಒಪ್ಪಲಿಲ್ಲ. ಚರ್ಚೆ ಬೆಳೆಯಿತು ಪಂಥ ಕಟ್ಟಿದರು. ಅಲ್ಲಿದವರಲ್ಲೊಬ್ಬ ಒಂದು ಗುಂಡುಸೂಜಿ ತೆಗೆದು, 'ಎಲ್ಲಿ ಹಿಂದುಗಳ ಸಾಹಸ ನೋಡೋಣ' ಎನ್ನುತ್ತಾ ಆ ಯುವಕನ ಕೈಗೆ ಚುಚ್ಚತೊಡಗಿದ. ಯುವಕನ ಹಸ್ತ ಗೆರೆಯಷ್ಟೂ ಚಲಿಸಲಿಲ್ಲ ; ಮುಖಭಾವ ಬದಲಾಗಲಿಲ್ಲ. ಸೂಜಿ ಪೂರ್ತಿಯಾಗಿ ಒಳಗೆ ಹೋಯಿತು. ಆದರೂ ಅವನು 'ಹಾಹೂ' ಅನ್ನಲಿಲ್ಲ. ರಕ್ತ ಹೊರಚಿಮ್ಮಿ ಹರಿಯಿತು. ಆದರೂ ಅವನ ಮಂದಹಾಸ ಮರೆಯಾಗಲಿಲ್ಲ! ಗೆಳೆಯರೆಲ್ಲ ನಿಬ್ಬೆರಗಾದರು ಮದನಲಾಲ ಧಿಂಗ್ರಾನ ಮನೋದಾರ್ಢ್ಯ ಎಂದರೆ ಅದು !

'ಸಾವರಕರ್‌ಜೀ, ಚರ್ಚಾಗೋಷ್ಠಿ, ವಿಚಾರ ವಿನಿಮಯಗಳ ಮನೆ ಹಾಳಾಗಲಿ ; ಕಾರ್ಯತಃ ಏನಾದರೂ ಮಾಡುವುದಿದ್ದರೆ ಹೇಳಿ' ಎನ್ನುತ್ತಿದ್ದ. ಮುಸಲ್ಮಾನ ಸದಸ್ಯರ ಕಡೆ ಕೈತೋರಿಸಿ, 'ಸಾವರಕರ್‌ಜೀ, ಈ ಜನ ಯಾವಾಗ ಕೈಕೊಡುವರೋ ಗೊತ್ತಿಲ್ಲ. ನೀವು ಹುಷಾರಾಗಿರಬೇಕು' ಎಂದು ಪದೇ ಪದೇ ಹೇಳುತ್ತಿದ್ದ. ಭಾರತಭವನದಲ್ಲಿ ಜರುಗಿದ ಮೇ 10ರ ಸಮಾರಂಭದಲ್ಲಿ ಅವನ ಉತ್ಸಾಹ ಹೇಳತೀರದು. ಕೋಟಿನ ಮೇಲೆ ಸ್ಮೃತಿಮುದ್ರಿಕೆ ಧರಿಸಿ, ಡೌಲಿನಿಂದ ತಿರುಗುತ್ತಿದ್ದ ಅವನನ್ನು ಕಂಡು ಯಾರಾದರೂ ಅಸೂಯೆ ಪಡಬೇಕು! ಕಾಲೇಜಿಗೆ ಹೋದಾಗ ಆ ಮುದ್ರಿಕೆ ಕಿತ್ತೆಸೆಯಲು ಅವನ ಆಂಗ್ಲ ಸ್ನೇಹಿತನೊಬ್ಬ ಕೈಹಾಕಿದನಂತೆ. ಆಗ ಅವನ 'ಪ್ರಾಣಮುದ್ರೆ' ಯನ್ನೇ ಕತ್ತರಿಸಲು ಚೂರಿ ಹಿರಿದಿದ್ದ ವೀರ – ಈ ಧಿಂಗ್ರಾ!

ನಮ್ಮ ಬಾಂಬ್ ತಯಾರಿಕೆಯ ಪ್ರಯೋಗಾಲಯ ಇದ್ದುದು ಭಾರತ ಭವನದ ಮೇಲಿನ ಮಹಡಿಯಲ್ಲಿ. ಅಲ್ಲಿ ಧಿಂಗ್ರಾ ಸಹ ನನ್ನ ಸಹಕಾರಿಗಳಲ್ಲೊಬ್ಬ. ಒಮ್ಮೆ ಮಧ್ಯರಾತ್ರಿಯಾಗಿತ್ತು ; ಒಲೆಯ ಮೇಲೆ ಗಾಜಿನ ಪಾತ್ರೆಯಲ್ಲಿದ್ದ ಆಮ್ಲ ಕುದಿಯತೊಡಗಿತ್ತು ಅದರ ತಾಪಮಾನ 300 ಡಿಗ್ರಿ ಸೆಂ. ದಾಟಿತ್ತು. ಭೀಕರ ಆಸ್ಫೋಟದ ಸಂಭವ! ಇನ್ನೊಂದು ಕ್ಷಣ ಬಿಟ್ಟಿದ್ದರೂ ಪ್ರಯೋಗಾಲಯದ ಜೊತೆಗೆ ನಾವೂ ಭಸ್ಮವಾಗುತ್ತಿದ್ದುದು ನಿಶ್ಚಿತ. ಅದಕ್ಕೂ ಮಿಗಿಲಾಗಿ, ನಮ್ಮ ರಹಸ್ಯ ಬಯಲಾಗುವುದೆಂಬ ಭಯ. ಬೇರೆ ಕೆಲಸದಲ್ಲಿ ಮಗ್ನನಾಗಿದ್ದ ನಾನು ತಟ್ಟನೆ ಎಚ್ಚೆತ್ತೆ. ಪರಿಸ್ಥಿತಿ ಅರಿವಾಗಿ ಜೀವ ಜಗ್ಗೆಂದಿತು. ಇಕ್ಕಳಕ್ಕಾಗಿ ಹುಡುಕತೊಡಗಿದೆ. ಅಷ್ಟರಲ್ಲಿ ಅಲ್ಲಿಯೆ ಇದ್ದ ಧಿಂಗ್ರಾ ಆ ಪಾತ್ರೆ ಭದ್ರವಾಗಿ ಹಿಡಿದುಕೊಂಡ. ಶಾಂತವಾಗಿ ಅದನ್ನು ತೆಗೆದು ಕೆಳಕ್ಕಿಳಿಸಿದ. ಅಂಗೈನ ಚರ್ಮ, ಮಾಂಸ ಸುಟ್ಟು ರಕ್ತ ಸೋರಿತು. ಆದರೂ ಅವನಿಗೆ ಅದರ ಬಗ್ಗೆ ಎಳ್ಳಷ್ಟೂ ಲಕ್ಷ್ಯವಿಲ್ಲ.

1908ರ ಕೊನೆಗಾಲದಲ್ಲೊಂದು ಭಾನುವಾರ ಭಾರತಭವನದಲ್ಲಿ ವಾರದ ಸಭೆ ನಡೆಯುತ್ತಿತ್ತು. ಗಂಭೀರ ವಾತಾವರಣ ಏರ್ಪಟ್ಟಿತ್ತು. ಆಗ ಇದ್ದಕ್ಕಿದ್ದಂತೆ ಗ್ರಾಮಾಫೋನ್ ಹಾಡು ಕೇಳಿಸಿತು. ಅದೊಂದು ಪ್ರೇಮಾಲಾಪಗಳ ಗೀತೆ; ಯಾರೋ ಪುನಃ ಪುನಃ ಅದೇ ಭಾಗವನ್ನು ಹಾಕುತ್ತಿದ್ದರು. ಸಭಿಕರ ಏಕಾಗ್ರತೆಗೆ ಧಕ್ಕೆತಗುಲಿತು. ಇಂಥ 'ಕಾರ್ಯಕ್ರಮ ಕಂಟಕರು' ಯಾರೆಂದು ನೋಡಲು ಹೊರಗೆ ಬಂದೆ. ಮುಂದಿನ ಕೋಣೆಯಲ್ಲಿ ಮದನಲಾಲ ಧಿಂಗ್ರಾ! ಆ ಮಹರಾಯ ರಸ್ತೆಯ ಬದಿಗಿದ್ದ ಕಿಟಕಿಯಲ್ಲೇ ಗ್ರಾಮಾಫೋನ್ ಹಚ್ಚಿದ್ದ. ಕಿಟಕಿಯ ಹೊರಗೆ ಹುಡುಗಿಯರ ಗುಂಪು ಘೇರಾಯಿಸಿತ್ತು. ಹಾಡಿನ ಪದಪದಕ್ಕೂ ಅವರು ಕಿಸಕ್ಕನೆ ನಗುತ್ತಿದ್ದರು. ಒಳಗೆ ಧಿಂಗ್ರಾ ಉನ್ಮತ್ತನಂತೆ ತಲೆದೂಗುತ್ತಾ ಶಿಳ್ಳೆಹೊಡೆಯುತ್ತಿದ್ದ. ಆ ಅಸಹ್ಯ ಭಂಗಿ ಕಂಡು ರೇಗಿದೆ :

'ಏನಯ್ಯಾ ಇದು, ಆಡುವುದು ಒಂದು, ಮಾಡುವುದು ಇನ್ನೊಂದು ! ಸದಾ ಹೋರಾಟ ಹಾಗೂ ಬಲಿದಾನವೇ ಶ್ರೇಷ್ಠ ಎನ್ನುತ್ತೀಯೆ; ಸಭೆಗಳಿಗೆ ಚಕ್ಕರ್ ಹೊಡೆಯುತ್ತೀಯೆ ಈ ವರ್ತನೆ, ಈ ಹಾಡು

ಇವೆಲ್ಲ ಹೋರಾಟ, ಬಲಿದಾನಗಳ ಲಕ್ಷಣವೇನು ? ನಭೆ ನಿನಗೆ ಬೇಡವಾದರೆ ಬಿಡು , ಆದರೆ ಕೊನೆಯ ಪಕ್ಷ ಬೇರೆಯವರಿಗೆ ತೊಂದರೆ ಕೊಡುವುದನ್ನು ನಾಕುಮಾಡು.'

ಬೇರೆ ಯಾರಾದರೂ ಇದೇ ಮಾತು ಹೇಳಿದ್ದರೆ, ಅವನು ತಿರುಗಿಬೀಳುವುದು ನಿಶ್ಚಿತ. ಆದರೆ ಈಗ ಗ್ರಾಮಾಫೋನ್ ಮಡಿಸಿಕೊಂಡು ಸದ್ದಿಲ್ಲದೆ ಹೊರನಡೆದ. ಅವನ ಮನಸ್ಸು ನಾ ಬಲ್ಲೆ - ತಾನು ಹೋರಾಟ, ಬಲಿದಾನ ಶ್ರೇಷ್ಠವೆಂದದ್ದು ನಿಜ; ಸಾವಿರ ಸಲ ಅದೇ ಮಾತು ಹೇಳುವವನೇ; ಅದರಲ್ಲೇನು ತಪ್ಪು ? ಸಾವರಕರ್ ಹಾಗೆ ಎಲ್ಲರೆದುರಿಗೆ ತನ್ನ ಮಾನ ಕಳೆಯುವುದೆ ? ಬಹುಶಃ ಒಳಗೊಳಗೇ ಕುದಿಯುತ್ತಿದ್ದ. ನಾಲ್ಕಾರು ದಿನ ಕ್ರಾಮ್‌ವೆಲ್ ರಸ್ತೆಯ ಕಡೆ ಅವನ ತಲೆಯೇ ಇಲ್ಲ.

ಒಂದು ನಂಜೆ ಮುಖ ತೊಳೆದುಕೊಂಡು ಕೊಠಡಿಯತ್ತ ಹೆಜ್ಜೆಹಾಕಿದೆ. ನನ್ನ ನಿತ್ಯದ ರೂಢಿ ಅದು. ನಡುವೆ ಕಟ್ಟಡದ ಒಂದು ನಸುಗತ್ತಲಿನ ಭಾಗ. ಅಲ್ಲಿ ಹಾದುಹೋಗುತ್ತಿದ್ದಂತೆ ಎದುರಿಗೆ ಧಿಂಗ್ರಾ ಪ್ರತ್ಯಕ್ಷನಾದ. ಬಹುಶಃ ಏಕಾಂತ ಭೇಟಿಯ ಸಲುವಾಗಿ ಅವನು ಆ ಜಾಗ ಆರಿಸಿಕೊಂಡಿದ್ದ.

'ಸಾವರಕರ್‌ಜೀ ! ಹುತಾತ್ಮತೆಯ ಗಳಿಗೆ ನಿಜಕ್ಕೂ ಬಂದಿದೆಯೆಂದು ನಿಮಗನ್ನಿಸುತ್ತದೆಯೆ ?' *(Do you think the time for martyrdom has really come ?)* ಎಂದ.

'ಮದನ್‌ಭಾಯ್, ಹುತಾತ್ಮನಾಗುವವನು ದೃಢ ಮನಸ್ಸಿನಿಂದ ಸಿದ್ಧನಾಗಿದ್ದರೆ, ಹೌತಾತ್ಮ್ಯದ ಗಳಿಗೆ ಬಂದಿದೆಯೆಂದೇ ಅರ್ಥ.' *(If a martyr is determined and ready, that fact by itself generally implies that the time for martyrdom must have come.)*

'ಸಾವರಕರ್‌ಜೀ, ನಾನು ಸಿದ್ಧನಾಗಿದ್ದೇನೆ' ಎಂದ.

'ಕೊಠಡಿಗೆ ಹೋಗೋಣ, ನಡಿ' ಎಂದೆ. ಅಲ್ಲಿ ಬಹಳ ಹೊತ್ತು ಮಾತುಕತೆ ಆಡಿದೆವು. ಧಿಂಗ್ರಾನ ಸಹಪಾಠಿ ಹಾಗೂ ಅಭಿನವಭಾರತದ ಸದಸ್ಯ ಕೋರೆಗಾವ್‌ಕರ್ ಸಹ ಜತೆಗಿದ್ದರು.

1909ರ ಜನವರಿಯಲ್ಲಿ ಧಿಂಗ್ರಾ ರಿವಾಲ್ವರ್ ಲೈಸನ್ಸ್ ಸಂಪಾದಿಸಿದ. ಅದು ಕೈಗೆ ಬರುತ್ತಲೇ ಜನವರಿ 26ರಂದು ಆರು ಗುಂಡಿನ ಕೋಲ್ಟ್ ರಿವಾಲ್ವರ್ ಕೊಂಡುಕೊಂಡ. ಗಮೇಜ್ ಕಂಪನಿಯ ಅಂಗಡಿಯಲ್ಲಿ ಅದಕ್ಕೆ ಅವನು ಕೊಟ್ಟ ಬೆಲೆ 3 ಪೌಂಡ್ 5 ಶಿಲಿಂಗ್. ಆಮೇಲೆ ಟಾಟಿನ್‌ಹ್ಯಾಮ್ ಕೋರ್ಟ್‌ಯಾರ್ಡ್‌ನಲ್ಲಿ ಜಾನ್ ಮಾರ್ಲೆ ನಡೆಸುತ್ತಿದ್ದ ಶಿಕ್ಷಣ ಶಾಲೆಯಲ್ಲಿ ಗುರಿ ಹೊಡೆಯುವುದನ್ನು ಅಭ್ಯಾಸ ಮಾಡಿದ. ಅಲ್ಲಿ 12 ಗುಂಡು ಹಾರಿಸಿದರೆ 6 ಪೆನ್ನಿ ಶುಲ್ಕ; ವಾರಕ್ಕೆ ಎರಡು ಬಾರಿ ಹೋಗಬೇಕಿತ್ತು.

ಆ ಸುಮಾರಿನದೇ ಒಂದು ದುರ್ದಿನದ ನೆನಪು. ಅಂದು ಮನೆಯಿಂದ ಬಂದ ವಾರ್ತೆ ಕೇಳಿ ಮನವೆಲ್ಲ ಮುದುಡಿಹೋಗಿತ್ತು. ನಾಲ್ಕು ವರ್ಷದ ಪ್ರಭಾಕರ - ಪ್ರೀತಿಯ ಪ್ರಭ್ಯಾ - ನಮ್ಮನ್ನೆಲ್ಲ ಅಗಲಿಹೋಗಿದ್ದ! ನಾನು ಭಾರತದ ತೀರ ಬಿಟ್ಟ ದಿನವೇ ಅವನನ್ನು ಕೊಟ್ಟಕೊನೆಯ ಬಾರಿಗೆ ನೋಡಿದ್ದುದು. ಗುರು ಗೋವಿಂದಸಿಂಹನು ತನ್ನ ಕುವರ ಕಿಶೋರರಿಗೆ ಖಡ್ಗಕೊಟ್ಟು ರಣಾಂಗಣಕ್ಕೆ ಬೀಳ್ಕೊಟ್ಟಿದ್ದ; ಅಂತೆಯೇ ನಾನೂ ಪ್ರಭಾನನ್ನು ಸ್ವಾತಂತ್ರ್ಯ ಹೋರಾಟದ ಕಣಕ್ಕೆ ಬೆನ್ನುತಟ್ಟಿ ಕಳುಹಿಸಿಕೊಡಬೇಕೆಂದಿದ್ದೆ. ಅವನು ಹೋರಾಡುವ ದೃಶ್ಯವನ್ನು ಆಗಾಗ್ಗೆ ಕಲ್ಪಿಸಿಕೊಂಡು ಕಳೆದ ಸುಖದ ಕ್ಷಣಗಳೆಷ್ಟೋ !

**ಪರಸುನಿ ಯೌವನಲತಿಕೇಲಾ ತೂ ಪಹಿಲೇ ಫೂಲ ಫುಲೇ**

**ತನಯಾ । ತನು ಥರಥರಲೀ ಸ್ನೇಹೇ ನೇತ್ರ ಸ್ನಿಗ್ಧಝಾಲೇ ॥**

*'ಮಗು ! ಯೌವನಲತೆಯ ಮೊದಲ ಹೂವಾಗಿ ನೀನು ಅರಳಿದೆ ಎಂದು ಕೇಳುತ್ತಲೇ,*

*ಪ್ರೀತಿಸಂಚಾರದಿಂದ ದೇಹ ಕಂಪಿಸಿತ್ತು ; ಆನಂದಾಶ್ರುಗಳು ಉಕ್ಕಿಬಂದಿದ್ದವು'....*

**ಪ್ರಭ್ಯಾ ಪ್ರಿಯಕರಾ, ಹೋತಾಸೀ ಬಹು ದಿವಸ ಅಸಾ ಸಖಯಾ**

**ಅಮೂರ್ತ ತೂ ಕಲ್ಪನಾ ಏಕ ಮದುಮಧುರ ಅಶೀ ಹೃದಯಾ ॥**

*'ಪ್ರಿಯ ಪ್ರಭಾಕರ! ಅನೇಕ ದಿನಗಳು ಆನಂದದಿಂದ ಕಳೆದವು. (ಪರದೇಶದಲ್ಲೂ) ಹೃದಯಕ್ಕೆ ಹತ್ತಿರವಾದ ಅತ್ಯಂತ ಮಧುರ ನಿರಾಕಾರ ಕಲ್ಪನೆಯಾಗಿ ನೀನಿದ್ದೆ'....*

**ಅತನು ಮೂರ್ತಿ ತವ ಲಟುಕುನಿ ಕಿತಿದಾ ಹೃದಯಾಶೀ ನಿಜಲೀ**

**ಹಸಲೀ ಕಿತಿದಾ ದಿವ್ಯಾಶೇನೇ ಕಿತಿದಾ ತೀ ಸಜಲೀ ॥**

*'ನಿನ್ನನ್ನು ಮನಸ್ಸಿನಲ್ಲೆ ನೆನೆಸಿಕೊಂಡು ಎದೆಗಪ್ಪಿಕೊಂಡು ನಾನು ನಿದ್ರಿಸಿದ ದಿನಗಳೆಷ್ಟೋ! ನಿದ್ರೆಯಲ್ಲೇ ನಕ್ಕಿದ್ದಕ್ಕೆ, (ಧರ್ಮಕಾರ್ಯಕ್ಕಾಗಿ ನಜ್ಜುಗೊಳಿಸುವ) ದಿವ್ಯ ಆಸೆಗಳಿಂದ ನಿನ್ನ ಆ ಕನಸಿನ ಮೂರ್ತಿಯನ್ನು ಶೃಂಗರಿಸಿದ್ದಕ್ಕೆ ಲೆಕ್ಕವುಂಟೆ!'*

**ಪೂರ್ವಿ ಜಸಾ ಹೋತಾಸ ಅಸಸಿ ತೂ ನಂತರ ಹೀ ಸಖಯಾ**

**ಅಮೂರ್ತ ತೂ ಕಲ್ಪನಾ ಏಕ ಮಧುಮಧುರ ಅಶೀ ಹೃದಯಾ ॥**

*(ನಿಜ, ಹೇಳಬೇಕೆಂದರೆ, ಮೋಸಗಾರ ಮೃತ್ಯುವಿಗೆ ನನ್ನನ್ನು ವಂಚಿಸಲು ಇನ್ನೂ ಸಾಧ್ಯವಾಗಿಲ್ಲ) 'ಪ್ರಭಾ! ನೀನು ಹಿಂದೆ ಇದ್ದಂತೆಯೇ ಇಂದು ಸಹ ಹೃದಯಕ್ಕೆ ಹತ್ತಿರವಾಗಿ ಅತ್ಯಂತ ಮಧುರವಾದ ಅಮೂರ್ತ ಕಲ್ಪನೆಯಾಗಿ ಉಳಿದಿರುವೆ.'*

1909 ಮಾರ್ಚ್ ತಿಂಗಳು ಕಾಲಿಟ್ಟಿತು. ಒಂದು ದಿನ ಕುಮಾರಿ ಏಮಾ ಜೋಸೆಫಿನ್ ಬೆಕ್ ತನ್ನ ಕಚೇರಿಯಲ್ಲಿ ಕಾರ್ಯಮಗ್ನಳಾಗಿದ್ದಳು. ತನ್ನ ಎದುರಿಗೆ ಯಾರೋ ಬಂದು ನಿಂತಂತಾಗಿ ತಲೆಯೆತ್ತಿದಳು. ಅವನೊಬ್ಬ ಸುಂದರ ಭಾರತೀಯ ಯುವಕ. ಅವನ ಮುಖದಲ್ಲಿ ಜಗತ್ತನ್ನೇ ಮರುಳುಗೊಳಿಸುವ ಮಂದಹಾಸ! ಅಂದಮೇಲೆ ಏಮಾ ಬೆಕ್ ಹೇಗೆ ಅಲಕ್ಷಿಸಿಯಾಳು? ನ್ಯಾಶನಲ್ ಇಂಡಿಯನ್ ಅಸೋಸಿಯೇಶನ್ನಿನ ಕಾರ್ಯದರ್ಶಿನಿ ಅವಳು. ಎದುರಿಗೆ ನಿಂತವನು ಮದನಲಾಲ ಧಿಂಗ್ರಾ. ಇಬ್ಬರಲ್ಲೂ ಪರಿಚಯ ಬೆಳೆಯಿತು. ಆ ಸಂಸ್ಥೆಯ ಕುಲಗೋತ್ರಗಳನ್ನೆಲ್ಲ ಧಿಂಗ್ರಾ ವಿಚಾರಿಸಿ ತಿಳಿದುಕೊಂಡ. ಏಪ್ರಿಲ್‌ನಲ್ಲಿ ತಾನೂ ಒಬ್ಬ ಸದಸ್ಯನಾದ.

ಇಂಗ್ಲೆಂಡಿನಲ್ಲಿ ಭಾರತೀಯ ವಿದ್ಯಾರ್ಥಿಗಳನ್ನು ಕ್ರಾಂತಿಮಾರ್ಗದಿಂದ ಶಾಂತಿಮಾರ್ಗಕ್ಕೆ ಪಳಗಿಸಲು ಅನೇಕ ಯೋಜನೆಗಳು ಆರಂಭವಾಗಿದ್ದವು. ಆ ಪೈಕಿ ನ್ಯಾಶನಲ್ ಇಂಡಿಯನ್ ಅಸೋಸಿಯೇಶನಿಗೆ ಭಾರತೀಯ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳುವುದೂ ಒಂದು. ಆ ಬಲೆಗೆ ಮತ್ತೊಂದು ಉತ್ತಮ ಭಾರತೀಯ ಇಲಿ ಬಿತ್ತು ಎಂದು ಕುಮಾರಿ ಬೆಕ್‌ಗೆ ಆನಂದ!

ಸಿಂಕ್ಲೈರ್ ರಸ್ತೆಯಲ್ಲಿ ಬಿಪಿನಚಂದ್ರ ಪಾಲರ ಮನೆಯಿತ್ತು. ಅಲ್ಲಿ ಅವರೊಂದು ವಿದ್ಯಾರ್ಥಿ ನಿಲಯ ಏರ್ಪಡಿಸಿದ್ದರು. ಅವರ ಮಗ ನಿರಂಜನಪಾಲ್ ಇದ್ದುದೂ ಅಲ್ಲಿಯೇ. ಏಪ್ರಿಲ್ 3ರಂದು ನಾನು ಭಾರತ ಭವನದಿಂದ ಅಲ್ಲಿಗೆ ನನ್ನ ವಸತಿ ಬದಲಾಯಿಸಿದೆ. ಸುಮಾರು ಅದೇ ಸಮಯಕ್ಕೆ ಧಿಂಗ್ರಾ ಸಹ ತಾನು ಮೊದಲಿದ್ದ ಜಾಗ ಬಿಟ್ಟು ಕುಮಾರಿ ಮೇರಿ ಹ್ಯಾರಿಸ್ ಎಂಬಾಕೆಯ ಮನೆಗೆ 'ಸಶುಲ್ಕ ಅತಿಥಿ' ಯಾಗಿ ಹೋದ.

ಭಾರತೀಯ ವಿದ್ಯಾರ್ಥಿಗಳನ್ನು ರಾಜಸಿಂಹಾಸನನಿಷ್ಠರನ್ನಾಗಿ ಮಾಡಲು ಮೂರು ಜನರ ಸಮಿತಿ

ಯೊಂದಿತ್ತು. ಅವರ ಪೈಕಿ ಸರ್ ವಿಲಿಯಂ ಕರ್ಜನ್ ವಾಯಲಿಯೂ ಒಬ್ಬ. ಭಾರತದಲ್ಲಿ ಉಚ್ಚ ಪದವಿಗಳಲ್ಲಿದ್ದ ಅಧಿಕಾರಿ ಅವನು; ಬ್ರಿಟನ್ನಿನಲ್ಲಿದ್ದ ಭಾರತೀಯ ಸಚಿವಾಲಯದ ಸಲಹೆಗಾರ. ಹಿಂದುಸ್ಥಾನದ ಆಡಳಿತ ವ್ಯವಹಾರದಲ್ಲಿ ಅವನ ಧೂರ್ತ ಸಲಹೆಗಳಿಗೆ ಅಗ್ರಪ್ರಾಶಸ್ತ್ಯ. ಭಾರತ ಸಚಿವಾಲಯಕ್ಕೆ ಅವನು ಕಣ್ಣು ಹಾಗೂ ಮಿದುಳಿದ್ದಂತೆ. ಅದಕ್ಕಾಗಿಯೇ ಇದ್ದೀತು, ಭಾರತದ ಸೇಡಿನ ಕಣ್ಣು ಮೊದಲು ಅವನ ಕಡೆ ತಿರುಗಿತು!

ಮದನಲಾಲ ಧಿಂಗ್ರಾನ ತಂದೆ ಮತ್ತು ಅಣ್ಣ, ಕರ್ಜನ್ ವಾಯಲಿಗೆ ಸುಪರಿಚಿತರು. ಅವರ ಕೋರಿಕೆಯಂತೆ ವಾಯಲಿ ಆಗಿಂದಾಗ್ಗೆ ಮದನಲಾಲನ ಯೋಗಕ್ಷೇಮ ವಿಚಾರಿಸಿಕೊಳ್ಳುತ್ತಿದ್ದ. ಜತೆಗೆ ಭಾರತ ಭವನದ ರಹಸ್ಯಗಳನ್ನು ತನಗೆ ತಿಳಿಸಬೇಕೆಂದು ಕೇಳುತ್ತಿದ್ದ. ಧಿಂಗ್ರಾ ಅದಕ್ಕೆ ಒಪ್ಪಿದ. ನನ್ನ ಅನುಮತಿ ಪಡೆದು, ಸುಳ್ಳು ವರದಿಗಳನ್ನು ವಾಯಲಿಗೆ ಕಳುಹಿಸುತ್ತಿದ್ದ. ಕ್ರಾಂತಿಕಾರಿಗಳ ರಹಸ್ಯ ಭೇದಿಸಲು ಒಬ್ಬ ಹಸ್ತಕ ಸಿಕ್ಕಿದನೆಂದು ವಾಯಲಿಗೆ ಆನಂದವೇ ಆನಂದ!

ಮೇ ತಿಂಗಳ ಆರಂಭದಿಂದಲೇ ಫ್ರೀ ಇಂಡಿಯಾ ಸೊಸೈಟಿಯ ಸದಸ್ಯರಿಂದ ದೂರು ಬರತೊಡಗಿತು: 'ಮದನಲಾಲನ ಬಣ್ಣ ಬದಲಾಗಿದೆ. ಅವನೊಬ್ಬ ವಿಶ್ವಾಸದ್ರೋಹಿ. ನಮ್ಮ ಸಂಸ್ಥೆಯ ಸದಸ್ಯತ್ವದಿಂದ ಅವನನ್ನು ಕಿತ್ತುಹಾಕಬೇಕು' ಇತ್ಯಾದಿ. ಹೀಗಾಗುತ್ತದೆಂದು ನನಗೆ ಮೊದಲೇ ಗೊತ್ತಿತ್ತು. ಆ ನಿರ್ಣಯ ಚರ್ಚೆಗೆ ಬಂದಾಗ, 'ಇನ್ನೂ ಸ್ವಲ್ಪ ಅವಕಾಶ ಕೊಡೋಣ. ನಾನೂ ಅವನ ಮೇಲೆ ಒಂದು ಕಣ್ಣು ಇಡುತ್ತೇನೆ. ಅಷ್ಟರಲ್ಲಿ ಸರಿಹೋಗದಿದ್ದರೆ, ನಮಗೆ ಇಷ್ಟ ಬಂದಂತೆ ಮಾಡೋಣ' ಎಂದು ಸಮಾಧಾನ ಹೇಳಿದೆ.

ಜೂನ್ 8ರಂದು ನನ್ನ ಅಣ್ಣ ಬಾಬರಾವ್ ಸಾವರಕರ್‌ಗೆ ಆಜನ್ಮ ಕರಿನೀರಿನ ಶಿಕ್ಷೆಯಾಯಿತು. ಆ ವಾರ್ತೆ ತಿಳಿಯುತ್ತಲೇ ಧಿಂಗ್ರಾ ಅದೇ ದಿನ ಬ್ರಿಟಿಷ್ ಸರಕಾರದ ವಿರುದ್ಧ ಸೇಡು ತೀರಿಸಿಕೊಳ್ಳಲು ಯೋಚಿಸಿದ. ಅಂದು 'ರಾಯಲ್ ಕೊಲೋನಿಯಲ್ ಇನ್‌ಸ್ಟಿಟ್ಯೂಟ್'ನಲ್ಲಿ ಒಂದು ಸಭೆ. ಬಂಗಾಲ ವಿಭಜನೆಯ ಕುಕರ್ಮಿ ಲಾರ್ಡ್ ಕರ್ಜನ್ ಅಧ್ಯಕ್ಷ; ಅವನ ಸಹಕಾರಿ ಬಂಫೀಲ್ಡ್ ಫುಲರ್ ಭಾಷಣಕಾರ. ಧಿಂಗ್ರಾ ಬೇಟೆಗೆ ಸಜ್ಜಾಗಿ, ಸರಸರನೆ ಸಭೆಯ ಸ್ಥಳಕ್ಕೆ ಹೊರಟ. ಆದರೆ ಕಾಲ ಮಿಂಚಿತ್ತು. ಸಭಾಭವನದ ಬಾಗಿಲು ಮುಚ್ಚಿತ್ತು. ಅವನು ನಿರಾಶನಾಗಿ ಮರಳಿದ. ನಾನು ಭೇಟಿಯಾಗುತ್ತಲೇ ಹೇಳಿದ: 'ಹುಲಿ ತಪ್ಪಿಸಿಕೊಂಡಿತು!'

1909 ಜುಲೈ 1ರಂದು ನ್ಯಾಷನಲ್ ಇಂಡಿಯನ್ ಅಸೋಸಿಯೇಶನ್‌ನ ವಾರ್ಷಿಕೋತ್ಸವ. ಸ್ಥಳ, 'ಇಂಪೀರಿಯಲ್ ಇನ್‌ಸ್ಟಿಟ್ಯೂಟ್'ನ ಜಹಾಂಗೀರ್ ಹಾಲ್. ಆ ಸಮಾರಂಭಕ್ಕೆ ಕರ್ಜನ್ ವಾಯಲಿ ಪ್ರಮುಖ ಅತಿಥಿ. ಧಿಂಗ್ರಾ ಎಲ್ಲ ವಿವರಗಳನ್ನೂ ನಾಲ್ಕಾರು ದಿನ ಮೊದಲೇ ಕುಮಾರಿ ಬೆಕ್ ಮೂಲಕ ತಿಳಿದುಕೊಂಡ. ಜೂನ್ 20ರ ರಾತ್ರಿ ನನ್ನ ಭೇಟಿಗೆ ಬಂದ. ಮಾತುಕತೆಯ ನಂತರ ನಾನು ಮತ್ತು ನಿರಂಜನ ಪಾಲ್ ಅವನನ್ನು ಬೀಳ್ಕೊಡಲು ನಾಟಿಂಗ್ ಹಿಲ್ ಗೇಟ್ ಸ್ಟೇಷನ್‌ವರೆಗೆ ಹೋದೆವು. ನಾನು ಕೊನೆಯ ಮಾತು ಹೇಳಿದೆ: 'ಈ ಸಲ ಸೋತರೆ, ಮುಖ ತೋರಿಸಬೇಡ.'

ಜುಲೈ 1, ಗುರುವಾರ. ಧಿಂಗ್ರಾ ಬೆಳಗಿನ ಊಟ ಎಂದಿಗಿಂತಲೂ ಬೇಗ ಮುಗಿಸಿದ. ಮಧ್ಯಾಹ್ನ ಮಾರ್ಲ್ಲೆಯ ಶಿಕ್ಷಣಶಾಲೆಗೆ ಹೋದ. ಅಲ್ಲಿ 12 ಗುಂಡು ಪ್ರಯೋಗಿಸಿ, 6 ಪೆನ್ನಿ ಶುಲ್ಕ ಕೊಟ್ಟ. 'ನೀನು ನಮ್ಮ ಹಳೆ ಗಿರಾಕಿ, ಇನ್ನು ಮೇಲೆ 4 ಪೆನ್ನಿ ಕೊಡು ಸಾಕು' ಎಂದ, ಮಾರ್ಲೆ ಸಾಹೇಬ. ಅಲ್ಲದೆ ಧಿಂಗ್ರಾನ



ಮದನಲಾಲ್ ಧಿಂಗ್ರಾ

ಪಿಸ್ತೂಲನ್ನು ಶುಚಿಗೊಳಿಸಿ, ಚೆನ್ನಾಗಿ ಒರೆಸಿಕೊಟ್ಟ. ಧಿಂಗ್ರಾ ಸಂಜೆ 6ಕ್ಕೆ ಕೋಣೆಗೆ ವಾಪಸಾದ. ಮೂರು ಪಿಸ್ತೂಲು ಮತ್ತು ಎರಡು ಚೂರಿಗಳನ್ನು ಕೋಟಿನ ಒಳಜೇಬುಗಳಲ್ಲಿ ಸೇರಿಸಿ, ಪಂಚಾಯುಧ ಸಜ್ಜಿತನಾದ. ತಲೆಗೆ ಆಕಾಶ ವರ್ಣದ ಪಂಜಾಬಿ ಪೇಟ ಹಾಗೂ ಕಣ್ಣಿಗೆ ಬಣ್ಣದ ಕನ್ನಡಕ ಧರಿಸಿ ಹೊರಬಿದ್ದ.

ಎಂಟು ಗಂಟೆ ಹೊತ್ತಿಗೆ ಸಮಾರಂಭದ ಸ್ಥಳ ತಲುಪಿದ. ಆದರೆ ಇವನ ಬಳಿ ಪ್ರವೇಶ ಪತ್ರಿಕ ಇರಲಿಲ್ಲ. ಯಾರಾದರೂ ಕರೆದಿದ್ದರೆ ತಾನೆ ? ಪತ್ರಿಕ ಮರೆತು ಬಂದಿದ್ದವರು ಅಲ್ಲಿದ್ದ ಪುಸ್ತಕದಲ್ಲಿ ಸಹಿ ಹಾಕಿ ಪ್ರವೇಶಿಸುತ್ತಿದ್ದರು. ಧಿಂಗ್ರಾ ತಾನೂ ನಿಸ್ಸಂಕೋಚವಾಗಿ ಸಹಿ ಹಾಕಿ, ಒಳಹೊಕ್ಕ. ಅಲ್ಲಿ ಆನಂದವಾಗಿ ಅಕ್ಕಪಕ್ಕದವರನ್ನು ಮಾತನಾಡಿಸುತ್ತಾ, ಠೀವಿಯಿಂದ ಓಡಾಡತೊಡಗಿದ. ಕಾರ್ಯದರ್ಶಿನಿ ಕುಮಾರಿ ಬೆಕ್ ಮುಗುಳ್ನಕ್ಕು ಕೈಕುಲುಕಿದಳು. 'ಸ್ವದೇಶಕ್ಕೆ ಯಾವಾಗ ಹೋಗುತ್ತೀರಿ ?' ಎಂದು ಆಸ್ಥೆಯಿಂದ ಕೇಳಿದಳು. 'ಪರೀಕ್ಷೆ ಆದ ಕೂಡಲೆ - ಅಕ್ಟೋಬರ್‌ನಲ್ಲಿ!' ಎಂದು ಧಿಂಗ್ರಾ ಸಲೀಸಾಗಿ ಉತ್ತರಿಸಿದ.

10-30ಕ್ಕೆ ಕರ್ಜನ್ ವಾಯಲಿ ಪತ್ನಿಸಮೇತ ಆಗಮಿಸಿದ. ಸಮಾರಂಭ ಮುಗಿಯುವ ಹೊತ್ತಿಗೆ ಹನ್ನೊಂದು ದಾಟಿತು. ಜನ ಕದಲತೊಡಗಿದರು. ಕರ್ಜನ್ ವಾಯಲಿ ಪರಿಚಿತ ಭಾರತೀಯರೊಡನೆ ನವಿನವಿಯಾಗಿ ಉಪಚಾರದ ಮಾತುಗಳನ್ನಾಡತೊಡಗಿದ. ಅಷ್ಟರಲ್ಲಿ ಧಿಂಗ್ರಾ ಅವನ ಕಣ್ಣಿಗೆ ಬಿದ್ದ. ಕೆಲವೇ ದಿನಗಳ ಹಿಂದೆ ವಾಯಲಿ ತನ್ನನ್ನು ಭೇಟಿಯಾಗುವಂತೆ ಧಿಂಗ್ರಾಗೆ ಪತ್ರ ಬರೆದಿದ್ದ. ಕರಾಳ ಮೃತ್ಯುವಿಗೆ ಕರೆಯೋಲೆ! ಧಿಂಗ್ರಾ ಏನೋ ರಹಸ್ಯ ಹೇಳುವವನಂತೆ ಧ್ವನಿ ತಗ್ಗಿಸಿ ಮಾತನಾಡತೊಡಗಿದ. ವಾಯಲಿ, ಅದನ್ನು ಕೇಳಿಸಿಕೊಳ್ಳಲು ಧಿಂಗ್ರಾನ ಎದುರಿಗೆ ಸರಿದು ಹೋಗಿ ನಿಂತು, ಬಾಯಿಗೆ ಕಿವಿ ಹಚ್ಚಿದ. ಕ್ಷಣಾರ್ಧದಲ್ಲಿ ಧಿಂಗ್ರಾನ ಬಲಗೈ ಜೇಬಿನ ಒಳಕ್ಕೆ ಹೋಯಿತು ; ಆರು ಗುಂಡಿನ ಬೆಲ್ಜಿಯಂ ಪಿಸ್ತೂಲು ಹೊರಬಂತು. ಕರ್ಜನ್ ವಾಯಲಿ ಹಿಂದೆ ಹಾರುವಷ್ಟರಲ್ಲಿ ಎರಡು ಗುಂಡುಗಳು ಅವನ ದೇಹವನ್ನು ಹೊಕ್ಕಿದ್ದವು. ಡಾ. ಕವಾಸ್‌ಜಿ ಲಾಲಕಾಕಾ ಎಂಬವನು ತಡೆಯಲು ಹತ್ತಿರ ಬಂದ. ಅವನು ಸಮೀಪಿಸುವಷ್ಟರಲ್ಲೆ ಇನ್ನೆರಡು ಗುಂಡು ತಾಗಿ ಕರ್ಜನ್ ವಾಯಲಿ ಕೆಳಗೆಬಿದ್ದ. ಐದನೆಯ ಗುಂಡಿಗೆ ಲಾಲಕಾಕಾ ಆಹುತಿಯಾದ. ಆರನೆ ಗುಂಡನ್ನು ಧಿಂಗ್ರಾ ತನ್ನ ಮೇಲೆಯೇ ಪ್ರಯೋಗಿಸಿಕೊಂಡ. ಆದರೆ ಅದು ಹಾರಲೇ ಇಲ್ಲ. ಬಹುಶಃ ಅವನಿಗೆ ಆತ್ಮಹತ್ಯೆ ಒಮ್ಮೆಯೂ ಅಭ್ಯಾಸವಾಗಿರದಿದ್ದುದೆ ಕಾರಣ ಇದ್ದೀತು!

ಸರ್ ಲೆಸ್ಲಿ ಪ್ರೋಬಿನ್ ಎಂಬುವನು ಓಡಿಬಂದು ಬಲಗೈ ಹಿಡಿದುಕೊಂಡ. ಆದರೆ ಧಿಂಗ್ರಾನ ಎಡಗೈ ಹೊಡೆತಕ್ಕೆ ಅವನ ಕುತ್ತಿಗೆ ಊದಿಕೊಂಡಿತು ; ಎರಡು ಪಕ್ಕೆಲಬುಗಳು ಮುರಿದು ದೇಹ ರಕ್ತಮಯವಾಯಿತು. ಅಷ್ಟರಲ್ಲಿ ಹೆಚ್ಚು ಜನ ಸುತ್ತುವರಿದರು. ಧಿಂಗ್ರಾ ನಸುನಗುತ್ತಾ, 'ಸ್ವಲ್ಪ ತಡೆಯಿರಿ, ಕನ್ನಡಕ



ವಾಯಲಿ ಕೊಲೆ : ಕಲಾವಿದ ಊಹಿಸಿಕೊಂಡ ದೃಶ್ಯ

ಹಾಕಿಕೊಳ್ಳುತ್ತೇನೆ' ಎಂದ. ಹತ್ತಿರದ ಕುರ್ಚಿಯ ಕೆಳಗೆ ಬಿದ್ದಿದ್ದ ತನ್ನ ಕನ್ನಡಕ ತೆಗೆದು ಕಣ್ಣಿಗೆ ಏರಿಸಿಕೊಂಡ. ಪೊಲೀಸರು ಅವನ ಉಡುಪು ಶೋಧಿಸಿದರು. ಅಲ್ಲಿಯೇ ಇದ್ದ ವೈದ್ಯರೊಬ್ಬರು ಅವನ ನಾಡಿ ಪರೀಕ್ಷಿಸಿದರು. ಆ ವೈದ್ಯರ ನಾಡಿಯ ಬಡಿತ ಜೋರಾಗಿತ್ತೇ ಹೊರತು, ಧಿಂಗ್ರಾನ ನಾಡಿ ಶಾಂತವಾಗಿಯೇ ಮಿಡಿಯುತ್ತಿತ್ತು. ಪೊಲೀಸ್ ಠಾಣೆಗೆ ಹೋದ ನಂತರ ಅವನು ಮಾಡಿದ ಮೊದಲ ಕೆಲಸ - ಗಾಢ ನಿದ್ರೆ! ಧಿಂಗ್ರಾನ ಕೊನೆ ಹೇಳಿಕೆ ಪತ್ರ ಅವನ ಜೇಬಿನಲ್ಲಿತ್ತು. ಅದನ್ನು ಪೊಲೀಸರು ವಶಪಡಿಸಿಕೊಂಡು ರಹಸ್ಯವಾಗಿ

ಬೀಗ ಹಾಕಿಟ್ಟರು. ಧಿಂಗ್ರಾನ ಕೊಠಡಿ ಶೋಧಿಸಿದಾಗ ಸಿಕ್ಕಿದ ಅಂಥದೇ ಮತ್ತೊಂದು ಪತ್ರವನ್ನು ಭದ್ರವಾಗಿ ಮುಚ್ಚಿಟ್ಟರು.

ಧಿಂಗ್ರಾ ವಿಫಲನಾಗಿದ್ದಲ್ಲಿ, ಕರ್ಜನ್ ವಾಯಲಿಯ ಕತೆ ಮುಗಿಸಲು ಕೋರೆಗಾವ್‌ಕರರನ್ನು ಕಳುಹಿಸಿದ್ದೆ. ಅವರು ಅಂದು ರಾತ್ರಿಯೇ ಬಂದು ಘಟನೆ ವರದಿ ಮಾಡಿದರು. ಮರುದಿನ ಮುಂಜಾನೆ ಜ್ಞಾನಚಂದ ವರ್ಮಾ ಸಹ ಬಂದು ವಿವರಗಳನ್ನು ತಿಳಿಸಿದರು. ವಾಯಲಿ ವಧೆಯ ಸುದ್ದಿ ಹರಡುತ್ತಲೇ ಭಾರತಭವನದ ಬಗ್ಗೆ ಹಾಗೂ 'ಸಾವರಕರ್' ಮೇಲೆ ಇಂಗ್ಲಿಷರ ರೊಚ್ಚು ಕೆರಳಿತು. ಆದರೆ ನಾನು ಬಿಗಿಯಾಗಿ ನಡೆದುಕೊಂಡದ್ದರಿಂದ ಅವರು ಏನೂ ಮಾಡಲಾಗಲಿಲ್ಲ. ಜುಲೈ 2ರಂದು ಚಾರ್ಲ್ಸ್ ಗ್ಲಾಸ್ ಎಂಬ ಪೊಲೀಸ್ ಅಧಿಕಾರಿ, ಧಿಂಗ್ರಾನ ಬಳಿ ಆತ್ಮೀಯತೆಯಿಂದ ಮಾತನಾಡುತ್ತಾ, ಕೇಳಿದ : 'ನಿನ್ನ ಇಷ್ಟಮಿತ್ರರಿಗೆ ಏನಾದರೂ ಸುದ್ದಿ ತಿಳಿಸಬೇಕೇನು ?' ಧಿಂಗ್ರಾನಿಗೆ ಈ ಧೂರ್ತ ಪ್ರಶ್ನೆಯ ಮರ್ಮ ಅರ್ಥವಾಯಿತು. ಅವರ ಗೆಳೆಯರ ಗುಂಪನ್ನು ಪತ್ತೆಹಚ್ಚುವ ತಂತ್ರ ಅದು! 'ಏನೂ ಅಗತ್ಯವಿಲ್ಲ. ಅವರಿಗೆ ಸುದ್ದಿ ತಾನಾಗಿಯೇ ತಿಳಿಯುತ್ತದೆ' ಎಂದು ನಯವಾಗಿ ನುಡಿದ. ಧಿಂಗ್ರಾ 'ಕಚ್ಚಾ ಗುರುವಿನ ಶಿಷ್ಯ ಅಲ್ಲ' ಎಂಬ ಬೆಳಕು ಆ ಮಂಕು 'ಗ್ಲಾಸ್'ಗೆ ಆಗ ಹೊಳೆಯಿತು !

ಪಂ. ಶ್ಯಾಮಜಿ ಕೃಷ್ಣವರ್ಮರು ತಮ್ಮ 'ಇಂಡಿಯನ್ ಸೋಶಿಯಾಲಜಿಸ್ಟ್'ನಲ್ಲಿ ಬರೆದರು : 'ನಮ್ಮೆಲ್ಲ ಹಳೆಯ ಸ್ನೇಹಿತರ, ಪರಿಚಿತರ ಸಹಾನುಭೂತಿಯನ್ನೂ ಸದ್ಭಾವನೆಯನ್ನೂ ಕಳೆದುಕೊಳ್ಳಬೇಕಾಗಿ ಬಂದರೂ.... ರಾಜಕೀಯ ಹತ್ಯೆ ಅಪರಾಧವಲ್ಲವೆಂದು ನಾವು ಮತ್ತೊಮ್ಮೆ ಸ್ಪಷ್ಟಪಡಿಸುತ್ತೇವೆ.... ನಿಷ್ಪಕ್ಷಪಾತಿಗಳಾದವರು ಯಾರೂ ರಾಜಕೀಯ ವಧೆಗಾರರನ್ನು ಅಪರಾಧಿಗಳೆಂದು ಎಣಿಸುವುದಿಲ್ಲ; ಬದಲಾಗಿ, ಅವರನ್ನು ಅವರ ಜನಾಂಗದ ಉಪಕಾರಿಗಳೆಂದು ಭಾವಿಸುತ್ತಾರೆ.'

ಧಿಂಗ್ರಾನ ತಂದೆಯಿಂದ ಲಾರ್ಡ್ ಮಾರ್ಲೆಗೆ, 'ಮದನ್‌ಲಾಲ್ ನನ್ನ ಮಗನೇ ಅಲ್ಲ' ಎಂಬ ತಂತಿ ಬಂತು. ಲಂಡನ್ನಿನಲ್ಲಿದ್ದ ಧಿಂಗ್ರಾನ ತಮ್ಮನೂ ಅಣ್ಣನನ್ನು ಬಹಿರಂಗವಾಗಿ ನಿಂದಿಸಿದ. ಸಾಮ್ರಾಜ್ಯನಿಷ್ಠ ಭಾರತೀಯರ ದುಃಖವಂತೂ ಹೇಳತೀರದು. ಪಾಪ, ಧಾರಾಳವಾಗಿ ಕಣ್ಣೀರು ಹರಿಸಿದರು ! ಜುಲೈ 5ರಂದು ಮದನಲಾಲನನ್ನು ಖಂಡಿಸಲು ಕಾಕ್ಸ್‌ಟನ್ ಹಾಲ್‌ನಲ್ಲಿ ಸಭೆ ಸೇರಿದರು. ಗೆಳೆಯರ ಗುಂಪಿನೊಡನೆ ನಾನು ಆ ಸಭೆಯಲ್ಲಿ ಹಾಜರಾದೆ. ವೇದಿಕೆಗೆ ಹತ್ತಿರದಲ್ಲೆ ನಾನು, ವರ್ಮ ಮತ್ತು ಅಯ್ಯರ್ ಒಂದೇ ಸಾಲಿನಲ್ಲಿ ಕುಳಿತೆವು. ಎಂ.ಪಿ.ಟಿ. ಆಚಾರ್ಯ ಸರಿಯಾಗಿ ನನ್ನ ಹಿಂಭಾಗದಲ್ಲಿ ಕುಳಿತರು. ಅವರು ಬ್ರಿಟಿಷರ 'ಸಿ. ಐ. ಡಿ.' ತಾನೆ! ಸರ್ ಮಂಚರಜಿ ಭಾವನಗರಿ, ಸುರೇಂದ್ರನಾಥ ಬ್ಯಾನರ್ಜಿ ಮುಂತಾದವರು ಧಿಂಗ್ರಾನನ್ನು ಬಾಯಿಗೆ ಬಂದಂತೆಲ್ಲ ದೂಷಿಸಿದರು. ಕೊನೆಗೆ ಅಧ್ಯಕ್ಷ ಆಗಾಖಾನರು 'ಸಭೆಯು ಸರ್ವಾನುಮತದಿಂದ ಧಿಂಗ್ರಾನನ್ನು ಖಂಡಿಸುತ್ತದೆ' ಎಂದರು.

'ಅಲ್ಲ, ಸರ್ವಾನುಮತದಿಂದ ಅಲ್ಲ' ಎಂಬ ಗರ್ಜನೆ ಕೇಳಿ ಇಡೀ ಸಭೆ ಚಕಿತವಾಯಿತು. 'ಯಾರು ಹಾಗೆನ್ನುವವರು ?' ಎಂದರು ಅಧ್ಯಕ್ಷರು.

'ನಾನು ಹೇಳುತ್ತೇನೆ' ಎನ್ನುತ್ತಾ ನಾನು ಮೇಲೆದ್ದೆ. ಸಭೆಯಿಂದ 'ಎಳೆಯಿರಿ, ಹೊಡೆಯಿರಿ, ಹೊರಗಟ್ಟಿ' ಎಂಬ ಕೂಗುಗಳೆದ್ದವು. ವ್ಯವಸ್ಥಾಪಕರಾದ ಭಾವನಗರಿ ವೇದಿಕೆಯಿಂದ ಧುಮುಕಿ ನನ್ನ ಕಡೆಗೆ ನುಗ್ಗಿದರು. ಅಷ್ಟರಲ್ಲಿ 'ಹಾಗೆಂದವನು ನಾನೇ; ನನ್ನ ಹೆಸರು ಸಾವರಕರ್' ಎಂದೆ. ಆ ಹೆಸರು ಕಿವಿಗೆ ಬೀಳುತ್ತಿದ್ದಂತೆಯೇ ಮುಂದೆ ನುಗ್ಗುತ್ತಿದ್ದವರ ಜಂಘಾಬಲ ಉಡುಗಿಹೋಯಿತು. ಇನ್ನು ಕ್ರಾಂತಿಕಾರಿಗಳು ಬಾಂಬು

ಹಾಕುವುದು ನಿಶ್ಚಿತ ಎಂದು ತಂತಮ್ಮ ಪ್ರಾಣರಕ್ಷಣೆಯ ದಾರಿ ಹುಡುಕತೊಡಗಿದರು. ಮೇಜು ಕುರ್ಚಿಗಳ ಕೆಳಗೆ ತೂರಿಕೊಂಡರು !

ಅದೇ ವೇಳೆಗೆ ಪಾಮರ್ ಎಂಬವನು ನನ್ನ ಹಣೆಯ ಮೇಲೆ ಗುದ್ದಿದ. ಕನ್ನಡಕ ಕೆಳಗೆ ಬಿದ್ದು ಚೂರಾಯಿತು. ಮುಖದ ಮೇಲೆ ರಕ್ತ ಹರಿಯತೊಡಗಿತು. ಕದಲದೆ ನಿಂತು ನಾನು ಪುನಃ ಘೋಷಿಸಿದೆ: 'ಇಷ್ಟೆಲ್ಲ ಆದರೂ ನಾನು ನಿರ್ಣಯವನ್ನು ವಿರೋಧಿಸುತ್ತೇನೆ.' ಅಷ್ಟರೊಳಗೆ ತಿರುಮಲಾಚಾರ್ಯರು ಪಾಮರ್‌ನ ತಲೆಗೆ ತಮ್ಮ ಕೈಲಿದ್ದ ಲಾಠಿ ಪ್ರಯೋಗಿಸಿ, 'ಭಾರತದ ಲಾಠಿಯ ರುಚಿ ನೋಡು' ಎಂದರು. ತಲೆ ರಕ್ತಸಿಕ್ತವಾಗಿ ಅವನು ಕೆಳಗೆ ಬಿದ್ದ. ಅವನನ್ನು ಕೊನೆಗಾಣಿಸಲು ಅಯ್ಯರ್ ತಮ್ಮ ಜೇಬಿನಲ್ಲಿದ್ದ ಪಿಸ್ತೂಲಿಗೆ ಕೈಹಾಕಿದರು. ಮೊದಲೇ ನಾನದನ್ನು ಊಹಿಸಿದ್ದೆ. ಕಣ್ಸನ್ನೆ ಮಾಡಿ ಅವರನ್ನು ತಡೆದೆ. ಸಭಾಭವನಕ್ಕೆ ಪೊಲೀಸರು ಬಂದರು. ಸಭೆ ಗೊಂದಲದಲ್ಲಿ ಮುಕ್ತಾಯವಾಯಿತು.

ರಾತ್ರಿ ಕೋಣೆಯಲ್ಲಿ ಮಲಗಿದ್ದೆ. ಜ್ವರ ಹಾಗೂ ತಲೆನೋವು ; ಕಣ್ಣು ಊದಿಕೊಂಡಿತ್ತು. ಆದರೆ ಮಾಡಲೇಬೇಕಾದ ಕೆಲಸ ಇನ್ನೂ ಬಾಕಿಯಿತ್ತು. ಬ್ಯಾರಿಸ್ಟರ್ ಆಗಿದ್ದ ಪಾಮರ್, ತಿರುಮಲಾಚಾರ್ಯರ ವಿರುದ್ಧ ದೂರು ಕೊಡುವ ಸಂಭವವಿತ್ತು. ಅದಕ್ಕೆ ತಡೆಹಾಕಲು ತುರ್ತು ಕ್ರಮ ಯೋಚಿಸಿದೆ. ಮಲಗಿದ್ದಂತೆಯೇ ಪತ್ರಿಕೆಗಳಿಗೆ ಒಂದು ಹೇಳಿಕೆ ಬರೆಸಿದೆ : '.... ಇನ್ನೂ ವಿಚಾರಣೆಯೇ ನಡೆಯದಿರುವ ವ್ಯಕ್ತಿಯನ್ನು ಅಪರಾಧಿಯೆಂದು ಸಾರುವುದು ನ್ಯಾಯಾಲಯದ ಅಧಿಕಾರವನ್ನೇ ಕಸಿದುಕೊಂಡಂತೆ.... ಸಭೆಯಲ್ಲಿ ನಾನು ನಿರ್ಣಯದ ವಿರುದ್ಧ ಮತ ನೀಡಿದುದು ಪೂರ್ತಿ ಕಾನೂನು ಬದ್ಧವಾಗಿಯೇ ಇತ್ತು. ನಾನು ನನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸುವಷ್ಟರಲ್ಲೇ ಪಾಮರನೆಂಬವನು ಮೇಲೆ ಬಿದ್ದು ಹೊಡೆದ. ಈ ಅಕೃತ್ಯ ಮಾಡಿದ ಆ ಮನುಷ್ಯನನ್ನು ಸದ್ಯದಲ್ಲೇ ನ್ಯಾಯಾಲಯಕ್ಕೆ ಎಳೆಯದೆ ಬಿಡುವುದಿಲ್ಲ. ಸಭೆಯಲ್ಲಿನ ನನ್ನ ವರ್ತನೆಯ ಬಗ್ಗೆ ಅಪಾರ್ಥ ಅಥವಾ ತಪ್ಪು ವಿವರಣೆಗೆ ಅವಕಾಶ ಆಗದಿರಲೆಂದು ಈ ಪತ್ರ ಬರೆಯುತ್ತಿರುವೆ.'

ಗ್ಯಾನಚಂದ ವರ್ಮಾ ರಾತ್ರೋರಾತ್ರಿ ಅದರ ಪ್ರತಿಗಳನ್ನು ತಯಾರಿಸಿ ಎಲ್ಲ ಪತ್ರಿಕೆಗಳಿಗೂ ತಲುಪಿಸಿದರು. ಮರುದಿನವೇ 'ಲಂಡನ್ ಟೈಮ್ಸ್' ಪತ್ರಿಕೆಯಲ್ಲಿ ಅದು ಅಚ್ಚಾಗಿ ಬಂತು. ಅಂದು ವಕೀಲರು ಸೇರಿದಲ್ಲೆಲ್ಲ ಆ ಪತ್ರದ್ದೇ ಪ್ರಶಂಸೆ. ಅದರಿಂದ ಹಿಂದಿನ ದಿನ ಸಭೆ ಏರ್ಪಡಿಸಿದ್ದ ಮಹನೀಯರಿಗೆ ಇನ್ನು ಎಲ್ಲಿ ಧಿಂಗ್ರಾ ತಮ್ಮ ವಿರುದ್ಧ ನ್ಯಾಯಾಲಯದಲ್ಲಿ ಕ್ರಮ ಕೈಗೊಳ್ಳುವನೋ ಎಂಬ ಭಯ ಹುಟ್ಟಿತು. ಆ ಪುಕ್ಕರು 'ದಯವಿಟ್ಟು ಹಾಗೆ ಮಾಡಬೇಡ' ಎಂದು ಜೈಲಿಗೆ ಹೋಗಿ ಅವನನ್ನು ಪ್ರಾರ್ಥಿಸಿಕೊಂಡರು ! ಮೃತ್ಯುವಿಗೇ ಮಣ್ಣುಮುಕ್ಕಿಸಲು ಹೊರಟಿದ್ದ ವೀರ ಮದನಲಾಲ್ ಈ ಕ್ಷುದ್ರ ಜಂತುಗಳನ್ನು ಕಂಡು ನಿಜಕ್ಕೂ ಮರುಕಗೊಂಡ. ಮುಖ್ಯವಾಗಿ, ಪಾಮರ್‌ನು ಆಚಾರ್ಯರ ಮೇಲೆ ಕ್ರಮ ಕೈಗೊಳ್ಳುವುದು ತಪ್ಪಿತು. ಸದ್ಯ, ತನ್ನ ಮೇಲೆ ಯಾರೂ ದೂರು ಕೊಡದಿದ್ದರೆ ಸಾಕು ಎಂದು ಅವನು ತಣ್ಣಗೆ ಕುಳಿತ. ಬ್ರಿಟಿಷ್ ಗುಪ್ತಚರ ಖಾತೆಯ 'ಪ್ರಾಮಾಣಿಕ ನೌಕರ' ರಾಗಿದ್ದ ತಿರುಮಲಾಚಾರ್ಯರ ರಹಸ್ಯ ಬಯಲಾಗಿತ್ತು. ಇಂಗ್ಲೆಂಡಿನಿಂದ ಕೂಡಲೆ ಅದೃಶ್ಯರಾಗುವಂತೆ ಅವರಿಗೆ ನಾನು ಸೂಚನೆ ನೀಡಿದೆ

ಜುಲೈ 10ರಂದು ಧಿಂಗ್ರಾ ನ್ಯಾಯಾಲಯದಲ್ಲಿ ನೀಡಿದ ಹೇಳಿಕೆ ಅವನ ಕೃತಿಗಿಂತಲೂ ಹೆಚ್ಚು ಪ್ರಸಿದ್ಧಿ ಪಡೆಯಿತು : 'ಜರ್ಮನರಿಗೆ ಇಂಗ್ಲೆಂಡನ್ನು ಆಕ್ರಮಿಸುವ ಅಧಿಕಾರ ಹೇಗೆ ಇಲ್ಲವೋ, ಹಾಗೆಯೇ ಹಿಂದುಸ್ಥಾನವನ್ನು ಆಕ್ರಮಿಸುವ ಅಧಿಕಾರ ಇಂಗ್ಲಿಷರಿಗೆ ಇಲ್ಲ. ನಮ್ಮ ಪವಿತ್ರ ಭೂಮಿಯನ್ನು ಕಳಂಕ

ಗೊಳಿಸುತ್ತಿರುವ ಇಂಗ್ಲಿಷರನ್ನು ನಾವು ಸಂಹರಿಸುವುದು ನ್ಯಾಯವೇ ಆಗಿದೆ. ಇಂಗ್ಲಿಷರ ಭೀಕರ ಡಂಭಾಚಾರ, ವಂಚನೆ ಹಾಗೂ ವಿಡಂಬನೆ ಕಂಡು ಅಚ್ಚರಿಯೆನಿಸುತ್ತದೆ.... ನನಗೆ ಮರಣದಂಡನೆ ವಿಧಿಸಬೇಕೆಂಬುದೇ ನನ್ನ ಇಚ್ಛೆ; ಅದರಿಂದ ನನ್ನ ದೇಶಬಾಂಧವರ ಸೇಡು ಹೆಚ್ಚು ಉಗ್ರವಾಗಬಲ್ಲದು '

ಅಂದು ಸಂಜೆಯೇ ಮರುದಿನದ ಪತ್ರಿಕೆಗಳ ಜಾಹಿರಾತು : 'ಧಿಂಗ್ರಾನ ವಿಲಕ್ಷಣ ಜವಾಬು', 'ನನ್ನ ದೇಶಬಾಂಧವರು ನನ್ನ ಸಾವಿನ ಸೇಡು ತೀರಿಸಿಕೊಳ್ಳುತ್ತಾರೆ ಎನ್ನುತ್ತಾನೆ ಧಿಂಗ್ರಾ!', 'ನಾನು ದೇಶಭಕ್ತ; ಹಿಂದುಸ್ಥಾನದ ಅಭ್ಯುದಯಕ್ಕಾಗಿ ಪ್ರಾಣ ನೀಡುತ್ತಿದ್ದೇನೆ - ಎನ್ನುತ್ತಾನೆ' ಇತ್ಯಾದಿ ತಲೆಬರಹಗಳು ದಪ್ಪ ದಪ್ಪ ಅಕ್ಷರಗಳಲ್ಲಿ ಇಂಗ್ಲೆಂಡಿನಾದ್ಯಂತ ತೂಗಾಡತೊಡಗಿದವು.

ಜುಲೈ 5ರಂದು ಗ್ಯಾನಚಂದ ವರ್ಮಾ ಧಿಂಗ್ರಾನ ಭೇಟಿಗೆ ಹೋದಾಗ, 'ನಿಮಗಾಗಿ ನಾನು ಏನು ಮಾಡಲಿ, ಹೇಳಿ' ಎಂದ, ಧಿಂಗ್ರಾ! ಫಾಸಿಗೆ ಹೋಗಲಿದ್ದವನು ಅವನು; ಹೊರಗೆ ಸುರಕ್ಷಿತವಾಗಿದ್ದವರನ್ನೆ ವಿಚಾರಿಸಿಕೊಳ್ಳುತ್ತಿದ್ದ ! 'ನೋಡಿ, ನನಗೆ ಡ್ರೆಸ್ ಮಾಡಿಕೊಳ್ಳುವುದಕ್ಕೆ ಇಲ್ಲಿ ಕನ್ನಡಿ ಇಲ್ಲ. ಒಂದು ಅಂದವಾದ ಕನ್ನಡಿ ಕಳಿಸಿಕೊಡಿ' ಎಂದೂ ಅವನು ಕೇಳಿದ.

ಜುಲೈ 22ರಂದು ಬ್ರಿಕ್ಸ್‌ಟನ್ ಸೆರೆಮನೆಗೆ ಹೋದೆ. ನೆಚ್ಚಿನ ಧಿಂಗ್ರಾ ಸರಳುಗಳ ನಡುವೆ ನಿಂತಿದ್ದ ಪೊಲೀಸರ ಪಹರೆಯಲ್ಲಿ ಬಹಿರಂಗವಾಗಿ ಹೇಗೆ ಅಭಿನಂದಿಸಲಿ ? 'ನಾನು ನಿನ್ನ ದರ್ಶನಕ್ಕೆ ಬಂದಿದ್ದೇನೆ' ಎಂದೆ. 'ದರ್ಶನ' ಎಂಬ ಶಬ್ದ ಅವನ ಬಲಿದಾನಕ್ಕೆ ಸಂದ ಗೌರವ ಪ್ರಶಂಸೆ ಅವನಿಗೂ ಅದು ಅರ್ಥವಾಯಿತು. ಅವನ ಕಣ್ಣಲ್ಲಿ ಧನ್ಯತೆಯ ಆನಂದಾಶ್ರುಗಳು ಮೂಡಿದವು. ಇಹಲೋಕದಲ್ಲಿನ ಅಂತಿಮ ಭೇಟಿ ಅದು. ದಿಂಗ್ರಾ ತನ್ನ ಅಂತಿಮ ಇಚ್ಛೆ ಪ್ರಕಟಿಸಿದ : 'ಸಾವರಕರ್‌ಜಿ, ಹಿಂದು ಪದ್ಧತಿಯಂತೆ ನನ್ನ ಶವಸಂಸ್ಕಾರ ಆಗಬೇಕು ಯಾರೇ ಅಹಿಂದುವಾಗಲಿ, ನನ್ನನ್ನು ಧಿಕ್ಕರಿಸಿದ ನನ್ನ ತಮ್ಮನಾಗಲಿ ನನ್ನ ಶವವನ್ನು ಸ್ಪರ್ಶಿಸಕೂಡದು. ನನ್ನ ಕೊಠಡಿಯಲ್ಲಿರುವ ಬಟ್ಟೆ, ಪುಸ್ತಕ ಹಾಗೂ ಇನ್ನಿತರ ಸಾಮಗ್ರಿಗಳನ್ನು ಹರಾಜು ಹಾಕಿ, ಅದರಿಂದ ಬರುವ ಹಣವನ್ನು ನಮ್ಮ ''ಹಿಂದುಸ್ಥಾನದ ರಾಷ್ಟ್ರೀಯ ನಿಧಿ''ಗೆ ಸೇರಿಸಬೇಕು '

ತನ್ನನ್ನು ನೋಡಬಯಸಿದ ತಮ್ಮನಿಗೆ ಧಿಂಗ್ರಾ ಭೇಟಿಯನ್ನು ನಿರಾಕರಿಸಿದ. ದಿನಾಂಕ 23ರಂದು ವಿಚಾರಣೆಯಾಯಿತು. ಪೊಲೀಸರು ಮುಚ್ಚಿಟ್ಟಿರುವ ತನ್ನ ಹೇಳಿಕೆಯನ್ನು ಓದಬೇಕೆಂದು ಧಿಂಗ್ರಾ ಒತ್ತಾಯಿಸಿದ. ಆದರೆ, ಅವರು ಅದರ ಬಗ್ಗೆ ಅಜ್ಞಾನ ನಟಿಸಿದರು ಮೊದಲೇ ನಿರೀಕ್ಷಿಸಿದ್ದಂತೆ, ಮದನಲಾಲನಿಗೆ ಮರಣದಂಡನೆ ವಿಧಿಸಲ್ಪಟ್ಟಿತು.

'ಸಾವರಕರ್' ವಿರುದ್ಧ ಇಡೀ ಇಂಗ್ಲೆಂಡ್ ಉರಿದೆದ್ದಿತು. ನಾನು ವಾಸವಿದ್ದ ಬಿಪಿನಚಂದ್ರ ಪಾಲರ ಮನೆಗೆ ಗುಪ್ತಚರರ ಸರ್ಪಕಾವಲು ಬಿತ್ತು ಮೇಲಿಂದ ಮೇಲೆ ಪೊಲೀಸರ ಝಡತಿ ; ಕೋಪೋದ್ರಿಕ್ತ ನಾಗರಿಕರ ಮುತ್ತಿಗೆ ; ಅವರ ಅನಾಗರಿಕ ಬೊಬ್ಬಾಟ ! ಉಳಿದವರ ಹಿತದೃಷ್ಟಿಯಿಂದ ನಾನು ಆ ಜಾಗ ಬಿಡಬೇಕಾಯಿತು ತಲೆಯಿಡಲು ನೆಲೆಯಿಲ್ಲ; ಊಟ, ನಿದ್ರೆಗಳಿಲ್ಲ; ಮನೆ ಸೇರಿಸಲು ಯಾರೂ ಸಿದ್ಧರಿಲ್ಲ. ಸದಾ ಗುಪ್ತಚರರ ಕರಿನೆರಳು. ಮನೆಯಿಂದ ಮನೆಗೆ, ಹೋಟೆಲಿನಿಂದ ಹೋಟೆಲಿಗೆ, ನಿರಂತರವಾಗಿ ಜಾಗ ಬದಲಾಯಿಸಬೇಕಾಯಿತು. ನಾನು 'ಸಾವರಕರ್' ಎಂದು ತಿಳಿಯುವವರೆಗೆ ಮಾತ್ರ ಆಶ್ರಯ , ಅದು ತಿಳಿದೊಡನೆ ನಾನು ಮುಂದಕ್ಕೆ ಓಡಬೇಕಾಗುತ್ತಿತ್ತು. ಎಲ್ಲಿಗೆ ? ತಿಳಿಯದು ! ಒಂದು ದಿನವಂತೂ ಎರಡು ಬಾರಿ ಜಾಗ ಬದಲಾಯಿಸಿದೆ. ಒಂದೆಡೆ ನಡುರಾತ್ರಿಯಲ್ಲೇ ಹೊರದೂಡಲ್ಪಟ್ಟೆ. ಬೀದಿಯಲ್ಲಿ ಅಲ್ಲಲ್ಲೆ ಎಷ್ಟೋ ''ಸುಖಾಗಮನ''ದ ಫಲಕಗಳು ಕಣ್ಣಿಗೆ ಬಿದ್ದವು. ಆದರೇನು ಫಲ ? ಕಡೆಗೆ 'ರೆಡ್

ಲಯನ್ ಪ್ಯಾಸೇಜ್' ನಲ್ಲಿದ್ದ ಓರ್ವ ಜರ್ಮನ್ ಮಹಿಳೆ ಕೆಲದಿನಗಳ ಮಟ್ಟಿಗೆ ನನಗೆ ಆಶ್ರಯ ನೀಡಿದಳು

ಲಂಡನ್ನಿಗೆ ಬಂದಾಗಿನಿಂದ ನಿರಂತರ ಪರಿಶ್ರಮ, ಚಟುವಟಿಕೆ; ಅದಕ್ಕೆ ದೇಹ ತಾಳಲಿಲ್ಲ. ಅನಾರೋಗ್ಯ ತಲೆಹಾಕಿತು. ಸುತ್ತಲೂ ಶತ್ರುಮಯ ಪರಿಸರ ಬೇರೆ. ಹವಾ ಬದಲಾವಣೆ ಹಾಗೂ ವಿಶ್ರಾಂತಿಗೆಂದು ಜುಲೈ 29ರಂದು ಸಮುದ್ರತೀರದ ಬ್ರೈಟನ್‌ಗೆ ಹೋದೆ. ನನ್ನ ನೆರವಿಗೆಂದು ನಿರಂಜನಪಾಲ್ ಜತೆಗಿದ್ದ. ಅಲ್ಲಿಯೇ ಒಂದು ಸಂಜೆ ಸಮುದ್ರತೀರದಲ್ಲಿ ಕುಳಿತಿದ್ದಾಗಿನ ಸಂಗತಿ. ಇದ್ದಕ್ಕಿದ್ದಂತೆ, ಪರದೇಶದಲ್ಲಿ ನನ್ನ ಅಸಹಾಯಕತೆ ನೆನೆದು ಮನಸ್ಸು ವಿದೀರ್ಣವಾಯಿತು. ಅನಾಥ ಮಗುವಿಗೆ ತಾಯಿಯ ಸ್ಮರಣೆ ಆಗುವಂತೆ, ಭಾರತದ ನೆನಪು ಉಕ್ಕಿಬಂತು. ಯುಗಯುಗಗಳಿಂದ ತಾಯಿಯನ್ನು ಅಗಲಿದಂತೆ ಭಾಸವಾಯಿತು. ಎದುರಿಗೆ ಸಾಗರದ ತರಂಗೋಪತರಂಗಗಳು ದಡ ಮುಟ್ಟಿ ಮರಳುತ್ತಿದ್ದವು. 'ನಿರಂಜನ್ ! ಈ ಅಲೆಗಳು ನನ್ನನ್ನು ನನ್ನ ಮಾತೃಭೂಮಿಗೆ ಒಯ್ಯಲಾರವೇನು ?' ಎಂದೆ. ನನ್ನ ವಿಕ್ಷಿಪ್ತ ಪ್ರಶ್ನೆಗೆ ಅವನ ಮೂಕ ನೋಟವೇ ಉತ್ತರ. ನಿಧಾನವಾಗಿ ನಾನು ಗುಣಗುಣಿಸತೊಡಗಿದೆ :

**ನೇ ಮಜಸೀ ನೇ ಪರತ ಮಾತೃಭೂಮೀಲಾ**
**ಸಾಗರಾ ಪ್ರಾಣ ತಳಮಳಲಾ....**
*(ಕರೆದೊಯ್ ಕರೆದೊಯ್ ಸಾಗರವೆ, ಎನ್ನನು ತಾಯ್ನಾಡಿನ ಕರೆಗೆ*
*ಪ್ರಾಣವಿದೋ ತಳಮಳಿಸುತಿದೆ...)*

.............. ...........

**ಜರಿ ಆಂಗ್ಲಭೂಮಿ ಭಯಭೀತಾ ರೇ**
**ಅಬಲಾ ನ ಮಾಝಿಹೀ ಮಾತಾ ರೇ**
**ಕಥಿಲ ಹೇ ಅಗಸ್ತಿನ ಅತಾ ರೇ**
**ಜೋ ಆಚಮನೀ ಏಕಕ್ಷಣೀ ತುಜ ಪ್ಯಾಲಾ ।**
**ಸಾಗರಾ ಪ್ರಾಣ ತಳಮಳಲಾ ॥**
*(ಭಯಾನಕವೆನಿಸಿದರೂ ಈ ಆಂಗ್ಲರ ದೇಶ*
*ಅರಕ್ಷಿತಳಲ್ಲವು ತಾಯ್ನೆಲ ಭಾರತವರ್ಷ*
*ಕರೆದರೆ ಬರುವರಗಸ್ತ್ಯರು ಓ ಸಾಗರವೆ*
*ಒಂದೇ ಗುಟುಕಿಗೆ ನಿನ್ನನು ಕುಡಿದವರು ।*
*ಪ್ರಾಣವಿದೋ ತಳಮಳಿಸುತಿದೆ ॥)*

ಕಂಠ ಗದ್ಗದಿತವಾಯಿತು. ಕಣ್ಣುಗಳಲ್ಲಿ ನೀರು ತುಂಬಿ ಹರಿಯತೊಡಗಿತು. ಪರದೇಶದ ಆ ಕಡಲ ತೀರದಲ್ಲಿ ತಬ್ಬಲಿ ಮಗುವಿನಂತೆ ಬಿಕ್ಕಳಿಸಿ ಅಳತೊಡಗಿದೆ !

ಆಗಸ್ಟ್ 17ರಂದು ಧಿಂಗ್ರಾ ಫಾಸಿಗೇರಲಿದ್ದ. ಅಷ್ಟರೊಳಗೆ ಮಾಡಬೇಕಿದ್ದ ಅತಿಮಹತ್ವದ ಕೆಲಸವೊಂದಿತ್ತು. ಅವನ ಜೇಬಿನಲ್ಲಿ ಮತ್ತು ವಸತಿಯಲ್ಲಿ ಸಿಕ್ಕಿದ ಹೇಳಿಕೆಯ ಎರಡು ಪ್ರತಿಗಳನ್ನು ಪೊಲೀಸರು ಮರೆಮಾಚಿದ್ದರಷ್ಟೆ; ಭದ್ರವಾಗಿ ಬೀಗ ಹಾಕಿಟ್ಟು, ಇನ್ನು ಅದರ ತಂಟೆ ತಪ್ಪಿತು ಎಂದು ನಿಶ್ಚಿಂತೆಯಿಂದ ಇದ್ದರಷ್ಟೆ ! ಅದೇ ಹೇಳಿಕೆಯನ್ನೇ ಜಗತ್ತಿನಾದ್ಯಂತ ಏಕಕಾಲದಲ್ಲಿ ಪ್ರಕಟಿಸುವ ಯೋಜನೆ ನನ್ನದು ಗ್ಯಾನಚಂದ ವರ್ಮರಿಗೆ ಹೇಳಿಕಳುಹಿಸಿದೆ. ನನಗೆ ಅವರಲ್ಲಿ ಪೂರಾ ಭರವಸೆ. ಏನೇ ಕೆಲಸ ಕೈಗೊಳ್ಳಲಿ,

CERTIFIED COPY OF AN ENTRY OF DEATH

GIVEN AT THE GENERAL REGISTER OFFICE LONDON

REGISTRATION DISTRICT

1909 DEATH in the sub-district of ... in the County of London

DX 369593

ಧಿಂಗ್ರಾನ ಮರಣ ದಾಖಲೆ ಪತ್ರ

ಅದನ್ನು ಸಮರ್ಪಕವಾಗಿ ಕೊನೆ ಮುಟ್ಟಿಸುವುದರಲ್ಲಿ ಅವರು ಎತ್ತಿದ ಕೈ. ಧಿಂಗ್ರಾನ ಹೇಳಿಕೆಯ ಮೂಲಪ್ರತಿ ಇದ್ದುದ್ದು ಅದರ ಕರ್ತೃವಾದ ನನ್ನಲ್ಲಿಯೇ! ವರ್ಮಾ ಅದನ್ನು ರಹಸ್ಯವಾಗಿ ಪ್ಯಾರಿಸ್ಸಿಗೆ ಒಯ್ದರು. ಅಲ್ಲಿ ಅದರ ಸಹಸ್ರಾರು ಪ್ರತಿ ಅಚ್ಚುಹಾಕಿಸಿದರು. ಅಮೆರಿಕ, ಜರ್ಮನಿ ಮುಂತಾದ ದೇಶಗಳ ಪತ್ರಿಕೆಗಳಿಗೆ ಅದನ್ನು ರವಾನಿಸಿ, ಧಿಂಗ್ರಾನ ಮರಣದ ವೇಳೆಗೆ ಪ್ರಕಟವಾಗುವಂತೆ ವ್ಯವಸ್ಥೆ ಮಾಡಿದರು.

ನಾನು ಲಂಡನ್ನಿಗೆ ಮರಳಿದೆ. ಧಿಂಗ್ರಾನ ಮನಸ್ಸಿಗೆ ತೃಪ್ತಿ ತರುವ ಇನ್ನೊಂದು ಕಾರ್ಯ ಬಾಕಿ ಇತ್ತು. ಅವನ ಆ 'ರಹಸ್ಯ' ಹೇಳಿಕೆ ಅವನ ಸಾವಿಗೆ ಮೊದಲೇ ಲಂಡನ್ನಿನ ಪತ್ರಿಕೆಗಳಲ್ಲಿ ಪ್ರಕಟವಾದರೆ? ಆದರೆ, ಪ್ರಕಟಿಸುವವರು ಯಾರು? ಅದಕ್ಕೆ ಧೈರ್ಯ ಬೇಕು; ಅದಕ್ಕೂ ಮಿಗಿಲಾಗಿ ನಂಬಿಕೆ ಬೇಕು. ನನ್ನ ಗೆಳೆಯ ಡೇವಿಡ್ ಗಾರ್ನೆಟ್‌ಗೆ ಹೇಳಿಕೆಯ ಒಂದು ಪ್ರತಿ ಒಪ್ಪಿಸಿದೆ. ಅವನು ಅದನ್ನು 'ಡೈಲಿ ನ್ಯೂಸ್' ಪತ್ರಿಕೆಯ ಸಹಸಂಪಾದಕ ರಾಬರ್ಟ್ ಲಿಂಡ್‌ಗೆ ತಲುಪಿಸಿದ. ಲಿಂಡ್ ದಿ. 15ರ ರಾತ್ರಿ ತನ್ನ ಕೆಲಸದ ಪಾಳಿ ಬರುತ್ತಲೇ ಅದನ್ನು ಪತ್ರಿಕೆಯಲ್ಲಿ ಸೇರಿಸಿಬಿಟ್ಟ. ಮರುದಿನ – ಧಿಂಗ್ರಾನ ಮರಣಕ್ಕೆ ಒಂದು ದಿನ ಮೊದಲೇ – ಆ ಹೇಳಿಕೆಯನ್ನು ಕಂಡು ಇಡೀ ಲಂಡನ್ ನಗರ ಸ್ತಂಭೀಭೂತವಾಯಿತು. ಪೊಲೀಸ್ ಅಧಿಕಾರಿಗಳಿಗೆ ದಿಗ್‌ಭ್ರಮೆ ಹಿಡಿಯಿತು. ಅವರಿಗೆ ತಮ್ಮತಮ್ಮಲ್ಲೇ ಅನುಮಾನ ಪ್ರಾರಂಭವಾಯಿತು! ಮದನಲಾಲನಿಗೂ ಸುದ್ದಿ ಮುಟ್ಟುವುದು ತಡವಾಗಲಿಲ್ಲ. ಮರುದಿನ ಸಮಾಧಾನದಿಂದ ನಸುನಗುತ್ತ ಅವನು ವಧಸ್ತಂಭ ಏರಿದ. ಅವನ ಹೇಳಿಕೆಯ ಶೀರ್ಷಿಕೆ: 'ಸವಾಲು.'

*'ನಿನ್ನೆ ನಾನು ಬ್ರಿಟಿಷರ ರಕ್ತ ಹರಿಸಲು ಯತ್ನಿಸಿದ್ದು ನಿಜ. ದೇಶಭಕ್ತ ಭಾರತೀಯ ಯುವಕರನ್ನು ಅಮಾನುಷವಾಗಿ ಗಲ್ಲಿಗೇರಿಸುತ್ತಿರುವುದರ ಹಾಗೂ ಗಡಿಪಾರು ಮಾಡುತ್ತಿರುವುದರ ವಿರುದ್ಧ ಇದೊಂದು ಸಣ್ಣ ಸೇಡು, ಅಷ್ಟೆ. ಈ ಪ್ರಯತ್ನದಲ್ಲಿ ನನ್ನ ಅಂತರಾತ್ಮನೇ ನನ್ನ ಸಲಹೆಗಾರ; ನನ್ನ ಕರ್ತವ್ಯ ಪ್ರಜ್ಞೆಯೇ ಒಳಸಂಚುಗಾರ.*

*'ಪರಕೀಯ ಶಸ್ತ್ರಾಸ್ತ್ರಗಳ ದಬ್ಬಾಳಿಕೆಗೊಳಗಾಗಿ ದಾಸ್ಯದಲ್ಲಿ ಹೊರಳುತ್ತಿರುವ ದೇಶವು ನಿರಂತರ ಸಮರಾಂಗಣದಲ್ಲಿದ್ದಂತೆಯೇ ಲೆಕ್ಕ. ನಿಶ್ಶಸ್ತ್ರಗೊಳಿಸಲ್ಪಟ್ಟ ಜನಾಂಗ ರಾಜಾರೋಷವಾಗಿ ಹೋರಾಡು*

ವುದು ಅಸಾಧ್ಯವಾದ್ದರಿಂದ, ನಾನು ಅನಿರೀಕ್ಷಿತ ಹಲ್ಲೆ ನಡೆಸಿದೆ. ನನಗೆ ಬಂದೂಕ ನಿರಾಕರಿಸಲ್ಪಟ್ಟು ದರಿಂದ, ಪಿಸ್ತೂಲು ತೆಗೆದೆ; ಹೊಡೆದೆ.

'ನನ್ನ ದೇಶಕ್ಕೆ ಅನ್ಯಾಯವಾದರೆ ದೇವರಿಗೇ ಅಪಮಾನವಾದಂತೆ ಎಂದು ಹಿಂದುವಾದ ನನ್ನ ಭಾವನೆ. ದುರ್ಬಲನಾದ, ಬುದ್ಧಿವಂತನಲ್ಲದ ನನ್ನಂಥ ಮಗನು ತಾಯಿಗೆ ತನ್ನ ರಕ್ತವನ್ನಲ್ಲದೇ ಮತ್ತೇನನ್ನು ತಾನೆ ಕೊಟ್ಟಾನು ? ಆದ್ದರಿಂದ ಅದನ್ನೇ ನಾನು ಮಾತೃಭೂಮಿಯ ಬಲಿವೇದಿಗೆ ಅರ್ಪಿಸಿದ್ದೇನೆ. ಆಕೆಯ ಕಾರ್ಯವೆಂದರೆ ಶ್ರೀರಾಮನ ಕಾರ್ಯ; ಆಕೆಯ ಸೇವೆಯೆಂದರೆ ಶ್ರೀರಾಮನ ಸೇವೆ. ಹಿಂದು ಹಾಗೂ ಇಂಗ್ಲಿಷ್ ಜನಾಂಗಗಳು ಇರುವವರೆಗೂ (ಇಂದಿನ ಅಸ್ವಾಭಾವಿಕ ಸಂಬಂಧ ಕೊನೆಗೊಳ್ಳದಿರುವವರೆಗೂ) ಭಾರತ ಮತ್ತು ಇಂಗ್ಲೆಂಡ್‌ಗಳ ನಡುವೆ ಸ್ವಾತಂತ್ರ್ಯ ಸಮರ ಮುಂದುವರಿಯುವಂಥದೇ.

'ಭಾರತಕ್ಕೆ ಇಂದು ಅಗತ್ಯವಾಗಿರುವ ಏಕಮಾತ್ರ ಪಾಠ - ಹೇಗೆ ಬಲಿದಾನ ನೀಡಬೇಕೆಂಬುದು. ಅದನ್ನು ಕಲಿಸುವ ಏಕಮಾತ್ರ ದಾರಿ - ನಾವೇ ಬಲಿಯಾಗುವುದು. ಆದ್ದರಿಂದ ನಾನು ಪ್ರಾಣಾರ್ಪಣೆ ಮಾಡುತ್ತಿದ್ದೇನೆ; ಹೆಮ್ಮೆಯಿಂದ ಹುತಾತ್ಮನಾಗುತ್ತಿದ್ದೇನೆ. ಅಖಿಲ ಮಾನವ ಜನಾಂಗದ ಹಿತವನ್ನೂ, ಭಗವಂತನ ಅಸ್ತಿತ್ವವನ್ನೂ ಪುರಸ್ಕರಿಸುವ ಹಿಂದುಸ್ಥಾನವು ಸ್ವತಂತ್ರಗೊಳ್ಳಬೇಕು ಮತ್ತು ಆ ಧ್ಯೇಯವು ಪೂರ್ತಿಯಾಗುವವರೆಗೆ ನಾನು ಇದೇ ತಾಯಿಯ ಉದರದಲ್ಲಿ ಮತ್ತೆ ಮತ್ತೆ ಹುಟ್ಟಿ ಇದೇ ಧ್ಯೇಯಕ್ಕಾಗಿಯೇ ಪ್ರಾಣಾರ್ಪಣೆ ಮಾಡುವಂತಾಗಲಿ. ಇದೊಂದು ದೇವರಲ್ಲಿ ನನ್ನ ಪ್ರಾರ್ಥನೆ.

ವಂದೇ ಮಾತರಂ.'

'ಡೈಲಿ ನ್ಯೂಸ್' ಪತ್ರಿಕೆಯಲ್ಲಿ ಪ್ರಕಟವಾದ ಈ 'ಸವಾಲು' ಧಿಂಗ್ರಾನದಲ್ಲ ಎನ್ನುವುದಾದರೆ, ಮೂಲ ಹೇಳಿಕೆಯನ್ನು ಪೊಲೀಸ್ ಖಾತೆ ಪ್ರಕಟಿಸಲಿ, ಎಂದು 'ಡೈಲಿ ಮಿರರ್' ಪತ್ರಿಕೆ ಮರುಸವಾಲು ಹಾಕಿತು. ಬಾಯಿ ಮುಚ್ಚಿಕೊಂಡು ಕೆನ್ನೆಗೆ ಹೊಡೆಸಿಕೊಂಡಂತಾಯಿತು, ಬ್ರಿಟಿಷ್ ಸರಕಾರದ ಸ್ಥಿತಿ! ದಿ. 17ರಂದು ಅಮೆರಿಕ, ಜರ್ಮನಿ, ಇಟಲಿ ಮುಂತಾದೆಡೆಗಳಲ್ಲಿನ ಪತ್ರಿಕೆಗಳಲ್ಲೂ ಧಿಂಗ್ರಾನ 'ಸವಾಲು' ಪ್ರಕಟ ವಾಯಿತು. ಐರಿಷ್ ಪತ್ರಿಕೆಗಳಂತೂ, 'ತನ್ನ ದೇಶದ ಸಲುವಾಗಿ ಹೆಮ್ಮೆಯಿಂಧ ಪ್ರಾಣಾರ್ಪಣೆ ಮಾಡಿದ ಮದನಲಾಲ ಧಿಂಗ್ರಾನನ್ನು ಐರ್ಲೆಂಡ್ ಗೌರವಿಸುತ್ತದೆ' ಎಂಬ ಫಲಕಗಳನ್ನೇ ಪ್ರಕಟಿಸಿದವು. ಇಡೀ ಜಗತ್ತು ಧಿಂಗ್ರಾನ ಬಲಿದಾನದ ಮಹಿಮೆಯನ್ನು ಹಾಡಿ ಹೊಗಳಿತು. ಆದರೆ ಆ ಸಮಯದಲ್ಲಿ ಇಂಗ್ಲೆಂಡಿನಲ್ಲಿಯೇ ಇದ್ದ ಜವಾಹರಲಾಲ ನೆಹರು ಅವರಂಥ ಕೆಲವರಿಗೆ ಮಾತ್ರ ಏನೂ ವಿಶೇಷ ಅನಿಸಲೇ ಇಲ್ಲ. ರಾಜಕಾರಣ ಹಾಗೂ ಸ್ವಾತಂತ್ರ್ಯದ ವಿಚಾರ ಮಾತನಾಡುವ ಭಾರತ ಭವನದ ದರಿದ್ರ, ದುಷ್ಟ ಹುಡುಗರ ಹತ್ತಿರ ಸುಳಿಯಲೂಬಾರದೆಂದು ಅವರ ತಂದೆ ಮಗನಿಗೆ ಚೆನ್ನಾಗಿ ಬುದ್ಧಿ ಹೇಳಿದ್ದರು!

ಧಿಂಗ್ರಾ ಫಾಸಿಗೇರಿದಂದು ಬೆಳಿಗ್ಗೆಯೂ ನಾವು ಸುಮ್ಮನಿರಲಿಲ್ಲ. ಲಂಡನ್ನಿನ ಬೀದಿಗಳಲ್ಲಿ ಒಂದು ಪತ್ರಕ ತಯಾರಿಸಿ ಹಂಚುತ್ತಿದ್ದೆವು : 'ಈ ದಿನ 1909 ಆಗಸ್ಟ್ 17 - ಪ್ರತಿಯೊಬ್ಬ ಸ್ವದೇಶಪ್ರೇಮಿ ಭಾರತೀಯನ ಹೃದಯದಲ್ಲೂ ರಕ್ತಾಕ್ಷರಗಳಲ್ಲಿ ಮೂಡಿ ನೆಲೆಸುವ ದಿನ. ಇಂದು ಬೆಳಿಗ್ಗೆ ನಮ್ಮ ಮಹಾನ್ ದೇಶಭಕ್ತ, ನಮ್ಮ ಪ್ರೀತಿಯ ಧಿಂಗ್ರಾ, ತನ್ನ ಪವಿತ್ರ ಗೋಣನ್ನು ನೇಣುಗಂಬಕ್ಕೆ ಒಡ್ಡಿ, ಪೆಂಟನ್‌ವಿಲ ಕಾರಾಗೃಹದಲ್ಲಿ ತೂಗಾಡುತ್ತಿದ್ದಾನೆ... ಈ ಶ್ರೇಷ್ಠ ದೇಶಭಕ್ತ ಇಂದು ನಮ್ಮೊಂದಿಗೆ ಶರೀರದ ರೂಪದಲ್ಲಿ ಇಲ್ಲದಿದ್ದರೂ, ಅವನ ಆತ್ಮ ನಮ್ಮೊಡನೆಯೇ ಇದ್ದು ಮಾತೃಭೂಮಿಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಮಗೆ ದಾರಿ ತೋರುತ್ತದೆ. ಅವನ ಹೆಸರು ಚರಿತ್ರೆಯ ಪುಟಗಳಲ್ಲಿ ಕಂಗೊಳಿಸುತ್ತಾ ಭವಿಷ್ಯವನ್ನು ಬೆಳಗುತ್ತದೆ....

ನಮ್ಮ ಶತ್ರುಗಳೀಗ ಅವನನ್ನು ಕೊಂದುಹಾಕಿದ್ದಾರೆ ಆದರೆ, ಅವರು ಚಳವಳಿಯನ್ನು ಎಂದಿಗೂ, ಎಂದೆಂದಿಗೂ ಕೊಲ್ಲಲಾರರು ; ಅದನ್ನು ಅವರು ಮರೆಯದಿರಲಿ '

ಲಾಯ್ಡ್ ಜಾರ್ಜ್ ಮತ್ತು ವಿನ್‌ಸ್ಟನ್ ಚರ್ಚಿಲ್ ಸಹ ಧಿಂಗ್ರಾನ ದೇಶಭಕ್ತಿಯ ಬಗ್ಗೆ ಮೆಚ್ಚುಗೆಯ ಮಾತುಗಳನ್ನಾಡಿದರು. ಆಂಗ್ಲ ಲೇಖಕ ಡಬ್ಲ್ಯು.ಎಸ್. ಬ್ಲಂಟ್ ತಮ್ಮ ದಿನಚರಿಯಲ್ಲಿ, 'ಕ್ರಿಶ್ಚನ್ ಹುತಾತ್ಮರ ಪೈಕಿ ಒಬ್ಬನೂ ಅಷ್ಟೊಂದು ನಿರ್ಭೀಕವಾಗಿ ಹಾಗೂ ಘನತೆಯಿಂದ ನ್ಯಾಯಾಧೀಶರಿಗೆ ಎದುರಾಗಿ ನಿಲ್ಲಲಿಲ್ಲ.... ಹಿಂದುಸ್ಥಾನದಲ್ಲಿ ಧಿಂಗ್ರಾನಂತೆ ನಿರ್ಭೀಕರಾದ 500 ಯುವಕರು ಹುಟ್ಟಿದರೆ ಸಾಕು, ಅದು ಸ್ವಾತಂತ್ರ್ಯ ಗಳಿಸಬಲ್ಲದು' ಎಂದು ಬರೆದ.

ಪ್ಯಾರಿಸ್ಸಿನಲ್ಲಿ ಅಭಿನವಭಾರತದ ಮುಖಪತ್ರಿಕೆ 'ವಂದೇ ಮಾತರಂ' 1909 ಸೆಪ್ಟೆಂಬರ್ 10ರಂದು ಪ್ರಾರಂಭವಾಯಿತು. ಅದರ ಮೊದಲ ಸಂಚಿಕೆಯಲ್ಲಿ ಲಾಲಾ ಹರದಯಾಳ್ ಬರೆದರು : 'ಚಿರಂಜೀವಿ ಧಿಂಗ್ರಾ ತನ್ನ ವಿಚಾರಣೆಯಲ್ಲಿ ಹೆಜ್ಜೆಹೆಜ್ಜೆಗೂ ಪ್ರಾಚೀನ ವೀರಪುರುಷರಂತೆ ನಡೆದುಕೊಂಡಿದ್ದಾನೆ. ಧಿಂಗ್ರಾನನ್ನು ಕೊಂದೆನೆಂದು ಇಂಗ್ಲೆಂಡ್ ಭಾವಿಸಿದೆ. ಆದರೆ ನಿಜಕ್ಕೂ ಅವನು ಶಾಶ್ವತಗತಿ ಪಡೆದಿದ್ದಾನೆ; ಭಾರತದಲ್ಲಿನ ಇಂಗ್ಲಿಷ್ ಪ್ರಭುತ್ವಕ್ಕೆ ಮರಣಾಂತಿಕ ಹೊಡೆತ ಕೊಟ್ಟಿದ್ದಾನೆ.

'ಮುಂದೆ, ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯ ಧೂಳೀಪಟವಾದಾಗ, ನಮ್ಮ ಪ್ರಮುಖ ನಗರಗಳ ಚೌಕಗಳನ್ನು ಧಿಂಗ್ರಾನ ಸ್ಮಾರಕಗಳು ಅಲಂಕರಿಸುತ್ತವೆ. ನಾನು ಪ್ರೀತಿಸಿದ ಧ್ಯೇಯಕ್ಕಾಗಿ ದೂರದೇಶವೊಂದರಲ್ಲಿ ಪ್ರಾಣಾಹುತಿ ನೀಡಿದ ಅವನ ಉದಾತ್ತ ಜೀವನವನ್ನೂ ಅತ್ಯುತ್ತಮ ಮರಣವನ್ನೂ ಆ ಸ್ಮಾರಕಗಳು ನಮ್ಮ ಮಕ್ಕಳಿಗೆ ನೆನಪು ಮಾಡಿಕೊಡುತ್ತವೆ '

ಧಿಂಗ್ರಾ ಪ್ರಕರಣದ ನಂತರ ಭಾರತಭವನ ಪೂರ್ತಿ ಖಾಲಿಯಾಯಿತು. ಅಲ್ಲಿದ್ದವರೆಲ್ಲರೂ ಅನ್ಯಾನ್ಯ ಸ್ಥಳಗಳಲ್ಲಿ ವಸತಿ ಹೂಡಿದರು. ಶ್ಯಾಮಜಿಯವರು ಆ ಕಟ್ಟಡವನ್ನು ಲಾಭಕ್ಕೆ ಮಾರಿದರು. ಭಾರತಭವನದ ಸ್ಥಾಪನೆಯ ಉದ್ದೇಶ ಸಫಲವಾಗಿತ್ತು. ಈಗ ಒಬ್ಬೊಬ್ಬ ಸದಸ್ಯನ ಕೊಠಡಿಯೂ ಒಂದೊಂದು 'ಭಾರತ ಭವನ'ವೇ ಆಗಿತ್ತು. ಎಂಥದೇ ಗೊಂದಲದ ಪರಿಸ್ಥಿತಿಯಲ್ಲೂ ನಮ್ಮ ಸಾಪ್ತಾಹಿಕ ಸಭೆ ನಿಲ್ಲುತ್ತಿರಲಿಲ್ಲ ಯಾರಾದರೊಬ್ಬರ ವಸತಿಯಲ್ಲಿ ತಪ್ಪದೆ ನಡೆಯುತ್ತಿತ್ತು.

ಲಂಡನ್ನಿನ ಭಾರತೀಯರಲ್ಲಿ ರಾಷ್ಟ್ರೀಯ ಜಾಗೃತಿ ನಿರ್ಮಿಸುವ ಸಮಾರಂಭಗಳನ್ನೂ ನಾವು ತಪ್ಪಿಸಲಿಲ್ಲ. ಅಕ್ಟೋಬರ್ 24ರಂದು ವಿಜಯ ದಶಮಿ ಉತ್ಸವ ; 'ಕ್ವೀನ್ಸ್ ರೋಡ್ ಹಾಲ್'ನಲ್ಲಿ ಸಮಾರಂಭ ಏರ್ಪಡಿಸಿದೆವು. ಭಾಗವಹಿಸಲಿದ್ದವರಿಗೆ ತಲಾ 2 ರೂ.ನಂತೆ ಶುಲ್ಕ. ನೂರಾರು ಭಾರತೀಯ ಸ್ತ್ರೀಪುರುಷರು ನೇರಿದ್ದರು. ಆಗ ಲಂಡನ್ನಿಗೆ ಬಂದಿದ್ದ ಮೋಹನದಾಸ ಗಾಂಧಿಯವರನ್ನು ಅಧ್ಯಕ್ಷತೆಗೆ ಕರೆದೆವು. ಅವರು ಅಂದು 'ಸ್ವಾಲೋ ಟೈಲ್ ಕೋಟ್', 'ಸ್ಟಿಫ್ ಫ್ರಂಟ್ ಷರ್ಟ್' ಧರಿಸಿ ಬಂದಿದ್ದರು. ವೈದ್ಯರು, ವಕೀಲರು, ಪ್ರಾಧ್ಯಾಪಕರು ಮುಂತಾದ ಉಚ್ಚಶಿಕ್ಷಿತ ತರುಣರದ್ದೇ ಓಡಾಟ ; ಸಮಾರಂಭದಿಂದ ಹಿಡಿದು ಭೋಜನ ಕೂಟಕ್ಕಾಗಿ ಅಡಿಗೆ ತಯಾರಿಸಿ ಬಡಿಸುವವರೆಗೆ ಎಲ್ಲ ಕೆಲಸ ಕಾರ್ಯಗಳನ್ನೂ ಅವರೇ ಮಾಡುತ್ತಿದ್ದರು. ಅದನ್ನು ಕಂಡು ಗಾಂಧಿಯವರಿಗೆ ಆನಂದವಾಯಿತು. 'ನನಗೆ ದೇಶಭಕ್ತ ಸಾವರಕರರ ಪಕ್ಕದಲ್ಲಿ ಕುಳಿತುಕೊಳ್ಳುವ ಸದವಕಾಶ ದೊರೆತದ್ದು ನಿಜಕ್ಕೂ ಅಭಿಮಾನದ ಸಂಗತಿ. ಅವರ ಸ್ವಾರ್ಥತ್ಯಾಗ ಮತ್ತು ದೇಶಭಕ್ತಿಯ ಮಧುರ ಫಲ ನಮ್ಮ ದೇಶಕ್ಕೆ ಚಿರಕಾಲ ದೊರೆಯುವುದರಲ್ಲಿ ಸಂದೇಹವಿಲ್ಲ' ಎಂದರು. ಪಾರಸಿಗಳು, ಮುಸಲ್ಮಾನರು ಎಲ್ಲರೂ ಈ ರಾಷ್ಟ್ರೀಯ ಹಬ್ಬದಲ್ಲಿ ಉತ್ಸಾಹದಿಂದ ಭಾಗವಹಿಸಿ

ದ್ದರು. ನನ್ನ ಭಾಷಣದ ನಂತರ ಗಾಂಧಿಯವರು, 'ಸ್ಫೂರ್ತಿದಾಯಕ ವಕ್ತೃತ್ವ ಎಂದರೆ ಏನೆಂಬುದರ ಅನುಭವ ಇಂದು ನಮಗಾಯಿತು' ಎಂಬ ಅಭಿಪ್ರಾಯ ವ್ಯಕ್ತಪಡಿಸಿದರು.

ಆ ವರ್ಷ ದೀಪಾವಳಿಯನ್ನೂ ನಾವು ವಿಜೃಂಭಣೆಯಿಂದ ಆಚರಿಸಿದೆವು. ಈ ಕಾರ್ಯಕ್ರಮಗಳಿಂದ ಲಂಡನ್ನಿನ ಭಾರತೀಯರ ಮನಃಸ್ಥೈರ್ಯ ಬಲಿಯಿತು.





# ಹವಿಸ್ಸು ಹದಿನೇಳು

ಕೈಲಿದ್ದ ಕಾಗದದ ಮೇಲೆ ಪುನಃ ಪುನಃ ಕಣ್ಣಾಡಿಸಿದೆ ನನ್ನ ಅತ್ತಿಗೆ ಬರೆದ ಪತ್ರ ! ಅದರಲ್ಲಿದ್ದುದು ಸಾವರಕರ್ ಮನೆತನದ ಮೇಲೆ ಎರಗಿದ ದಾರುಣ ವ್ಯಥೆಯ ಕಥೆ 1909 ನವೆಂಬರ್ 13ರಂದು ಅಹಮದಾಬಾದಿನಲ್ಲಿ ವೈಸರಾಯ್ ಮೆರವಣಿಗೆ ಮೇಲೆ ಕ್ರಾಂತಿಕಾರಿಗಳು ಬಾಂಬ್ ಪ್ರಯೋಗ ನಡೆಸಿದ್ದರು ಅದಕ್ಕಾಗಿ ಪೊಲೀಸರು ನನ್ನ ತಮ್ಮ ಬಾಳ (ನಾರಾಯಣ) ನನ್ನು ಬಂಧಿಸಿದ್ದರು ಆಗ ಅವನ ವಯಸ್ಸು ಇನ್ನೂ 19. ಅದೇ ಸುಮಾರಿಗೆ, ನವೆಂಬರ್ 21ರಂದು ನನ್ನ ಅಣ್ಣ ಬಾಬಾ (ಗಣೇಶ) ಸಾವರಕರ್‌ಗೆ ವಿಧಿಸಿದ್ದ ಕರಿನೀರಿನ ಶಿಕ್ಷೆಯನ್ನು ಉಚ್ಚ ನ್ಯಾಯಾಲಯ ಖಾಯಂಗೊಳಿಸಿತ್ತು ಅತ್ತಿಗೆಯ ಹೂವಿನಂಥ ಹೃದಯಕ್ಕೆ ಎರಡು ಅಲಗಿನ ಚೂರಿ ! ಆ ಸಂಕಟವನ್ನೆ ಅವಳು ಕಾಗದದಲ್ಲಿ ತೋಡಿ ಕೊಂಡಿದ್ದಳು ಇನ್ನೂ ಹೊರಗೇ ಉಳಿದಿದ್ದ ನಾನೊಬ್ಬನಾದರೂ ಬೇಗನೆ ಸ್ವದೇಶಕ್ಕೆ ಮರಳಬೇಕೆಂದು ಬಯಸಿದ್ದಳು ನಾನು ಸಂಸಾರದ ಕಷ್ಟ ಕೊನೆಗೊಳಿಸುವೆನೆಂದು ನಂಬಿದ್ದಳು

ಕೊನೆಯಲ್ಲ, ಇದು ಇನ್ನೂ ಆರಂಭ ಎಂದುಕೊಂಡೆ ಕಷ್ಟನಷ್ಟಗಳ ಉದ್ಘಾಟನೆ ಮಾತ್ರ ಆಗಿತ್ತು, ಅಷ್ಟೆ. ಅತ್ತಿಗೆಗೆ ಅದನ್ನು ಹೇಗೆ ತಿಳಿಸಲಿ ? ಯಾವ ಮಾತುಗಳಿಂದ ಅವಳಿಗೆ ಧೈರ್ಯ ಹೇಳಲಿ ? ಆ ಅಲ್ಪಶಿಕ್ಷಿತ, ಮುಗ್ಧ ಹಿಂದು ಗೃಹಿಣಿಗೆ ನನ್ನ ಮನಸ್ಸನ್ನು ಹೇಗೆ ಅರ್ಥ ಮಾಡಿಸಲಿ ? ಅತ್ತಿಗೆಗೆ ಸುವ್ವಿ ಹಾಡುಗಳೆಂದರೆ ಪಂಚಪ್ರಾಣ ನಾನೂ ಅದೇ ಧಾಟಿಯಲ್ಲೆ 'ಸಾಂತ್ವನ' ಬರೆದೆ

**ಜಯಾಸೀ ತುವಾ ಪ್ರತಿಪಾಳಿಲೇ । ಮಾತೇಚೇ ಸ್ಮರಣ ಹೋವೂ ನ ದಿಲೇ ।**

**ಶ್ರೀಮತಿ ವಹಿನೀ ವತ್ಸಲೇ । ಬಂಧು ತುಝಾ ತೋ ತುಜ ನಮೀ ॥. .**

*'ಈ ತಬ್ಬಲಿಯನ್ನು ತಾಯಿಯ ನೆನಪೇ ಆಗದಷ್ಟು ಅಕ್ಕರೆಯಿಂದ ಪಾಲಿಸಿ ಪೋಷಿಸಿದ ವಾತ್ಸಲ್ಯಮಯಿಯಾದ ಶ್ರೀಮತಿ ವಹಿನೀ ! ನಿನಗೆ ಇದೋ, ಸೋದರನ ಸಾಷ್ಟಾಂಗ ನಮಸ್ಕಾರಗಳು ನಿನ್ನ ಆಶೀರ್ವಾದ ಪತ್ರ ಕೈಸೇರಿತು , ಬರೆದ ಸಂಗತಿ ತಿಳಿಯಿತು ಮನಸ್ಸಿಗೆ ಆನಂದವಾಯಿತು ! ನಾನೇ ಧನ್ಯ ಅನ್ನಿಸಿತು ನಿಜಕ್ಕೂ ಧನ್ಯ, ನಮ್ಮ ವಂಶ, ನಿಶ್ಚಿತವಾಗಿಯೂ ಇದು ಈಶ್ವರನ ಅಂಶ ಶ್ರೀರಾಮಚಂದ್ರನ ಪುಣ್ಯಸೇವೆಯ ಸದ್ಭಾಗ್ಯ ನಮಗೊದಗಿದೆ*

*'ನೋಡು, ವಹಿನಿ ! ಜಗತ್ತಿನಲ್ಲಿ ಎಷ್ಟೋ ಹೂಗಳು ಅರಳುತ್ತವೆ ; ಅರಳಿದಲ್ಲೆ ಒಣಗಿ*


ಯಶೋದಾಬಾಯಿ (ಯೇಸೂ ವಹಿನಿ)

*ಉದುರಿಹೋಗುತ್ತವೆ. ಯಾರೂ ಅದನ್ನು ಎಣಿಸುವುದೂ ಇಲ್ಲ. ಗಣಿಸುವುದೂ ಇಲ್ಲ. ಆದರೆ, ಗಜೇಂದ್ರ ಮೋಕ್ಷದ ಕಥೆಯಲ್ಲಿ ಬರುವ ಆ ಗಜೇಂದ್ರನು ತನ್ನ ಮೋಕ್ಷಕ್ಕಾಗಿ, ಸೊಂಡಲಿನಿಂದ ಕಿತ್ತು ಶ್ರೀ ಹರಿಯ ಪಾದಗಳಿಗೆ ಅರ್ಪಿಸುವ ತಾವರೆಯೇ ಧನ್ಯವಲ್ಲವೆ ? ದೇವರ ಚರಣದಲ್ಲಿ ಅರ್ಪಣ ಗೊಳ್ಳುವ ಹೂವಿನ ಬಾಳೆ ಅಮರವಲ್ಲವೆ ? ಅತ್ತಿಗೆ, ಇಂದು ನಮ್ಮ ಭಾರತಮಾತೆಗೂ ಆ ಗಜೇಂದ್ರನ ಸ್ಥಿತಿಯೇ ಬಂದಿದೆ, ದಾಸ್ಯದ ಮೊಸಳೆ - ಹಿಡಿತದಿಂದ ಮುಕ್ತಿ ಪಡೆಯಲು ಅವಳು ದೇವರಿಗೆ ಮೊರೆಯಿಡುತ್ತಿದ್ದಾಳೆ. ಹಾಗೆಯೇ ನಮ್ಮ ವಂಶದ ಹೂದೋಟಕ್ಕೆ ಕೈಹಾಕಿ, ಹೊಸದಾಗಿ ಅರಳಿದ ಹೂ ಕಿತ್ತು ಶ್ರೀರಾಮಚರಣಕ್ಕೆ ಅರ್ಪಿಸುತ್ತಿದ್ದಾಳೆ; ಅರ್ಪಿಸಲಿ, ಬಿಡು. ನಿಜಕ್ಕೂ ಧನ್ಯ, ನಮ್ಮ ವಂಶ; ನಿಶ್ಚಿತವಾಗಿಯೂ ಇದು ಈಶ್ವರನ ಅಂಶ. ದೇವರ ಕಾರ್ಯಕ್ಕೆ ಹೂ ಒದಗಿಸುತ್ತಿರುವ ನಮ್ಮ ವಂಶದ ಹೂದೋಟವೇ ನಿಜಕ್ಕೂ ಧನ್ಯ.*

*'ಹೀಗೆಯೇ ಭಾರತಾಂಬೆ ಉಳಿದ ಹೂಗಳನ್ನೂ ಕೀಳಲಿ ; ಭಗವಂತನ ಪಾದಕ್ಕೆ ಅರ್ಪಿಸಲಿ ; ಈ ನಶ್ವರ ಜೀವನಕ್ಕೆ ಸ್ವಲ್ಪವಾದರೂ ಸಾರ್ಥಕತೆ ದೊರಕಲಿ. ದೇವರ ಕಾರ್ಯಕ್ಕಾಗಿ ಯಾವ ವಂಶಲತೆಯು ನಿರ್ವಂಶ ಆಗುವುದೋ ಅದೇ ನಿಜಕ್ಕೂ ಅಮರವಾಗುತ್ತದೆ. ಜನಹಿತದ ಸುಗಂಧ ಹರಡುವ ಆದರ ಕೀರ್ತಿ ದಿಗ್ದಿಗಂತಕ್ಕೆ ವ್ಯಾಪಿಸುತ್ತದೆ. ಅದಕ್ಕಾಗಿ ನಾನು ಪ್ರಾರ್ಥಿಸಿಕೊಳ್ಳುವುದಿಷ್ಟೆ - ಹೇ ಪ್ರಿಯ ಭಾರತಾಂಬೆ! ಇನ್ನೊಮ್ಮೆ ನಮ್ಮ ತೋಟಕ್ಕೆ ಬಾ ; ಅದರ ಎಲ್ಲ ಹೂಗಳನ್ನೂ ಕಿತ್ತು ಸಂಗ್ರಹಿಸು ; ನವರಾತ್ರಿಯ ಹಬ್ಬಕ್ಕಾಗಿ ಹಾರಗಳನ್ನು ಸಿದ್ಧಪಡಿಸು. ಒಂದು ಸಲ, ಒಂಬತ್ತನೆಯ ಹಾರ ಕಟ್ಟಿ ಅರ್ಪಿಸಿದೆಯೆಂದರೆ, ನವಮಿಯ ರಾತ್ರಿ ಕಳೆದು, ಕುಲದೇವತೆಯಾದ ಅರಿಭಯಂಕರಳಾದ ಮಹಾಕಾಳಿ ಪ್ರತ್ಯಕ್ಷಳಾಗಿ ಬರುತ್ತಾಳೆ; ವಿಜಯ ತರುತ್ತಾಳೆ; ವಿಜಯದಶಮಿ ಉದಿಸುತ್ತದೆ.*

*'ಓ ಅತ್ತಿಗೆ ! ನಿನ್ನಂಥ ಧೈರ್ಯವಂತೆ ಇನ್ನಿಲ್ಲ. ಓ, ವಹಿನಿ ! ನೀನೇ ನನ್ನ ಸ್ಫೂರ್ತಿವಾಹಿನಿ ! ಈ ಪುಣ್ಯಕಾರ್ಯದಲ್ಲಿ ಮೊದಲಿನಿಂದ ನೀನು ಸಹ ಸಹಭಾಗಿಯಾಗಿರುವೆ; ಶ್ರೇಷ್ಠವಾದ ಪವಿತ್ರ ಕಾರ್ಯಕ್ಕೆ ಕಂಕಣ ತೊಟ್ಟವರು ತಾವೂ ಅಷ್ಟೇ ಶ್ರೇಷ್ಠರೂ ಪವಿತ್ರರೂ ಸ್ಥೈರ್ಯವಂತರೂ ಆಗಿರಬೇಕು ತಾನೆ? ಒಂದು ಕಡೆ ನಮ್ಮ ಸಮಸ್ತ ಪ್ರಾಚೀನ ಋಷಿಮುನಿ ವೀರರೂ, ಇನ್ನೊಂದು ಕಡೆ ಮುಂಬರಲಿರುವ ಅನಂತ ಪೀಳಿಗೆಗಳೂ ನಿಂತು ನೋಡುತ್ತಿದ್ದಾರೆ. ಈ ಸಂದಿಗ್ಧ ಸಮಯದಲ್ಲಿ ಅವರೆಲ್ಲರೂ 'ಭಲೇ, ಭೇಷ್' ಎಂದು ಬೆನ್ನುತಟ್ಟುವ ರೀತಿಯಲ್ಲಿ ನಾವು ನಡೆದುಕೊಳ್ಳಬೇಕು.'*

ನನ್ನ ಈ ಪತ್ರಕ್ಕೆ ಅತ್ತಿಗೆಯೂ, ನನ್ನ ಅರ್ಧಾಂಗಿಯೂ ಒಟ್ಟಿಗೆ ಉತ್ತರ ಬರೆದರು. ಸ್ವಾತಂತ್ರ್ಯ ಹೋರಾಟದ ಪಾವನ ಕಾರ್ಯವನ್ನು ನಿಶ್ಚಿಂತೆಯಿಂದ ಮುಂದುವರಿಸಲು ಒತ್ತಾಸೆ ನೀಡಿದರು. ಸಾವರಕರ್ ವಂಶದ ದೇಶಭಕ್ತಿಯನ್ನು ತಣ್ಣಗೆ ಮಾಡಲು ಹೊರಟಿದ್ದ ಸರಕಾರವೇ ತಣ್ಣಗೆ ಕೂರಬೇಕಾಯಿತು.

ಹಿಂದುಸ್ಥಾನದಲ್ಲಿನ ಸಂಸ್ಥಾನಿಕ ರಾಜರನೇಕರು ಸ್ವಾತಂತ್ರ್ಯ ಚಳವಳಿಯನ್ನು ಹತ್ತಿಕ್ಕಲು ಬ್ರಿಟಿಷ ರೊಡನೆ ಕೈಜೋಡಿಸತೊಡಗಿದ್ದು ಇದೇ ಸಮಯದಲ್ಲೇ ಅವರಿಗೆ ಕ್ರಾಂತಿಕಾರಿಗಳ ನಿಲುವನ್ನು ಸ್ಪಷ್ಟ

ಪಡಿಸಲು, 'ಭಾರತೀಯ ಸಂಸ್ಥಾನಿಕರೇ, ಆರಿಸಿಕೊಳ್ಳಿ!' *(Choose, O, Indian Princes !)* ಎಂಬ ಪತ್ರಕ ತಯಾರಿಸಿದೆವು. ಅದರ ಸಹಸ್ರಾರು ಪ್ರತಿಗಳನ್ನು 'ಯೋಗ್ಯ ವಿತರಣೆ' ಗಾಗಿ ಭಾರತಕ್ಕೆ ರವಾನಿಸಿದೆವು.

*'ಕ್ರಾಂತಿಸಮರ ಮುಗಿದ ನಂತರ, ಭಾರತಮಾತೆ ಪೂರ್ಣ ಸ್ವತಂತ್ರಳಾದ ಮೇಲೆ, ಯಾವ ರೀತಿಯ ರಾಜ್ಯಘಟನೆ ಇರಬೇಕೆಂಬುದನ್ನು ಆಕೆಯೇ ನಿರ್ಧರಿಸುತ್ತಾಳೆ... ಆದರೆ ಮೊದಲು ದೇಶವು ಮುಕ್ತವಾಗಬೇಕು.*

*'ರಾಜರೇ! ಮರೆಯದಿರಿ - ನಿಮ್ಮ ಸತ್ಕಾರ್ಯ - ದುಷ್ಕಾರ್ಯಗಳ ಲೆಕ್ಕ ಸರಿಯಾಗಿ ತೀರಿಸುತ್ತೇವೆ; ಪುನರುಜ್ಜೀವಿತ ಜನಾಂಗದ ಕೈಲಿ ನೀವು ಮಾಡಿದ್ದನ್ನು ಉಣ್ಣಬೇಕಾಗುತ್ತದೆ. ಜನತೆಗೆ ದ್ರೋಹ ಬಗೆಯುವ, ತನ್ನ ಪೂರ್ವಜರನ್ನು ಅಲ್ಲಗಳೆಯುವ ಮತ್ತು ತಾಯಿಗೆ ಎದುರುನಿಂತು ಕುಲಕಳಂಕನಾದ ಪ್ರತಿಯೊಬ್ಬನೂ ಮಣ್ಣುಗೂಡುವುದು ನಿಶ್ಚಿತ; ಸುಟ್ಟು ಬೂದಿಯಾಗುವುದು ಖಂಡಿತ.... ನಮ್ಮ ಧೀರ ನಿರ್ಧಾರದ ಬಗ್ಗೆ ನಿಮಗೆ ಸಂದೇಹವೇನು ? ಹಾಗಿದ್ದರೆ, ಧಿಂಗ್ರಾನ ಹೆಸರನ್ನೊಮ್ಮೆ ಸ್ಮರಿಸಿಕೊಳ್ಳಿ. ಭಾರತದ ಸಂಸ್ಥಾನಿಕರೇ ಆ ಹುತಾತ್ಮನ ಮೇಲೆ ಆಣೆಯಿಟ್ಟು ಹೇಳುತ್ತಿದ್ದೇವೆ - ಈ ಬಗ್ಗೆ ಆಳವಾಗಿ, ಗಂಭೀರವಾಗಿ ಆಲೋಚಿಸಿ. ನಿಮಗೆ ಇಷ್ಟವಾದಂತೆ ಮಾಡಿ; ಮಾಡಿದ್ದನ್ನು ಅನುಭವಿಸಿ. ನೀವೀಗ ನವ ರಾಷ್ಟ್ರ ನಿರ್ಮಾಪಕರಲ್ಲಿ ಮೊಟ್ಟ ಮೊದಲನೆಯವರಾಗುತ್ತೀರೋ ಅಥವಾ ರಾಷ್ಟ್ರದ್ರೋಹಿಗಳಲ್ಲಿ ಕೊಟ್ಟ ಕೊನೆಯವರಾಗುತ್ತೀರೋ, ನೀವೇ ನಿರ್ಧರಿಸಿ....'*

1909ರ ನವೆಂಬರ್‌ನಲ್ಲಿ ಪ್ಯಾರಿಸ್ಸಿನಿಂದ 'ತಲವಾರ್' ಪತ್ರಿಕೆ ಪ್ರಾರಂಭವಾಯಿತು. ವೀರೇಂದ್ರನಾಥ ಚಟ್ಟೋಪಾಧ್ಯಾಯರು ಅದರ ಬೆನ್ನೆಲುಬು ಮೊದಲ ಸಂಚಿಕೆಯಲ್ಲೇ ಕ್ರಾಂತಿಕಾರಿಗಳ ಧೋರಣೆ ವಿವರಿಸುತ್ತಾ ನಾನೆಂದೆ : 'ಗುಪ್ತ ಸಂಸ್ಥೆಗಳ ಬಗೆಗೆ ಅಥವಾ ಅನಿರೀಕ್ಷಿತ ರಹಸ್ಯ ಹೋರಾಟದ ಬಗೆಗೆ ನಮಗೆ ಅಂಥ ಒಲವೇನೂ ಇಲ್ಲ. ಹಿಂಸಾಚಾರಿ ಶಾಸನವು ಸತ್ಯದ ಬಹಿರಂಗ ಆಚಾರ ವಿಚಾರಗಳನ್ನು ತಡೆಗಟ್ಟಿದಾಗ ಮಾತ್ರ ಹಿಂಸೆಯನ್ನು ಶಕ್ತಿಯಿಂದ ಎದುರಿಸಲು ಗುಪ್ತ ಸಂಸ್ಥೆಗಳೂ, ರಹಸ್ಯ ಸಮರ ತಂತ್ರವೂ ಅನಿವಾರ್ಯ, ಅತ್ಯಗತ್ಯ; ಹಾಗೂ ನ್ಯಾಯಬದ್ಧವೂ ಆಹುದು. ರಾಷ್ಟ್ರೀಯ ಹಾಗೂ ರಾಜಕೀಯ ವಿಕಾಸದ ಸ್ವಾಭಾವಿಕ ಉತ್ಕ್ರಾಂತಿಯನ್ನು ದುಷ್ಟಶಕ್ತಿಗಳು ಮೆಟ್ಟಿ ತುಳಿದಾಗಲೆಲ್ಲ, ಅದಕ್ಕೆ ಸಹಜ ಪ್ರತಿಕ್ರಿಯೆಯಾಗಿ ಕ್ರಾಂತಿ ಕಾಲಿಡಲೇಬೇಕು. ಆದ್ದರಿಂದ ನ್ಯಾಯ ಮತ್ತು ಸತ್ಯಗಳನ್ನು ಎತ್ತಿಹಿಡಿಯುವ ಪ್ರಭಾವಿ ಸಾಧನವಾಗಿ ಅದನ್ನು ಸ್ವಾಗತಿಸಲೇಬೇಕಾಗುತ್ತದೆ... ನೀವು ಶಸ್ತ್ರಬಲದಿಂದ ಆಳುತ್ತಿದ್ದೀರಿ. ಅದರಿಂದ, ಸಂವಿಧಾನವೇ ಇಲ್ಲದಿರುವ ಇಂದಿನ ಪರಿಸ್ಥಿತಿಯಲ್ಲಿ ಸಂವಿಧಾನಾತ್ಮಕ ಚಳವಳಿಯ ಮಾತನ್ನಾಡುವುದು ಸತ್ಯದ ವಿಡಂಬನೆಯೇ ಸೈ. ಆದರೆ, ಒಂದು ರಾಷ್ಟ್ರದ ಪರಿಪೂರ್ಣ, ನಿರಾತಂಕ ಏಳಿಗೆಗೆ ಅವಕಾಶ ನೀಡುವ ಸಂವಿಧಾನವಿದ್ದಾಗ, ಕ್ರಾಂತಿಯ ಮಾತನ್ನಾಡುವುದು ಹಾಸ್ಯಾಸ್ಪದ ಮಾತ್ರವಲ್ಲ, ಅದೊಂದು ಅಪರಾಧ. ನೀವು ಬಂದೂಕು ನಿರಾಕರಿಸಿರುವುದಕ್ಕಾಗಿ ನಾವು ಪಿಸ್ತೂಲು ಕೈಗೆತ್ತಿಕೊಳ್ಳುತ್ತೇವೆ. ನೀವು ನಮಗೆ ಬೆಳಕನ್ನು ನಿರಾಕರಿಸಿರುವ ಕಾರಣ, ನಾವು ಕತ್ತಲಲ್ಲಿ ಸೇರುತ್ತೇವೆ; ನಮ್ಮ ಮಾತೃಭೂಮಿಯನ್ನು ನೆಲಕ್ಕೆ ಜಗ್ಗುತ್ತಿರುವ ದಾಸ್ಯಶೃಂಖಲೆಯನ್ನು ಪುಡಿ ಪುಡಿ ಮಾಡಲು ದಾರಿ ಹುಡುಕುತ್ತೇವೆ.'

ಲಂಡನ್ನಿನ ತುಂಬ ಒಂದೇ ಕೂಗು - ಬ್ರಿಟಿಷ್ ಸಾಮ್ರಾಜ್ಯದಲ್ಲಿ ನಡೆಯುತ್ತಿರುವ ಗಲಭೆಗಳಿಗೆ, ಒಳಸಂಚುಗಳಿಗೆ ಕಾರಣ 'ಸಾವರಕರ್' ! ಅವನನ್ನು ಮೊದಲು ಹಿಡಿಯಬೇಕು, ಹೊಡೆಯಬೇಕು ! ದಿನಬೆಳಗಾದರೆ ನಿರುದ್ಯೋಗಿ ಇಂಗ್ಲಿಷರ ಗುಂಪು ನನ್ನನ್ನು ಹುಡುಕಿಕೊಂಡು ತಿರುಗುತ್ತಿತ್ತು. ನನಗಾದರೋ

ಬಿಡುವಿಲ್ಲದ ಕೆಲಸ ಕಾರ್ಯಗಳು; ದಣಿದು ದುರ್ಬಲವಾದ ದೇಹ! ದಿನದಿನಕ್ಕೂ ಜ್ವರ, ಕೆಮ್ಮು ಏರುತ್ತಾ ಹೋಯಿತು.

ಸ್ನೇಹಿತರೆಲ್ಲ ಆಲೋಚಿಸಿ, ವೇಲ್ಸ್‌ನಲ್ಲಿದ್ದ ಒಂದು ಶುಶ್ರೂಷಾಲಯಕ್ಕೆ ನನ್ನನ್ನು ಸಾಗಿಸಿದರು ಇಂಗ್ಲಿಷ್ ವೈದ್ಯರ ಪ್ರಾಮಾಣಿಕತೆಯ ಬಗ್ಗೆ ನಮ್ಮಲ್ಲಿ ಯಾರಿಗೂ ನಂಬಿಕೆಯಿಲ್ಲ. ಅದಕ್ಕಾಗಿ ಅಲ್ಲಿನ ಭಾರತೀಯ ವೈದ್ಯರೂ, ಶ್ಯಾಮಜಿಯವರ ಆಪ್ತರೂ ಆದ ಡಾ. ಸಿ ಮುತ್ತು ಅವರು ನನ್ನ ಔಷಧೋಪ ಚಾರಗಳ ಪೂರ್ಣ ಜವಾಬ್ದಾರಿ ವಹಿಸಿಕೊಂಡರು. ನನ್ನ ಅನಾರೋಗ್ಯ ತಿಳಿದು ಶ್ಯಾಮಜಿಯವರಿಗೆ ತುಂಬ ಕಳವಳವಾಗಿತ್ತು ಆತಂಕ ವ್ಯಕ್ತಪಡಿಸಿ ಪತ್ರ ಬರೆದರು. ಲೇಖನಿ ಹಿಡಿಯುವಷ್ಟು ಚೈತನ್ಯ ಬರುತ್ತಲೇ ನಾನು ಉತ್ತರ ಬರೆದೆ :

'ಪ್ರಿಯ ದೇಶಭಕ್ತ ಪಂಡಿತಜಿ, ನಿಮ್ಮ ದಯಾಪೂರ್ಣ ಸಹಾನುಭೂತಿ ಪತ್ರಕ್ಕಾಗಿ ಧನ್ಯವಾದಗಳು. ಕಾಕತಾಳೀಯ ನ್ಯಾಯದಂತೆ, ಲಂಡನ್ನಿನಿಂದ ಪುನರ್ನಿರ್ದೇಶಿತವಾಗಿ ಬಂದ ನಿಮ್ಮ ಕಾಗದದೊಡನೆ, ಇನ್ನು ಕೆಲವು ಬೇರೆ ರೀತಿಯ - ಆದರೂ ಅದೇ ಉದ್ದೇಶವನ್ನು ಕುರಿತ - ಪತ್ರಿಕಾ ಚೂರುಗಳು ಕೈಸೇರಿದವು! ಭಾರತ ಮುನ್ನಡೆಯುತ್ತಿದೆ; ಹಿಂದು ಜನಾಂಗ ಸತ್ತಿಲ್ಲ!

'....... ನಾನೀಗ ಉತ್ತಮಗೊಂಡಿರುವೆ .. ಇದೀಗ ವೈದ್ಯರನ್ನು ಒತ್ತಾಯಿಸಿ, ಎರಡು ಗಂಟೆ ಕೆಲಸ ಮಾಡಲು ಅನುಮತಿ ಪಡೆದು, ಸಿಖ್ ಇತಿಹಾಸ ಬರೆಯುತ್ತಿದ್ದೇನೆ; ಮುಂದಿನ ತಿಂಗಳು ಅದನ್ನು ಮುಗಿಸಿ ಹೊರಗೆ ಕಳಿಸಲಿರುವೆ '

ಡಿಸೆಂಬರ್ ಕೊನೆಯ ವಾರ. ಸಂಜೆಯ ಪತ್ರಿಕೆಯೊಂದನ್ನು ಹಿಡಿದು ಕಣ್ಣಾಡಿಸುತ್ತಿದ್ದೆ. ಒಂದೆಡೆ ದೃಷ್ಟಿ ಸ್ತಬ್ಧವಾಯಿತು

'ಗಣೇಶ ದಾಮೋದರ ಸಾವರಕರರಿಗಾದ ಕರಿನೀರಿನ ಶಿಕ್ಷೆಯ ಸೇಡು ತೀರಿಸಿಕೊಳ್ಳಲು ಅನಂತ ಕಾನ್ಹೇರೆ ಎಂಬ ಯುವಕ ನಾಸಿಕದ ಜಿಲ್ಲಾ ಕಲೆಕ್ಟರನನ್ನು ಗುಂಡಿಟ್ಟು ಕೊಂದ' ಎಂಬ ಸುದ್ದಿ!

ರಾತ್ರಿಯೆಲ್ಲ ನಿದ್ದೆ ಹತ್ತಲಿಲ್ಲ. ನಾನಿದ್ದ ಆರೋಗ್ಯ ಧಾಮದಲ್ಲೇ ಪ್ರಸಿದ್ಧ ಇಂಗ್ಲಿಷ್ ವಾರಪತ್ರಿಕೆ ಯೊಂದರ ಸಂಪಾದಕರಿದ್ದರು ಮರುದಿನ ಬೆಳಿಗ್ಗೆ ಅವರು ಇನ್ನೊಂದು ವಾರ್ತೆ ಕೈಲಿಟ್ಟರು - ಮಹಾರಾಷ್ಟ್ರದ ಊರೂರುಗಳಲ್ಲಿ ಅಭಿನವಭಾರತದ ಸದಸ್ಯರ ಬಂಧನ! ಎರಡು ದಿನಕ್ಕೆ ಹಿಂದೆ ತಾನೆ ಬಿಡುಗಡೆ ಪಡೆದಿದ್ದ ನಮ್ಮ ಬಾಳ ಸಹ ಅವರ ಪೈಕಿ ಒಬ್ಬ!

★ ★ ★

ನಾನು ಭಾರತ ಬಿಟ್ಟ ನಂತರ ಅಭಿನವಭಾರತದ ಅಲ್ಲಿನ ಹೊಣೆಗಾರಿಕೆ ಬಾಬಾನ ಹೆಗಲ ಮೇಲಿತ್ತು. ಪುಣೆ ಮತ್ತು ಮುಂಬೈಗಳಲ್ಲಿದ್ದ ಅನೇಕ ಸುಶಿಕ್ಷಿತ, ಕರ್ತೃತ್ವಶಾಲಿ ತರುಣರು ಸಂಸ್ಥೆಯ ಪ್ರಸಾರಕ್ಕೆ ಮುಂದಾಗಿದ್ದರು ಮಹಾರಾಷ್ಟ್ರದ ಗ್ರಾಮಗ್ರಾಮದಲ್ಲೂ ಶಾಖೆಗಳು ಬೆಳೆಯತೊಡಗಿದವು ಅಭಿನವ ಭಾರತದ ಸದಸ್ಯರು ಸರಕಾರಿ ನೌಕರಿಗೆ ಸೇರಬಹುದೇ ಎಂಬ ಪ್ರಶ್ನೆ ಎದ್ದಾಗ, ಅದರಿಂದ ಕ್ರಾಂತಿ ಚಟುವಟಿಕೆಗಳಿಗೆ ಬಾಧಕವಾಗುವುದರ ಬದಲು ಸರಕಾರದ ರಹಸ್ಯಗಳನ್ನು ಅರಿಯಲು ನೆರವಾಗುತ್ತದೆ ಎಂದು ತೀರ್ಮಾನವಾಗಿತ್ತು. ಅದರಂತೆ ಸರಕಾರಿ ನೌಕರಿಗೆ ಸೇರಿದ ಸದಸ್ಯರೂ ಅನೇಕರಿದ್ದರು. ಒಂದು ಕಡೆ ಬಹಿರಂಗವಾಗಿ ಸ್ವದೇಶಿ ಚಳವಳಿ, ಉತ್ಸವ, ಜಯಂತಿಗಳ ರೂಪದಲ್ಲಿ ಕಾರ್ಯ ಸಾಗಿದ್ದರೆ,

ಇನ್ನೊಂದೆಡೆ ಸೈನಿಕ ಶಿಕ್ಷಣ, ಮಾನಸಿಕ ತರಬೇತಿ, ಶಸ್ತ್ರಾಸ್ತ್ರ ಸಂಗ್ರಹವೂ ರಹಸ್ಯವಾಗಿ ನಾಗಿತ್ತು.

ಬಂಗಾಲದಲ್ಲಿ ಆ ವೇಳೆಗೆ 'ಅನುಶೀಲನ ಸಮಿತಿ' 'ಸ್ವಾಧೀನ ಭಾರತ' ಮುಂತಾದ ರಹಸ್ಯ ಕ್ರಾಂತಿ ಸಂಸ್ಥೆಗಳು ಕಾರ್ಯನಿರತವಾಗಿದ್ದವು. ನಮ್ಮ ಬಾಬಾ ಸದಾಶಿವರಾವ್ ಪಾಲೇಕರ್ ಎಂಬ ಆಪ್ತರನ್ನು ಅಲ್ಲಿಗೆ ಕಳುಹಿಸಿಕೊಟ್ಟ. ಅವರು ಅಲ್ಲಿನ ಕ್ರಾಂತಿಸಂಸ್ಥೆಗೆ ಸೇರಿ, ಅದರ ವ್ಯಾಪ್ತಿ, ಕಾರ್ಯಕ್ಷಮತೆ ಮತ್ತು ಕ್ರಾಂತಿಸಿದ್ಧತೆಯ ಬಗ್ಗೆ ವರದಿ ಮಾಡತೊಡಗಿದರು. 1906ರ ಕೊನೆಗೆ ಕಾಂಗ್ರೆಸ್ ಅಧಿವೇಶನ ಕಲ್ಕತ್ತಾದಲ್ಲಿ ನೇರಿತು. ಅದರ ನೆಪ ಮಾಡಿಕೊಂಡು ವಿಷ್ಣು ಮಹಾದೇವ ಭಟ್ (ಭಾವೂ), ನಾಸಿಕದ ಬಾಬಾಸಾಹೇಬ ಖರೆ ಬಂಗಾಲಕ್ಕೆ ಹೋದರು. 8- 10 ದಿನಗಳು ಅಲ್ಲಿದ್ದು, ಅಲ್ಲಿನ ಕ್ರಾಂತಿ ನಾಯಕರ ಪರಿಚಯ ಮಾಡಿಕೊಂಡರು. ಅವರ ಸಿದ್ಧತೆಗಳನ್ನು ವೀಕ್ಷಿಸಿಕೊಂಡು ಬಂದರು. 1907ರ ಕಾಂಗ್ರೆಸ್ ಅಧಿವೇಶನ ಸೂರತ್‌ನಲ್ಲಿ ನಡೆದಾಗ, ಬಂಗಾಲಿ ಕ್ರಾಂತಿನಾಯಕರ ತಂಡ ಅರವಿಂದ ಘೋಷರ ನೇತೃತ್ವದಲ್ಲಿ ಬಂದಿಳಿಯಿತು. ಅದೇ ಸಮಯಕ್ಕೆ ಮುಂಬೈ, ನಾಸಿಕ್, ಬರೋಡ ಇತ್ಯಾದಿ ಸ್ಥಾನಗಳಿಂದ ಅಭಿನವ ಭಾರತದ ಯುವಕರೂ ವಿ.ಮ. ಭಟ್, ಬಾಬಾ, ಬಾಬಾಸಾಹೇಬ ಖರೆ, ಬ್ಯಾರಿಸ್ಟರ್ ದೇಶಪಾಂಡೆ ಮುಂತಾದವರ ಮುಂದಾಳುತನದಲ್ಲಿ ಸೂರತ್ತಿಗೆ ಹೋದರು. ಇವರೆಲ್ಲರಿಗೂ ಅಧಿವೇಶನ ಕೇವಲ ಒಂದು ನೆವಮಾತ್ರ ಆಗಿತ್ತು. ಇವರು ಕ್ರಾಂತಿಕಾರಿಗಳ ಪ್ರತ್ಯೇಕ, ರಹಸ್ಯ ಸಭೆ ನಡೆಸಿದರು. ಆಗ, ಭಾರತದಾದ್ಯಂತ ಒಂದೇ ಸಮಯಕ್ಕೆ ಹೋರಾಟ ಆರಂಭಿಸಬೇಕೆಂದೂ ಅದಕ್ಕಾಗಿ ಸಾಕಷ್ಟು ತಯಾರಿ ಭರದಿಂದ ನಡೆಸಬೇಕೆಂದೂ ನಿರ್ಣಯ ಕೈಗೊಂಡರು. ಅಭಿನವಭಾರತದ ತರುಣರು ಅಧಿವೇಶನಕ್ಕೆ ಅನ್ಯಾನ್ಯ ಪ್ರಾಂತಗಳಿಂದ ಬಂದಿದ್ದ ಉಗ್ರಗಾಮಿ ತರುಣರನ್ನು ಸಂಧಿಸಿ, ಅವರ ಕಿವಿಯಲ್ಲೂ ಕ್ರಾಂತಿಮಂತ್ರ ಉಚ್ಚರಿಸಿದರು. ಮದರಾಸಿನ ಚಿದಂಬರಂ ಪಿಳ್ಳೆ ಮತ್ತು ಕೆಲವು ಪಂಜಾಬಿ ಯುವಕರು ಶಪಥಬದ್ಧ ಸದಸ್ಯರಾದುದು ಆಗಲೇ. ಪಿಳ್ಳೆಯವರು ವಾಪಸಾದ ನಂತರ ಮದರಾಸು ಪ್ರಾಂತದಲ್ಲಿ ಅಭಿನವಭಾರತದ ಶಾಖೆಗಳನ್ನು ಆರಂಭಿಸಿದರು.

ಲಂಡನ್ನಿನಿಂದ ನಾವು ಬಾಂಬ್ ತಯಾರಿಕೆಯ ವಿವರಗಳನ್ನು ಕಳುಹಿಸಿದ್ದೆವಷ್ಟೆ. ಅನಂತರ ಮುಂಬೈ ಬಳಿಯ ವಸಯಿಯಲ್ಲಿ ಒಂದು ಬೃಹತ್ ಪ್ರಮಾಣದ ರಹಸ್ಯ ಬಾಂಬ್ ಕಾರ್ಖಾನೆ ಪ್ರಾರಂಭವಾಯಿತು. ಅಲ್ಲಿ ಶಿಕ್ಷಣ ಪಡೆದ ಕ್ರಾಂತಿಕಾರರು ಪ್ರಾಂತದಾದ್ಯಂತವೂ ಅಜ್ಞಾತವಾಗಿ ಬಾಂಬ್ ಕಾರ್ಖಾನೆಗಳನ್ನು ಆರಂಭಿಸಿದರು. ಈ ಕೇಂದ್ರಗಳ ನಡುವೆ ಪರಸ್ಪರ ಪತ್ರ ವ್ಯವಹಾರಕ್ಕಾಗಿ ಒಂದು ಗುಪ್ತ 'ಅಂಕ ಲಿಪಿ' ಸಹ ಬಳಕೆಗೆ ಬಂತು. ಅದರ ಕ್ರಮ ಹೀಗೆ :

| | | | | | |
|---|---|---|---|---|---|
| A | B | C ........... | X | Y | Z |
| 11 | 13 | 15 | 95 | 97 | 99 |
| | ? | ! | | | |
| 22 | 44 | 66 | ಇತ್ಯಾದಿ. | | |

ಅಕ್ಷರಗಳಿಗೆ ಸಮಸಂಖ್ಯೆ ಬಳಸುತ್ತಿರಲಿಲ್ಲ ಶಬ್ದಗಳನ್ನು ಪ್ರತ್ಯೇಕಿಸಲು ನಡುನಡುವೆ + - X ÷ ಸಂಜ್ಞೆಗಳನ್ನು ಧಾರಾಳವಾಗಿ ಉಪಯೋಗಿಸುತ್ತಿದ್ದರು. ಇಂಗ್ಲಿಷ್‌ನ 'O' ಅಕ್ಷರವನ್ನು ಅದು ಇರುವಂತೆಯೇ ಬಳಸಲಾಗುತ್ತಿತ್ತು. ಅನೇಕ ವೇಳೆ ಮರಾಠಿ ಶಬ್ದಗಳನ್ನೆ ರೋಮನ್ ಲಿಪಿಗೆ ಪರಿವರ್ತಿಸಿ, ಅನಂತರ 'ಅಂಕಲಿಪಿ'ಗೆ ರೂಪಾಂತರಿಸಲಾಗುತ್ತಿತ್ತು ಅಂಕಿಗಳನ್ನು ಸೀಸದ ಕಡ್ಡಿಯಿಂದ ಕಾಗದದ ಒಂದು

ಬದಿಯಲ್ಲಿ ಬರೆಯುವುದು ; ಇನ್ನೊಂದು ಬದಿಯಲ್ಲಿ ಶಾಯಿನಿಂದ ಸರಳವಾದ ಯೋಗಕ್ಷೇಮದ ಪತ್ರ ಬರೆಯುವುದು ! ಆದರಿಂದ, ಯಾವುದೇ ಉಪಯೋಗಿಸಿದ ಹಾಳೆಯ ಕಾಗದದಲ್ಲಿ ಮಸಿಯಿಂದ ಪತ್ರ ಬರೆದಿದ್ದಾರೆ ಎಂದು ಭಾಸವಾಗುತ್ತಿತ್ತು. ವಾಕ್ಯಗಳನ್ನು ಬರೆಯುವಾಗ, ಅಂಕಿಗಳು ಯಾವ ವಿಷಯಕ್ಕೆ ಸಂಬಂಧಪಟ್ಟಿವೆ ಎಂಬುದನ್ನು ಸೂಚಿಸಲು ಕೆಲವು ಸಂಕೇತಗಳಿದ್ದವು. 'ಚಿ। ನಾರಾಯಣ ಕೃಶವಾಗ ತೊಡಗಿದ್ದಾನೆ' (ಎಂದರೆ, ನೈಟ್ರಿಕ್ ಆಸಿಡ್ ಮುಗಿಯುತ್ತ ಬಂದಿದೆ) ; 'ಚಿ। ಸದಾಶಿವನ ಆರೋಗ್ಯ ಚೆನ್ನಾಗಿದೆ, ಅವನ ಚಿಂತೆ ಬೇಡ' (ಎಂದರೆ, ಸಲ್ಫ್ಯೂರಿಕ್ ಆಸಿಡ್ ಬೇಕಾದಷ್ಟು ಇದೆ) ; 'ಸೂರತ್ ಮಿಠಾಯಿ ಪಾರ್ಸಲ್‌ಗೆ ಹೇಳಿಕಳಿಸಿದ್ದೇನೆ ; ನಾಲ್ಕಾರು ದಿನಗಳಲ್ಲಿ ಬರುತ್ತದೆ ; ಆಗ ನಿನಗೂ ಪಾಲು ಸಿಕ್ಕುತ್ತದೆ' (ಎಂದರೆ, ಪಿಕ್ರಿಕ್ ಆಸಿಡ್ ನಾಲ್ಕಾರು ದಿನಗಳಲ್ಲಿ ಸಿದ್ಧವಾಗುತ್ತದೆ ; ಸಮಯಕ್ಕೆ ಸರಿಯಾಗಿ ಬಂದು ತೆಗೆದುಕೊಂಡುಹೋಗುವುದು) ಇತ್ಯಾದಿ !

ಬಾಂಬ್ ತಯಾರಿಕೆ ನಿರ್ವಿಘ್ನವಾಗಿ ಸಾಗಿದ್ದಂತೆ, ಲಂಡನ್ ಮತ್ತು ಪ್ಯಾರಿಸ್ಸಿನಿಂದ ಪಿಸ್ತೂಲು ಮತ್ತು ಕಾಡತೂಸುಗಳನ್ನು ನಾವು ಕಳುಹಿಸಲಾರಂಭಿಸಿದ್ದೆವು. ಅದು ನಾನಾ ರೂಪಗಳಲ್ಲಿ, ನಾನಾ ರೀತಿಗಳಲ್ಲಿ ಕ್ರಾಂತಿಕಾರಿಗಳ ಕೈಸೇರುತ್ತಿತ್ತು. ಕ್ರಾಂತಿ ಚಟುವಟಿಕೆಗಳ ಕೇಂದ್ರಸ್ಥಾನವಾಗಿದ್ದ ನಾಸಿಕದ ಕಡೆಗೆ ಸರಕಾರದ ದೃಷ್ಟಿ ಹರಿದದ್ದು ಇದೇ ಸಮಯದಲ್ಲೇ. 1907ರ ಡಿಸೆಂಬರಿನಲ್ಲಿ ಜಾಕ್ಸನ್ ಅಲ್ಲಿಗೆ ಕಲೆಕ್ಟರ್ ಆಗಿ ಬಂದ. ಮರಾಠಿ ಮತ್ತು ಸಂಸ್ಕೃತ ಬಲ್ಲ ಅವನನ್ನು ವಿನೋದಕ್ಕಾಗಿ 'ಪಂಡಿತ ಜಾಕ್ಸನ್' ಎನ್ನುತ್ತಿದ್ದುದುಂಟು. ಅವನ ಮಾತು ಜೇನಿಗಿಂತ ಸವಿ ! 'ಈ ಗೋದಾವರಿಯ ಸೌಂದರ್ಯ ಹಾಗೂ ಇಲ್ಲಿನ ಸಂಸ್ಕೃತ ವಿದ್ವತ್ತೆಂದರೆ ನನಗೆ ಪಂಚಪ್ರಾಣ ; ನಾನೂ ಪೂರ್ವ ಜನ್ಮದಲ್ಲಿ ನಾಸಿಕ ಕ್ಷೇತ್ರದಲ್ಲೆ ಒಬ್ಬ ಘನ ವಿದ್ವಾಂಸನಾಗಿದ್ದೆ ಎಂದು ತೋರುತ್ತದೆ' ಎನ್ನುತ್ತಿದ್ದ. ಆದರೆ ಕೃತಿಯಲ್ಲಿ ಮಾತ್ರ ಅತಿ ಕ್ರೂರಿ ; ಪ್ರಜಾಪೀಡಕ. ಅವನು ಕ್ರಾಂತಿಕಾರಿಗಳನ್ನು ನಿರ್ಮೂಲಗೊಳಿಸಿ, ಜನರನ್ನು ರಾಜನಿಷ್ಠರನ್ನಾಗಿ ಮಾಡಬಲ್ಲನೆಂದು ಮುಂಬೈ ಸರಕಾರಕ್ಕೆ ಪೂರ್ತಿ ನಂಬಿಕೆ.

ಜಾಕ್ಸನ್ ಬರುತ್ತಲೇ ಅಭಿನವಭಾರತದ ಒಬ್ಬೊಬ್ಬ ಸದಸ್ಯರ ಮೇಲೂ ಬೇಹುಗಾರಿಕೆ ಶುರುವಾಯಿತು. ಹಿರಿಯ ನಾಯಕರಿಂದ ಹಿಡಿದು ನಾಸಿಕದ ಹೈಸ್ಕೂಲು ವಿದ್ಯಾರ್ಥಿಗಳ ವರೆಗೆ ಯಾರಿಗೂ ಪೊಲೀಸರ ಕಾಟ ತಪ್ಪಲಿಲ್ಲ. ಅವನ ಕಾರುಬಾರಿನಲ್ಲೇ ಬಾಬಾ ಸಾವರಕರ್ ಅಂದಮಾನಿನ ದಾರಿ ಹಿಡಿಯಬೇಕಾಯಿತು. ಗಣ್ಯ ವಕೀಲರೂ ದೇಶಭಕ್ತರೂ ಆದ ಬಾಬಾಸಾಹೇಬ ಖರೆಯವರು ಅಮಾನುಷ ಚಿತ್ರಹಿಂಸೆಗೊಳಗಾದರು. ಜನಸಾಮಾನ್ಯರ ಸ್ಥಿತಿಯಂತೂ ನಾಯಿಪಾಡಾಯಿತು. ಹೀಗೆ ಎರಡು ವರ್ಷ ದೌರ್ಜನ್ಯ ನಡೆಸಿದ ನಂತರ, ಜಾಕ್ಸನ್‌ಗೆ ತಾನು ಬಂದ ಕಾರ್ಯ ಫಲಿಸಿತೆಂಬ ಸಮಾಧಾನ ಆಯಿತು. ತನ್ನಷ್ಟು ಸವಿಮಾತಾಡುವ ಜನಪ್ರಿಯ ವ್ಯಕ್ತಿ ಇನ್ನೊಬ್ಬನಿಲ್ಲ ಅನ್ನಿಸಿತು. ಮರಣಕ್ಕೆ ಕೆಲವು ಗಂಟೆಗಳ ಮೊದಲು ಸ್ನೇಹಿತರೊಬ್ಬರಿಗೆ ಹೇಳಿದನಂತೆ : 'ನಾನು ಬಂದಾಗ ಜನರ ಹಾಗೂ ಸರಕಾರದ ಮನಸ್ಸು ಪರಸ್ಪರ ಕಲುಷಿತವಾಗಿತ್ತು. ಈ ಇಬ್ಬರ ಮನಸ್ಸನ್ನೂ ತೊಳೆದಿದ್ದೇನೆ.'

ಅನಂತ ಲಕ್ಷ್ಮಣ ಕಾನ್ಹೇರೆ ಔರಂಗಾಬಾದಿನಲ್ಲಿ ಚಿತ್ರಕಲಾ ಶಾಲೆಯ ವಿದ್ಯಾರ್ಥಿ. ವಯಸ್ಸು ಸುಮಾರು 18. ಅಭಿನವಭಾರತದ ಶಪಥಬದ್ಧ ಸದಸ್ಯ. ನಾಸಿಕದಲ್ಲಿ ದೇಶಭಕ್ತರ ಮೇಲೆ ನಡೆಯುತ್ತಿದ್ದ ಜುಲುಮು ಹಾಗೂ ಹಿಂಸಾಚಾರ ಕೇಳಿ ಅವನ ರಕ್ತ ಕುದಿಯತೊಡಗಿತು. 1909ರ ಸೆಪ್ಟೆಂಬರಿನಲ್ಲಿ ನಾಸಿಕಕ್ಕೆ ಬಂದು ಗೆಳೆಯರನ್ನು ಭೇಟಿಸಿದ : 'ಬಾಬಾರಾವ್ ಸಾವರಕರ್ ಸ್ವದೇಶಕ್ಕಾಗಿ ಮನೆಮಠ, ಹೆಂಡತಿ ಮಕ್ಕಳು

ಎಲ್ಲವನ್ನೂ ತ್ಯಾಗ ಮಾಡಿದರು. ಆದರೆ ಅವರಿಗಾದ ಶಿಕ್ಷೆಯ ಸೇಡು ತೀರಿಸಿಕೊಳ್ಳಲು ನಿಮ್ಮಲ್ಲಿ ಒಬ್ಬರಿಗೂ ಧೈರ್ಯವಿಲ್ಲ. ನಾಚಿಕೆಗೇಡು ! ನೀವು ಸಿದ್ಧರಿಲ್ಲದಿದ್ದರೆ, ನಾನು ತಯಾರಿದ್ದೇನೆ.'

ತೆಳ್ಳಗೆ ಬೆಳ್ಳಗೆ ಬಣ್ಣದ ಬೊಂಬೆಯಂತಿದ್ದ ಅವನ ಮಾತು ಕೇಳಿ ಅಲ್ಲಿದ್ದವರೆಲ್ಲ ಮುಸಿಮುಸಿ ನಕ್ಕರು ಅನಂತ ಕಾನ್ಹೇರೆ ಅವರಿಗೆ ತನ್ನ ಸ್ಥೈರ್ಯದ ಪರಿಚಯ ಮಾಡಿಕೊಡಬಯಸಿದ. ಪಕ್ಕದಲ್ಲಿದ್ದ ದೀಪದ ಕಾದ ಚಿಮಣಿಗೆ ಕೈಚಾಚಿ, ಅದನ್ನು ಭದ್ರವಾಗಿ ಹಿಡಿದುಕೊಂಡ. ಚರ್ಮ ಸೀದು ರಕ್ತದ ಹನಿಗಳು ಕೆಳಗಿಳಿಯತೊಡಗಿದಾಗಲೂ ಅವನು ಕೈತೆಗೆಯಲಿಲ್ಲ. ಗೆಳೆಯರು ನಗು ನಿಲ್ಲಿಸಿದರು. ಅವನ ಪ್ರಯತ್ನಕ್ಕೆ ಸಹಕಾರದ ಭರವಸೆ ನೀಡಿದರು. ಅನಂತರವೇ ಅವನು ಕೈ ತೆಗೆದದ್ದು.

1909 ಡಿಸೆಂಬರ್ 21 ರಾತ್ರಿ, ನಾಸಿಕದ ವಿಜಯಾನಂದ ರಂಗಮಂದಿರ ತುಂಬಿತ್ತು. ಪರಸ್ಥಳಕ್ಕೆ ವರ್ಗವಾಗಿ ಹೋಗಲಿದ್ದ ಜಾಕ್ಸನ್‌ಗೆ ಅಂದು ಬೀಳ್ಕೊಡುಗೆಯ ಸಮಾರಂಭ. ಅವನ ಪ್ರೀತ್ಯರ್ಥವಾಗಿ



ಕಿರ್ಲೋಸ್ಕರ್ ನಾಟಕ ಮಂಡಲಿಯಿಂದ 'ಬಾಲ ಗಂಧರ್ವ' ರು ಪಾತ್ರ ವಹಿಸಲಿದ್ದ 'ಶಾರದಾ' ನಾಟಕದ ಅಭಿನಯ. ಸ್ವಲ್ಪ ತಡವಾಗಿ ಬಂದ ಜಾಕ್ಸನ್ ತನಗಾಗಿ ಕಾದಿರಿಸಿದ್ದ ಆಸನದಲ್ಲಿ ಕುಳಿತುಕೊಳ್ಳುತ್ತಿದ್ದಂತೆಯೇ ಬೆನ್ನಿಗೊಂದು ಗುಂಡು ಬಿತ್ತು! ಕಾನ್ಹೇರೆ ಹಿಂದಿನಿಂದ ಕೂಡಲೆ ಹುಲಿಯಂತೆ ಹಾರಿ ಮುಂದೆ ಬಂದ. ಭಡಭಡನೆ ಇನ್ನೂ ಆರು ಗುಂಡು ಹೊಡೆದು ಜಾಕ್ಸನ್ನನನ್ನು ನೆಲಕ್ಕೆ ಕೆಡವಿದ. ಅಕ್ಕಪಕ್ಕದಲ್ಲಿದ್ದವರು ಹಿಡಿದುಕೊಂಡೊಡನೆ ಶಾಂತವಾಗಿ ನಿಂತ. ಅಲ್ಲಿದ್ದ ವೈದ್ಯರೊಬ್ಬರು ಜಾಕ್ಸನ್ನನ ನಾಡಿಗಾಗಿ ಹುಡುಕಿದರು. ಆದರೆ ಎಲ್ಲಿಯೋ ತಪ್ಪಿಸಿಕೊಂಡು ಹೋಗಿತ್ತು! ಅವನ ಜೀವನನಾಟಕದ ಕೊನೆಯ ಅಂಕ ಅಲ್ಲಿಗೆ ಮುಗಿಯಿತು. ಭಯಭೀತರಾಗಿದ್ದರೂ, ಜನತೆಗೆ ದುಡ್ಡು ಕೊಟ್ಟುದಕ್ಕೆ ಸಮಾಧಾನ - ಆ ನಾಟಕದ ಬದಲು ಈ ನಾಟಕ! ನಿಜಕ್ಕೂ ಬೀಳ್ಕೊಡುಗೆಯ ಸಮಾರಂಭ!

ಕಾನ್ಹೇರೆ ತನ್ನ ಕಾರ್ಯಸಾಧನೆಗಾಗಿ ಬಳಸಿದ್ದು ಬ್ರೌನಿಂಗ್ ಪಿಸ್ತೂಲು ; ನಾನು ಚತುರ್ಭುಜ ಅಮೀನನೊಡನೆ ಕಳುಹಿಸಿದ್ದವುಗಳ ಪೈಕಿ ಒಂದು. ಆದರಿಂದಾಗಿ ಲಂಡನ್ನಿನ ಕ್ರಾಂತಿಕಾರಿಗಳ ಕಡೆ, ಅದರಲ್ಲೂ ಅವರ ಮುಂದಾಳಾಗಿದ್ದ ನನ್ನ ಕಡೆ, ಎಲ್ಲರೂ ಬೆರಳೆತ್ತಿ ತೋರಿದರು. ಒಳಸಂಚುಗಳ ಮೂಲ 'ಇಲ್ಲಿದೆ' ಎಂದರು. ಪುನಃ ಧಿಂಗ್ರಾ ಪ್ರಕರಣದ ನಂತರ ನಡೆದ ಘಟನೆಗಳ ಪುನರಾವರ್ತನೆ! ಸಾವರಕರ್ ವಿರುದ್ಧ ಇಡೀ ಇಂಗ್ಲೆಂಡಿನ ವಾತಾವರಣವೇ ಸಂಚು ಹೂಡಿದಂತಿತ್ತು. ಚಳಿಗಾಲ ಏರಿದಂತೆಲ್ಲಾ ನನ್ನ ಆರೋಗ್ಯ ಇಳಿಯತೊಡಗಿತು. ಚಳಿ ಕಡಿಮೆ ಇರುವ ಫ್ರಾನ್ಸಿಗೆ ಸ್ಥಳಾಂತರಿಸುವಂತೆ ವೈದ್ಯರು ಸಲಹೆ ನೀಡಿದರು. ಆದರೆ ನಾನು ಒಪ್ಪದಾದೆ. ಕಟ್ಟಕಡೆಗೆ ನಾನಿದ್ದ ವೇಲ್ಸ್‌ನಲ್ಲಿ ಲಂಡನ್ನಿನ ಅಭಿನವಭಾರತದ. ಕಾರ್ಯಕಾರಿ ಸಮಿತಿಯ ವಿಶೇಷ ಸಭೆ ಸೇರಿತು. ಆರೋಗ್ಯ ಹಾಗೂ ಸುರಕ್ಷತೆಯ ದೃಷ್ಟಿಯಿಂದ ನಾನು ಇಂಗ್ಲೆಂಡ್ ಬಿಡಬೇಕೆಂದು ನಿರ್ಣಯಿಸಿತು. ಅದರಂತೆ ನನಗೆ ಅಧಿಕೃತ ಸೂಚನೆಯೂ ಬಂತು! ಸಂಸ್ಥೆಯ ಶಿಸ್ತಿಗೆ ತಲೆಬಾಗಿದೆ.

1910ರ ಜನವರಿಯಲ್ಲಿ ವೇಲ್ಸ್‌ನಿಂದ ಲಂಡನ್ನಿಗೆ ಬಂದ ನೆನಪು ನಿಚ್ಚಳವಾಗಿದೆ. ಸ್ನೇಹಿತರು, ಸಹಕಾರಿಗಳು ಸೇರಿದ್ದರು. ಹಾರ್ದಿಕ ಸ್ವಾಗತವಿತ್ತರು. ಬೀಳ್ಕೊಡುಗೆಯ ಸಭೆ ನಡೆದು ಹೊಗಳಿಕೆಯ ಭಾಷಣಗಳಾದವು. ಎಲ್ಲರೂ ತೆರಳಿದ ನಂತರ ಫ್ರಾನ್ಸಿಗೆ ಹೊರಡಲು ಸಾಮಾನುಗಳನ್ನು ಕಟ್ಟಿದೆ. ನನಗೆ ಸಹಾಯ ನೀಡುತ್ತಿದ್ದ ಗ್ಯಾನಚಂದ ವರ್ಮರಿಗೆ ಹೇಳಿದೆ: 'ನನಗೀಗ ಅನ್ನ ಮತ್ತು ಬೇಸನ್ ಲಾಡು ಬೇಕು; ಹತ್ತಿರದಲ್ಲಿರುವ ಭಾರತೀಯ ಹೋಟೆಲಿನದೇ ಆಗಬೇಕು. ಅಲ್ಲಿಗೆ ಹೋಗೋಣ, ನಡೆಯಿರಿ.'

'ನಿಮಗೆ ಇನ್ನೂ ಓಡಾಡುವಷ್ಟು ಶಕ್ತಿಯಿಲ್ಲ. ನಾನೇ ಹೋಗಿ ಮಾಡಿಸಿಕೊಂಡು ತರುತ್ತೇನೆ' ಎಂದು ಹೇಳಿ ವರ್ಮಾ ಹೊರಟರು. ಭಾರತದಿಂದ ಬಂದ ಹಳೆಯ ಅಕ್ಕಿಯಲ್ಲಿ ಅನ್ನ ಹಾಗೂ ತುಪ್ಪದಲ್ಲಿ ಬೇಸನ್ ಲಾಡು ಮಾಡಿಸಿಕೊಂಡು ಬಂದರು. ನಾನು ಊಟ ಮುಗಿಸಿದೆ. ಇಂಗ್ಲೆಂಡಿನಲ್ಲಿ ನಾನು ಸ್ವತಂತ್ರವಾಗಿದ್ದ ಕೊನೆಯ ದಿನ ಅದು. ವರ್ಮಾ ಮತ್ತು ಇನ್ನಿಬ್ಬರು ಮಿತ್ರರು ವಿಕ್ಟೋರಿಯಾ ನಿಲ್ದಾಣದವರೆಗೆ ಜತೆಗೆ ಬಂದರು. ನಾನು ರೈಲು ಹತ್ತಿದೆ.

ಪ್ಯಾರಿಸ್ಸಿನಲ್ಲಿ ಶ್ರೀಮತಿ ಕಾಮಾ ಅವರ ಮನೆಯಲ್ಲಿ ನನ್ನ ವಸತಿ ಏರ್ಪಟ್ಟಿತು. ಶ್ಯಾಮಜಿ, ರಾಣಾ, ಹರದಯಾಳ್, ವೀರೇಂದ್ರನಾಥ ಮುಂತಾದ ಆಪ್ತರು ನೆರವಿಗೆ ನಿಂತಿದ್ದರು. 'ವಂದೇ ಮಾತರಂ' ಮತ್ತು 'ತಲವಾರ್' ಪತ್ರಿಕೆಗಳಿಗೆ ಲೇಖನ ಬರೆಯಲು ಬಿಡುವು ಸಿಕ್ಕುತ್ತಿತ್ತು. ಅಲ್ಲದೆ, ಅಲ್ಲಿನ ಭಾರತೀಯರ ಸಂಪರ್ಕ, ಸಂಘಟನೆ, ಭಾರತಕ್ಕೆ ಶಸ್ತ್ರಾಸ್ತ್ರಗಳ ರವಾನೆ ಇತ್ಯಾದಿ ಕೆಲಸಗಳೂ ನಿರಂತರವಾಗಿ ಸಾಗಿದವು.

ಅಭಿನವಭಾರತದ ನಾಸಿಕ್ ತಂಡ ಸುವ್ಯವಸ್ಥಿತವಾಗಿ ಕಾರ್ಯ ಮಾಡುತ್ತಿರಲಿಲ್ಲ. ಹಾಗಿದ್ದಿದ್ದರೆ, ಧಿಂಗ್ರಾ ಪ್ರಕರಣದಲ್ಲಿ ನಡೆದಂತೆ, ಕಾನ್ಹೇರೆಯ ಬಂಧನದ ಜತೆಗೇ ಆ ಅಧ್ಯಾಯ ಕೊನೆಗೊಳ್ಳುತ್ತಿತ್ತು. ಆದರೆ ಸಾಕಷ್ಟು ಮುಂಜಾಗರೂಕತೆ ವಹಿಸಿದ್ದುದರಿಂದ ಮಹಾರಾಷ್ಟ್ರದಾದ್ಯಂತ ಸಂಸ್ಥೆಯ ಶಾಖೆಗಳ ಮೇಲೆ ಪೊಲೀಸರ ಹಲ್ಲೆ ಶುರುವಾಯಿತು. ರಹಸ್ಯಗಳನ್ನು ಹೊರತೆಗೆಯಲು ಸದಸ್ಯರನ್ನು ಅಮಾನುಷ ಚಿತ್ರಹಿಂಸೆಗೆ ಗುರಿಪಡಿಸಲಾಯಿತು. ದಿನ ಕಳೆದಂತೆಲ್ಲ ಬಂಧನ ಹಾಗೂ ಝಡತಿಗಳು ಹೆಚ್ಚಿದವು ಒಂದಕ್ಕಿಂತ ಒಂದು ಭೀಷಣ ಸುದ್ದಿಗಳು ಬರತೊಡಗಿದವು.

ವೈದ್ಯರ ಸಲಹೆಯ ಮೇರೆಗೆ ದಿನವೂ ಬೆಳಿಗ್ಗೆ ನಾನು ಅಡ್ಡಾಡಲು ಹೋಗುತ್ತಿದ್ದೆ. ಪ್ಯಾರಿಸ್ ನಗರದ ಸೊಬಗಿನ ಹೂಬನಗಳು, ತಿಳಿಗೊಳಗಳು, ನೀರಿನಲ್ಲಿ ತೇಲುವ ಹಂಸಗಳು, ಹಸಿರು ಹುಲ್ಲಿನ ಹಾಸು, ಬೆಳಗಿನ ಸುಗಂಧಿತ ಮಂದಮಾರುತ - ಇನ್ನಾವುದೇ ಸಂದರ್ಭದಲ್ಲಾದರೂ ಮನಸ್ಸಿಗೆ ತೃಪ್ತಿ ನೀಡಲಿತ್ತು. ಆದರೆ ಬಂಧುಮಿತ್ರರ ಬಂಧನದಿಂದ ಕ್ಷೋಭೆಗೊಂಡಿದ್ದ ಮನಸ್ಸಿಗೆ ಅದಾವುದೂ ರುಚಿಸದು. ಒಂದು ದಿನ ಬೆಳಗಿನ ಪತ್ರಿಕೆಯಲ್ಲಿ ಸುದ್ದಿ - ಜಾಕ್ಸನ್ ಕೊಲೆ ಪ್ರಕರಣದಲ್ಲಿ ಅನಂತ ಕಾನ್ಹೇರೆ, ಕೃಷ್ಣಾಜಿ ಕರ್ವೆ ಮತ್ತು ವಿನಾಯಕರಾವ್ ದೇಶಪಾಂಡೆಗೆ ಮರಣದಂಡನೆ! ನನ್ನ ತಮ್ಮ ಬಾಳನ ಹೆಸರೂ ಇದೆಯೇನೋ ಎಂದು ವಿಚಿತ್ರ ಆಸೆಯಿಂದ ಇನ್ನೊಮ್ಮೆ ಪಟ್ಟಿ ನೋಡಿದೆ, ಆದರೆ ಇರಲಿಲ್ಲ.

ಭಾರತದಲ್ಲಿ ನನ್ನ ಆಪ್ತ ಸಹಕಾರಿಗಳು ನನ್ನ ಮಾತು ಕೇಳಿಕೊಂಡು ಸಕಲ ವ್ಯಾಮೋಹಗಳನ್ನೂ ಬದಿಗಿಟ್ಟಿದ್ದರು. ಜೈಲುಗಳಲ್ಲಿ ಕೊಳೆಯುತ್ತಾ ಬಲಿದಾನದ ಅಂಚಿನಲ್ಲಿ ನಿಂತಿದ್ದರು. ನಾನಿಲ್ಲಿ ಪ್ಯಾರಿಸ್ಸಿನ ಉದ್ಯಾನವನಗಳಲ್ಲಿ ಹಾಯಾಗಿ ತಿರುಗಾಡಿಕೊಂಡಿರುವುದು ಯಾವ ನ್ಯಾಯ ? ಸ್ವದೇಶಕ್ಕೆ ವಾಪಸು ಹೋಗಬೇಕು ; ಕೊನೆಯ ಪಕ್ಷ ಮುಂದಿನ ಅನಾಹುತಗಳನ್ನಾದರೂ ತಡೆಗಟ್ಟಬೇಕು, ಎಂದುಕೊಂಡೆ. ಆದರೆ ಯಾರೂ ಅದಕ್ಕೆ ಒಪ್ಪಲಿಲ್ಲ.

'ನೀವೊಬ್ಬ ಸೇನಾಧಿಪತಿ. ಮುನ್ನುಗ್ಗಿ ಹೋಗಿ ಮೊದಲೇ ಬಲಿಯಾಗಬಾರದು' ಎಂದರು ಶ್ಯಾಮಜಿ. ಆದರೆ ಅದನ್ನು ಕೇಳುವ ಮನಃಸ್ಥಿತಿಯಲ್ಲಿ ನಾನಿರಲಿಲ್ಲ. 'ಮುನ್ನುಗ್ಗಿ ಹೋಗಿ ಉಳಿದವರನ್ನೂ ಮೀರಿಸಿ ಹೋರಾಡಿದಾಗ ತಾನೆ ನಾನು ಸೇನಾಧಿಕಾರಿಯ ಸ್ಥಾನಕ್ಕೆ ಅರ್ಹನಾಗುವುದು ? ನನಗೆ ಇಲ್ಲಿರುವುದು ಅಸಹ್ಯವಾಗಿದೆ' ಎಂದೆ.

ಅದಕ್ಕೆ ಹರದಯಾಳ್ ಹೇಳಿದರು : 'ಸಾಧ್ಯವಿಲ್ಲ ; ನೀವು ಹೋಗಕೂಡದು. ಹೋದದ್ದೇ ಆದರೆ ಸಂಸ್ಥೆಯ ಇತಿಶ್ರೀ ಆಗಿಹೋಗುತ್ತದೆ.'

ನಾನೆಂದೆ : 'ನನ್ನ ಸ್ಥಾನ ಇರುವುದು ವಿಪತ್ತಿಗೆ ಸಿಕ್ಕಿ ನರಳುತ್ತಿರುವ ಹಾಗೂ ಸೆರೆಮನೆಗಳಲ್ಲಿ ಕೊಳೆಯುತ್ತಿರುವ ಬಾಂಧವರ ನಡುವೆ. ಸರ್ವಶಕ್ತಿಯಿಂದ ಕ್ರಾಂತಿಕಾರ್ಯ ಮಾಡಬೇಕು, ಅದರ ಪರಿಣಾಮವಾಗಿ ಯಮ ಯಾತನೆಯನ್ನಾದರೂ ಸಹಿಸಲು ಸಿದ್ಧರಾಗಬೇಕು, ಎಂದು ನಾನು ಹೇಳುತ್ತಿದ್ದೆ. ಅದು ಕೇವಲ ಉತ್ತರನ ಪೌರುಷ ಆಗಬಾರದು. ಸಂಗಡಿಗರೊಡನೆ ನಗು ನಗುತ್ತಾ ಫಾಸಿಯ ಕುಣಿಕೆಯನ್ನಾಗಲಿ ಕರಿನೀರಿನ ಶಿಕ್ಷೆಯನ್ನಾಗಲಿ ಅಪ್ಪುವ ಎದೆಗಾರಿಕೆ ನನಗುಂಟು. ಅದರಿಂದ ಕ್ರಾಂತಿಯ ಸಫಲತೆಯ ದಿನ ಇನ್ನಷ್ಟು ಹತ್ತಿರವಾಗದಿರದು.'

ಭಾರತಕ್ಕೆ ಅಲ್ಲದಿದ್ದರೆ ಇಂಗ್ಲೆಂಡಿಗಾದರೂ ಹೋಗಬೇಕೆಂದು ಹಟ ಹಿಡಿದೆ. ಶ್ಯಾಮಜಿಯವರಿಗೆ ನನ್ನ ನಿರ್ಗಮನ ಸ್ವಲ್ಪವೂ ಇಷ್ಟವಿಲ್ಲ. ಅದರಿಂದ ನಾನು ಐದಾರು ದಿನ ಅವರ ಭೇಟಿಗೇ ಹೋಗಲಿಲ್ಲ.



**ವಿಕ್ಟೋರಿಯಾ ನಿಲ್ದಾಣದಲ್ಲಿ ಬಂಧಿತನಾದಾಗ**

ಮಾರ್ಚಿ 13ರಂದು ಲಂಡನ್ ಕಡೆಗೆ ರೈಲು ಹತ್ತಿದೆ. ನಿಲ್ದಾಣದಲ್ಲಿ ಲಾಲಾ ಹರದಯಾಳ್ ಮತ್ತು ಶ್ರೀಮತಿ ಕಾಮಾ ಬೀಳ್ಕೊಟ್ಟರು. ಮೇಲುನೋಟಕ್ಕೆ ಅವರ ಮುಖ ಗಂಭೀರವಾಗಿದ್ದರೂ, ಎದೆಯಲ್ಲಿ ಅಪಾರ ದುಃಖ ತುಂಬಿಕೊಂಡಿತ್ತು.

ಲಂಡನ್ನಿನ ವಿಕ್ಟೋರಿಯಾ ನಿಲ್ದಾಣ ಪ್ರವೇಶಿಸುವ ಹೊತ್ತಿಗೆ ರಾತ್ರಿ ಎಂಟು ಗಂಟೆ. ರೈಲಿನಿಂದ ಇಳಿಯುತ್ತಿದ್ದಂತೆಯೇ 'ಅಗೋ ಅಲ್ಲಿ, ಅಲ್ಲಿ!' ಎಂಬ ಸ್ವರ ಕೇಳಿಸಿತು. ನಾಲ್ಕಾರು ಗುಪ್ತಚರರು ಧಡಧಡನೆ ಓಡಿಬಂದು ಸುತ್ತುಗಟ್ಟಿದರು. ಅವರೊಡನೆ ಪ್ರಯಾಣಿಕರ ಕೊಠಡಿಗೆ ಹೋದೆ. ಪೊಲೀಸ್ ಇನ್ಸ್‌ಪೆಕ್ಟರ್ ಮೆಕಾರ್ಥಿ ಮತ್ತು ಪಾರ್ಕರ್ ಬಂಧನದ ಆಜ್ಞೆ ಓದಿಹೇಳಿದರು. ರಾಜದ್ರೋಹ ಹಾಗೂ ಕೊಲೆಗೆ ನೆರವಾದ ಅಪರಾಧ ಹೊರಿಸಲಾಗಿತ್ತು; 'ಪರಾರಿ ಆರೋಪಿ' ಎಂದು ಪರಿಗಣಿಸಲಾಗಿತ್ತು! 1906ರಲ್ಲಿ ಭಾರತದಲ್ಲಿ ಮಾಡಿದ ಕೆಲವು ಭಾಷಣಗಳಿಗಾಗಿ 1910ರಲ್ಲಿ ಇಂಗ್ಲೆಂಡಿನಲ್ಲಿ ನನ್ನನ್ನು ಬಂಧಿಸಲಾಗಿತ್ತು! ಕಾನೂನುಬದ್ಧ

ವಾಗಿ ಸರಕಾರದ ರಹದಾರಿ ಪಡೆದು ಬಂದಿದ್ದ ನನ್ನ ಮೇಲೆ 'ಪರಾರಿ' ಯ ಆರೋಪ! ಬ್ರಿಟಿಷರ ನ್ಯಾಯ ನಿಷ್ಠೆಯ ನಾನಾ ರಖಂಗಳಲ್ಲಿ ಇದೂ ಒಂದು!

ಬೋ ಸ್ಟ್ರೀಟ್ ಪೊಲೀಸ್ ಠಾಣೆಯಲ್ಲಿ ಪಾರ್ಕರ್ ನನ್ನ ಪೆಟ್ಟಿಗೆ ತೆರೆದ. ಅದರಲ್ಲಿ 'ಭಾರತೀಯ ಸ್ವಾತಂತ್ರ್ಯ ಯುದ್ಧ' ಪುಸ್ತಕದ ಎರಡು ಪ್ರತಿಗಳು; 'ಭಾರತೀಯ ಸಂಸ್ಥಾನಿಕರೇ, ಅರಿಸಿಕೊಳ್ಳಿ!' ಪತ್ರಕದ ಏಳು ಪ್ರತಿಗಳು; ಒಂದು ಪ್ರತಿ ಮ್ಯಾಟ್ಸಿನಿಯ ಚರಿತ್ರೆ, ಗರಿಬಾಲ್ಡಿಯ ಜೀವನಕ್ಕೆ ಸಂಬಂಧಿಸಿದ ಕಾಗದಗಳು, 'ಇಂಡಿಯನ್ ಸೋಶಿಯಾಲಜಿಸ್ಟ್' ಪತ್ರಿಕೆಯ ಕೆಲ ಸಂಚಿಕೆಗಳು, ನನ್ನದೊಂದು ಭಾವಚಿತ್ರ, ವರ್ತಮಾನ ಪತ್ರಿಕೆಗಳಿಂದ ಕತ್ತರಿಸಿ ತೆಗೆದ ಭಾಗಗಳು – ಇಷ್ಟೆಲ್ಲ ಇದ್ದವು. ನನ್ನ ಜೇಬಿನಲ್ಲಿ ಸಾಂಕೇತಿಕವಾಗಿ ಬರೆದ ರಹಸ್ಯ ಪತ್ರವೂ ಇತ್ತು. ಅದರ ಅರ್ಥ ತಿಳಿಸುವಂತೆ ಒತ್ತಾಯಿಸಿದರು. ಬಳಿಕ ನನ್ನ ಮೇಲೆ ಹಿಂಸಾಕ್ರಮವೂ ನಡೆಯಿತು. ಆದರೆ ಅದರ ಅರ್ಥ ಅರಿಯುವುದು ಅವರಿಂದ ಆಗಲಿಲ್ಲ.

ಮರುದಿನವೇ 'ಸಾವರಕರ್ ರಕ್ಷಣಾ ಸಮಿತಿ' ಸ್ಥಾಪಿತವಾಯಿತು. ಭಾರತೀಯ ಕ್ರಾಂತಿಕಾರಿಗಳ ಹಿತೈಷಿ ಗಾಯ್ ಆಲ್ಫ್ರೆಡ್ ಅದರ ಮುಂದಾಳು. ಅಯ್ಯರ್, ಗ್ಯಾನಚಂದ ವರ್ಮಾ ಮತ್ತು ವೀರೇಂದ್ರನಾಥರು ಅದಕ್ಕಾಗಿ ಬಹಳ ಓಡಾಡಿದರು. ವಕೀಲರ ಬಳಿ ಹೋಗುವುದು, ಕಾಗದ-ಪತ್ರ ನಕಲು ಮಾಡುವುದು, ನನಗೆ ಊಟ ಬಟ್ಟೆ ತಂದುಕೊಡುವುದು ಎಲ್ಲವನ್ನೂ ಅವರೇ ಮಾಡುತ್ತಿದ್ದರು.

1910 ಮಾರ್ಚ್ 15ರಂದು ಶ್ಯಾಮಜಿಯವರಿಗೆ ಅಯ್ಯರ್ ಪತ್ರ ಬರೆದರು :

'ಪ್ರಿಯ ಪಂಡಿತಜೀ, ಎಕ್ಸ್‌ಪ್ರೆಸ್ ರೈಲಿನಿಂದ ಇಳಿಯುತ್ತಲೇ ನಮ್ಮೆಲ್ಲರ ಮೆಚ್ಚಿನ ಸಾವರಕರ್ ಬಂಧಿತರಾದರೆಂದು ತಿಳಿಸಲು ಬಹಳ ದುಃಖವಾಗುತ್ತದೆ. ನಿನ್ನೆಯೇ ಬರೆಯಬೇಕೆಂದಿದ್ದೆ. ಆದರೆ ಸಾವರಕರರನ್ನು ಭೇಟಿಯಾದ ನಂತರ ಬರೆಯೋಣವೆಂದು ಸುಮ್ಮನಾದೆ....

'ಇಂದು ಬೆಳಿಗ್ಗೆ ಅವರನ್ನು ನೋಡಿದ್ದೆ. ಅವರು ಎಂದಿನಂತೆಯೇ ಇದ್ದರು. ಆದರೆ ನಾವು ಸರಳುಗಳ ಮೂಲಕ ಮಾತನಾಡಬೇಕಾಯಿತು, ಅಷ್ಟೆ. ಇಂಗ್ಲಿಷ್ ಜೈಲಿನಲ್ಲಿ ಅವರು ಬಂಧಿತರಾಗಿರುವುದನ್ನು ಕಂಡು ನನಗಂತೂ ಮನಸ್ಸಿಗೆ ಬಹಳ ಘಾಸಿಯಾಗಿದೆ. ನಿಜಕ್ಕೂ ಬೇಡನ ಬಲೆಯಲ್ಲಿ ಸಿಂಹ ಬಿದ್ದಂತೆ !..... ಮಿಂಚಿಹೋದುದಕ್ಕೆ ಈಗ ಕಣ್ಣೀರುಹಾಕಿ ಉಪಯೋಗವಿಲ್ಲ. ಅವರನ್ನು ಭಾರತಕ್ಕೆ ಕಳಿಸದಂತೆ ನಾವು ಸರ್ವಪ್ರಯತ್ನ ಮಾಡಬೇಕು. ಒಮ್ಮೆ ಅವರೇನಾದರೂ ಸಾಗಿಸಲ್ಪಟ್ಟರೆ, ನಾವು ಪುನಃ ಅವರನ್ನು ನೋಡಲಾರೆವು. ಮಾತೃಭೂಮಿಯ ಅತ್ಯಂತ ಪ್ರೀತಿಯ ಹಾಗೂ ಶ್ರದ್ಧಾವಂತ ಮಕ್ಕಳಲ್ಲಿ ಒಬ್ಬರಾದ ಅವರು ಅಂದಮಾನಿನಲ್ಲಿ ಕೊಳೆಯಬೇಕಾಗುತ್ತದೆ.. '

ಅಯ್ಯರ್ ಅವರೊಡನೆ ಮಾತನಾಡುತ್ತಾ ನಾನೆಂದಿದ್ದೆ : 'ಅಂದಮಾನಿಗೆ ಹೋದರೇ ಒಳ್ಳೆಯದು; ನಮ್ಮ ಅಣ್ಣ ಬಾಬಾನನ್ನು ಭೇಟಿಯಾಗುವ ಆನಂದ ಅದರಲ್ಲಿದೆ.'

'ಛೇ, ಹಾಗೆ ಹೇಳಬೇಡಿ; ಅಂಥ ದಯನೀಯ ಸುಖ ನಿಮಗೆ ಬಾರದಿರಲಿ. ಬೇಗ ಬಿಡುಗಡೆ ಹೊಂದಿ ದೇಶದ ಸ್ವಾತಂತ್ರ್ಯ ಸಾಧಿಸಬೇಕೆಂಬುದೇ ನಮ್ಮ ಇಚ್ಛೆ' ಎಂದಿದ್ದರು ಅವರು.

ಮರಣ ಅಥವಾ ಕರಿನೀರಿನ ಪ್ರಯಾಣ ನನಗೆ ಕಾದಿತ್ತು. ಅಷ್ಟರೊಳಗೆ ನನ್ನ ಬಂಧನದ ವಿಷಯ ನಾನು ಮನೆಗೆ ತಿಳಿಸಬೇಕಿತ್ತು. ನನ್ನ ಆಗಿನ ಅಂದಾಜಿನಲ್ಲಿ ಅದೇ ಕೊನೆಯ ಪತ್ರ; ಮೃತ್ಯುಪತ್ರ! ರಹಸ್ಯವಾಗಿ ಬರೆದು, ರಹಸ್ಯವಾಗಿಯೇ ಹೊರಗೆ ಸಾಗಿಸಿದೆ.

'ವೈಶಾಖಿಚಾ ಕುಮುದನಾಥ ನಭಾಂತ ಹಾಸೇ

ಯಾಚ್ಚಂದ್ರಿಕಾ ಧವಲ ಸೌಧ ತಲೀ ವಿಲಾಸೇ
ಫಾಲೀ ಸ್ವಯೇ ಜಲ ಜಿಲಾ ಪ್ರಿಯ ಬಾಲ ಲೋಭೇ
ಜಾಯೀ ಪುಲೇ ಪರಿಮಲೀ ಸಮನಾಂತ ಶೋಭೇ ॥

........................

# 1

'ಅತ್ತಿಗೆ, ನಿನಗೆ ನೆನಪಿದೆಯೆ ?'

ವೈಶಾಖಮಾಸ; ಆಕಾಶದಲ್ಲಿ ನಗುನಗುವ ಹುಣ್ಣಿಮೆಯ ಚಂದ್ರ; ಬಿಸಿಲುಮಚ್ಚಿನ ಮೇಲೆ ತುಂಬಿ ತುಳುಕುವ ಬೆಳದಿಂಗಳು. ನಮ್ಮ ನೆಚ್ಚಿನ ಬಾಳ ಪ್ರೀತಿಯಿಂದ ನೀರು ಹಾಕಿ ಬೆಳೆಸಿದ್ದ ಜಾಜಿಯ ಬಳ್ಳಿಯಲ್ಲಿ ಹೂಗಳರಳಿ ಘಮಘಮಿಸುತ್ತಿದ್ದ ಪರಿಮಳ.

ಬೇಸಿಗೆಯ ರಜೆ ಬಂದಿತ್ತು. ನೆಂಟರಿಷ್ಟರೆಲ್ಲ ಬಂದಿದ್ದರು. ಮನೆಯು ನಂದಗೋಕುಲದಂತೆ ಆನಂದದಿಂದ ಕಂಗೊಳಿಸುತ್ತಿತ್ತು. ಓರಗೆಯ ಕಿಶೋರರು ಯೌವನ, ಸಾಹಸ, ಪ್ರತಿಭೆ, ಪರಿಶುದ್ಧತೆಗಳ ತೇಜಸ್ಸಿನಿಂದ ಬೀಗುತ್ತಿದ್ದರು; ಆ ಯುವಕ ಸಮೂಹವನ್ನು ಅಲಂಕರಿಸಲು ಕೀರ್ತಿ ಕಾದಿತ್ತು.

ನವಯೌವನದ ಮಧುರ ಭಾವನೆಗಳಿಂದ ಹಿಗ್ಗಿದ ಹೃದಯಗಳು; ಉದಾತ್ತ ಆಸೆ ಆಕಾಂಕ್ಷೆ ಹಾಗೂ ಮನೋನಿರ್ಧಾರಗಳ ಉಸಿರಿನಿಂದ ಬೀಗುವ ವಾತಾವರಣ. ಅಂಗಳದ ತುಂಬ ಎಳೆಯ ಮೃದು ಬಳ್ಳಿಗಳು ಭವ್ಯ ವೃಕ್ಷಗಳನ್ನು ಬಳಸಿದ್ದವು. ಊರಿನವರೆಲ್ಲ ಅದನ್ನು ಆತ್ಮೀಯತೆಯಿಂದ ''ಧರ್ಮಶಾಲೆ'' ಎನ್ನುತ್ತಿದ್ದರು.

ಅತ್ತಿಗೆ, ನೀನು ಮಾಡಿದ ಅಡಿಗೆಯ ರುಚಿಯೇ ರುಚಿ; ಪ್ರೀತಿಯಿಂದ ನೀನೇ ಬಡಿಸುವುದಕ್ಕೆ ನಿಂತೆ ಎಂದಮೇಲೆ ಅದರ ಸವಿ ಇನ್ನಷ್ಟು ಹೆಚ್ಚು. ಬೆಳದಿಂಗಳಲ್ಲಿ ಮಾಳಿಗೆಯ ಮೇಲೆ ಕೈತುತ್ತು! ಸರಸ ಸಲ್ಲಾಪಗಳನ್ನಾಡುತ್ತಾ ಕುಳಿತಿದ್ದರೆ ಗೊತ್ತೇ ಆಗುತ್ತಿರಲಿಲ್ಲ ಹೊತ್ತು; ಸಂಭಾಷಣೆ ಸಾಗುತ್ತಲೇ ಇತ್ತು.

ಒಬ್ಬರು ಶ್ರೀರಾಮನ ವನವಾಸದ ಕಥೆ ಹೇಳಿದರೆ ಇನ್ನೊಬ್ಬರು ಇಟಲಿ ದೇಶದ ಸ್ವಾತಂತ್ರ್ಯ ಹೋರಾಟದ ರೋಮಾಂಚಕ ಚರಿತ್ರೆ ಹೇಳುವುದು; ತಾನಾಜಿ, ಬಾಜೀಪ್ರಭುಗಳ ಲಾವಣಿ ಹಾಡುವುದು; ಭಾವು ಮತ್ತು ನಾನಾಗಳನ್ನು ಕುರಿತು ಮಾತನಾಡುವುದು. ಚಿತ್ತೋಡಗಡ, ಶನಿವಾರವಾಡಾಗಳ ಸ್ಥಿತಿಗೆ ಮರುಗುವುದು; ಒದ್ದೆಗಣ್ಣಿನಿಂದ, ನಮ್ಮ ಪ್ರೀತಿಯ ಭಾರತಮಾತೆ ಎಂಥ ದುಃಖಕ್ಕೆ ಸಿಕ್ಕಿರುವಳೆಂಬುದನ್ನೂ ಅದಕ್ಕೆ ಕಾರಣಗಳನ್ನೂ ಸ್ಮರಿಸುವುದು; ಆಕೆಯ ಪೂರ್ಣ ಸ್ವಾತಂತ್ರ್ಯಕ್ಕಾಗಿ ಸಾಹಸದ ಯೋಜನೆಗಳನ್ನು ಹಾಕುವುದು! ಹಾಗೆ ನಾವು ತಾಯಿಯ ಗಾಯಗಳನ್ನು ಕಂಡೆವು, ತೋರಿದೆವು; ಧೀರೋದಾತ್ತ ಶಪಥ ತೊಟ್ಟೆವು, ನೂರಾರು ತೇಜಸ್ವಿ ಯುವಕರಿಗೆ ಆ ಶಪಥ ಕೊಟ್ಟೆವು.

ಆ ಆನಂದದ ದಿನಗಳು, ಆ ಪ್ರಿಯಜನರ ಸಹವಾಸ, ಆ ಬೆಳದಿಂಗಳ ರಾತ್ರಿಗಳು, ಆ ಭವ್ಯ ಆಸೆ ಆಕಾಂಕ್ಷೆಗಳು ಮತ್ತು ಎಲ್ಲಕ್ಕಿಂತ ಮಿಗಿಲಾಗಿ ನಮ್ಮೆಲ್ಲರನ್ನೂ ಸ್ಫೂರ್ತಿಗೊಳಿಸಿದ ಸ್ವಾತಂತ್ರ್ಯ ಸಂಪಾದನೆಯ ಆ ದಿವ್ಯ ಧ್ಯೇಯ, ಆ ಉಗ್ರ ನಿಶ್ಚಯ -

ಅದೆಲ್ಲ ನಿನಗೆ ಜ್ಞಾಪಕವಿದೆಯೆ, ಅತ್ತಿಗೆ? ಬಾಜೀಪ್ರಭುವಿನಂತೆ ಹೋರಾಡುತ್ತಾ ಮಡಿಯುತ್ತೇವೆ ಎಂದು ಬಾಲಕರೆಲ್ಲ ಹೆಮ್ಮೆಯಿಂದ ಪ್ರತಿಜ್ಞೆ ಮಾಡಿದರಲ್ಲವೆ? ಅದನ್ನು ನೋಡುತ್ತಾ, ಸ್ಫೂರ್ತಿ ನೀಡುತ್ತಾ,

ಚಿತ್ತೋಡದ ವೀರಬಾಲೆಯರಂತೆ ನಾವೂ ಅಗ್ನಿಪ್ರವೇಶ ಮಾಡುತ್ತೇವೆ ಎಂದು ಬಾಲಿಕೆಯರೆಲ್ಲ ಅಭಿಮಾನದಿಂದ ವಚನ ನೀಡಿದರಲ್ಲವೆ?

ನಾವೇನೂ ಕುರುಡರಂತೆ ಈ ವ್ರತ ತೊಡಲಿಲ್ಲ. ಚೆನ್ನಾಗಿ ಯೋಚಿಸಿಯೇ, ಇತಿಹಾಸದ ಹಾಗೂ ಮನುಷ್ಯ ಸ್ವಭಾವದ ಬೆಳಕಿನಲ್ಲೇ, ಪ್ರಾಣ ತೆರಬೇಕಾಗುವುದೆಂಬ ಅರಿವಿಟ್ಟುಕೊಂಡೇ ಈ ವೀರಕಂಕಣ ತೊಟ್ಟಿದ್ದೇವೆ.

## 2

'ಆಗಿನದನ್ನೆಲ್ಲ ಜ್ಞಾಪಿಸಿಕೊಂಡು, ಈಗಿನದನ್ನು ನೋಡು. ಇನ್ನೂ ಏಳೆಂಟು ವರ್ಷಗಳು ಸಹ ಕಳೆದಿಲ್ಲ, ಆಗಲೇ ಎಂತಹ ಅದ್ಭುತ ಕಾರ್ಯಸಾಧನೆ ಆಗಿದೆ! ಎಂಥ ಆನಂದದ ದೃಶ್ಯ !

ಆಸೇತುಹಿಮಾಚಲ ಇಡೀ ದೇಶ ಎಚ್ಚೆತ್ತಿದೆ. ಭಿಕ್ಷಾಪಾತ್ರೆ ಬಿಸುಟು ಖಡ್ಗ ಹಿಡಿದು ಎದ್ದು ನಿಂತಿದೆ. ವೀರವ್ರತಿಗಳ ತಂಡತಂಡಗಳೇ ಪ್ರಭುಚರಣದಲ್ಲಿ ಬಂದು ಎರಗುತ್ತಿವೆ. ಯಜ್ಞಕುಂಡದ ಜ್ವಾಲೆ ಧಗಧಗಿಸಿ ಮೇಲೇಳುತ್ತಿದೆ.

ಓ ದೃಢವ್ರತಿಗಳೇ, ಆ ಯಜ್ಞವನ್ನು ಪೂರ್ಣಗೊಳಿಸುವ ಉಗ್ರ ದೀಕ್ಷೆ ತೊಟ್ಟವರೇ, ನಿಮ್ಮ ಪರೀಕ್ಷೆಯ ಕಾಲ ಬಂದೊದಗಿದೆ. ಹೇಳಿ, ವಿಶ್ವದಲ್ಲಿ ಆಸುರೀಶಕ್ತಿಗಳನ್ನು ಮೆಟ್ಟಿ ದೈವೀ ಸಾಮ್ರಾಜ್ಯ ಸ್ಥಾಪಿಸಲು ಈ ಮಹಾಜ್ವಾಲೆಯಲ್ಲಿ ಹಾರಿಕೊಳ್ಳಲು ತಯಾರಿರುವವರು ಯಾರು ?

- ಎಂದು ಶ್ರೀರಾಮನು ತನ್ನ ಭಕ್ತರನ್ನು ಆಹ್ವಾನಿಸಿದ್ದೇ ತಡ, ಓ ಪೂಜ್ಯ ಅತ್ತಿಗೆ! ನಮ್ಮ ಕುಲ ಮುಂದಾಗಿ ಸಜ್ಜಾಯಿತು. ''ಉರಿವ ಜ್ವಾಲೆಯಲ್ಲಿ ನಮ್ಮದೇ ಪ್ರಥಮ ಆಹುತಿಯಾಗಲಿ ; ಹೇ ಪ್ರಭು ! ಆ ದೈವೀ ಸಮ್ಮಾನ ನಮ್ಮದಾಗಲಿ'' ಎಂದು ಪ್ರಾರ್ಥಿಸಿತು.

ಧರ್ಮರಕ್ಷಣೆಗಾಗಿ ನಮ್ಮ ದೇಹ ಇಟ್ಟೇವು - ಇದು ನಾವು ಆಡಿದ ಮಾತು. ಅದರಂತೆ ಜ್ವಾಲೆಯಲ್ಲಿ ಹಾರುತ್ತಿದ್ದೇವೆ. ನಮ್ಮ ಮಾತು ಉಳಿಸಿಕೊಂಡಿದ್ದೇವೆ.

ಎಂಥ ಸಂತೋಷದ ಸಂಗತಿ ! ಪ್ರಿಯ ಗೆಳೆಯರೊಡಗೂಡಿ ಕೈಗೊಂಡ ಉಗ್ರವಣಗಳೆಲ್ಲ ಇಂದು ಪೂರ್ತಿಗೊಂಡಿದೆ. ಮಾತೆಯ ಧ್ವಜದಡಿ ಹೋರಾಡಿ, ಆಕೆಯ ವಿಮೋಚನೆಗಾಗಿ ನಾವು ಬಲಿ ನೀಡುವೆವೆಂಬ ಮಾತು ಸತ್ಯವಾಗಿದೆ. ಆಕೆಗಾಗಿ ನಮ್ಮ ಸ್ವಾರ್ಥವನ್ನೆಲ್ಲ ಸುಟ್ಟು ಬೂದಿ ಮಾಡುವ ಶಕ್ತಿ ದೇವರು ನಮಗೆ ಕರುಣಿಸಿದ. ನಿಜಕ್ಕೂ ನಮಗಿಂತ ಧನ್ಯರು ಇನ್ನಾರು !

## 3

'ಹೇ ಮಾತೃಭೂಮಿ ! ನಿನಗಾಗಿ ನನ್ನ ಮನಸ್ಸನ್ನು ಮೀಸಲಿರಿಸಿದೆ. ನನ್ನ ವಕ್ತೃತ್ವ, ವಾಗ್ವೈಭವಗಳೆಲ್ಲವನ್ನೂ ನಿನಗೇ ಅರ್ಪಿಸಿದೆ. ನನ್ನ ಕಾವ್ಯ ರಸದಿಂದ ನಿನ್ನ ಅಭಿಷೇಕ ಮಾಡಿದೆ. ನನ್ನ ಲೇಖನಕ್ಕೆಲ್ಲ ನೀನೇ ಪ್ರೇರಣೆಯಾದೆ.

ನಿನ್ನ ಬಲಿವೇದಿಯ ಮೇಲೆ ನನ್ನ ಪ್ರಿಯ ಮಿತ್ರಪರಿವಾರವನ್ನು ತಳ್ಳಿದೆ. ಸ್ವತಃ ಯೌವನ, ದೇಹ ಭೋಗಗಳಿಗೆ ಉರಿ ಹಚ್ಚಿದೆ. ನಿನ್ನ ಕಾರ್ಯವೆಂದರೆ ಎಲ್ಲ ದೇವದೇವತೆಗಳನ್ನೂ ಪ್ರಸನ್ನಗೊಳಿಸುವ ಕಾರ್ಯ. ನಿನ್ನ ಸೇವೆಯೇ ಭಗವಂತನ ಸೇವೆ.

ನಿನ್ನ ಬಲಿವೇದಿಯ ಮೇಲೆ ನನ್ನ ಮನೆ ಮಠ, ಐಶ್ವರ್ಯಗಳನ್ನೆಲ್ಲ ಬಲಿಗೊಟ್ಟೆ. ಅತ್ತಿಗೆ, ಹೆಂಡತಿ,

ಎಳೆಯ ಮಗು ಎಲ್ಲರನ್ನೂ ಕಾಳ್ಗಿಚ್ಚಿನಲ್ಲಿ ಹಾಕಿಬಿಟ್ಟೆ. ಅಪಾರ ಧೈರ್ಯಶಾಲಿಯೂ ಕರುಣಾಮಯನೂ ಆದ ಅಣ್ಣನನ್ನು ನಿನಗಾಗಿಯೇ ಆಹುತಿ ಕೊಟ್ಟೆ.

ಪ್ರೀತಿಯ ತಮ್ಮನೂ ನಿನಗಾಗಿಯೇ ಮೀಸಲಾದ. ಈಗ ನನ್ನ ದೇಹವನ್ನೂ ಒಡ್ಡುವ ಸರದಿ ಬಂದಿದೆ. ಇಷ್ಟೇ ಏನು, ನಾವು ಕೇವಲ ಮೂರು ಜನಕ್ಕೆ ಬದಲಾಗಿ ಏಳು ಜನ ಒಡಹುಟ್ಟಿದವರಿದ್ದರೂ, ಅವರೆಲ್ಲರನ್ನೂ ನಿನಗಾಗಿಯೇ ಮುಡಿಪಿಡುತ್ತಿದ್ದೆ.

ಭಾರತಾಂಬೆಯ ಕೋಟಿ ಕೋಟಿ ಮಕ್ಕಳಲ್ಲಿ ಮಾತೃಭಕ್ತಿಯುಳ್ಳವರ ಜೀವನವೇ ಧನ್ಯ. ಅವರ ಪೈಕಿ, ನಮ್ಮ ಕುಲವಂತೂ ಈಶ್ವರನದೇ ಅಂಶ. ನಿರ್ವಂಶವಾಗಿಯೂ ಅಖಂಡವಾಗುವ ವಂಶ ನಮ್ಮದು.

## 4

'ಒಂದು ವೇಳೆ ಅಖಂಡವಾಗದೆ, ಎಲ್ಲ ಜಡವಸ್ತುಗಳಂತೆ ಮಣ್ಣುಗೂಡಿದರೂ ಏನಂತೆ? ನಾವು ನಮ್ಮ ಮಾತು ಉಳಿಸಿಕೊಂಡಿದ್ದೇವೆ. ದೈತ್ಯ ಶಕ್ತಿಯ ಮೇಲೆ ದೈವೀಶಕ್ತಿಯ ವಿಜಯಕ್ಕಾಗಿ ನಮ್ಮ ಸ್ವಾರ್ಥ ಅಳಿಸಿಕೊಂಡಿದ್ದೇವೆ. ಅದೇ ನಮಗೆ ಸಾಕು ; ಅಷ್ಟರಿಂದಲೇ ನಾವು ಧನ್ಯರು. ದೇವರು ನಮಗೆ ಏನೆಲ್ಲ ಕರುಣಿಸಿದ್ದನೋ ಅದೆಲ್ಲವನ್ನೂ ನಿನಗೆ ಸಮರ್ಪಿಸಿದ್ದೇವೆ. ಅವನು ಇನ್ನೇನಾದರೂ ಕೊಡುವ ಕೃಪೆ ಮಾಡಿದರೆ, ಅದನ್ನೂ ನಿಶ್ಚಿತವಾಗಿ ನಿನಗೇ ಅರ್ಪಿಸುತ್ತೇವೆ.

ವಹಿನಿ! ಇದೆಲ್ಲವನ್ನೂ ಗಣನೆಗೆ ತೆಗೆದುಕೊಂಡು, ಪುನರಾಲೋಚಿಸಿ, ನಮ್ಮ ಕುಲಪರಂಪರೆಯನ್ನು ಮುಂದುವರಿಸು. ಹಿಮಾಲಯದಲ್ಲಿ ಉಗ್ರ ತಪಸ್ಸು ಮಾಡುತ್ತಿರುವ ಪಾರ್ವತಿ ಮತ್ತು ನಗುನಗುತ್ತಾ ಚಿತೆಗೇರಿದ ಚಿತ್ತೋಡದ ರಜಪೂತ ನಾರಿಯರು - ಇವರೇ ನಿನ್ನ ಆದರ್ಶ! ನೀನೂ ಒಬ್ಬ ವೀರನ ಅರ್ಧಾಂಗಿ! ಆ ಭಾರತೀಯ ನಾರಿಯರ ಆತ್ಮತೇಜಸ್ಸು ಇನ್ನೂ ಅಳಿದಿಲ್ಲ ಎನ್ನುವ ರೀತಿಯಲ್ಲಿ ನಿನ್ನ ಉಗ್ರ ಜೀವನವಿರಲಿ.

ನಿನಗೆ ಇದೇ ನನ್ನ ಕೊನೆಯ ಮಾತು ; ಕೊಟ್ಟಕೊನೆಯ ಸಂದೇಶ. ವಹಿನಿ! ಈ ನಿನ್ನ ಪ್ರೀತಿಯ ಬಾಲಕನ ನಮಸ್ಕಾರ ಸ್ವೀಕರಿಸು. ನನ್ನ ಪತ್ನಿಗೂ ನನ್ನ ಪ್ರೀತಿ ತಿಳಿಸು ಮತ್ತು ಹೇಳು -

ನಾವೇನೂ ಕುರುಡರಂತೆ ಈ ದಾರಿ ಹಿಡಿಯಲಿಲ್ಲ. ಚೆನ್ನಾಗಿ ಆಲೋಚಿಸಿಯೇ, ಇತಿಹಾಸ ಹಾಗೂ ಮನುಷ್ಯ ಸ್ವಭಾವದ ಬೆಳಕಿನಲ್ಲೇ, ಪ್ರಾಣ ತೆರಬೇಕಾಗುವುದೆಂಬ ಅರಿವಿಟ್ಟುಕೊಂಡೇ ಈ ವೀರಕಂಕಣ ತೊಟ್ಟಿದ್ದೇವೆ.'





# ಹವಿಸ್ಸು ಹದಿನೆಂಟು

1) ಭಾರತದ ಘನ ಚಕ್ರವರ್ತಿಗಳ ವಿರುದ್ಧ ಯುದ್ಧ ಹೂಡಿದುದು ಅಥವಾ ಅದಕ್ಕೆ ಸಹಾಯ ಮಾಡಿದುದು ;
2) ಭಾರತದಲ್ಲಿ ಅಥವಾ ಅದರ ಒಂದು ಭಾಗದಲ್ಲಿ ಚಕ್ರವರ್ತಿಗಳ ಪ್ರಭುತ್ವವನ್ನು ಕೊನೆಗಾಣಿಸುವ ಒಳಸಂಚು ;
3) ಶಸ್ತ್ರಾಸ್ತ್ರಗಳ ಶೇಖರಣೆ ಹಾಗೂ ವಿತರಣೆ ಮಾಡಿ, ಜಾಕ್ಸನ್ ವಧೆಗೆ ನೆರವಾದುದು;
4) ಲಂಡನ್ನಿನಲ್ಲಿ ಶಸ್ತ್ರಾಸ್ತ್ರ ಶೇಖರಣೆ ಮತ್ತು ವಿತರಣೆ ಹಾಗೂ ಲಂಡನ್ನಿನಿಂದ ಯುದ್ಧ ಹೂಡಿಕೆ ; ಮತ್ತು
5) 1909ರ ಜನವರಿಯಿಂದ ಮಾರ್ಚ್‌ವರೆಗೆ ಭಾರತದಲ್ಲೂ, 1908ರಿಂದ 1909ರ ವರೆಗೆ ಲಂಡನ್ನಿನಲ್ಲೂ ಮಾಡಿದ ರಾಜದ್ರೋಹದ ಭಾಷಣಗಳು.

- ಇವು ಐದು ನನ್ನ ಮೇಲೆ ಹೊರಿಸಿದ ಆರೋಪಗಳು ಪ್ರತಿಯೊಂದು ಆರೋಪವೂ ಸ್ವದೇಶಭಕ್ತಿಯ ಪ್ರಶಸ್ತಿ ಅಲ್ಲದೆ ಮತ್ತೇನು ?

ಏಪ್ರಿಲ್ ಕೊನೆಯ ವಾರದಲ್ಲಿ ಬೋ ಸ್ಟ್ರೀಟ್ ಪೋಲೀಸ್ ಠಾಣೆಯಿಂದ ಬ್ರಿಕ್ಸ್‌ಟನ್ ಜೈಲಿಗೆ ವರ್ಗಾವಣೆ ಆಯಿತು ನನ್ನನ್ನು ಮುಕ್ತಗೊಳಿಸಲು ಗೆಳೆಯರು ಮಾಡಿದ ಪ್ರಯತ್ನ ಅಷ್ಟಿಷ್ಟಲ್ಲ ವೀರೇಂದ್ರನಾಥ ಚಟ್ಟೋಪಾಧ್ಯಾಯರು ನನ್ನ ಬದಲು ತಾವೇ ಜೈಲಿನಲ್ಲಿ ಉಳಿಯಲು ನಿರ್ಧರಿಸಿದ್ದರು ಅದಕ್ಕಾಗಿ 14 ಬಾರಿ ಅವರು ನನ್ನ ಭೇಟಿಗೆ ಬಂದರು ಒಮ್ಮೆಯಂತೂ ಐರ್ಲೆಂಡ್ ಮೂಲಕ ನನ್ನನ್ನು ರಹಸ್ಯವಾಗಿ ಜರ್ಮನಿ ಅಥವಾ ಅಮೆರಿಕಕ್ಕೆ ಕಳಿಸುವ ಯೋಜನೆ ಸಿದ್ಧವಾಗಿತ್ತು ಆದರೆ ವೀರೇಂದ್ರರ ಪ್ರಯತ್ನ ಫಲಿಸಲಿಲ್ಲ ನಮ್ಮ ಪೈಕಿಯೇ ಓರ್ವ ಮುಸ್ಲಿಂ ಗೆಳೆಯ ಪೋಲೀಸರಿಗೆ ರಹಸ್ಯ ಬಯಲು ಮಾಡಿದ್ದ!

ಒಮ್ಮೆ ನಿರಂಜನ ಪಾಲ್ ಗದ್ಗದಿತವಾಗಿ ಹೇಳಿದ 'ಸಾವರಕರ್‌ಜೀ, ನಾವು ಹೇಳಿದರೆ ನೀವು ಕೇಳಲಿಲ್ಲ. ನೀವು ಪ್ಯಾರಿಸ್ ಬಿಟ್ಟು ಬರಬಾರದಾಗಿತ್ತು.'

'ನಾನು ಎಲ್ಲದಕ್ಕೂ ಸಿದ್ಧನಾಗಿಯೇ ಇದ್ದೇನೆ ಇತರರಿಗೆ ಬೋಧಿಸಿದುದನ್ನು ಕಾರ್ಯತಃ ಮಾಡುತ್ತಿದ್ದೇನೆ, ಅಷ್ಟೆ ಚಿಂತಿಸಬೇಡ' ಎಂದು ಅವನಿಗೆ ಸಮಾಧಾನ ಹೇಳಿದೆ

ವಿಚಾರಣೆಗಾಗಿ ನ್ಯಾಯಾಲಯಕ್ಕೆ ಪೊಲೀಸ್ ವಾಹನದಲ್ಲಿ ಹೋಗಿ ಬರುತ್ತಿದ್ದೆ. ಆ ವಾಹನದ ಮೇಲೆ ನಡುದಾರಿಯಲ್ಲಿ ದಾಳಿ ಮಾಡಿ ಬಿಡಿಸುವ ಯೋಜನೆ ನಡೆಯಿತು. ಕೆಲವು ಭಾರತೀಯ ಹಾಗೂ ಐರಿಷ್ ಕ್ರಾಂತಿಕಾರಿಗಳು ದಾರಿ ಕಾದರು ; ಅಂದು ಬಹುಶಃ ಮೇ 12 ಇರಬಹುದು. ಆದರೆ ಆ ಯೋಜನೆಯೂ ಪೊಲೀಸರಿಗೆ ತಿಳಿದುಹೋಯಿತು. ಅವರು ನನ್ನ ವಾಹನ ಹಾಗೂ ದಾರಿ ಬದಲಿಸಿದರು. ನಿತ್ಯದ ವಾಹನದ ಮೇಲೆ ದಾಳಿ ನಡೆದಾಗ ಅದು ಖಾಲಿಯಿತ್ತು !

ಜೂನ್ ಪ್ರಾರಂಭದಲ್ಲಿ 'ಕೋರ್ಟ್ ಆಫ್ ಕ್ರಿಮಿನಲ್ ಅಪೀಲ್'ನ ತೀರ್ಪು ಹೊರಬಿತ್ತು. ಅದರಂತೆ ನನ್ನನ್ನು ಭಾರತ ಸರಕಾರಕ್ಕೆ ಒಪ್ಪಿಸಿಕೊಡಲಾಗಿತ್ತು. ಭಾರತದಲ್ಲಿ ನನ್ನ ವಿಚಾರಣೆಗಾಗಿ ವಿಶೇಷ ನ್ಯಾಯಾಲಯವೊಂದು ರೂಪಿತಗೊಂಡಿತು. ನನ್ನನ್ನು ಕರೆದೊಯ್ಯಲು ಪೊಲೀಸ್ ಅಧಿಕಾರಿಗಳೂ ಬಂದರು. ನಿರಾಶೆಯ ನಡುವೆಯೂ ಗೆಳೆಯರು ನನ್ನ ಬಿಡುಗಡೆಗೆ ತಮ್ಮ ಪ್ರಯತ್ನ ಕೈಬಿಟ್ಟಿರಲಿಲ್ಲ. ಲಾಲಾ ಹರದಯಾಳರು ಶ್ಯಾಮಜಿಯವರಿಗೆ ಜೂನ್ 4ರಂದು ಬರೆದ ಪತ್ರವನ್ನೇ ನೋಡಿ :

'.... ಇಲ್ಲಿ ನಾವು ನಮ್ಮ ಕೈಲಾದದ್ದು ಮಾಡಿದ್ದೇವೆ. ಶ್ರೀಮತಿ ಕಾಮಾ ಒಂದು ಉಪಾಯ ಹೇಳಿದ್ದರು. ಆದರೆ ಅದನ್ನು ಕಾರ್ಯಗತ ಮಾಡುವುದು ಬಹು ಕಷ್ಟ. ಆದರ ಬಗ್ಗೆ ಅವರೊಡನೆ ನೀವೇ ಮಾತನಾಡಿ. ಆ ಸಂಬಂಧದಲ್ಲಿ ಅಯ್ಯರ್ ಮತ್ತು ಆಚಾರ್ಯ ಸಹ ಆಲೋಚನೆ ಮಾಡಿದ್ದಾರೆ. ಆದರೆ ಅದಕ್ಕಾಗಿ ಭಾರತಕ್ಕೆ ಹೋಗುವುದು ಅಗತ್ಯ.'

ಆ ವೇಳೆಗೆ ಶ್ರೀಮತಿ ಕಾಮಾ ನಮ್ಮ ಸಂಸಾರಕ್ಕೆ 'ಜೀವನಾಂಶ' ಕಳುಹಿಸಲು ಪ್ರಾರಂಭಿಸಿದ್ದರು. ಅತ್ತಿಗೆಗೆ ಅದೇ ಆಧಾರವಾಗಿತ್ತು.

ಭಾರತಕ್ಕೆ ನನ್ನನ್ನು ಸಾಗಿಸುವುದಂತೂ ನಿಶ್ಚಿತವಾಯಿತು. ಆ ಸಮಯದಲ್ಲಿ ವಿ.ವಿ.ಎಸ್. ಅಯ್ಯರ್ ಜತೆಗೆ ನನ್ನ ಪತ್ರ ವ್ಯವಹಾರ ನಡೆದೇ ಇತ್ತು. ಜೂನ್ 22ರಂದು 'ಕೋರ್ಟ್ ಆಫ್ ಸಿವಿಲ್ ಅಪೀಲ್' ತೀರ್ಮಾನ ನೀಡಲಿತ್ತು. ಹಿಂದಿನ ದಿನ ಅಯ್ಯರ್ ಅವರಿಗೆ ಪತ್ರ ಬರೆದೆ.

ಓಂ

*ಶ್ರೀ ಸ್ವಾತಂತ್ರ್ಯಲಕ್ಷ್ಮೀ ಪ್ರಸನ್ನ*

*'ಪ್ರಿಯ ಋಷಿಜಿ,*

*ನಿಮಗೆ ಈಗಾಗಲೆ 2-3 ಪತ್ರಗಳು ತಲುಪಿರಬಹುದು. ಉತ್ತರಿಸಿ. ಇಂದು ವಿಚಾರಣೆ ಮುಗಿಯುವಂತೆ ಕಾಣುವುದಿಲ್ಲ. ತೀರ್ಪಂತೂ ಈಗಾಗಲೇ ನಮ್ಮಿಬ್ಬರಿಗೂ ತಿಳಿದೇ ಇದೆ. ನಾಳೆ ಔಪಚಾರಿಕ ಫಲಿತಾಂಶ....*

*ಪ್ರಿಯ ಋಷಿ, ಈಗಾಗಲೇ ನಾನು ಜೈಲಿನ ಆಹಾರ ಹಾಗೂ ಜೀವನಕ್ಕೆ ಹೊಂದಿಕೊಂಡಿದ್ದೇನೆ. ಪ್ರಾರಂಭದಲ್ಲಿ ನಾನು ವಿಶೇಷ ಆಹಾರ ಕೇಳದಿದ್ದುದೇ ಒಳ್ಳೆಯದಾಯಿತು. ಈಗ ಕೇವಲ ಬಟ್ಟೆ ಬದಲಿಸಿದರೆ ಆಯಿತು, ನಾನು ಪೂರ್ತಿಯಾಗಿ ಕರಿನೀರಿನ ಕೈದಿಯಾದೆ ಎಂತಲೇ ಲೆಕ್ಕ. ನನಗೆ ಗೆಳೆಯರು ತಂದು ಕೊಟ್ಟ ಹೊಸ ಸೂಟು ಚೆನ್ನಾಗಿದೆ. ಪ್ರಯಾಣಕ್ಕೆ ಅದನ್ನು ಉಪಯೋಗಿಸುತ್ತೇನೆ.*

*ಆರೋಗ್ಯ ಅತ್ಯುತ್ತಮವಾಗಿದೆ. ತೂಕ ಎರಡು ಪೌಂಡ್ ಹೆಚ್ಚಿದೆ. (ನಾಲ್ಕು ಪೌಂಡ್ ಗಡ್ಡ ಬೆಳೆಸಿಕೊಂಡು ಅಲ್ಲ - ನಿಮ್ಮ ಹಾಗೆ !). ಆದರಿಂದ ನಿಮಗೆ ಆನಂದವಾಗುವುದೆಂದು ನಂಬಿರುವೆ....'*

ಜೈಲಿನಲ್ಲಿ ಕೊನೆಯ ಬಾರಿ ನೋಡಲು ಅಯ್ಯರ್ ಬಂದಿದ್ದರು. ಹೋಗುವ ಮೊದಲು ನಾನವರಿಗೆ ಹಿಂದಿಯಲ್ಲಿ ಪಿಸುಗುಟ್ಟಿದೆ :

'ಸಾಧ್ಯವಾದರೆ ಮಾರ್ಸೇಲ್ಸ್‌ನಲ್ಲಿ ಸಿಕ್ಕೋಣ.' ಮಾರ್ಸೇಲ್ಸ್‌ನಲ್ಲಿ ಒಂದು ವಾಹನದೊಡನೆ ಸಿದ್ಧವಾಗಿರಬೇಕೆಂಬುದು ಅದರ ಅಭಿಪ್ರಾಯ. ಅಯ್ಯರ್‌ಗೆ ಅದು ಅರ್ಥವಾಯಿತು. ಅಷ್ಟರಲ್ಲಿ ಕಾವಲುಗಾರ ಅಡ್ಡಬಂದು 'ಭೇಟಿಯ ಸಮಯ ಮುಗಿಯಿತು' ಎಂದ. ಪರಸ್ಪರ ದಿಟ್ಟಿಸಿ ನೋಡಿದೆವು. ಅಯ್ಯರ್ ಮುಖದಲ್ಲಿ ಕಣ್ಣೀರು ಕಾಣಿಸಿಕೊಂಡಿತು. ನಾನು ಕಂಬನಿ ತಡೆದುಕೊಳ್ಳುತ್ತಾ ಹೇಳಿದೆ: 'ಬೇಡಿ, ಬೇಡಿ, ನಾವು ಹಿಂದುಗಳು. ಭಗವದ್ಗೀತೆ ಓದಿದವರು. ಈ ಹೃದಯಹೀನರೆದುರಿಗೆ ಕಣ್ಣೀರು ಸಲ್ಲದು.'



ಬ್ರಿಕ್ಸ್ಟನ್ ಸೆರೆಮನೆ

ಅಯ್ಯರ್ ಬೆನ್ನ ಹಿಂದೆ ಬ್ರಿಟಿಷ್ ಗುಪ್ತಚರರ ಕಾವಲು ಮೊದಲಾಯಿತು. ಅವರು ಪ್ಯಾರಿಸ್ಸಿಗೆ ಹೋಗಲಿದ್ದಾರೆಂದು ತಿಳಿಯುತ್ತಲೇ, ಅವರ ಬಂಧನದ ಆಜ್ಞೆಯೂ ಸಿದ್ಧವಾಯಿತು. ತಾವು ಬಂಧಿತರಾದರೂ, ಮಾರ್ಸೇಲ್ಸ್‌ನಲ್ಲಿ ವ್ಯವಸ್ಥೆ ಮಾಡಲು ಪ್ಯಾರಿಸ್ಸಿಗೆ ಅವರು ರಹಸ್ಯಪತ್ರ ಮೊದಲೇ ಕಳಿಸಿದರು. ಅನಂತರತಾವೂ ಹೊರಟರು.

ಡೋವರ್ ರೈಲು ನಿಲ್ದಾಣದಲ್ಲಿ ಅವರಿಗಾಗಿ ಗುಪ್ತಚರರ ತಂಡ ಕಾದಿತ್ತು. ಆದರೆ ಅದೃಷ್ಟವಶಾತ್ ಅಂದು ಅಯ್ಯರ್‌ಗೆ ಲಂಡನ್ನಿನಲ್ಲಿ ರೈಲು ತಪ್ಪಿಹೋಯಿತು. ಬೇರೆ ವಾಹನದ ಮೂಲಕ ಡೋವರ್ ಬಂದರಿಗೆ ನೇರವಾಗಿ ಹೋಗಿ ಸೇರಿದರು. ರೈಲು ನಿಲ್ದಾಣದಲ್ಲಿ ನಿರಾಶರಾದ ಗುಪ್ತಚರರಲ್ಲೊಬ್ಬ ಬಂದರಿನ ಬಳಿ ಬಂದ. ಇವರನ್ನು ಕಾಣುತ್ತಲೇ, 'ಮಿಸ್ಟರ್ ಅಯ್ಯರ್, ನೋಡಿ, ನಿಮಗೊಂದು ತಂತಿ ಬಂದಿದೆ' ಎಂದು ಒಂದು ಕಾಗದ ಮುಂದೆ ಹಿಡಿದ, ಆ ಕಪಟಿ. ಅಯ್ಯರ್ ಕೈಲಿದ್ದ ಸೂಟ್‌ಕೇಸ್ ಮೇಲೆ 'ವಿ.ವಿ.ಎಸ್.' ಎಂಬ ಅಕ್ಷರಗಳಿದ್ದವು. ಅದರಿಂದಲೇ ತಮ್ಮನ್ನು ಪತ್ತೆಹಚ್ಚಿರಬೇಕೆಂದುಕೊಂಡರು. ಇವರು ನಿಂತಕೂಡಲೆ, ನಿಶ್ಚಿತ ವ್ಯಕ್ತಿ ಇವರೇ ಎಂದು ತಿಳಿಯುತ್ತಿತ್ತು ; ಮರುಕ್ಷಣವೇ ಬಂಧನವೂ ಆಗುತ್ತಿತ್ತು. ಅಯ್ಯರ್ ಇಂಥ ಎಷ್ಟೋ ಜನರಿಗೆ 'ಗಂಜಿ' ಕುಡಿಸಿದ್ದರು ! ಅವನು ಚಾಪೆಯ ಕೆಳಗೆ ತೂರಿದರೆ, ಇವರು ರಂಗೋಲಿಯ ಕೆಳಗೇ ತೂರಿದರು!

'ನೀವು ತಪ್ಪು ಭಾವಿಸಿರಬೇಕು. ನನ್ನ ಹೆಸರು ವೀರವಿಕ್ರಮಸಿಂಗ್ !' ಎಂದು ಹೇಳುತ್ತಾ, ನೆಟ್ಟಗೆ ಹೋಗಿ ಹಡಗುಕಟ್ಟೆ ಪ್ರವೇಶಿಸಿದರು. ಅಲ್ಲಿ ಆಂಸ್ಟರಡಂಗೆ ಹೊರಟಿದ್ದ ನಾವೆಯಲ್ಲಿ ಕುಳಿತುಬಿಟ್ಟರು. ಪತ್ತೇದಾರ ಒಂದು ನಿಮಿಷ ದಿಗ್ಭ್ರಮೆಗೊಂಡು ನಿಂತ. ಅಯ್ಯರ್ ಫ್ರಾನ್ಸಿನ ಹಡಗು ಹತ್ತಿದ್ದರೆ ಆಗ ಅವನ ಸಂಶಯ ಬಲವಾಗುತ್ತಿತ್ತು. ಆದರೆ ಈಗ ಅವನಿಗೂ ನಿಶ್ಚಿಂತೆ ; ಇವರಿಗೂ ನಿರಾತಂಕ ! ಸದ್ಯ ಪತ್ತೇದಾರ ತನ್ನ 'ತಪ್ಪಿ'ಗಾಗಿ 'ವೀರವಿಕ್ರಮ ಸಿಂಗ್' ಬಳಿ ಕ್ಷಮೆ ಕೇಳಲು ಬರಲಿಲ್ಲ !

ಬ್ರಿಟಿಷ್ ಲೇಖಕ ಡೇವಿಡ್ ಗಾರ್ನೆಟ್ ಸಹ ನನ್ನ ಬಿಡುಗಡೆಗೆ ಪ್ರಯತ್ನಿಸಿದ. ಆದರೆ ಅವನ ಯೋಜನೆಯೂ ಕೈಗೂಡಲಿಲ್ಲ. ಕೊನೆಯ ಭೇಟಿಯಲ್ಲಿ ನಾನೇ ಅವನಿಗೆ ಸಮಾಧಾನ ಹೇಳಬೇಕಾಯಿತು. 'ಸೋಲು ಗೆಲುವು ಮುಖ್ಯವಲ್ಲ. ಹೋರಾಟದಲ್ಲಿ ಜಯಾಪಜಯಗಳ ಚಿಂತೆ ಸಲ್ಲದು. ಯಾವ ಉದ್ದೇಶಕ್ಕಾಗಿ ಹೋರಾಡುತ್ತೇವೆಂಬುದೇ ಮುಖ್ಯ.... ನನ್ನ ಬಗ್ಗೆ ಚಿಂತಿಸಬೇಡ. ಹೇಗೋ, ಅಂತೂ ತಪ್ಪಿಸಿಕೊಳ್ಳುತ್ತೇನೆ. ನಿನ್ನ ಯೋಜನೆ ವಿಫಲವಾದ ಪಕ್ಷದಲ್ಲಿ ಬೇರೆ ಒಂದನ್ನು ನಾನಾಗಲೇ



ಎಸ್.ಎಸ್.ಮೋರಿಯಾ ಹಡಗು

ತಯಾರಿಸಿಕೊಂಡಿದ್ದೇನೆ.'

ಜುಲೈ ಮೊದಲ ದಿನ 'ಎಸ್.ಎಸ್. ಮೊರಿಯಾ' ಹಡಗು ಚಲಿಸಿತು. ಹಡಗಿನ ಯಂತ್ರಗಳು ತಿರುಗತೊಡಗುತ್ತಲೇ ನನ್ನ ಆಲೋಚನೆಗಳೂ ಸುತ್ತತೊಡಗಿದವು.

'ಮಿತ್ರರೇ, ಹೋಗಿಬರುವೆ! ಮಧುರ ಸ್ನೇಹದ ರೇಶ್ಮೆಯ ಎಳೆಗಳು ನಮ್ಮ ಹೃದಯವನ್ನು ಬಂಧಿಸಿವೆ. ಪವಿತ್ರ ಮಾತೃಸೇವಾ ವ್ರತದ ದೇವಕಾರ್ಯದಲ್ಲಿ ಪಾಲುಗೊಂಡಾಗ ಆ ಸ್ನೇಹ ಅತ್ಯಂತ ಮಧುರ ವಾಗುತ್ತದೆ; ಮುಂಜಾವಿನ ಮೃದು ಮಂಜಿನಂತೆ ಪ್ರಾಣಪುಷ್ಪದ ಪರಿಮಳವನ್ನರಳಿಸುತ್ತದೆ. ಸ್ನೇಹಿತರೇ, ಹೋಗಿಬರುತ್ತೇನೆ, ಹೋಗಿಬರುತ್ತೇನೆ....!' ಹೀಗೆಂದು,

ಬ್ರಿಕ್ಸ್‌ಟನ್ ಜೈಲು ಬಿಡುವ ಮೊದಲೇ ಬೀಳ್ಕೊಡುಗೆಯ ಸಂದೇಶ ಬರೆದಿದ್ದೆ. ಕಾವ್ಯರೂಪದಲ್ಲಿ ಅದು ಹೊರಹೊಮ್ಮಿತ್ತು. ಲಂಡನ್ನಿನ ಆಪ್ತರಿಗೆಲ್ಲ ಅದು ತಲುಪಿತು. 'ವಿಜಯಿಗಳಾಗಿ ರಾಜಮಕುಟ ಧರಿಸು ವವರೆಗೆ ಇಲ್ಲವೆ ಹುತಾತ್ಮರಾಗಿ ಹೂ ರಾಶಿ ಧರಿಸುವವರೆಗೆ ಹೋರಾಟ ಸಾಗಲಿ' ಎಂಬುದು ಅದರ ಕೊನೆಯ ಸಾಲು ! ಪುನಃ ಪುನಃ ಅದರ ನೆನಪಾಗುತ್ತಲೇ ಇತ್ತು.

ಕಡಲ್ಗಾಲುವೆ ದಾಟಿ, ಫ್ರಾನ್ಸ್ ಮೂಲಕ ರೈಲಿನಲ್ಲಿ ಹೋಗಿ, ಮಾರ್ಸೇಲ್ಸ್‌ನಲ್ಲಿ ಹಡಗು ಹತ್ತುವುದು ಮಾಮೂಲು ದಾರಿ; ಭಾರತಕ್ಕೆ ಹತ್ತಿರದ ಮಾರ್ಗ. ಆದರೆ ಫ್ರೆಂಚ್ ನಾಡಿನಲ್ಲಿ ಅಡಿಗಡಿಗೂ ಭಾರತೀಯ ಕ್ರಾಂತಿಕಾರಿಗಳಿದ್ದರು. ಅವರು ಸುಮ್ಮನೆ ಇದ್ದಾರೆಯೆ ? ನನ್ನನ್ನು ಬ್ರಿಟಿಷ್ ಪೊಲೀಸರ ಹಿಡಿತದಿಂದ ಬಿಡಿಸದೆ ಬಿಟ್ಟಾರೆಯೆ ? ಇಂಗ್ಲೆಂಡಿಗೆ ಆ ಭಯ ! ಅದಕ್ಕಾಗಿ 'ಮೊರಿಯಾ' ಹಡಗು ಬಿಸ್ಕೆ ಕೊಲ್ಲಿಯ ಮೂಲಕ ಭಾರತಕ್ಕೆ ಹೊರಟಿತ್ತು. ನಡುವೆ ಎಲ್ಲೂ ನಿಲ್ಲದೆ ನೇರವಾಗಿ ಹೋಗಬೇಕೆಂದು ಅದಕ್ಕೆ

ಆಜ್ಞೆಯಾಗಿತ್ತು.

ಬ್ರಿಟಿಷ್ ಸರಕಾರ ಜೂನ್ 29ರಂದೇ ಫ್ರೆಂಚ್ ಸರಕಾರಕ್ಕೆ ಒಂದು ವಿನಂತಿ ಕಳಿಸಿತ್ತು. ಫ್ರಾನ್ಸ್‌ನಲ್ಲಿರುವ ಕ್ರಾಂತಿಕಾರಿಗಳು ಹಡಗಿನಲ್ಲಿರುವ ಕೈದಿಯನ್ನು ಬಿಡಿಸಲು ಬಂದರೆ, ರಕ್ಷಣೆ ಒದಗಿಸಬೇಕೆಂದು ! ನನ್ನ ಕಾವಲಿಗೆ, ಸ್ಕಾಟ್‌ಲೆಂಡ್‌ಯಾರ್ಡ್‌ನ ಅಧಿಕಾರಿ ಜಾನ್ ಪಾರ್ಕರ್, ಮುಂಬೈನ ಎ.ಎಸ್.ಪಿ. ಆದ ಪವರ್ ಮತ್ತು ಹತ್ತು ಪೊಲೀಸರಿದ್ದರು.

ಊಟಕ್ಕೆ ಆಚೀಚೆ ಹೋಗಿಬರುವ ಅವಕಾಶವಿತ್ತು. ಮೈಗೆ ಸರ್ಪಕಾವಲು. ಕಣ್ಣಿಗೆ ಹಾಗಿಲ್ಲ ; ಮನಸ್ಸಿಗಂತೂ ಇಲ್ಲವೇ ಇಲ್ಲ ! ಸ್ನಾನಕ್ಕೆ, ಶೌಚಕ್ಕೆ ಹೋದಾಗ ಹಾಗೇ ದೃಷ್ಟಿ ಹಾಯಿಸಿದೆ. ಹಡಗಿನ ಗವಾಕ್ಷಗಳ ಕಡೆಗೆ ಕಳ್ಳನೋಟ ಬೀರಿದೆ. ಆಸೆ ಚಿಗುರೊಡೆಯಿತು. ನನ್ನ ದೃಷ್ಟಿಯ ಮೇಲೆ ಬೇರೆಯವರ ದೃಷ್ಟಿ ಬಿದ್ದರೆ ಬಲು ಅಪಾಯಕರ ! ಗವಾಕ್ಷದ ಸಮೀಪದಲ್ಲಿ ನಿಲ್ಲುವುದು ಇನ್ನೂ ಭಯಂಕರ ! ಒಂದು ಗಳಿಗೆಯೂ ಬಿಡದೆ ಪೊಲೀಸರ ಅನಿಷ್ಟನೋಟ ಚುಚ್ಚುತ್ತಲೇ ಇತ್ತು.

ಗವಾಕ್ಷದಲ್ಲಿ ಈ ದೇಹ ತೂರಬಲ್ಲದೆ? ಇನ್ನೂ ಅಪನಂಬಿಕೆ. ನನ್ನ ಎದೆಯ ಸುತ್ತಳತೆ 36 ಅಂಗುಲ. ಗವಾಕ್ಷದ್ದು ? ತಿಳಿಯುವುದು ಹೇಗೆ ? ರಾತ್ರಿ ಮಲಗಿದಾಗಲೂ ಕಾವಲು ; ಒಂದು ಕಡೆ ಪವರ್, ಇನ್ನೊಂದು ಕಡೆ ಪಾರ್ಕರ್ ! ಬಿಸ್ಕೆ ಕೊಲ್ಲಿ ಬಂತು. ಅಲ್ಲಿ ಅಲೆಗಳ ಉಬ್ಬರವಿಳಿತ ಹೆಚ್ಚು. ಹಡಗು ಆಚೀಚೆ ಓಲಾಡುತ್ತದೆ; ಕುಲುಕಾಡುತ್ತದೆ, ಒಳಗೆ ನಿಂತವರು ತೂರಾಡುವಂತೆ ಆಗುತ್ತದೆ. ಸ್ನಾನಗೃಹಕ್ಕೆ ಹೋದೆ. ಪೊಲೀಸಿನವನು ನೋಡುತ್ತಲೇ ಇದ್ದ. ನಡುವೆ ತೂರಾಡಿದೆ. ಬೀಳುವವನಂತೆ ನಟಿಸಿ, ಗವಾಕ್ಷವಿದ್ದ ಗೋಡೆಗೆ ಕೈಕೊಟ್ಟು ಎದ್ದುನಿಂತೆ. ಸ್ನಾನ ಮುಗಿಸಿದೆ.

ಸ್ವಲ್ಪ ನೆಗೆದರೆ ಕೈಗೆ ಸಿಕ್ಕುವಂತಿತ್ತು. ಅದರ ಅಗಲದ ಅಂದಾಜೂ ಆಯಿತು ; ಸುಮಾರು ಒಂದು ಅಡಿ. ಪ್ರಯತ್ನಿಸಲು ಅಭ್ಯಂತರವಿಲ್ಲ. ಮೊದಲು ತಲೆ ತೂರಿಸಬೇಕು ; ಆಮೇಲೆ ಭುಜ ಸಂಕುಚಿಸಬೇಕು; ಆಮೇಲೆ ಎದೆ.... ! ಕುಳಿತಾಗ, ನಿಂತಾಗ, ಮಲಗಿದಾಗಲೂ ಅದೇ ಚಿತ್ರ. ಒಂದೊಂದು ಕ್ರಿಯೆಯನ್ನೂ ಧ್ಯಾನಿಸಿ, ಗಟ್ಟಿಮಾಡಿಕೊಳ್ಳತೊಡಗಿದೆ. ಆದರೆ ಹೊರಗಿನ ಓಡಾಟ, ಮಾತುಕತೆ ಎಲ್ಲವೂ ಶಾಂತ, ಸ್ವಾಭಾವಿಕ.

ದಿನಗಳುರುಳಿದವು ; ಐದು, ಆರು, ಏಳು - ಮಾರ್ಸೇಲ್ಸ್ ! ನಿಲ್ಲಿಸಬಾರದು ಎಂದಿದ್ದರೂ 'ಮೊರಿಯಾ' ನಿಲ್ಲಲೇಬೇಕಾಯಿತು. ಕಾರಣ, ಹಡಗಿನ ಯಂತ್ರದಲ್ಲಿ ಏನೋ ಅಡಚಣೆ. ಅದನ್ನು ಸರಿಪಡಿಸದೆ ಮುಂದೆ ಹೋಗುವಂತಿಲ್ಲ. ಜುಲೈ 7ರಂದು ಗುರುವಾರ ಸಂಜೆಯಾಗಿತ್ತು. 50 ಗಜ ಆಚೆ ದಡ ಕಾಣುತ್ತಿತ್ತು. ಮುದುರಿಕೊಂಡಿದ್ದ ಮನಸ್ಸು ಗರಿಗೆದರಿತು. ಹೊಸ ಆಸೆ, ಹೊಸ ಹುಮ್ಮಸ್ಸು, ಸಾಹಸ - ಸಂತೋಷಗಳ ಬಾನುಲಿ ಪಿಸುಗುಟ್ಟಿತು. ಎದುರಿಗೆ ಜಲ, ಆಮೇಲೆ ನೆಲ ! ಫ್ರಾನ್ಸ್ ದೇಶದ ಸ್ವತಂತ್ರ ನೆಲ ! ಅದೇನೋ ಸರಿ ; ಆದರೆ ಜಲಕ್ಕೆ ಯಾವುದರ ಮೂಲಕ ? ಅದು ಗೊತ್ತೇ ಇದ್ದಿತು. ಸ್ನಾನದ ಕೋಣೆಯಲ್ಲಿ ಹಾಗೂ ಶೌಚಕೂಪದಲ್ಲಿ ಗವಾಕ್ಷವಿತ್ತು ! ನಿಜಕ್ಕೂ ಅದು ಬೆಳಕಿನ ಕಿಂಡಿಯೇ ಸೈ ; ಅದರಿಂದ ನನಗೆ ಹೊಸ ಬೆಳಕು ಸಿಕ್ಕಿತ್ತು !

ಮಾರ್ಸೇಲ್ಸ್‌ಗೆ ಅಯ್ಯರ್ ಬಂದಿರಬಹುದೆ ? ಸ್ನೇಹಿತರಿಗೆಲ್ಲ ಸುದ್ದಿ ಕೊಟ್ಟಿರಬಹುದೆ ? ದಡದಲ್ಲಿ ಸಮೀಪದಲ್ಲೆಲ್ಲೋ ಸಮಯ ಕಾಯುತ್ತಿರಬಹುದೆ ? ಬಹಳ ಹೊತ್ತು ಯೋಚಿಸಿದೆ. ರಾತ್ರಿ ಮಲಗುವ ಮುನ್ನ ಸ್ನಾನ ಮಾಡುವುದು ನನ್ನ ಪದ್ಧತಿ. ಸ್ನಾನದ ನಡುವೆ ಗವಾಕ್ಷದ ಕಡೆಗೆ ನೋಟ ಹರಿಸಿದೆ. ಆದರೆ

ಅದರ ಬಾಗಿಲು ಭದ್ರವಾಗಿ ಮುಚ್ಚಿತ್ತು. ಮುಂದೇನು ? ಶೌಚಕೂಪದ ಗವಾಕ್ಷ! ಅದಕ್ಕಾಗಿ ಬೆಳಗಿನವರೆಗೆ ಕಾಯಬೇಕು.

ಇಡೀ ರಾತ್ರಿ ನಿದ್ದೆ ಹತ್ತಲಿಲ್ಲ ಆದರೂ ಗಾಢನಿದ್ರೆಯಲ್ಲಿ ಮುಳುಗಿದಂತೆ ನಟಿಸುತ್ತಿದ್ದೆ. ಯೋಚನೆ ನಾಗಿತ್ತು. ಈ ಪ್ರಯತ್ನದಲ್ಲಿ ಗೆದ್ದೆನೋ ಸರಿ. ಇಲ್ಲವಾದರೆ ? 'ಎಂಥ ಹುಡುಗಾಟ ! ಸಾವರಕರ್ ಒಬ್ಬ ಹುಚ್ಚ' ಎಂದು ಜಗತ್ತು ಹಂಗಿಸುತ್ತದೆ. ಶಿಕ್ಷೆಯ ಪ್ರಮಾಣ ಹೆಚ್ಚುತ್ತದೆ. ಇಲ್ಲಿನ ಕಾವಲುಗಾರರು ಸುಮ್ಮನೆ ಬಿಡುವರೆ ? ತಮ್ಮ ನೌಕರಿಗೆ ಕಲ್ಲುಹಾಕಲು ಹೊರಟ 'ಭಯಂಕರ ಪಾಪಿ' ಯನ್ನು ಏನೆಲ್ಲ ಚಿತ್ರಹಿಂಸೆಗೆ ಒಳಪಡಿಸಬಹುದು ? ಎಷ್ಟೆಲ್ಲ ಅವಾಚ್ಯ ಹೊಲಸು ಶಬ್ದಗಳನ್ನಾಡಬಹುದು !

ಆದರೆ ನನಗೆ 'ಹುಚ್ಚು' ಹಿಡಿದಿತ್ತು; ಸ್ವಾತಂತ್ರ್ಯದ ಹಂಬಲದಿಂದ ಉನ್ಮತ್ತನಾಗಿದ್ದೆ. ಭಾರತಾಂಬೆಯ ದನಿ ಕಿವಿಗಳಲ್ಲಿ ಮೊರೆಯುತ್ತಿತ್ತು. 'ಏಳು, ಪಾರಾಗು ! ಇನ್ನೂ ಸಮಯವಿದೆ, ಅವಕಾಶವಿದೆ ಮಗು, ಶ್ರೀ ಕೃಷ್ಣ ಜರಾಸಂಧನಿಂದ ತಪ್ಪಿಸಿಕೊಂಡು ಓಡಲಿಲ್ಲವೆ ? ಆಗ್ರಾದಿಂದ ಶಿವಾಜಿ ಪಲಾಯನ ಮಾಡ ಲಿಲ್ಲವೆ? ಏಳು, ಬೋನಿನಲ್ಲಿ ಬಿದ್ದಿರುವುದಕ್ಕೆ ನೀನೇನು ಇಲಿಮರಿಯಲ್ಲ. ಅಭಿನವಭಾರತದ ಮೂಲ ಪುರುಷ ನೀನು; ಕ್ರಾಂತಿಕಾರಿ ಸಂಸ್ಥೆಯ ಅಧ್ಯಕ್ಷ ನೀನು. ಈಗಲೇ ಹೊರಡು. ಈಗಿಲ್ಲದಿದ್ದರೆ ಇನ್ನೆಂದಿಗೂ ಇಲ್ಲ...'

ಹೌದು, ಹೌದು ! ನನ್ನದು ಶ್ರೀಕೃಷ್ಣನ ಪರಂಪರೆ; ಶಿವ ಛತ್ರಪತಿಯ ಆದರ್ಶ, ವಾಸುದೇವ ಫಡಕೆ ಏಡನ್ನಿನ ಸೆರೆಮನೆಯಿಂದ ಹೊರಬಿದ್ದಿರಲಿಲ್ಲವೆ ? ಹತ್ತಾರು ಮೈಲಿ ಮರಳುಗಾಡಿನಲ್ಲಿ ಓಡಿರಲಿಲ್ಲವೆ ? ಅವನ ವಂಶ ನನ್ನದು ಕ್ರಿಮಿಕೀಟಗಳಂತೆ ಬಾಳಲೊಲ್ಲೆ, ಸಾಯಲೊಲ್ಲೆ. ಸ್ವಾತಂತ್ರ್ಯದೇವಿ ದಡದಲ್ಲಿ ನಿಂತಿದ್ದಾಳೆ; ಕೈಬೀಸಿ ಕರೆಯುತ್ತಿದ್ದಾಳೆ. ಹೋಗಬೇಕು, ಹೋಗಲೇಬೇಕು.

ಲಂಡನ್ನಿನಲ್ಲಿ ಓದಿದ್ದ ಅನೇಕ ದೇಶಭಕ್ತರ, ಕ್ರಾಂತಿಕಾರಿಗಳ ಕಥೆ ನೆನಪಾಯಿತು. ಯಾರೋ ಒಬ್ಬ ಕ್ರಾಂತಿಕಾರಿ ತಾನು ತೊಟ್ಟಿದ್ದ ಕೋಟನ್ನು ತಟ್ಟನೆ ತೆಗೆದುಹಾಕುವ ಅಭ್ಯಾಸ ಮಾಡಿಕೊಂಡಿದ್ದ. ಒಂದು ಬಿಕ್ಕಟ್ಟಿನ ಪ್ರಸಂಗದಲ್ಲಿ ಆ ಕಲೆ ಅವನ ಪ್ರಾಣವನ್ನೇ ಉಳಿಸಿತು. ಈ ಪ್ರಸಂಗ ಸ್ಮರಿಸಿದೊಡನೆಯೇ ನಾನು ತೊಟ್ಟಿದ್ದ 'ಸ್ಲೀಪಿಂಗ್ ಗೌನ್' ನೆನಪಾಯಿತು. ಶೌಚಾಲಯದ ಬಾಗಿಲ ನಡುವೆ ಒಂದು ಗಾಜಿನ ಚೌಕಟ್ಟಿತ್ತು. ಒಳಗೆ ಹೋದವರ ಚಲನವಲನಗಳನ್ನು ಗಮನಿಸುವ ನಲುವಾಗಿ ! ಇರಲಿ, ಭಯವಿಲ್ಲ ಎಂದುಕೊಂಡೆ !

ಇರುಳು ಕಳೆಯಿತು. ಅಂತರಾತ್ಮ ಹೇಳಿತು - ಏಳು, ಬೆಳಗಾಯಿತು ! ನಾನು ಮೇಲೆದ್ದೆ. ಪಕ್ಕದಲ್ಲಿ ಮಲಗಿದ್ದ ಪಾರ್ಕರ್‌ಗೆ ಇನ್ನೂ ಅರೆನಿದ್ದೆ! 'ಹೊರಗೆ ಹೋಗಬೇಕು' ಎಂದೆ. ಅವನು ಕಾವಲಿದ್ದ ದಫೇದಾರ ನಿಗೆ ಆಜ್ಞಾಪಿಸಿದ. ಮೊಹಮ್ಮದ್ ಸಿದ್ದಿಕ್ ಮತ್ತು ಸಿಂಗ್ ಜತೆಗೆ ಬಂದರು. ನಾನು 'ಸ್ಲೀಪಿಂಗ್ ಗೌನ್' ಸಮೇತ ಹೊರಟೆ. ಮನಸ್ಸಿನ ಧನುಸ್ಸಿನ ನಡುವೆ ಯೋಜನೆ ಬಾಣ ಹೂಡಿ ಎಳೆದಾಗಿತ್ತು. ಕಾರ್ಯ ರೂಪದಲ್ಲಿ ಹೊರಬರಲು ಅದು ಹಾತೊರೆಯುತ್ತಿತ್ತು.

ಸಹಜವಾಗಿ ಒಳಗೆ ಹೋದೆ. ಬಾಗಿಲು ಹಾಕಿದೆ ; ಅಗುಳಿಯನ್ನೂ ಹಾಕಿದೆ. ತಟ್ಟನೆ 'ಸ್ಲೀಪಿಂಗ್ ಗೌನ್' ತೆಗೆದು ಗಾಜಿನ ಚೌಕಟ್ಟಿಗೆ ಹೊದಿಸಿದೆ - ಸ್ವಾಭಾವಿಕ ಕ್ರಿಯೆ ಎಂಬಷ್ಟು ನಿರ್ಲಕ್ಷ್ಯವಾಗಿ ! ನೆಗೆದು ಗವಾಕ್ಷದ ಅಂಚು ಹಿಡಿದುಕೊಂಡೆ. ದೇಹ ಮೇಲಕ್ಕೆಳೆದುಕೊಂಡು, ತಲೆ ಹೊರಗೆ ತೂರಿಸಿ ಭುಜ ನುಗ್ಗಿಸತೊಡಗಿದೆ.

ಧಡ್ ಧಡ್ ಧಡ್ !

ಬಹುಶಃ ಕಾವಲುಗಾರ ಬಾಗಿಲಿಗೆ ಒದೆಯುವ ಶಬ್ದ. ದೇಹವನ್ನು ಇನ್ನಷ್ಟು ಚಿಕ್ಕದು ಮಾಡಿಕೊಂಡು ಮುಂದಕ್ಕೆ ತೆವಳಿದೆ. ಶರೀರದ ಸುತ್ತಲೂ ಅಲ್ಲಲ್ಲೆ ಹರಿದ ಚರ್ಮ ; ಹರಿಯತೊಡಗಿದ ರಕ್ತ! ಮನಸ್ಸಿನಲ್ಲಿ 'ಸ್ವಾತಂತ್ರ್ಯ ಲಕ್ಷ್ಮೀ ಕೀ ಜೈ' ಘೋಷಿಸುತ್ತಿದ್ದಂತೆಯೇ ಸಮುದ್ರದ ಉಪ್ಪುನೀರಿಗೆ ದೇಹ ಧೊಪ್ಪನೆ ಬಿತ್ತು.

ಹಡಗಿನ ಮೇಲೆ ಗದ್ದಲ ಎದ್ದಿತು. ಒಬ್ಬಿಬ್ಬರು ಹಡಗಿನ ಕಾವಲುಗಾರರೂ ನೀರಿಗೆ ಹಾರಿದರು. ಅವರು ಸಮುದ್ರದ ನೀರಿನಲ್ಲಿ ಈಜಿ ಪಳಗಿದ್ದವರು ! ಆಚೀಚೆ ಗುಂಡುಗಳ ಸಪ್ಪಳವೂ ಕೇಳತೊಡಗಿತು ಏಟು ತಪ್ಪಿಸಿಕೊಳ್ಳಲು ಮುಳುಗುತ್ತಾ, ಏಳುತ್ತಾ ದಡದ ಕಡೆಗೆ ಈಜಿಕೊಂಡು ಧಾವಿಸಿದೆ. ಒಂದೊಂದು ಕ್ಷಣವೂ ಅಮೂಲ್ಯ. ಕೊನೆಗೆ ಕೈಗೆ ದಡ ಸೋಕಿದಾಗ ಸ್ವಲ್ಪ ಸಮಾಧಾನ. ಅಂತಾರಾಷ್ಟ್ರೀಯ ಕಾನೂನಿನ ಪ್ರಕಾರ, ದಡ ಮುಟ್ಟಿದರೆ ಸಾಕು, ಆ ದೇಶದ ಆಶ್ರಯಾರ್ಥಿ ಆದಂತೆ; ಅಂಥವರ ರಕ್ಷಣೆಯ ಹೊಣೆ ಆ ದೇಶಕ್ಕೇ ಸೇರಿದ್ದು. ಆದರೆ ಹಿಂದೆ ಶತ್ರುಗಳು ಬೆನ್ನಟ್ಟಿ ಬರುತ್ತಿದ್ದರು. ಎದುರಿನ ಬಂದರಿನ ಗೋಡೆ !

ಒಮ್ಮೆ ಹತ್ತಲು ಯತ್ನಿಸಿ ನೀರಿಗೆ ಜಾರಿದೆ. ಆದರೆ ಎರಡನೆಯ ಬಾರಿ ಯಶಸ್ವಿಯಾಗಿ ಮೇಲೇರಿದೆ. ಬಾಲ್ಯದ ಅಭ್ಯಾಸಗಳೆಲ್ಲ ಇಂದಿಗೆ ಸಾರ್ಥಕತೆ ಹೊಂದಿದ್ದವು.

ಜಲ ಮುಗಿದಿತ್ತು ; ಗಟ್ಟಿ ನೆಲ ಬಂದಿತ್ತು. ದಾಸ್ಯ ಕಳೆದಿತ್ತು. ಸ್ವಾತಂತ್ರ್ಯ ಸಿಕ್ಕಿತ್ತು. ನಾಗರಾಧಿಪತಿ ಯೆನಿಸಿದ ಬ್ರಿಟಿಷ್ ಸಾಮ್ರಾಜ್ಯದ ಮುಖಭಂಗವಾಗಿತ್ತು ! ಮಾನಸಿಕವಾಗಿ ಮಾತ್ರವಲ್ಲ, ಶಾರೀರಿಕವಾಗಿ ಹಾಗೂ ಕಾನೂನಿಗನುಗುಣವಾಗಿಯೂ ನಾನೂ ಮುಕ್ತನಾಗಿದ್ದೆ. ಅಂದಿನ ಸೂರ್ಯೋದಯ ಜಗತ್ತಿನ ಇತಿಹಾಸದಲ್ಲೇ ಅವಿಸ್ಮರಣೀಯ.

ಚರ್ಮ ಕಿತ್ತು ಗಾಯಗಳಾದ ದೇಹ ; ಹರಿದು ಚಿಂದಿಯಾದ ತುಂಡು ಬಟ್ಟೆ ! ಊರಿನೊಳಕ್ಕೆ ಓಡತೊಡಗಿದೆ. ಕಾವಲುಗಾರರು ಬೆನ್ನಟ್ಟಿ ಬರುತ್ತಿದ್ದರು; 'ಕಳ್ಳ, ಕಳ್ಳ ಹಿಡಿಯಿರಿ !' ಎಂದು ಕೂಗುತ್ತಿದ್ದರು. ಎರಡು ಫರ್ಲಾಂಗ್ ಓಡುವಷ್ಟರಲ್ಲಿ ಓರ್ವ ಫ್ರೆಂಚ್ ಪೊಲೀಸಿನವನು ಕಣ್ಣಿಗೆ ಬಿದ್ದ. ನೇರವಾಗಿ ಅವನ ಬಳಿಗೆ ಹೋದೆ ; ಹರಕು ಮುರುಕು ಫ್ರೆಂಚ್ ಭಾಷೆಯಲ್ಲಿ ಹೇಳಿದೆ : 'ನನ್ನನ್ನು ಠಾಣೆಗೆ ಕರೆದುಕೊಂಡು ಹೋಗು ಅಥವಾ ಹತ್ತಿರದಲ್ಲಿರುವ ಯಾರಾದರೂ ಮ್ಯಾಜಿಸ್ಟ್ರೇಟ್ ಬಳಿಗೆ ಹೋಗೋಣ, ನಡಿ.'

ನನ್ನ ಮಾತು ಅವನಿಗೆ ಅರ್ಥವಾಯಿತೋ ಇಲ್ಲವೋ ತಿಳಿಯದು. ಅಷ್ಟರಲ್ಲಿ ಹಿಂಬಾಲಿಸಿ ಬರುತ್ತಿದ್ದವರು ನನ್ನ ಮೇಲೆ ಬಿದ್ದು ಹಿಡಿದುಕೊಂಡರು. ಫ್ರೆಂಚ್ ಪೊಲೀಸಿನವನ ಕೈ ಬೆಚ್ಚಗೆ ಮಾಡಿ, ಅವನ ಬಾಯಿ ಮುಚ್ಚಿಸಿದರು ! ಪುನಃ ನಾನು ಹಡಗಿಗೆ ಎಳೆದೊಯ್ಯಲ್ಪಟ್ಟೆ. ಕೈಕಾಲುಗಳಿಗೆ ಬೇಡಿ ಹಾಕಿ ಕೂಡಿಟ್ಟರು. ಕಾವಲು ಬಿಗಿಯಾಯಿತು. ಕಾವಲುಗಾರರ ಹಿಂಸೆ, ಬೈಗಳಕ್ಕೆ ಮಿತಿಯೇ ಇಲ್ಲ. ಭಾರತದ ಬಂದೀಖಾನೆಗಳಲ್ಲಿ ಅಭಿನವಭಾರತದ ಸದಸ್ಯರು ಅನುಭವಿಸುತ್ತಿದ್ದ ಅಮಾನುಷ ಚಿತ್ರಹಿಂಸೆಗಳ ಬಗ್ಗೆ ಕೇಳಿದ್ದೆ. ಈಗ ನನ್ನ ಸರದಿ ಎಂದುಕೊಂಡೆ.

ನಡುನಡುಗೆ ಭಗವದ್ಗೀತೆಯ 'ನೈನಂ ಛಿಂದಂತಿ ಶಸ್ತ್ರಾಣಿ, ನೈನಂ ದಹತಿ ಪಾವಕಃ....' ನೆನಪಾಗುತ್ತಿತ್ತು. ಮರಾಠಿಯಲ್ಲಿ ಅದೇ ಅರ್ಥದ ಶ್ಲೋಕಗಳನ್ನು ರಚಿಸಿಕೊಂಡು ಮನಸ್ಸಿನಲ್ಲೇ ಹೇಳಿಕೊಳ್ಳ ತೊಡಗಿದೆ:

**ಅನಾದಿ ಮೀ ಅವಧ್ಯ ಮೀ ಅನಂತ ಮೀ ಭಲಾ**
**ಜಿಂಕಣ ರಿಪು ಕವಣ ಅಸಾ ಜಗತಿ ಜನ್ಮಲಾ....**



ಒಂದು ರಾತ್ರಿಯಂತೂ ಒಬ್ಬ ಕಾವಲುಗಾರನ ಕಾಟ ಅತಿಯಾಯಿತು. ಮನಸ್ಸಿಗೆ ಬಂದಂತೆ ಅಪಶಬ್ದಗಳನ್ನು ಆಡತೊಡಗಿದ. 'ಹಾಗೆ ಮಾಡುತ್ತೇನೆ, ಹೀಗೆ ಮಾಡುತ್ತೇನೆ' ಎಂದು ಬೆದರಿಕೆ ಹಾಕಲಾರಂಭಿಸಿದ. ನನ್ನ ಮೌನದಿಂದ ಅವನಿಗೆ ಇನ್ನಷ್ಟು ಉತ್ತೇಜನ ಸಿಕ್ಕಿತು. ತನ್ನ ಭಾಷೆಯನ್ನೇ ಮುಂದುವರಿಸಿದ.

ಅತ್ತಿತ್ತ ದೃಷ್ಟಿ ಹಾಯಿಸಿದೆ. ನನ್ನ ಕೈಗೆಟಕುವಂತೆ ಒಬ್ಬ ಅಧಿಕಾರಿಯ ಉಡುಪು ತಗಲಿಹಾಕಿತ್ತು. ಅದರ ಜೇಬಿನಲ್ಲಿ ತುಂಬಿದ ಪಿಸ್ತೂಲು ಸಹ ಇತ್ತು. ಕೈಮೀರುವ ಪ್ರಸಂಗ ಬಂದರೆ ಅದನ್ನು ಪ್ರಯೋಗಿಸುವ ನಿಶ್ಚಯ ಮಾಡಿದೆ. ಮಲಗಿದ್ದವನು ತಟ್ಟನೆ ಎದ್ದು ಕುಳಿತು ಆ ಸಿಪಾಯಿಗೆ ಹೇಳಿದೆ · 'ಬೆದರಿಕೆ ಯಾರಿಗೆ ತೋರಿಸುತ್ತಿ ? ಸಾವಿನ ಭಯ ಯಾರಿಗೆ ಹಾಕುತ್ತಿ ? ನಾನು ಈ ಕ್ರಾಂತಿಯ ಕಸಬು ಕೈಗೊಂಡಾಗಲೇ ಎಲ್ಲಕ್ಕೂ ಎಳ್ಳುನೀರು ಬಿಟ್ಟಾಗಿದೆ. ಆದರೆ ನಿನಗೆ ಹೆಂಡತಿ ಮಕ್ಕಳಿದ್ದಾರೆ. ಪುನಃ ಅವರ ಮುಖ ನೋಡಬೇಕೆಂದಿದ್ದರೆ, ಗಂಭೀರವಾಗಿರು. ಮೈ ಮುಟ್ಟಿದರೆ, ಹುಷಾರ್ ! ಒಂದಾದರೂ ಹೆಣ ಬೀಳಿಸದೆ ಬಿಡುವುದಿಲ್ಲ. ಈಗ ನಾನು ಯಾವುದಕ್ಕೂ ಹೇಸುವುದಿಲ್ಲ, ನೆನಪಿರಲಿ !'

ಅಷ್ಟು ಹೇಳುತ್ತಲೇ ಅವನು ತಣ್ಣಗಾದ. ಅನಂತರಬೆದರಿಕೆಗೆ ಬದಲು ತನ್ನ ಸಂಸಾರ ತಾಪತ್ರಯ ಶುರು ಮಾಡಿದ: 'ಏನು ಮಾಡಲಿ ಮಹಾರಾಜ್! ಹೊಟ್ಟೆಪಾಡಿನ ಕೆಲಸ! ನೀವು ತಪ್ಪಿಸಿಕೊಂಡು ಹೋಗಿ ಬಡವರ ಹೊಟ್ಟೆಗೆ ಕಲ್ಲು ಹಾಕಬಹುದೆ, ಹೇಳಿ?'

ಅಂದು ಅಯ್ಯರ್, ಶ್ರೀಮತಿ ಕಾಮಾ ಮತ್ತಿತರ ಗೆಳೆಯರು ನನ್ನನ್ನು ಉಳಿಸಲು ಸರ್ವಸಿದ್ಧತೆ ಮಾಡಿಕೊಂಡಿದ್ದರು. ವಾಹನ ಸಹಿತ ಮಾರ್ಸೇಲ್ಸ್‌ಗೆ ಧಾವಿಸಿ ಬಂದರು. ಆದರೆ ತಲಪುವ ಹೊತ್ತಿಗೆ ಕಾಲ ಮಿಂಚಿಹೋಗಿತ್ತು. ಅವರು ಬಂದರಿನ ಬಳಿಗೆ ಬಂದಾಗ ಅಲ್ಲಲ್ಲಿ ಜನರ ಗುಂಪು ಸೇರಿದ್ದುದನ್ನು ಕಂಡರು. ಎಲ್ಲರೂ ಹಡಗಿನ ಕಡೆ ಕೈತೋರಿಸುತ್ತಾ ಮಾತನಾಡಿಕೊಳ್ಳುತ್ತಿದ್ದರು. ಕೇವಲ 15 ನಿಮಿಷಗಳ ಮೊದಲು ಯಾರೋ ಒಬ್ಬ ಕೈದಿಯನ್ನು, ಬ್ರಿಟಿಷ್ ಪೊಲೀಸರು ಎಳೆದುಕೊಂಡುಹೋದ ವಿಚಾರ ಅವರಿಗೆ ತಿಳಿಸಿದರು! ವಿಧಿ ವಂಚಿಸಿತ್ತು. ಕೆಲವೇ ನಿಮಿಷಗಳು ತಡವಾದುದಕ್ಕೆ ಘೋರ ಪ್ರಮಾದವಾಗಿತ್ತು. ಆ ಆತ್ಮೀಯರೆಲ್ಲರೂ ದಡದಲ್ಲೆ ನಿಂತು ಕೈಕೈ ಹಿಸುಕಿಕೊಳ್ಳಬೇಕಾಯಿತು! ಆಗ ಅವರು ಅನುಭವಿಸಿರಬಹುದಾದ ಎದೆಯ ವೇದನೆ, ಪಶ್ಚಾತ್ತಾಪ ವರ್ಣನಾತೀತ.

ಆದರೂ ಶ್ರೀಮತಿ ಕಾಮಾ ಮುಂದಿನ ಪ್ರಯತ್ನವನ್ನು ಆಗಲೇ ಪ್ರಾರಂಭಿಸದಿರಲಿಲ್ಲ. ಮುಂಬೈನ ಪ್ರಸಿದ್ಧ ವಕೀಲರೂ ದೇಶಭಕ್ತರೂ ಆಗಿದ್ದ ಬ್ಯಾರಿಸ್ಟರ್ ಬ್ಯಾಪ್ಟಿಸ್ಟಾ ಅವರಿಗೆ ತಂತಿ ಕಳಿಸಿದರು ; 'ವೃತ್ತಿ ಸಂಬಂಧದಲ್ಲಿ ಕೂಡಲೆ ಸಾವರಕರರನ್ನು ಭೇಟಿ ಮಾಡಿ, "ಮೊರಿಯಾ" ಹಡಗಿನಲ್ಲಿ ಮುಂಬೈಗೆ ಬರುತ್ತಿದ್ದಾರೆ. ಫ್ರಾನ್ಸ್ ಸರಕಾರ ಅವರ ವಾಪಸಾತಿಗೆ ಒತ್ತಾಯಿಸುತ್ತಿದೆ.'

ಜುಲೈ 9ರ ಬೆಳಿಗ್ಗೆ 'ಮೊರಿಯಾ' ಮಾರ್ಸೇಲ್ಸ್‌ನಿಂದ ಮುಂದಕ್ಕೆ ಚಲಿಸಿತು. ಏಡನ್ ತಲಪಿದ ನಂತರ ಎಲ್ಲ ಪ್ರಯಾಣಿಕರನ್ನೂ 'ಎಸ್.ಎಸ್. ಸಾಸ್ಟೀ' ಎಂಬ ಹಡಗಿಗೆ ವರ್ಗಾಯಿಸಲಾಯಿತು. ಸರ್ಪಕಾವಲಿನಲ್ಲಿ ನನ್ನ ಸ್ಥಳಾಂತರವೂ ಆಯಿತು. ಹೊಸ ಹಡಗಿನ ಮೇಲ್ಭಾಗದಲ್ಲಿ, ಕೇವಲ ನಾಲ್ಕು ಅಡಿಯ ಗೂಡಿನೊಳಕ್ಕೆ ದೂಡಲ್ಪಟ್ಟೆ; ಪಶುವಿನಂತೆ ಕೂಡಲ್ಪಟ್ಟೆ. ಒಳಗೆ ಕತ್ತಲು. ಹೊರಗಿನ ಉರಿಬಿಸಿಲಿನಿಂದಾಗಿ ಒಳಗೆ ವಿಪರೀತ ಸೆಕೆ; ಕೆಂಡದ ಮೇಲೆ ಕೂತಂತಾಗುತ್ತಿತ್ತು! ಅಷ್ಟು ಸಾಲದೆಂಬಂತೆ, ಉಬ್ಬಸ ತಲೆಹಾಕಿತು. ಪ್ರಾತರ್ವಿಧಿಗೆ ಹೋಗುವಾಗಲೂ ಕಾವಲುಗಾರರ ಬಿಗಿಹಿಡಿತ! ಬದುಕೇ ಅಸಹ್ಯವೆನಿಸತೊಡಗಿತು. ನನಗೆ ಮೊಟ್ಟ ಮೊದಲ ಬಾರಿಗೆ ಆತ್ಮಹತ್ಯೆಯೇ ಆಕರ್ಷಕವಾಗಿ ಕಂಡಿತು ಆಗ! ಆದರೆ, ಕಡೆಗೆ ಆ ಯೋಚನೆಯಿಂದ ಹೇಗೋ ಪಾರಾದೆ. ಮುಂದೆ ಬರಲಿದ್ದ ಕಷ್ಟಗಳ ಅಲ್ಪ ಪರಿಚಯ ಆದಾಗಿತ್ತು, ಅಷ್ಟೆ.

ಜುಲೈ 22ರಂದು ಶುಕ್ರವಾರ ಬೆಳಿಗ್ಗೆ 'ಎಸ್.ಎಸ್. ಸಾಸ್ಟೀ' ಮುಂಬೈ ತಲುಪಿತು. ಇಂಗ್ಲಿಷರ ಅದೃಷ್ಟಕ್ಕೆ, ನಡುವೆ ಯಾವುದೇ ಆಕಸ್ಮಿಕವೂ ನಡೆಯಲಿಲ್ಲ! ಹಡಗು ದಡದಿಂದ ಸ್ವಲ್ಪ ದೂರದಲ್ಲೇ ನಿಂತಿತು. ನನ್ನ ಸ್ವಾಗತದ ಏರ್ಪಾಡು! ಮೊದಲು ಮುಂಬೈ ಪೊಲೀಸು ಖಾತೆಯ ದೋಣಿ ಬಂತು. ಐ.ಜಿ.ಪಿ. ಕೆನಡಿ, ಅವರ ಆಪ್ತ ಸಹಕಾರಿ ಗೈಡರ್, ಗುಪ್ತ ಪೊಲೀಸ್ ಅಧಿಕಾರಿ ಪಾವೆಲ್ ಮತ್ತು ಮೂರು ಜನ ಶಸ್ತ್ರಧಾರಿ ಬ್ರಿಟಿಷ್ ಪೊಲೀಸರಿಂದ ನನಗೆ ಗೌರವರಕ್ಷೆ! ಹಡಗುಕಟ್ಟೆಯಲ್ಲಿ ಬಿಚ್ಚುಗತ್ತಿ ಹಿಡಿದು ನಿಂತ ಪೊಲೀಸರ ಸಾಲುಗಳ ನಡುವೆ ಕೈಬೇಡಿಗಳ ಝಣತ್ಕಾರ ಮಾಡುತ್ತಾ, ನಾನು ನಡೆದೆ. ಪೊಲೀಸ್ ವಾಹನ ಹತ್ತಿದೆ ಬೋರಿ ಬಂದರ್ ರೈಲು ನಿಲ್ದಾಣಕ್ಕೆ ಹೋದೆವು. ಅಲ್ಲಿ ಬಲಭಾಗದ ಬಾಗಿಲಿಂದ ಹಾದು, ದಿಲ್ಲಿ ಎಕ್ಸ್‌ಪ್ರೆಸ್ ಹತ್ತಿದೆವು. ನನಗಾಗಿ ಸುತ್ತಲೂ ಮುಚ್ಚಿದ ವಿಶೇಷ ಬೋಗಿ! ಮಧ್ಯಾಹ್ನದ ವೇಳೆಗೆ ನಾಸಿಕದ ಜೈಲು. ಕೆಲ ದಿನಗಳ ನಂತರ ಯರವಾಡಾ ಜೈಲಿಗೆ ವಸತಿ ಬದಲಾವಣೆ. ಗೋವಿಂದ ಕವಿಯ ಗೀತೆ ನೆನಪಾಯಿತು :

**ರಾಷ್ಟ್ರಾಸ್ತವ ಜಳಫಳೇ ನಿತ್ಯ ಜೋ ಉದಾರ ನರವೀರ**
**ಬಂದೀಶಾಲಾ ಲೋಹಶೃಂಖಲಾ ತದೀಯ ಶೃಂಗಾರ ॥**

*(ರಾಷ್ಟ್ರಕ್ಕಾಗಿ ಹಗಲಿರುಳೂ ತಳಮಳಿಸುವ ಶೂರನಿಗೆ ಸೆರೆಮನೆ ಮತ್ತು ಸಂಕೋಲೆಗಳೇ ಆಭರಣಗಳು!)*





# ಹವಿಸ್ಸು ಹತ್ತೊಂಬತ್ತು

ರಾತ್ರಿರ್ಗಮಿಷ್ಯತಿ ಭವಿಷ್ಯತಿ ಸುಪ್ರಭಾತಮ್
ಭಾಸ್ವಾನುದೇಷ್ಯತಿ ಹಸಿಷ್ಯತಿ ಪಂಕಜಶ್ರೀಃ ।
ಇತ್ಥಂ ವಿಚಿಂತಯತಿ ಕೋಷಗತೇ ದ್ವಿರೇಫೇ
ಹಾ, ಹಂತ ! ಹಂತ ! ನಲಿನೀಂ ಗಜ ಉಜ್ಜಹಾರ ॥

*(ಇರುಳು ಕಳೆಯುತ್ತದೆ, ಅರುಣೋದಯವಾಗುತ್ತದೆ; ತಾವರೆ ಸುಂದರವಾಗಿ ಅರಳಿ ನಸುನಗುತ್ತದೆ; ಹೀಗೆಂದು ಮುಚ್ಚಿದ ಕಮಲದೊಳಗೆ ಸಿಕ್ಕಿಕೊಂಡ ಭ್ರಮರ ಯೋಚಿಸುತ್ತಿತ್ತು. ಅಷ್ಟರಲ್ಲೆ ಹಾಯ್ ! ಆನೆಯೊಂದು ಕಮಲವನ್ನು ಕಿತ್ತು ಬಿಸುಟಿತು )*

ಕ್ರಾಂತಿಕಮಲದ ಮಧುರಸವನ್ನು ಹೀರುವ ಗುಂಗಿನಲ್ಲಿದ್ದ ನಮ್ಮ ಸ್ಥಿತಿ ಆದದ್ದೂ ಹಾಗೇ ಅಲ್ಲವೆ ?

ಯರವಾಡಾ ಜೈಲಿನಲ್ಲಿ ಕನಸಿನಲ್ಲೂ ನನಗೆ ಆ ಶ್ಲೋಕ ನೆನಪಿಗೆ ಬರುತ್ತಿತ್ತು. ನಾಸಿಕದ ಸೆರೆಮನೆ ಸೇರಿದ ಎರಡು ದಿನಗಳಲ್ಲೇ ಬೆಳಕಿನ ಕಿಂಡಿಯಿಂದ ಬಿದ್ದ ಒಂದು ಕಾಗದ ಓದಿಕೊಂಡಿದ್ದೆ. ಅಭಿನವ ಭಾರತಕ್ಕೆ ಒದಗಿದ ದುರಂತದ ವಿವರ ಅರ್ಥವಾಗಿತ್ತು. ಹಗಲಿರುಳೂ ನಾನಾ ಚಿತ್ರಗಳ, ಚಿಂತೆಗಳ ಸುತ್ತ ಮನವೆಂಬ ಮರ್ಕಟದ ದೊಂಬರಾಟ ನಡೆದಿತ್ತು. ಹಳೆಯ ನೆನಪುಗಳು ಮರುಕಳಿಸುತ್ತಿದ್ದವು.

'ಸಾವರಕರ್, ನೋಡು ಆ ಕಟ್ಟಡ ; ಎಷ್ಟು ಭವ್ಯ ! ಅದೊಬ್ಬ ಬ್ಯಾರಿಸ್ಟರರ ಮಹಲು. ನೀನೂ ನಿನ್ನ ವೃತ್ತಿ ಅವಲಂಬಿಸಿದ್ದರೆ, ಅಂಥ ಮನೆ ಕಟ್ಟಬಹುದಿತ್ತು. ವೈಭವದಲ್ಲಿ, ವಿಲಾಸದಲ್ಲಿ ತೇಲಬಹುದಿತ್ತು.'

ಜುಲೈ 22ರಂದು ಮುಂಬೈ ತಲುಪಿದೆನಷ್ಟೆ ; ನಾನಿದ್ದ ಪೊಲೀಸ್ ವಾಹನ ಶ್ರೀಮಂತ ವಸತಿಗಳನ್ನು ಹಾದು ಹೋಗುತ್ತಿದ್ದಾಗ ಕೇಳಿದ ಮಾತುಗಳಿವು. ಪಕ್ಕದಲ್ಲಿ ಕುಳಿತ ಪ್ರೌಢ ವಯಸ್ಸಿನ ಆಂಗ್ಲ ಅಧಿಕಾರಿ ಹೇಳುತ್ತಿದ್ದ.

'ಸಾವರಕರ್, ಇನ್ನೂ ಸಮಯ ಮೀರಿಲ್ಲ. ಕ್ಷಮಾಪಣೆ ಕೇಳಿಕೋ. ಬ್ಯಾರಿಸ್ಟರ್ ಆಗಿ ಬೇಕಾದ ಹಾಗೆ ಸಂಪಾದಿಸಬಹುದು.'

ಮೌನವಾಗಿ ಕೇಳುತ್ತಿದ್ದ ನಾನು ತಟ್ಟನೆ ಹೇಳಿದೆ . 'ನಾನು ಈಗ ಬ್ಯಾರಿಸ್ಟರ್ ಅಲ್ಲ ಅನ್ನುವವರು

ಯಾರು ? ಮಾತೃಭೂಮಿಯ ಸ್ವಾತಂತ್ರ್ಯಕ್ಕಾಗಿ ವಾದಿಸುತ್ತಿರುವ ಬ್ಯಾರಿಸ್ಟರ್ ನಾನು ! ದೇವರ ನ್ಯಾಯಾಲಯದಲ್ಲಿ ಸತ್ಯದ ಪಕ್ಷ ಹಿಡಿದಿರುವ ವಕೀಲ ನಾನು. ಜೀವನ ಸಾರ್ಥಕತೆ, ಆತ್ಮಸಮಾಧಾನ - ಇವು ನನ್ನ ಸಂಪಾದನೆ !'

ಆಗ ಆ ಅಧಿಕಾರಿ ಸುಮ್ಮನಾಗಿದ್ದ. ಹಿಂದಿನದನ್ನೆಲ್ಲ ನಾನು ಮೆಲಕು ಹಾಕುತ್ತಿದ್ದೆ. ನನ್ನ ಸಮುದ್ರೋಲ್ಲಂಘನದ ಚಮತ್ಕಾರ ಜಗತ್ತಿಗೆಲ್ಲ ಜಾಹೀರಾಗಿತ್ತು. ಇಡೀ ಪ್ರಪಂಚ ಆ ಘಟನೆಯನ್ನು ವಿಸ್ಮಯದಿಂದ ಸ್ಮರಿಸಿಕೊಳ್ಳುತ್ತಿತ್ತು. ಬ್ರಿಟಿಷರು ಅದನ್ನು ಎಷ್ಟೇ ರಹಸ್ಯವಾಗಿಟ್ಟರೂ ಪ್ಯಾರಿಸ್ಸಿನ 'ಡೈಲಿ ಮೈಲ್' ಪತ್ರಿಕೆ ಜುಲೈ 11ರಂದು ಮೊದಲ ಬಾರಿಗೆ ಅದನ್ನು ಪ್ರಕಟಿಸಿತು. ಅನಂತರ ಜಗತ್ತಿನಾದ್ಯಂತ ಎಲ್ಲ ಪತ್ರಿಕೆಗಳಲ್ಲೂ ವರ್ಣರಂಜಿತ ವಿವರಗಳೊಡನೆ ಅದು ಬರಲಾರಂಭಿಸಿತು. ಶ್ಯಾಮಜಿ, ಮತ್ತಿತರ ಗೆಳೆಯರ ಪ್ರಯತ್ನದ ಫಲವಾಗಿ 'ಸಾವರಕರ್'ರನ್ನು ಫ್ರಾನ್ಸಿಗೆ ಒಪ್ಪಿಸಬೇಕೆಂಬ ಕೂಗು ಎದ್ದಿತು. ಅದಕ್ಕೆ ಸ್ವತಂತ್ರ ರಾಷ್ಟ್ರಗಳ ಜಾಗತಿಕ ಒತ್ತಡವೂ ಸೇರಿತು. ಇಂಗ್ಲೆಂಡ್ ಗಾಬರಿಗೊಂಡು ಆದಷ್ಟು ಬೇಗ ವಿಚಾರಣೆ ಮುಗಿಸಲು ನಿರ್ಧರಿಸಿತು.

ಸೆಪ್ಟೆಂಬರ್ 13ರಂದು ಬ್ಯಾರಿಸ್ಟರ್ ಬ್ಯಾಪ್ಟಿಸ್ಟಾ ಯರವಾಡಾಕ್ಕೆ ಬಂದರು. ಒಂದೂವರೆ ತಿಂಗಳ ಪ್ರಯತ್ನದ ನಂತರ ಅವರಿಗೆ ನನ್ನ ಭೇಟಿಗೆ ಅನುಮತಿ ದೊರೆತಿತ್ತು. ಮರುದಿನವೇ ನನ್ನ ಸ್ಥಳಾಂತರ - ಯರವಾಡದಿಂದ ಮುಂಬೈನ ಡೋಂಗ್ರಿ ಸೆರೆಮನೆಗೆ. ದಿ. 15ರಿಂದ ವಿಶೇಷ ನ್ಯಾಯಾಲಯದಲ್ಲಿ ವಿಚಾರಣೆ ಆರಂಭ. ಸ್ಥಳ, ಮುಂಬೈ ಉಚ್ಚ ನ್ಯಾಯಾಲಯದ ಕಟ್ಟಡ.

ಮೊದಲ ದಿನ ನನ್ನಲ್ಲಿದ್ದ ಹೊಸ ಸೂಟು ತೊಟ್ಟೆ. ಲಂಡನ್ ಗೆಳೆಯರ ಉಡುಗೊರೆ ಅದು. ಪೊಲೀಸ್ ವಾಹನ ಹತ್ತಿ ಕುಳಿತೆ. ಉಚ್ಚ ನ್ಯಾಯಾಲಯದ ಕಟ್ಟಡ ಸಮೀಪಿಸುತ್ತಿದ್ದಂತೆ, ಎಲ್ಲ ದಾರಿಗಳಲ್ಲೂ ಪೊಲೀಸರ ಬಂದೋಬಸ್ತು. ಕಟ್ಟಡದ ಹೊರಗೂ 50 ಜನ ಪೊಲೀಸರ ತುಕಡಿ ; ಮುಂಬೈ ಪೊಲೀಸ್ ಕಮೀಷನರ್ ಸಹ ಅಲ್ಲಿ ಹಾಜರು.

ಸಮುದ್ರದ ಮಧ್ಯದಲ್ಲೇ ತಪ್ಪಿಸಿಕೊಂಡ ವ್ಯಕ್ತಿ ನೆಲದ ಮೇಲೆ ಸುಮ್ಮನಿರಬಲ್ಲನೆ ? ಅದಕ್ಕಾಗಿ, ನನಗೆ ವಿಶೇಷ ಪೊಲೀಸ್ ಪಹರೆ. ಬೆಳಗಿನ ಹತ್ತು ಕಳೆದಿತ್ತು. ಒಳಗೆ ಪ್ರವೇಶಿಸಿದೆ - ಪೊಲೀಸ್ ಪರಿವಾರ ಸಮೇತನಾಗಿ !

ಇದ್ದಕ್ಕಿದ್ದಂತೆ ಚಪ್ಪಾಳೆಗಳು ; ಕಿವಿ ಬಿರಿಯುವಂತೆ ಹರ್ಷೋದ್ಗಾರಗಳು !

ಪ್ರೇಕ್ಷಕರ ಗ್ಯಾಲರಿಯ ಕಡೆ ಕಣ್ಣಾಡಿಸಿದೆ. ಆದರೆ ಅಲ್ಲಿ ಒಂದು ನರಪಿಳ್ಳೆಯೂ ಇಲ್ಲ ; ಆಸನಗಳೆಲ್ಲ ಖಾಲಿ. ಮತ್ತೆ ಎಲ್ಲಿಂದ ಬಂತು ಚಪ್ಪಾಳೆಯ ಸಪ್ಪಳ ? ಒಂದು ಕ್ಷಣ ದಿಗ್ಭ್ರಮೆಯಾಯಿತು. ಆದರೆ ಎರಡು ಹೆಜ್ಜೆ ಮುಂದೆ ಹೋಗುತ್ತಲೇ ಎಲ್ಲವೂ ಅರ್ಥವಾಯಿತು. ಬಹುಶಃ ಜಗತ್ತಿನ ರಾಜಕೀಯ ಇತಿಹಾಸದಲ್ಲೇ ಅಪೂರ್ವವೆನಿಸುವ ಸ್ವಾಗತ !

ಸ್ವಾಗತಿಸುತ್ತಿದ್ದವರು ಅಭಿನವ ಭಾರತದ ಸಹಕಾರಿಗಳು. ಒಟ್ಟು ಮೂವತ್ತೇಳು ಜನ; ಕೆಳಭಾಗದಲ್ಲಿದ್ದ ಅಪರಾಧಿ ಕಟ್ಟೆಯಲ್ಲಿದ್ದರು. ನನ್ನ ಸಂಪರ್ಕಕ್ಕೆ ಬಂದಿದ್ದುದರ ಫಲ ಅದು ! ಆದರೆ ನನ್ನ ಬಗ್ಗೆ ಅವರ ಗೌರವಾದರ ಕುಗ್ಗುವುದರ ಬದಲಿಗೆ ಬೆಳೆದಿತ್ತು. ಬೇಗ ಹೆಜ್ಜೆ ಹಾಕುತ್ತಾ ಹೋಗಿ ಅವರ ನಡುವೆ ಸೇರಿಕೊಂಡೆ. ಮರಣದಂಚಿನಲ್ಲಿ ನಿಂತಿದ್ದರೂ ಒಬ್ಬರ ಮುಖದಲ್ಲೂ ದುಃಖದ ಗೆರೆಯಿಲ್ಲ. ಹಾಸ್ಯವಿನೋದದ ತರಂಗಗಳಾಗಿ ಹೊರಹೊಮ್ಮುತ್ತಿದ್ದ ಆನಂದ !

ಎಲ್ಲರ ತಲೆಯ ಮೇಲೂ ರಾಜದ್ರೋಹದ ಅಪರಾಧದ ಕಿರೀಟ! ಯಾರು ಯಾರಿಗೆ ಯಾವ ಯಾವ ಶಿಕ್ಷೆಯೋ? ಆದರೂ, ಅವರಿಗೆ ಎಳ್ಳಷ್ಟೂ ಅದರ ಚಿಂತೆಯಿಲ್ಲ. 'ನೀವು ನಮ್ಮ ಪೈಕಿ ಯಾರು ಯಾರನ್ನು ಗುರುತಿಸಬಲ್ಲಿರಿ, ನೋಡೋಣ' ಎಂದರು ! ಒಬ್ಬೊಬ್ಬರದೇ ಮುಖ ನೋಡಿ ಹೆಸರು ಹೇಳುತ್ತಾ ಹೋದೆ. ಕೆಲವೊಮ್ಮೆ ಮುಖ ಪರಿಚಿತವಾಗಿ ಕಂಡರೂ ಹೆಸರು ನೆನಪಾಗಲೊಲ್ಲದು. ತಲೆ ಕೆರೆದುಕೊಳ್ಳ ಬೇಕಾಗುತ್ತಿತ್ತು! ತಪ್ಪು ಹೆಸರು ಹೇಳಿದಾಗ ಗೊಳ್ಳನೆ ನಗು, ಗದ್ದಲ. ಕೊನೆಗೆ ಎಲ್ಲರ ಹಿಂದೆ ಮರೆಯಾಗಿ ನಿಲ್ಲಿಸಿಕೊಂಡಿದ್ದ ತರುಣನೊಬ್ಬನನ್ನು ಮುಂದೆ ನಿಲ್ಲಿಸಿದರು. 'ಇವರನ್ನು ಕಂಡುಹಿಡಿಯಿರಿ, ನೋಡುವಾ' ಎಂದು ಸವಾಲು ಹಾಕಿದರು. ದಷ್ಟಪುಷ್ಟವಾಗಿ ಬೆಳೆದಿದ್ದ ಆ ನವಯುವಕನ ಮುಖದಲ್ಲಿ ಎಳೆನಗೆ ಉಕ್ಕುತ್ತಿತ್ತು. ಕಷ್ಟದಿಂದ ನಗುವನ್ನು ತಡೆಹಿಡಿದುಕೊಳ್ಳುತ್ತಿದ್ದ.

ಯಾರಿವನು ? ಒಂದು ನಿಮಿಷ ತಡಬಡಿಸಿದೆ. ಅನಂತರನೆನಪಾದೊಡನೆ ನನಗೂ ನಗು ತಡೆಯ ಲಾಗಲಿಲ್ಲ. ನನ್ನ ತಮ್ಮ ಬಾಳ! ನದ್ಯ, ಗುರುತು ಸಿಕ್ಕಿತು! ನಾಲ್ಕು ವರ್ಷದಲ್ಲಿ ಅವನ ತೂಕ ಇಮ್ಮಡಿಯಾದಂತೆ ಕಾಣುತ್ತಿತ್ತು. ಎಲ್ಲರೂ ಯಾವುದೋ ಶುಭ ಸಮಾರಂಭಕ್ಕೆ ನೇರಿದವರಂತೆ ನಡಗರದಿಂದ ಹರಟೆಯಲ್ಲಿ ಮಗ್ನರಾದೆವು. ಪೊಲೀಸರ ಕರ್ಕಶ ಬೆದರಿಕೆ, ಮತ್ಸರದ ನೋಟ, ಯಾವುದನ್ನೂ ನಾವು ಲೆಕ್ಕಿಸಲಿಲ್ಲ.

ಆರೋಪಿಗಳ ಸಂಖ್ಯೆ ಹೆಚ್ಚಾಗಿದ್ದುದರಿಂದ, ನಮಗೆಂದೇ ಭದ್ರವಾಗಿ ಕಟ್ಟಿದ್ದ ವಿಶಾಲ ಹಾಗೂ ವಿಶೇಷ ಕಟಕಟೆ ; ಒಳಗೆ ಗ್ಯಾಲರಿಯ ರೀತಿಯಲ್ಲಿ ಆಸನ ವ್ಯವಸ್ಥೆ. ಒಂದೊಂದು ಸಾಲಿಗೂ ಆಚೀಚೆ ನಿಂತ ಪೊಲೀಸರು. ಪ್ರೇಕ್ಷಕರಿಗೆ ಬಿಲ್‌ಕುಲ್ ಪ್ರವೇಶವಿಲ್ಲ. ಪತ್ರಿಕಾ ಪ್ರತಿನಿಧಿಗಳ ಪೈಕಿ ಮೂವರಿಗೆ ಮಾತ್ರ ಅನುಮತಿ.

ನಂಗಡಿಗರಿಗೆಲ್ಲ ನಾನು ಮೊದಲೇ ಸೂಚನೆಯಿತ್ತೆ : 'ವಿಚಾರಣೆಯ ಕಾಲಕ್ಕೆ ತಪ್ಪುಗಳನ್ನೆಲ್ಲ ಆದಷ್ಟೂ ನನ್ನ ಮೇಲೆಯೇ ಹಾಕಿ ; ಏಕೆಂದರೆ, ನನಗೆ ಹೇಗಿದ್ದರೂ ಶಿಕ್ಷೆ ತಪ್ಪುವುದಿಲ್ಲ. ಅದರಿಂದ ನೀವು ಕೂಡಲೆ ಅಥವಾ ಆದಷ್ಟು ಬೇಗ ಬಿಡುಗಡೆ ಹೊಂದಬಹುದು.'

ಎರಡೂ ಕಡೆಯ ನ್ಯಾಯವಾದಿಗಳೂ, ವಕೀಲರೂ ಆಗಮಿಸಿದರು. ಸರಕಾರಿ ವಕೀಲ ಜಾರ್ಡನ್ ಆರೋಪಗಳ ಸರಪಳಿ ಮಂಡಿಸಿದ. ನನ್ನ ಮೇಲೆ ಮೂರು ಮೊಕದ್ದಮೆಗಳನ್ನು ಒಟ್ಟಾಗಿ ಹೂಡಲಾಗಿತ್ತು. ಅನಂತರ 26-9-1910ಕ್ಕೆ ವಿಚಾರಣೆ ಮುಂದುವರಿಸಲಾಯಿತು. ದಿ. 27ರಂದು ನಾನು 'ಭಾರತದ ಸಮ್ರಾಟ'ರ ವಿರುದ್ಧ ಯುದ್ಧ ನಡೆಸಿದೆನೆಂಬ ಆರೋಪ ಆಧಾರರಹಿತವೆಂದು ರದ್ದಾಯಿತು. ಉಳಿದ ಆರೋಪಗಳಂತೂ ಇದ್ದೇ ಇದ್ದುವು. ದಿ. 30ರಂದು ಸಾಕ್ಷಿದಾರರ ಹೇಳಿಕೆಗಳೆಲ್ಲ ಮುಗಿದ ಮೇಲೆ, 'ನೀವು ಏನಾದರೂ ಕೇಳುವುದಿದ್ದರೆ ಕೇಳಬಹುದು' ಎಂದು ನನಗೆ ಸೂಚನೆ ಬಂತು.

'ಫ್ರಾನ್ಸ್ ಸರಕಾರ ನನಗೆ ರಕ್ಷಣೆ ನೀಡಬೇಕೆಂದು ನನ್ನ ನ್ಯಾಯವಾದ ಬೇಡಿಕೆ. ಫ್ರೆಂಚ್ ಇತಿಹಾಸ ದುದ್ದಕ್ಕೂ ಸ್ವಾತಂತ್ರ್ಯ ಸೋದರತೆ ಮತ್ತು ಸಮಾನತೆಯ ಪರಂಪರೆ ಬೇರೂರಿದೆ; ಆದ್ದರಿಂದ ಆ ದೇಶದಲ್ಲಿ ಆಶ್ರಯ ಸಿಕ್ಕೀತೆಂದು ನಂಬಿ, ನಾನು ಅಲ್ಲಿಗೆ ಹೋದೆ. ಆದರೆ ಬ್ರಿಟಿಷ್ ಸಿಪಾಯಿಗಳು ಬಲಪ್ರಯೋಗ ದಿಂದ ನನ್ನನ್ನು ವಾಪಸು ಎಳೆತಂದರು ಫ್ರಾನ್ಸಿನ ನ್ಯಾಯನಿಷ್ಠೆಯಲ್ಲಿ ನನಗೆ ಭರವಸೆಯುಂಟು ; ಬ್ರಿಟಿಷ್ ಸರಕಾರವು ನನ್ನನ್ನು ಫ್ರಾನ್ಸಿಗೆ ಒಪ್ಪಿಸಬೇಕೆಂದು ಆಶಿಸುತ್ತೇನೆ. ಆದ್ದರಿಂದ, ನನ್ನ ವಿಚಾರಣೆ ನಡೆಸುವ ಅಧಿಕಾರ ಈ ನ್ಯಾಯಾಲಯಕ್ಕೆ ಇಲ್ಲ ; ನಾನು ಈ ಮೊಕದ್ದಮೆಯೊಡನೆ ಯಾವುದೇ ಸಂಬಂಧವನ್ನೂ ಇಟ್ಟುಕೊಳ್ಳಲು ಇಚ್ಛಿಸುವುದಿಲ್ಲ' ಎಂದೆ.

ಅಕ್ಟೋಬರ್ 1ರಂದು ವಕೀಲರ ಪಕ್ಕದಲ್ಲೆ ನನಗೆ ಕುರ್ಚಿ ಹಾಕಿದರು. 'ನೀವು ಕಾನೂನಿನ ಶಿಕ್ಷಣ ಪಡೆದಿರುವಿರಲ್ಲವೆ ?' ಎಂದರು ನ್ಯಾಯಾಧೀಶರು. 'ಹೌದು' ಎನ್ನುತ್ತಲೇ ಕ್ರಿಮಿನಲ್ ಪ್ರೊಸೀಜರ್ ಕೋಡಿನ ಒಂದು ಪ್ರತಿ ನನಗೆ ಕೊಡಲಾಯಿತು 'ಈ ಮೊಕದ್ದಮೆಯ ಬಗ್ಗೆ ನೀವು ಏನಾದರೂ ಹೇಳುವುದಿದೆಯೆ ?' ಎಂದು ಪ್ರಶ್ನಿಸಿದರು.

'ನಾನು ಅಂತಾರಾಷ್ಟ್ರೀಯ ಕಾನೂನನ್ನು ಅವಲಂಬಿಸಿದ್ದೇನೆ; ಆದ್ದರಿಂದ ನನ್ನನ್ನು ಫ್ರಾನ್ಸಿಗೆ ವಾಪಸು ಕಳಿಸಿಕೊಡಿ ಎಂಬುದಿಷ್ಟೇ ನಾನು ಹೇಳುವುದು' ಎಂದೆ.

ವಿಚಾರಣೆಗೆ ಹಿಡಿದ ಸಮಯ, ಆರೋಪಿಗಳ ಮತ್ತು ಸಾಕ್ಷಿದಾರರ ಸಂಖ್ಯೆ ಹಾಗೂ ತೀರ್ಪಿನಲ್ಲಿ ವಿಧಿಸಲಾದ ಶಿಕ್ಷೆಗಳ ಭೀಷಣತೆ ಇತ್ಯಾದಿ ಅನೇಕ ದೃಷ್ಟಿಗಳಿಂದ ಇದೊಂದು ಅಪೂರ್ವ ಮೊಕದ್ದಮೆ. ಮೂರು ತಿಂಗಳಿಗೂ ಮೀರಿದ ಅವಧಿ; ಸುಮಾರು 300 ಸಾಕ್ಷಿದಾರರು; ನ್ಯಾಯಾಲಯ ಕೆಲಸ ಮಾಡಿದ್ದು 69 ದಿನಗಳು. 70ನೆಯ ದಿನ, 24-12-1910ರಂದು ಶನಿವಾರ ತೀರ್ಪು ಹೊರಬೀಳಲಿತ್ತು.

ನಾಳೆ ಏನು ಕಾದಿರಬಹುದು ? ಗಲ್ಲಿನ ಕುಣಿಕೆಯೋ, ಕರಿನೀರಿನ ಕಾರಾಗೃಹವೋ ? ಡಿಸೆಂಬರ್ 23ರಂದು ಪ್ರಶ್ನೆ ಏಳುತ್ತಿತ್ತು. ಮನಸ್ಸಿನಲ್ಲೆ ಎರಡರ ಪೈಕಿ ಒಂದಂತೂ ನಿಶ್ಚಿತ; ಆಗ ಅದರಂಥ ಸಮಾಧಾನದ, ಸಂತೋಷದ ಸಂಗತಿ ಬೇರೊಂದೂ ಇರಲಿಲ್ಲ. ನಾವೆಲ್ಲರೂ ಅಪರಾಧಿ ಕಟ್ಟೆಯಲ್ಲಿ ಮಾತನಾಡಿಕೊಂಡಿದ್ದೆವು; ಜೀವನದ ಪರೀಕ್ಷಾ ಫಲಿತಾಂಶದ ದರ್ಜೆಗಳನ್ನು ನಿರ್ಧರಿಸಿಕೊಂಡಿದ್ದೆವು; ಗಲ್ಲಿನ ಅಥವಾ ಆಜನ್ಮ ಕರಿನೀರಿನ ಶಿಕ್ಷೆ ಆದವರು ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾದಂತೆ! ಏಳೆಂಟು ವರ್ಷಗಳಿಗಿಂತಲೂ ಹೆಚ್ಚು ಕಾಲ ಕಠಿನ ಶಿಕ್ಷೆ ದೊರೆತವರು ದ್ವಿತೀಯ ದರ್ಜೆ! ಉಳಿದವರೆಲ್ಲ ಪ್ರಯೋಜನವಿಲ್ಲ; ನಾಪಾಸು!

ನಾಳೆ ಏನಾದೀತು ? ಸ್ವಾತಂತ್ರ್ಯದ ಬಲಿವೇದಿಯ ಮೇಲೆ ನಾನು 'ಮೊದಲ ಕಂತು' ಅರ್ಪಿಸುತ್ತಿದ್ದೆ. ಹೃದಯ ಧನ್ಯತೆಯಿಂದ ಹಿಗ್ಗಿತು. ಭಾವನೆ ತುಂಬಿ ಬಂದು ನವಗೀತೆಯೊಂದನ್ನು ಮೆಲ್ಲಗೆ ಹಾಡತೊಡಗಿದೆ:

**ಮಾನುನಿ ಘೇ ಸಾಚೇ । ಜನನಿ ಗೇ । ಮಾನುನಿ ಘೇ ಸಾಚೇ ।**
**ಅಲ್ಪ ಸ್ವಲ್ಪ ತರಿ । ಸೇವಾ ಅಪುಲ್ಯಾ ಅರ್ಭಕ ಬಾಲಾಂಚೇ ॥ಪ॥**
**ಋಣ ಹೇ ಬಹು ಝಾಲೇ**
**ತುಝ್ಯಾ ಸ್ತನೀಚೇ ಸ್ತನ್ಯ ಪಾಜುನೀ ಧನ್ಯ ಆಮ್ಹಾ ಕೇಲೇ**
**ಜನನೀ, ಧನ್ಯ ಅಮ್ಹಾ ಕೇಲೇ ॥**
**ಋಣ ತೇ ಫೇಡಾಯಾ**
**ಹಪ್ತಾ ಪಹಿಲಾ ತಪ್ತ ಸ್ಥಂಡಿಲಿ ದೇಹ ಅರ್ಪಿತೋ ಹಾ**
**ಜನನೀ, ದೇಹ ಅರ್ಪಿತೋ ಹಾ ॥**
**ಸವೇಚಿ ಜನ್ಮನಿಯಾ**
**ತ್ವನ್ಮೋಚನಹವನಾತ ಹವೀ ಕರು ಪುನಃಪುನ್ಹಾ ಕಾಯಾ**
**ಜನನೀ, ಪುನಃಪುನ್ಹಾ ಕಾಯಾ ॥**
**ಸಾರಥೀ ಜಿಚಾ ಅಭಿಮಾನೀ! ಕೃಷ್ಣ ಅಣೇ । ರಾಮ ಸೇನಾನೀ**
**ಅಶಿ ತೀಸ ಕೋಟಿ ತವ ಸೇನಾ**

ತೀ ಆಮ್ಹಾವಿನಾ ಥಾಂಬೇನಾ
ಪರಿ ಕರುನಿ ದುಷ್ಟದಲದಲನಾ
ರೋವಿಲಚೀ ಸ್ವಕರೀ । ಸ್ವಾತಂತ್ರ್ಯಾಚಾ ಹಿಮಾಲಯವರಿ ಝೇಂಡಾ ಜರತಾರೀ ॥

*(ತಾಯೇ, ನಿನ್ನ ಈ ಎಳೆಗೂಸುಗಳ ಅಲ್ಪಸ್ವಲ್ಪ ಸೇವೆಯನ್ನು ದಯವಿಟ್ಟು ಸ್ವೀಕರಿಸು.*

*ಎಣೆಯಿಲ್ಲದಷ್ಟು ಋಣ ನಮ್ಮ ಮೇಲಿದೆ; ನಿನ್ನ ಎದೆಹಾಲು ಕುಡಿಸಿ ನಮ್ಮನ್ನು ಧನ್ಯಗೊಳಿಸಿರುವೆ. ನೋಡು, ಆ ಋಣ ತೀರಿಸಲು ಸ್ವಾತಂತ್ರ್ಯದ ಪವಿತ್ರ ಯಜ್ಞಜ್ವಾಲೆಗೆ ಇಂದು ದೇಹ ಒಡ್ಡುತ್ತಿದ್ದೇವೆ; ಮೊದಲ ಕಂತು ಅರ್ಪಿಸುತ್ತಿದ್ದೇವೆ ಮತ್ತು ತತ್‌ಕ್ಷಣವೇ ಪುನಃ ಜನ್ಮವೆತ್ತಿ ಪುನಃ ಪುನಃ, ಯಜ್ಞೇಶ್ವರನು ತೃಪ್ತನಾಗಿ ನಿನಗೆ ಮುಕ್ತಿ ಕರುಣಿಸುವವರೆಗೂ, ಅಗ್ನಿಪ್ರವೇಶ ಮಾಡುತ್ತಿರುತ್ತೇನೆ.*

*ನಾವು ಕಣ್ಮರೆಯಾದರೂ, ಶ್ರೀಕೃಷ್ಣನನ್ನೇ ಸಾರಥಿಯಾಗಿ, ಶ್ರೀರಾಮನನ್ನೇ ಸೇನಾಧಿಪತಿಯಾಗಿ ಪಡೆದ ನಿನ್ನ ಮೂವತ್ತು ಕೋಟಿ ಸಂಖ್ಯಾಬಲದ ಸೈನ್ಯ ನಿಲ್ಲುವುದಿಲ್ಲ; ವೈರಿ ಸೈನ್ಯವನ್ನು ಕೊಚ್ಚಿಹಾಕುತ್ತಾ ಮುನ್ನುಗ್ಗಿ ಹೋಗಿ ಸ್ವಹಸ್ತದಿಂದಲೇ ಸ್ವಾತಂತ್ರ್ಯದ ಹಿಮಾಲಯದ ಮೇಲೆ ಭಗವಾಧ್ವಜವನ್ನು ಹಾರಿಸುವವರೆಗೂ ನಿಲ್ಲುವುದಿಲ್ಲ.)*

ತೀರ್ಪು ಹೊರಬೀಳುವ ದಿವಸ! ಆಪಾದಿತರೆಲ್ಲ ಕೋರ್ಟಿನ ಅಪರಾಧಿ ಕಟ್ಟೆ ಸೇರಿದೆವು ಅಂದು ಎಂದಿಗಿಂತಲೂ ಹೆಚ್ಚಿನ ಪೊಲೀಸ್ ಬಂದೋಬಸ್ತು. ನಮ್ಮ ಹಾಸ್ಯ ವಿನೋದಗಳ ಹೊನಲು ಹರಿದೇ ಇತ್ತು. ಸಮಯವಾಯಿತು. ವಕೀಲರೂ, ನ್ಯಾಯಾಧೀಶರೂ ಆಗಮಿಸಿದರು. ವಾತಾವರಣ ನೀರವವಾಯಿತು. ನನ್ನನ್ನು ಬಿಟ್ಟು ಉಳಿದ ಸಂಗಡಿಗರನ್ನು ಹಿಡಿದಿಟ್ಟು ಒಂದು ವರ್ಷವಾಗುತ್ತಾ ಬಂದಿತ್ತು. ಅಷ್ಟು ದೀರ್ಘಾವಧಿಯ ಮೊಕದ್ದಮೆಗೆ ಆ ನ್ಯಾಯಾಧೀಶ ಮಹನೀಯರು ಒಂದೇ ದಿನದಲ್ಲಿ ತೀರ್ಪು ಬರೆದು ತಂದಿದ್ದರು! ನ್ಯಾಯವನ್ನು ದಾಸ್ಯದಲ್ಲಿ ಕಟ್ಟಿಟ್ಟು, ಅವರು ಅದರ ಯಜಮಾನರಾಗಿದ್ದರು. ಅವರು ಏನು ಹೇಳಿದರೂ ಅದಕ್ಕೇ 'ನ್ಯಾಯ'ವೆಂದು ನಾಮಕರಣವಾಗುತ್ತಿತ್ತು!

'ವಿನಾಯಕ ದಾಮೋದರ ಸಾವರಕರ್!'

ಹೆಸರು ಕೇಳಿ ಕಿವಿ ನಿಮಿರಿಸಿ ಕುಳಿತೆ. ಅಪರಾಧಗಳ ಸ್ತುತಿಪಾಠ ಮುಗಿದ ಮೇಲೆ ತೀರ್ಪು ಹೊರಬಿತ್ತು:

'ಆಜನ್ಮ (25 ವರ್ಷ) ಕರಿನೀರಿನ ಶಿಕ್ಷೆ ಮತ್ತು ಆಸ್ತಿಪಾಸ್ತಿಗಳ ಜಪ್ತಿ!'

ಸದ್ಯ ಗೆದ್ದೆ! 'ಪ್ರಥಮ ದರ್ಜೆ! ಪ್ರಥಮ ದರ್ಜೆ!' ಎಂದು ಅಕ್ಕಪಕ್ಕದವರು ಪಿಸುಗುಟ್ಟಿದರು. ಹೆಮ್ಮೆಯಿಂದ ನಸುನಗೆ ಹೊರಸೂಸಿದೆ ತೀರ್ಪಿನ ವಾಚನ ಮುಂದುವರಿಯಿತು. ಕೇಶವ ಚಾಂದವಡಕರ್ (ಬ್ರಹ್ಮಗಿರಿ ಬುವಾ)ಗೆ 15 ವರ್ಷ ಕರಿನೀರು! ಕೃಷ್ಣಾಜಿ ಖರೆಯ ಸರದಿ ಬಂದಾಗ, ಅವನ ಬೆನ್ನಿಗೆ ಬೆರಳಿನಿಂದ ತಿವಿದು ಕೇಳಿದೆ: 'ಬಿಡುಗಡೆಯಾದರೆ ಪುನಃ ಸಿಕ್ಕಿಕೊಳ್ಳುವುದಿಲ್ಲ ತಾನೆ? 'ಎರಡು ಗಂಟೆ ಅವಕಾಶ ಸಿಕ್ಕಿದರೆ ಸಾಕು, ನನ್ನನ್ನು ಹಿಡಿಯುವುದಕ್ಕೆ ಇವರ ತಾತ ಬರಬೇಕು!' ಎಂದ. ಅವನಿಗೆ 10 ವರ್ಷ ಸಶ್ರಮ ಶಿಕ್ಷೆ ಘೋಷಣೆಯಾಗುತ್ತಲೇ ಮುಖ ಸಪ್ಪೆಯಾಯಿತು. 'ಏಕೋ?' ಎಂದರೆ, 'ಪ್ರಥಮ ದರ್ಜೆ ಸಿಗಲಿಲ್ಲವಲ್ಲ' ಎಂದ! ಹೀಗೆಯೇ ಒಟ್ಟು 27 ಜನರಿಗೆ ವಿವಿಧ ಅವಧಿಯ ಶಿಕ್ಷೆಗಳು. ನನ್ನ ತಮ್ಮ ಬಾಳಾನಿಗೆ ಆರು ತಿಂಗಳ ಸೆರೆವಾಸ. ಪಾಪಾನಾದುದಕ್ಕೆ ಅವನಿಗೆ ದುಃಖ! 11 ಜನ ದೋಷಮುಕ್ತರೆನಿಸಿಕೊಂಡು ಹೊರಬಿದ್ದರು. ಅವರ ಮೂಲಕ ನನ್ನ 'ಪಹಿಲಾ ಹಪ್ತಾ' (ಮೊದಲ ಕಂತು) ಕವನವೂ ಹೊರಜಗತ್ತಿಗೆ ಹೋಯಿತು. ಬಂಧುಮಿತ್ರರೆಲ್ಲರಿಗೂ ಸ್ಫೂರ್ತಿ ಸಂದೇಶವಾಗಿ ಪ್ರಚುರಗೊಂಡಿತು.

ತೀರ್ಪು ಮುಗಿಸಿ ನ್ಯಾಯಾಧೀಶರು ಮೇಲೆದ್ದರು. ಕ್ರೂರ ಶಿಕ್ಷೆಗಳನ್ನು ವಿಧಿಸಿ ದೇಶಭಕ್ತ ತರುಣರ ಸೊಲ್ಲು ಅಡಗಿಸಿದ್ದೇವೆಂದು ಅವರ ನಂಬಿಕೆ. ಪೊಲೀಸ್ ಅಧಿಕಾರಿಗಳೂ ವಕೀಲರೂ ಅವರ ಗೌರವಾರ್ಥ ಎದ್ದು ನಿಂತರು. ಒಂದು ನಿಮಿಷ ಇಡೀ ವಾತಾವರಣ ನೀರವವಾಯಿತು. ಅಷ್ಟರಲ್ಲೇ -

'ಸ್ವಾತಂತ್ರ್ಯ ಲಕ್ಷ್ಮೀ ಕೀ ಜಯ್ !'

ನನ್ನ ಘೋಷಣೆ ಕೇಳಿ ಗೆಳೆಯರೆಲ್ಲರೂ ಒಕ್ಕೊರಲಿನಿಂದ ಗರ್ಜಿಸತೊಡಗಿದರು: 'ಸ್ವಾತಂತ್ರ್ಯ ಲಕ್ಷ್ಮೀ ಕೀ ಜಯ್ !'

ದಫೇದಾರ ಘಾಸೀರಾಮ ದುರದುರನೆ ನೋಡಿದ. ಪೊಲೀಸ್ ಅಧಿಕಾರಿ ಗೈಡರ್ ಸಾಹೇಬ 'ಹಿಡಿಯಿರಿ, ಹೊಡೆಯಿರಿ. ಈಗ ಅವರು ಕೈದಿಗಳು' ಎಂದು ಅರಚಿದ. ಆದರೆ ಘೋಷಣೆ ಮಾತ್ರ ನಿಲ್ಲಲಿಲ್ಲ.

ಪೊಲೀಸರು ನನ್ನನ್ನು ಪ್ರತ್ಯೇಕಿಸಿ ಹೊರಗೆ ತಂದರು. ಕೈಗೆ ಬೇಡಿ ತೊಡಿಸಿದರು. ವಾಹನದೆಡೆಗೆ ಕರೆದುಕೊಂಡು ಹೊರಟರು. ಸಂಕೋಲೆ ತೊಟ್ಟ ಕೈಗಳಿಂದಲೇ ನಾನು ಗೆಳೆಯರಿಗೆ ಕೊನೆಯ ನಮಸ್ಕಾರ ಹೇಳಿದೆ.

ಅನಂತರ ನನ್ನ ಮೇಲೆ ಮತ್ತೊಂದು ಮೊಕದ್ದಮೆ ; ಜಾಕ್ಸನ್ ಕೊಲೆಗೆ ನೆರವಾದೆನೆಂಬ ಆರೋಪ! ಸೋಮವಾರ 30- 1- 1911ರಂದು ಅದರ ತೀರ್ಪು. ಮೊದಲೇ ಆಜನ್ಮ ಶಿಕ್ಷೆ ಆದವನಿಗೆ ಇನ್ನೇನು ಶಿಕ್ಷೆ ಕೊಡಬಂದೀತು ? ನನ್ನನ್ನು ನೇಣಿನ ಕುಣಿಕೆಗೆ ತಗುಲಿಸುವ ಸಲುವಾಗಿಯೇ ಈ ಆರೋಪ ಹೊರಿಸಲಾಗಿದೆಯೆಂದು ಅನೇಕರು ಭಾವಿಸಿದ್ದರು. ಆದರೆ ಅದಕ್ಕಿಂತಲೂ ಭಯಾನಕವೆನಿಸುವ ತೀರ್ಪು ಹೊರಬಿತ್ತು - ಮತ್ತೊಂದು ಆಜನ್ಮ ಕಾರಾವಾಸ !

'ನಮ್ಮ ಪ್ರೀತಿಯ ಮಾತೃಭೂಮಿಯು ಇಂದಲ್ಲದಿದ್ದರೆ ನಾಳೆಯಾದರೂ ಕಷ್ಟಸಹಿಷ್ಣುತೆ ಹಾಗೂ ಸ್ವಾರ್ಥತ್ಯಾಗದ ಮೂಲಕ ವಿಜಯ ಗಳಿಸುವುದು ನಿಶ್ಚಿತವೆಂದು ನಾನು ನಂಬಿದ್ದೇನೆ ; ಅದಕ್ಕಾಗಿ ನಿಮ್ಮ ಕಾನೂನು ವಿಧಿಸುತ್ತಿರುವ ಪರಮಾವಧಿ ಶಿಕ್ಷೆಯನ್ನು ಯಾವುದೇ ಗೊಣಗಾಟವಿಲ್ಲದೆ ಎದುರುಗೊಳ್ಳಲು ಸಿದ್ಧನಿದ್ದೇನೆ' ಎಂದೆ. ಅಂದಿನ ನನ್ನ ವಯಸ್ಸು ಇಪ್ಪತ್ತೇಳು ವರ್ಷ, ಎಂಟು ತಿಂಗಳು, ಮೂರು ದಿನ.

★ ★ ★

ಮಾರ್ನೇಲ್ಸ್ ಘಟನೆ ನಡೆದ ನಂತರ ಪಂ. ಶ್ಯಾಮಜಿ, ರಾಣಾ ಮತ್ತು ಶ್ರೀಮತಿ ಕಾಮಾ ನನ್ನ ಬಿಡುಗಡೆಗೆ ನಡೆಸಿದ ಪ್ರಯತ್ನಗಳು ಅಷ್ಟಿಷ್ಟಲ್ಲ. ಫ್ರಾನ್ಸಿನ ಪ್ರಸಿದ್ಧ ಸಮಾಜವಾದಿ ನಾಯಕ ಮತ್ತು ಮಾರ್ಸೇಲ್ಸ್‌ನ ಮೇಯರ್ ಆಗಿದ್ದ ಜೀನ್ ಜಾರಿಸ್‌ರನ್ನೂ ಮತ್ತು ಆ ದೇಶದ ಇತರ ಪ್ರಭಾವಿ ನಾಯಕರನ್ನೂ ಭೇಟಿ ಮಾಡಿ ಅವರಿಗೆ ನಿಜಸಂಗತಿ ತಿಳಿಸಿದರು. ಜಾರಿಸ್ 'ಸಾವರಕರರನ್ನು ಫ್ರಾನ್ಸಿಗೆ ಒಪ್ಪಿಸಬೇಕೆಂದು' ಪ್ರಚಾರ ಆರಂಭಿಸಿದರು. ಮಾನವ ಹಕ್ಕುಬಾಧ್ಯತೆಗಳ ಸಂಘದ ಅಧ್ಯಕ್ಷ ಫ್ರಾನ್ಸಿಸ್ ಡಿ. ಪ್ರೆಸ್ಸೆನ್ಸ್ ಅವರು ಫ್ರಾನ್ಸಿನ ವಿದೇಶ ಖಾತೆಯ ಸಚಿವರಿಗೆ ಪತ್ರ ಬರೆದು - ಸಾವರಕರರ ವಾಪಸಾತಿಗೆ ಒತ್ತಾಯಿಸಬೇಕೆಂದೂ, ಇಂಗ್ಲೆಂಡು ಅದಕ್ಕೆ ತಪ್ಪಿದಲ್ಲಿ ಈ ವ್ಯವಹಾರವನ್ನು ಹೇಗ್‌ನ ಅಂತಾರಾಷ್ಟ್ರೀಯ ನ್ಯಾಯಾಲಯಕ್ಕೆ ಒಪ್ಪಿಸಬೇಕೆಂದೂ ತಿಳಿಸಿದರು. ಅಂತಾರಾಷ್ಟ್ರೀಯ ಕಾಯ್ದೆಗೆ ವಿರುದ್ಧವಾಗಿ 'ಸಾವರಕರ್'ರನ್ನು ಬಂಧಿಸಿದ ಬಗ್ಗೆ ಫ್ರಾನ್ಸ್ ಹಾಗೂ ಇನ್ನಿತರ ದೇಶಗಳ ಪತ್ರಿಕೆಗಳಿಂದ, ಪ್ರಜೆಗಳಿಂದ ಒಂದೇ ಸಮನೆ ಪ್ರತಿಭಟನೆ ಆರಂಭವಾಯಿತು.

ಜರ್ಮನಿಯ ಆಕ್ರಮಣದ ಭಯದಿಂದ ಫ್ರೆಂಚ್ ಸರಕಾರವು ಇಂಗ್ಲೆಂಡಿನ ಸ್ನೇಹವನ್ನು ಬಯಸುತ್ತಿತ್ತು. ಆದ್ದರಿಂದ ಫ್ರೆಂಚ್ ಪ್ರಧಾನಿ ಬ್ರಿಯಾಂಡ್ ಮೊದಮೊದಲು ಈ ವಿಷಯದಲ್ಲಿ ಉಪೇಕ್ಷೆ ನಟಿಸಿದ. ಆದರೆ ಇಡೀ ದೇಶದ ಒತ್ತಾಯ ಹಾಗೂ ಪ್ರಪಂಚದ ಇತರ ರಾಷ್ಟ್ರಗಳ ಒತ್ತಾಯ ಬಂದಾಗ ಅವನು ಅದಕ್ಕೆ ತಲೆಬಾಗಲೇಬೇಕಾಯಿತು. 1909ರ ಜುಲೈ ಕೊನೆಯ ವೇಳೆಗೆ ಫ್ರೆಂಚ್ ಸರಕಾರ 'ಸಾವರಕರ' ರನ್ನು ಹಿಂದಿರುಗಿಸಬೇಕೆಂದು ಬ್ರಿಟಿಷ್ ಸರಕಾರವನ್ನು ಒತ್ತಾಯಿಸಿತು. ಕಡೆಗೆ ಇಂಗ್ಲೆಂಡಿನ ವಿದೇಶಾಂಗ ಕಾರ್ಯದರ್ಶಿ ಎಡ್ವರ್ಡ್ ಗ್ರೇ ಮತ್ತು ಫ್ರೆಂಚ್ ರಾಯಭಾರಿ ಪಾಲ್ ಕ್ಯಾಂಬನ್ ಈ ವಿವಾದವನ್ನು ಹೇಗ್ ನ್ಯಾಯಾಲಯಕ್ಕೆ ಒಪ್ಪಿಸುವ ಕರಾರಿಗೆ ಸಹಿ ಹಾಕಿದರು.

ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಅಂತಾರಾಷ್ಟ್ರೀಯ ಪ್ರಚಾರ ಹಾಗೂ ಕೀರ್ತಿ ದೊರೆಯಿತು. ಆದರೆ 1911 ಫೆಬ್ರವರಿ 24ರಂದು ಹೇಗ್ ನ್ಯಾಯಾಲಯದ ತೀರ್ಪು ಇಂಗ್ಲೆಂಡಿನ ಪರವಾಗಿ ಹೊರಬಿತ್ತು. ಫ್ರಾನ್ಸ್ ಮತ್ತು ಇಂಗ್ಲೆಂಡಿನ ನಡುವಿನ ಒಳಸಂಚು ಅದು ! ಫ್ರಾನ್ಸ್ ದೇಶದ ಸಾರ್ವಭೌಮತೆಗೆ ಧಕ್ಕೆ ತರುವ ಈ ಅನ್ಯಾಯವನ್ನು ಅಲ್ಲಿನ ಜನತೆ ಹಾಗೂ ಜನತಾ ಪ್ರತಿನಿಧಿಗಳು ಸಹಿಸಲಿಲ್ಲ. ಅದರ ಪರಿಣಾಮವಾಗಿ, ಅದಾದ ಮೂರೇ ದಿನಗಳಲ್ಲಿ ಪ್ರಧಾನಿಯಾಗಿದ್ದ ಬ್ರಿಯಾಂಡ್ ರಾಜಿನಾಮೆ ಕೊಟ್ಟು ಕೆಳಗಿಳಿಯಬೇಕಾಯಿತು.





# ಹವಿಸ್ಸು ಇಪ್ಪತ್ತು

'ನಿಮಗೆ 50 ವರ್ಷದ ಕರಿನೀರಿನ ಶಿಕ್ಷೆ ಆರಂಭವಾಗಿದೆ ನಿಮ್ಮನ್ನು ಫ್ರಾನ್ಸ್‌ಗೆ ಒಪ್ಪಿಸುವಂತೆ ಇಂಗ್ಲೆಂಡನ್ನು ಒತ್ತಾಯಿಸಲು ಸಾಧ್ಯವಿಲ್ಲವೆಂದು ಹೇಗ್ ನ್ಯಾಯಾಲಯ ತೀರ್ಪಿತ್ತಿದೆ' ಎಂದು ಸಹಾನುಭೂತಿಪರರಾದ ನೌಕರರೊಬ್ಬರು ರಹಸ್ಯವಾಗಿ ತಿಳಿಸಿದರು

ಡೋಂಗ್ರಿ ಜೈಲಿನ ಸರಳುಗಳ ಹಿಂದಿನಿಂದ ನಾನೆಂದೆ . 'ಒಳ್ಳೆಯದು ನಾನು ಆ ತೀರ್ಪನ್ನೇನೂ ನೆಚ್ಚಿಕೊಂಡಿರಲಿಲ್ಲ ಆದರೆ, ನನಗೆ ಆ ತೀರ್ಪಿನ ಒಂದು ಪ್ರತಿ ಸಿಕ್ಕೀತೆ ?'

'ಅದು ನನ್ನ ಕೈಲಿಲ್ಲ. ಆದರೂ ನಿಮಗಾಗಿ ಸಾಧ್ಯವಿದ್ದಷ್ಟು ಪ್ರಯತ್ನಿಸುತ್ತೇನೆ ನನ್ನಂಥ ಸಂಬಂಧವಿಲ್ಲದ ವ್ಯಕ್ತಿಯನ್ನೇ ತಲ್ಲಣಗೊಳಿಸುವಂಥ ಸುದ್ದಿ ಕೇಳಿಯೂ ನೀವು ಧೈರ್ಯವಾಗಿರುವುದನ್ನು ನೋಡಿದರೆ, ನೀವು ಅಪರಿಚಿತನಾದ ನನ್ನ ನೆರವಿಗಾಗಿ ಕಾದು ಕೂರುವಿರೆಂದು ನನಗನಿಸುವುದಿಲ್ಲ !'

'ಇಂಥ ಸುದ್ದಿ ನನಗೆ ಭೀಷಣವೆನಿಸುವುದಿಲ್ಲ ಎಂದೇನಿಲ್ಲ ಆದರೆ, ಮೊದಲೇ ಇದನ್ನೆಲ್ಲ ಯೋಚಿಸಿ, ಎದೆಗೊಡುವ ನಿರ್ಧಾರ ಕೈಗೊಂಡು ಹೊರಟಿರುವುದರಿಂದ, ಮನಸ್ಸು ಕಲ್ಲಾಗಿ ಹೋಗಿದೆ ನನ್ನ ಸ್ಥಿತಿಯಲ್ಲಿ ನೀವೇ ಇದ್ದರೂ, ವಿವೇಚನೆಯ ಬಲದಿಂದ ಇಷ್ಟೇ ಧೈರ್ಯದಿಂದಿರಬಲ್ಲಿರಿ ಅಂತೂ, ನಿಮ್ಮ ಸಹಾಯ ಮತ್ತು ಸಹಾನುಭೂತಿಗಾಗಿ ಧನ್ಯವಾದಗಳು '

ಅಷ್ಟರಲ್ಲಿ ಯಾರೋ ಬರುವ ಸದ್ದಾಯಿತು. ನನ್ನೊಡನೆ ಮಾತನಾಡುತ್ತಿದ್ದವರು ಸರಸರನೆ ಬೇರೆ ದಿಕ್ಕಿನಲ್ಲಿ ಹೊರಟುಹೋದರು ನಾನು ಬಾಗಿಲಿನಿಂದ ಹಿಂದೆ ಸರಿದು ನಿಂತೆ 'ಐವತ್ತು ವರ್ಷ !' ಎಂಬ ಶಬ್ದ ಮನಸ್ಸಿನ ತುಂಬ ಪ್ರತಿಧ್ವನಿಸುತ್ತಿತ್ತು.

ಅಧಿಕಾರಿಯೊಬ್ಬ ಬಂದು ಬಾಗಿಲು ತೆಗೆದ ಸೇವಕನೊಬ್ಬ ಊಟ ಬಡಿಸಿದ ಹೇಗ್ ತೀರ್ಪು ಅಧಿಕೃತವಾಗಿ ತಿಳಿಯದುದರಿಂದ, ನನಗೆ ಇನ್ನೂ ಕೈದಿಗಳ ಊಟ, ಬಟ್ಟೆ ಕೊಡುತ್ತಿರಲಿಲ್ಲ. ಇಂದೂ ಒಳ್ಳೆಯ ಊಟ ಬಂದಿತ್ತು ನಾನು ಬೇಕೆಂತಲೇ ಅದರಲ್ಲಿದ್ದ ರುಚಿಕರ ಪದಾರ್ಥಗಳನ್ನು ತಿನ್ನಲಿಲ್ಲ

'ಏಕೆ ರಾವಸಾಹೇಬ್, ನೀವು ಸರಿಯಾಗಿ ಊಟ ಮಾಡುತ್ತಿಲ್ಲ ?' ಎಂದ ಆ ಅಧಿಕಾರಿ.

'ಮಾಡದೆ ಏನು ? ಆದರೆ, ಉಳಿದೆಲ್ಲ ಕೈದಿಗಳಿಗೆ ಕೊಡುವಂಥದನ್ನು ಮಾತ್ರ ತಿನ್ನುತ್ತಿದ್ದೇನೆ ನಾನೂ ಉಳಿದವರಂತೆ ಕೆಲಸಕ್ಕೆ ಹೊರಡಬೇಕಾಗುವುದಿಲ್ಲ ಎಂಬುದಕ್ಕೆ ಏನು ಭರವಸೆ ? ಆಗ 'ಸದನ್ನ' ಸಿಕ್ಕಿದರೆ

ಸಿಕ್ಕೀತು, ಇಲ್ಲವಾದರೆ ಇಲ್ಲ; ಕದನ್ನವಂತೂ ನಿಶ್ಚಿತ! ಅದಕ್ಕಾಗಿ ಈಗಲೇ ಅದರ ಸ್ನೇಹ ಬೆಳೆಸುತ್ತಿದ್ದೇನೆ. ಬಹುಕಾಲದವರೆಗೆ ಅದರಿಂದ ಪ್ರಯೋಜನವಿದೆ' ಎಂದು ನಕ್ಕು ನುಡಿದೆ.

'ಛೆ, ಛೆ! ಹಾಗೆಂದಿಗೂ ಆಗದು. ನಿಮ್ಮನ್ನು ಫ್ರಾನ್ಸ್‌ಗೆ ಹಿಂದಿರುಗಿಸಬೇಕೆಂಬ ಆಜ್ಞೆ ಬಂದಿದೆಯೆಂದು ಕೇಳಿದ್ದೇನೆ. ನೀವು ಕೈದಿಗಳಂತೆ ಕೆಲಸ ಮಾಡುವುದೆಂದರೇನು ? ರಾವಸಾಹೇಬ್ ! ದೇವರು ಹಾಗೆಂದಿಗೂ ಮಾಡದಿರಲಿ.'

ಅಷ್ಟರಲ್ಲಿ ಒಬ್ಬ ಸಿಪಾಯಿ ಬಂದು ಹೇಳಿದ : 'ಹವಲದಾರಜಿ ! ಸಾಹೇಬರು ಬರುತ್ತಿದ್ದಾರೆ !'

ಊಟ ಬಡಿಸುವವರು ಬಾಗಿಲು ಮುಚ್ಚಿಕೊಂಡು ಮುಂದೆ ಹೋದರು.

ಪುನಃ ಬಾಗಿಲು ತೆರೆಯಿತು. ಸೂಪರಿಂಟೆಂಡೆಂಟ್ ಬಂದು ಹೇಳಿದ : 'ಇನ್ನು ಮುಂದೆ ನಿಮಗೆ ಕೈದಿಗಳಂತೆಯೇ ಬಟ್ಟೆ ಮತ್ತು ಊಟ ; ಐವತ್ತು ವರ್ಷದ ಶಿಕ್ಷೆ ಆರಂಭವಾಗಿದೆ.'

ನಾನು ಎದ್ದುನಿಂತೆ. ನನ್ನ ಬಟ್ಟೆ ಕಳಚಿ, ಕೈದಿಯ ಉಡುಪು ಹಾಕಿಕೊಳ್ಳತೊಡಗಿದೆ. ಮನಸ್ಸು ಕ್ಷಣಕಾಲ ಥರಗುಟ್ಟಿತು ! ಈ ಬಟ್ಟೆ, ಕೈದಿಗಳ ಬಟ್ಟೆ, ಜೀವನಪೂರ್ತಿ ತೆಗೆಯುವಂತಿಲ್ಲ ! ಬಹುಶಃ ಜೈಲಿನಿಂದ ನನ್ನ ಹೆಣ ಇದೇ ಬಟ್ಟೆಯಲ್ಲೇ ಹೊರಕ್ಕೆ ಬಂದೀತು !

ಸಿಪಾಯಿ ಒಂದು ತಗಡಿನ ಬಿಲ್ಲೆ ತಂದು ಕೈಗೆ ಕೊಟ್ಟ. 32777 ! ನನ್ನ ಕ್ರಮಾಂಕ ಅದು. ಮತ್ತೆ ? 1960 ಎಂಬ ಸಂಖ್ಯೆ ಅದರಲ್ಲಿತ್ತು ! ಏನಿದು ? ತತ್‌ಕ್ಷಣ ಹೊಳೆಯಲಿಲ್ಲ; ಮರುಕ್ಷಣ ಅದರ ಭಯಂಕರ ಅರ್ಥದ ಅರಿವಾಯಿತು. ಅದು ನನ್ನ ಬಿಡುಗಡೆಯ ವರ್ಷ !

'ಚಿಂತಿಸಬೇಡಿ ; ದಯಾಳುವಾದ ಸರಕಾರ 1960ರಲ್ಲಿ ನಿಮ್ಮನ್ನು ಬಿಡುಗಡೆ ಮಾಡುವುದು ನಿಶ್ಚಿತ !' ಎಂದ ಅಧಿಕಾರಿ.

ನಾನು ನಕ್ಕು ಹೇಳಿದೆ : 'ಆದರೆ ಮೃತ್ಯುವೇ ಹೆಚ್ಚು ದಯಾಳು. ಅದು ನನ್ನನ್ನು ಮೊದಲೇ ಮುಕ್ತಿಗೊಳಿಸಿಬಿಟ್ಟರೆ ?'

ಇಬ್ಬರೂ ನಕ್ಕೆವು – ಅವನು ಸಹಜವಾಗಿ; ನಾನು ಬಲವಂತವಾಗಿ ! ಎಲ್ಲರೂ ಹೊರಟು ಹೋದರು. ಉಳಿದವರೆಂದರೆ ನಾನು ಮತ್ತು ನನ್ನ ಶಿಕ್ಷೆ ! ಪರಸ್ಪರ ಆ ಕತ್ತಲು ಕೋಣೆಯಲ್ಲಿ ದುರುಗುಟ್ಟಿ ನೋಡುತ್ತಾ ಕುಳಿತೆವು.

ಡೋಂಗ್ರಿ ಜೈಲಿನಲ್ಲಿ ಎರಡನೆಯ ದಿನ. ಏನೋ ಆಲೋಚನೆಯಲ್ಲಿ ಮುಳುಗಿದ್ದೆ. ಹವಾಲದಾರ ಒಳಗೆ ಬಂದ. ಅವನ ಹಿಂದೆ ನಿಂತ ಕೈದಿಯ ತಲೆಯ ಮೇಲೊಂದು ಹೊರೆ. ನನ್ನ ಬೆರಗುನೋಟ ಕಂಡು ಹವಾಲದಾರನೆಂದ : 'ರಾವಸಾಹೇಬ್, ಚಿಂತಿಸಬೇಡಿ ; ದೇವರು ನಿಮಗೆ ನೆರವಾಗಲಿ. ನಿಮ್ಮ ಕಷ್ಟಕ್ಕೆ ಅವನು ಸಾಕ್ಷಿಯಾಗಿದ್ದಾನೆ. ನಿಮ್ಮ ವಿಷಯ ಕೇಳಿ, ನನ್ನ ಮನೆಯವರಿಗೆಲ್ಲ ಕಣ್ಣೀರು ಬಂತು ಆದರೆ ನೀವು ಇದಕ್ಕೆ ಎಂದೂ ಬೆದರುವುದಿಲ್ಲವೆಂದು ನಾನು ಅವರಿಗೆಲ್ಲ ಹೆಮ್ಮೆಯಿಂದ ಹೇಳಿದ್ದೇನೆ. ಅಂದಮೇಲೆ, ಹೀಗೇಕೆ ? ಚಿಂತಿಸಬೇಡಿ !'

ಪಾಪ, ನನಗೆ ಸಮಾಧಾನ, ಧೈರ್ಯ ನೀಡಲು ಅವನು ಹಾಗೆಂದ. ಆದರೆ ನನಗೆ ಅದರ ಅವಶ್ಯಕತೆ ಇರಲಿಲ್ಲ.

'ಅದೇನು, ಆ ಹೊರೆ ?' ಎಂದೆ.

'ಏನಿಲ್ಲ; ಸುಮ್ಮನೆ ಕಾನೂನು ಪಾಲಿಸಬೇಕಲ್ಲಾ ಅಂತ ತಂದದ್ದು. ನೀವು ಮಾಡಿದರೆ ಮಾಡಿ, ಬಿಟ್ಟರೆ

ಬಿಡಿ ; ಪರವಾಗಿಲ್ಲ!'

ಕೈದಿ ತಾನು ಹೊತ್ತಿದ್ದ ಹಗ್ಗದ ಹೊರೆ ಎತ್ತಿ ಕೆಳಗೆ ಹಾಕಿದ. ಅದನ್ನು ಚೂರು ಚೂರು ಮಾಡಿದ; ಎಳೆ ಎಳೆಯಾಗಿ ಬಿಡಿಸಿದ. ಅದರಿಂದ ಪುನಃ ಹಗ್ಗ ಹೊಸೆಯುವುದನ್ನು ಹೇಳಿಕೊಟ್ಟ. ನಾನು ಆ ಕೆಲಸ ಮಾಡಬೇಕಿತ್ತು.

'ಜೀವಾವಧಿ ಶಿಕ್ಷೆ' ಅಲ್ಲ, 'ಜೀವಾವಧಿ ಕಠಿನಶಿಕ್ಷೆ!'

ನನ್ನ ಜೀವನವೇ ಹೀಗೆ; ಸದಾ ಕಷ್ಟಗಳ ಬೆಟ್ಟದಡಿ ಸಿಕ್ಕಿ ನಜ್ಜುಗುಜ್ಜಾಗುತ್ತಿತ್ತು. ಆ ಅನುಭವದಿಂದಾಗಿ ಕೆಟ್ಟದ್ದನ್ನು ನಿರೀಕ್ಷಿಸುವುದೇ ನನ್ನ ಸ್ವಭಾವವಾಯಿತು. ಅದರಿಂದ ಗಾಬರಿ ಅಥವಾ ನಿರಾಶೆಗೆ ಅವಕಾಶವೇ ಇಲ್ಲ! ಹೆಜ್ಜೆಹೆಜ್ಜೆಗೂ ಕ್ರೂರ ವಿಧಿಯು ವಿಪತ್ತುಗಳ ವಿಷದ ಬಟ್ಟಲು ತಂದು ತುಟಿಗೆ ಹಿಡಿಯುತ್ತಿತ್ತು. ಅದನ್ನು ಸ್ವಾಗತಿಸಿ ಅರಗಿಸಿಕೊಳ್ಳುವ ನಿರ್ಧಾರ ಮಾಡಿಕೊಂಡೇ ನಾನು ಹೆಜ್ಜೆ ಮುಂದಿಡುತ್ತಿದ್ದುದು.

ಬಿಡುವಿಲ್ಲದ ಬೆರಳುಗಳು ಹಗ್ಗ ಬಿಡಿಸುತ್ತಿದ್ದವು. ಮೊದಲ ದಿನವೇ ಹೊಪ್ಪಳೆ ಎದ್ದಿತು. ಚರ್ಮ ಸುಲಿದುಕೊಂಡು ರಕ್ತ ಸುರಿಯತೊಡಗಿತು. ಆದರೆ ನನಗೆ ಅದರ ಪರಿವೆಯಿಲ್ಲ. ನನ್ನ ಮೆಚ್ಚಿನ ವೀರನಾದ ಗುರು ಗೋವಿಂದ ಸಿಂಹನ ಜೀವನದ ಘಟನೆಗಳನ್ನು ಜ್ಞಾಪಿಸಿಕೊಳ್ಳುತ್ತಿದ್ದೆ. ಅವನ ಬಗ್ಗೆ ಒಂದು ಮಹಾಕಾವ್ಯ ರಚಿಸಲು ನಿರ್ಧರಿಸಿ, ಮನಸ್ಸಿನಲ್ಲೆ ಪದ್ಯದ ಸಾಲುಗಳನ್ನು ಹೇಳಿಕೊಳ್ಳುತ್ತಿದ್ದೆ. ಮೊದಲ ದಿನವೇ 15 ನುಡಿಗಳಾದವು. ಹಾಗೆಯೇ ದಿನಗಳುರುಳಿದವು.

ತಲೆಯೆತ್ತಿ ನೋಡಿದೆ. ಯಾರೋ ಸರಳುಗಳ ನಡುವೆ ಇಣುಕಿ ನೋಡುತ್ತಿದ್ದರು. 'ಬ್ಯಾರಿಸ್ಟರ್, ಹೇಗಿದ್ದೀರಿ?' ಎಂದರು. 'ನಿಮ್ಮ ಕೃಪೆಯಿಂದ ಚೆನ್ನಾಗಿದ್ದೇನೆ' ಎಂದೆ.

'ಛೇ, ನನ್ನ ಕೃಪೆಯೇನು ಬಂತು? ನೀವೆಲ್ಲಿ, ನಾನೆಲ್ಲಿ?' ಎಂದು ಹೇಳಿ ಮಾತು ಮುಂದುವರಿಸಿದರು:

'ನನ್ನ ಸ್ನೇಹಿತರೊಬ್ಬರು ಯುರೋಪಿನಿಂದ ಬಂದಿದ್ದಾರೆ. ನಿಮ್ಮನ್ನು ಬಹಳ ಪ್ರಶಂಸಿಸುತ್ತಾರೆ. ಅಲ್ಲಿನ ಪತ್ರಿಕೆಗಳೆಲ್ಲ ನಿಮ್ಮನ್ನು ವಿಖ್ಯಾತ ದೇಶಭಕ್ತರಿಗೆ ಹೋಲಿಸಿ, ನಿಮ್ಮ ಜೀವನ ಪರಿಚಯ ಬರೆಯುತ್ತಿವೆಯಂತೆ. ಅಂದ ಹಾಗೆ, ಮುಂಬೈನ ಆಂಗ್ಲೋ ಇಂಡಿಯನ್ ಪತ್ರಿಕೆಯೊಂದು ನಿಮ್ಮ ವಿಷಯವಾಗಿ ಏನೆಂದು ಬರೆದಿದೆ, ಗೊತ್ತೆ? ಹೇಗ್ ತೀರ್ಪನ್ನು ಪ್ರಸ್ತಾಪಿಸಿ, ಅದು ನಿಮ್ಮ ಮೇಲೆ ವಿಷ ಕಾರಿದೆ.'

'ಏನೆಂದು ಬರೆದಿದೆ, ಹೇಳಿ? ಸಾಮಾಜಿಕ ಕಾರ್ಯಕರ್ತನಿಗೆ ತನ್ನ ಸ್ನೇಹಿತರಿಗಿಂತ ವಿರೋಧಿಗಳ ಬಗ್ಗೆ ತಿಳಿದುಕೊಳ್ಳುವುದರಲ್ಲಿ ಹೆಚ್ಚು ಕುತೂಹಲವಿರುತ್ತದೆ' ಎಂದೆ.

'ನಿಮಗೆ ವಿಧಿಸಿದ ಶಿಕ್ಷೆಯ ಬಗ್ಗೆ ಆನಂದ ಹೊಂದಿ, ''ಆ ರ್‍ಯಾಸ್ಕಲ್‌ಗೆ ಕೊನೆಗೂ ತಕ್ಕ ಶಿಕ್ಷೆಯಾಯಿತು'' ಎಂದು ಬರೆದಿದೆ.'

'ಬಹಳ ಒಳ್ಳೆಯದು. ಯುರೋಪಿನ ಪತ್ರಿಕೆಗಳು ನನ್ನನ್ನು ಹುತಾತ್ಮನೆಂದು ಗೌರವಿಸಿವೆ ; ಈ ಪತ್ರಿಕೆಯು ''ರ್‍ಯಾಸ್ಕಲ್'' ಎಂದು ನಿಂದಿಸಿದೆ. ಈ ಎರಡು ಅತಿರೇಕಗಳೂ ಪರಸ್ಪರ ರದ್ದಾಗಿ, ನಾನು ಮಾತ್ರ ಎಂದಿನಂತೆಯೇ ಉಳಿದಿದ್ದೇನೆ!' ಎಂದೆ.

ಕೋಣೆಯ ಬಾಗಿಲು ಹತ್ತು ಗಂಟೆಗೆ ಮೊದಲು ಎಂದೂ ತೆರೆದಿದ್ದಿಲ್ಲ. ಆದರೆ ಇದ್ದಕ್ಕಿದ್ದಂತೆ ಒಂದು ದಿನ ತೆರೆದಾಗ ಅಚ್ಚರಿಯಾಯಿತು. 'ನಡೆಯಿರಿ, ಸಾಹೇಬರು ಕರೆಯುತ್ತಾರೆ' ಎಂದ ಹವಾಲದಾರ. ಮೇಲೆದ್ದೆ. 'ಏತಕ್ಕೆ ಕರೆದಿರಬಹುದು?' ಎಂದು ಯೋಚಿಸುತ್ತಾ ಅವನನ್ನು ಹಿಂಬಾಲಿಸಿದೆ. ಕಾಲಿನ ಬೇಡಿ ತಾಳ ಹಾಕುತ್ತಿತ್ತು! ಕೊರಳಲ್ಲಿ ಕೈದಿಯ ಬಿಲ್ಲೆ ತೂಗಾಡುತ್ತಿತ್ತು. ಹವಾಲದಾರ ಮೆಲ್ಲಗೆ ಹೇಳಿದ :

'ನಿಮ್ಮವರು ಬಂದಿದ್ದಾರೆ ಅಂತ ಕಾಣುತ್ತೆ.'

ನಮ್ಮವರು ?

ಸಾಹೇಬರ ಕೋಣೆಯ ಕಿಟಕಿಯಲ್ಲಿ ಸರಳುಗಳಾಚೆ ಇಬ್ಬರು ನಿಂತಿದ್ದರು. ನನ್ನ ಭಾವಮೈದುನ ಮತ್ತು ಅವನ ಪಕ್ಕದಲ್ಲಿ ನನ್ನ ಪತ್ನಿ! ಎಂಥ ಸ್ವರೂಪದಲ್ಲಿ ನನ್ನ ದರ್ಶನ! ನನ್ನ ದೆಸೆಯಿಂದ ನಮ್ಮ ಮಾವನವರಿಗೆ ಕೆಲಸ ಹೋಗಿತ್ತು ; ಆಸ್ತಿಪಾಸ್ತಿಯೆಲ್ಲ ಜಫ್ತಾಗಿತ್ತು ನಾಲ್ಕು ವರ್ಷಗಳ ಹಿಂದೆ ಇದೇ ಮುಂಬೈನಿಂದ ಹೊರಟಾಗ ಹೆಂಡತಿಯ ಮುಖ ನೋಡಿದ್ದುದು. ಆಗ, ನಾನು ಬ್ಯಾರಿಸ್ಟರ್‌ಗಿರಿಯ ಡೌಲು ಮೆರೆಸುತ್ತಾ, ಐಶ್ವರ್ಯ ಸಂಪಾದನೆಯ ಪ್ರಭಾವಳಿ ಬೆಳೆಸುತ್ತಾ ವಾಪಸು ಬರುವೆನೆಂದು ಈ ಮುಗ್ಧೆ ಭಾವಿಸಿದ್ದಳು! ಈಗ ನೋಡಿದರೆ ಬೇಡಿ - ಬಿಲ್ಲೆ; ಒರಟು ಬಟ್ಟೆಯ ತುಂಡು ಅಂಗಿ, ತುಂಡು ಚಡ್ಡಿ! ಅಪ್ಪಟ ಕೈದಿಯ ಕಳೆ! ಇಪ್ಪತ್ತು ವಯಸ್ಸಿನ ಈ ಹುಡುಗಿಯ ಮನಸ್ಸು ತಡೆದೀತೆ? ಹೃದಯ ಒಡೆಯದಿದ್ದೀತೆ?

ಶಿಕ್ಷೆ, ಐವತ್ತು ವರ್ಷ! ಶಬ್ದಗಳಿಗೆ ಮೀರಿದ ಭಾವನೆಗಳ ಒತ್ತಡ. ಸುತ್ತಲೂ ಸಿಪಾಯಿಗಳ ಸ್ನೇಹಶೂನ್ಯ ದೃಷ್ಟಿ. ಕೊಬ್ಬಿ ಕುಳಿತ ಅಧಿಕಾರಿಯ ದರ್ಪದ ನೋಟ. ಐವತ್ತು ವರ್ಷ ಎಂದರೆ, ಬಹುಶಃ ಇದೇ ಕೊನೆಯ ಭೇಟಿ; ಸಾಯುವ ಮೊದಲೇ ಬೀಳ್ಕೊಡುಗೆ ಹೇಳುವ ಕೊನೆಯ ಅವಕಾಶ! ಆದರೆ, ಅದನ್ನು ಇವಳಿಗೆ ಯಾವ ಬಾಯಿಂದ ಹೇಳಲಿ? ಮನಸ್ಸು ತುಂಬಿ ಬಂತು ಆದರೆ ಮರುಕ್ಷಣವೇ ವಿವೇಕ ಎಚ್ಚರಿಸಿತು. ಧೈರ್ಯ ತಂದುಕೊಂಡೆ.

ದೃಷ್ಟಿಗೆ ದೃಷ್ಟಿ ಸಂಧಿಸಿತು. ನಾನು ಸರಳುಗಳ ಬಳಿ ಕುಳಿತು ನಸುನಕ್ಕು ವಿಚಾರಿಸಿದೆ: 'ಏನು, ಮೊದಲಿನ ಹಾಗೇ ನನ್ನ ಗುರುತು ಸಿಕ್ಕಿತು ತಾನೆ? ಕೇವಲ ಬಟ್ಟೆ ಮಾತ್ರ ಬದಲಾಗಿದೆ ಅಷ್ಟೆ; ನಾನು ಹಾಗೆಯೇ ಇದ್ದೇನೆ, ನೋಡು. ಇದು ಬಹಳ ಉತ್ತಮ ಬಟ್ಟೆ - ಶೀತ, ಚಳಿ ಆಗುವುದಿಲ್ಲ!'

ಮೌನದ ಗೋಡೆ ಮುರಿದುಬಿದ್ದು, ಮಾತಿನ ಕೋಡಿ ಹರಿಯಿತು. ಎದೆಯ ದುಃಖವನ್ನೆಲ್ಲ ಬದಿಗಿಟ್ಟು, ವಿನೋದವಾಗಿ ಮಾತುಕತೆ ಆಡಿದೆವು. ಆಗ ಸ್ವಂತ ಮನೆಯಲ್ಲೆ ಇದ್ದಂತೆ ಅನಿಸಿತು. ಕೊನೆಗೆ ಹೇಳಿದೆ: 'ಒಳ್ಳೆಯದು, ಭಗವಂತನ ಅನುಗ್ರಹ ಇದ್ದರೆ, ಪುನಃ ಭೇಟಿಯಾಗೋಣ. ಅದುವರೆಗೆ ಸಾಮಾನ್ಯ ಸಂಸಾರದ ವ್ಯಾಮೋಹ ಉಂಟಾದರೆ, ಒಂದು ಮಾತು ಹೇಳಿರುತ್ತೇನೆ, ಕೇಳು. ಕೇವಲ ಮಕ್ಕಳು ಮರಿಗೆ ಜನ್ಮಕೊಡುವುದು, ನಾಲ್ಕು ಮರಮುಟ್ಟು ಒಟ್ಟುಗೂಡಿಸಿ ಮನೆ ಕಟ್ಟುವುದು, ಇದಿಷ್ಟೇ ಸಂಸಾರ ಎನ್ನುವುದಾದರೆ ಕಾಗೆ ಗುಬ್ಬಿಗಳೂ ಅಂಥ ಸಂಸಾರ ನಡೆಸುತ್ತವೆ. ಆದರೆ ಮನುಷ್ಯ ಜೀವನ ಅದಕ್ಕಿಂತ ಭವ್ಯವಾದದ್ದು. ಸೇವೆ ಹಾಗೂ ಸಮರ್ಪಣೆಗಳಿಂದಲೇ ಜೀವನಕ್ಕೆ ಸಾರ್ಥಕ ಎನ್ನುವುದಾದರೆ, ನಾವು ಅದರಲ್ಲಿ ಕೃತಾರ್ಥರಾಗಿದ್ದೇವೆ. ನಮ್ಮ ಒಲೆ ನಂದಿಸಿಕೊಂಡಿದ್ದೇವೆ, ನಮ್ಮ ಮನೆ ಬಾಗಿಲು ಮುಳುಗಿಸಿ ಕೊಂಡಿದ್ದೇವೆ, ನಿಜ. ಆದರೆ ಅದರಿಂದ ಮುಂದಕ್ಕೆ ಸಹಸ್ರಾರು ಜನರ ಮನೆಗಳಲ್ಲಿ ಚಿನ್ನದ ಹೊಗೆ ಏಳಲಿದೆ.

'ನೋಡು, ಮೂರು ಹೊತ್ತೂ "ಮನೆ, ಮನೆ" ಎಂದು ಜಪಿಸುವವರದು ತಾನೆ ಏನು ಶಾಶ್ವತ? ಅಂಥ ಲೆಕ್ಕವಿಲ್ಲದಷ್ಟು ಜನರ ಮನೆಗಳನ್ನು ಪ್ಲೇಗು ಮುಳುಗಿಸಿಲ್ಲವೆ? ಹಸೆಮಣೆಯ ಮೇಲೆಯೇ ಮೃತ್ಯು ಎಷ್ಟೋ ವಧು-ವರರನ್ನು ಅಗಲಿಸಿಲ್ಲವೆ? ಆದ್ದರಿಂದ ಬಂದ ಕಷ್ಟವನ್ನು ಧೈರ್ಯದಿಂದ ಸಹಿಸಲು ಪ್ರಯತ್ನಿಸು.'

'ಹಾಗೆ ಮಾಡುತ್ತಲೇ ಇದ್ದೇವೆ. ನಾವಾದರೆ, ಒಬ್ಬರಿಗೊಬ್ಬರು ಇದ್ದೇ ಇದ್ದೇವೆ. ನಮ್ಮ ಚಿಂತೆ ಹಚ್ಚಿಕೊಳ್ಳಬೇಡಿ. ನೀವು ಕ್ಷೇಮವಾಗಿದ್ದರೆ ಸಾಕು, ನಮಗೆ ಅದೇ ಸರ್ವಸ್ವ' ಎಂದರು, ಆ ಅಣ್ಣ-ತಂಗಿ.

..............................

'ನಾಕು, ನಿಲ್ಲಿಸಿ, ಸಮಯವಾಯಿತು' ಎಂಬ ಸೂಪರಿಂಟೆಂಡೆಂಟರ ಗರ್ಜನೆ ಕೇಳುತ್ತಲೇ ನಮ್ಮ ವಾಕ್ಯಗಳು ಅರ್ಧಕ್ಕೇ ನಿಂತವು

ಮೇಲೆದ್ದೆ. ಕಾಲಿನ ಬೇಡಿಗಳಿಂದ ನನಗೆ ಎಳ್ಳಷ್ಟೂ ತೊಂದರೆಯಿಲ್ಲ ಎಂದು ಬಂದಿದ್ದವರಿಗೆ ತೋರಿಸಲು ಆದಷ್ಟು ಸಹಜವಾಗಿ ನಡೆದುಕೊಂಡು ಹೊರಟೆ ಒಮ್ಮೆಯೂ ಕಣ್ಣು ಹಿಂದೆ ತಿರುಗಿಸಿ ನೋಡಲಿಲ್ಲ. ಆದರೆ ಮನಸ್ಸು ? ಎತ್ತಲೋ ತಿರುಗಾಡುತ್ತಿತ್ತು. ಕೋಣೆ ಸೇರಿದ ನಂತರ, ಹೊಲಸು ನೆಲದ ಮೇಲೆ ಕುಸಿದೆ. ಬಾಗಿಲಿಗೆ ಬೀಗ ಬಿತ್ತು. ಏನೋ ಯೋಚನೆಯಲ್ಲಿ ನಿದ್ರೆ ಆವರಿಸಿತು.

'ಏಳಿ, ಏಳಿ ! ಕೆಲಸದ ಹೊತ್ತಿನಲ್ಲಿ ನಿದ್ದೆ ಮಾಡುತ್ತೀರಾ ? ಸಾಹೇಬರು ನೋಡಿದರೆ ನಮ್ಮ ಗತಿ ಏನು ? ಎನ್ನುತ್ತಾ ಸಿಪಾಯಿ ಬಾಗಿಲ ಸರಳುಗಳ ಮೇಲೆ ತನ್ನ ಲಾಠಿ ಚಲಾಯಿಸಿದ.

ಎದ್ದು ಕುಳಿತೆ. ಪುನಃ ಅದೇ ಹಗ್ಗದ ಚೂರು ; ಅದನ್ನು ಬಿಡಿಸುವುದು ; ಅದರಿಂದ ಪುನಃ ಹಗ್ಗ ಹೊಸೆಯುವುದು, ಅಂಗೈ ತುಂಬ ಬೊಬ್ಬೆಗಳು ! ಬೆರಳುಗಳ ಸುತ್ತಲೂ ರಕ್ತ !

ಒಂದು ತಿಂಗಳ ನಂತರ ಭಾಯಖಳಾ ಜೈಲಿಗೆ ಸಾಗಿಸಲ್ಪಟ್ಟೆ. ಅಲ್ಲಿ ನನ್ನಲ್ಲಿದ್ದ ಕೆಲವು ಪುಸ್ತಕಗಳನ್ನು ಸರಕಾರ ಅಪಹರಿಸಿತು ! ಊಟ ಇನ್ನೂ ಕೆಳಮಟ್ಟ ಮುಟ್ಟಿತು. ಓದಲು ಬೈಬಲ್ ಮಾತ್ರ ಸಿಕ್ಕುತ್ತಿತ್ತು. ಎರಡು ಜೀವಾವಧಿ ಶಿಕ್ಷೆಗಳನ್ನೂ ಒಂದೇ ಅವಧಿಯಲ್ಲಿ ಅನುಭವಿಸುವಂತೆ ಮಾಡಬೇಕೆಂದು, ನಾನೊಂದು ಮನವಿ ಸಲ್ಲಿಸಿದೆ. ಆದರೆ ಅದು ತಿರಸ್ಕೃತವಾಯಿತು. ಆ ವಾರ್ತೆ ತಿಳಿಸಲು ಬಂದ ಆಂಗ್ಲ ಅಧಿಕಾರಿ ಮಾರ್ಮಿಕವಾಗಿ ಹೇಳಿದ :

'ನೋಡಿ ಸಾವರಕರ್ ! ನೀವು ಮೊದಲು ಆಜನ್ಮ ಶಿಕ್ಷೆ ಮುಗಿಸಿ ಅನಂತರ ಎರಡನೆ ಜನ್ಮವೆತ್ತಿ ಎರಡನೆ ಶಿಕ್ಷೆ ಅನುಭವಿಸಬೇಕೆಂಬುದು ಸರಕಾರದ ಇಚ್ಛೆ!'

ನಗುತ್ತಾ ನಾನೆಂದೆ ; 'ಹಾಗಾದರೆ, ನನ್ನ ಪಾಲಿಗೆ ಅದೂ ಒಂದು ಸಂತೋಷದ ಸಂಗತಿಯೇ. ಅದರಿಂದ ಸರಕಾರ ಹಿಂದುಗಳ ಪುನರ್ಜನ್ಮದ ಸಿದ್ಧಾಂತ ಒಪ್ಪಿಕೊಂಡಂತಾಗಿದೆ ಮಾತ್ರವಲ್ಲ, ಪುನರುತ್ಥಾನದ ಈಸಾಯಿ ಕಲ್ಪನೆಯನ್ನು ಕೈಬಿಟ್ಟಂತೆಯೂ ಆಗಿದೆ !'

ಏನಿದೆ ? ಈ ದಿನ ಇಷ್ಟೊಂದು ಮುಂಚೆ ಊಟ ? ಇಲ್ಲಿ ಮರಣಕ್ಕೂ ಒಂದು ನಿಶ್ಚಿತ ಸಮಯವುಂಟು - ಎಂಬುದು ಜೈಲಿನ ಗಾದೆ. ಹಸಿದು ಸಾಯುತ್ತಿದ್ದರೂ ಊಟ ಮೊದಲು ಬರುವುದಿಲ್ಲ; ಆದರೆ ಸಮಯ ಆದೊಡನೆ, ಸ್ನಾವು ಬೇಕಾದರೆ ನಿಲ್ಲಬಹುದು, ಊಟ ನಿಲ್ಲುವುದಿಲ್ಲ. ಅಂಥದರಲ್ಲಿ, ಇಂದು ಮೊದಲೇ ಊಟ ! ಏನೋ ವಿಶೇಷ ಇರಬೇಕು, ಊಟವಾಯಿತು. ಗೋಡೆಯ ಮೇಲೆ ಮೊನಚಾದ ಕಲ್ಲಿನಿಂದ ಬರೆದಿದ್ದ ಕವಿತೆಯನ್ನು ಬೇಗ ಬೇಗ ಕಂಠಪಾಠ ಮಾಡಿಕೊಂಡು, ಅದನ್ನು ಅಳಿಸಿ ಹಾಕುವಷ್ಟರಲ್ಲಿ, 'ಹೊರಡಿ, ಹೊರಡಿ' ಎನ್ನುತ್ತಾ ಸಿಪಾಯಿ ಬಾಗಿಲು ತೆರೆದ. ಮೋಟಾರಿನಲ್ಲಿ - ರೈಲು ನಿಲ್ದಾಣ ; ಅನಂತರ ರೈಲು ಪ್ರಯಾಣ ; ಠಾಣಾ ಸೆರೆಮನೆ ಮುಂದಿನ ವಾಸಸ್ಥಾನ !

ಅರೆಬೆಂದ ಜೋಳದ ರೊಟ್ಟಿಯ ಮೊದಲ ಚೂರು ಅಗಿಯುವಷ್ಟರಲ್ಲೇ ಬಾಯಿ ನೋಯತೊಡಗಿತು. ನೀರು ಕುಡಿದ ಮೇಲೆಯೇ ಅದು ಗಂಟಲಿನಿಂದ ಕೆಳಗೆ ಇಳಿದದ್ದು. ನಡುರಾತ್ರಿ ಯಾರೋ ಮೆಲ್ಲಗೆ ಕರೆದಂತಾಯಿತು. ಕಣ್ಣು ತೆರೆದು ನೋಡಿದರೆ - ಬಾಗಿಲ ಬಳಿ, ಅತ್ಯಂತ ಕ್ರೂರಿ ಎನಿಸಿಕೊಂಡಿದ್ದ ವಾರ್ಡರ್! ನಾನು ಸರಳುಗಳ ಹತ್ತಿರ ಹೋದಾಗ ಅವನು ಪಿಸುಗುಟ್ಟಿದ: 'ಮಹಾರಾಜ್, ನಿಮ್ಮ ಧೈರ್ಯ,

ಸಾಹಸ ಕೇಳಿದ್ದೇನೆ. ನಿಮ್ಮಂಥ ಪರಾಕ್ರಮಿಗೆ ನಾನು ಗುಲಾಮ. ಸಾಧ್ಯವಾದಷ್ಟೂ ಸಹಾಯ ಮಾಡುತ್ತೇನೆ. ಆದರೆ ಗುಟ್ಟು ರಟ್ಟಾದರೆ ನನ್ನ ಪ್ರಾಣಕ್ಕೇ ಗಂಡಾಂತರ ! ನೀವು ಕೈಬಿಡುವುದಿಲ್ಲವೆಂದು ನಂಬಿದ್ದೇನೆ. ನಿಮ್ಮ ತಮ್ಮ ಇದೇ ಜೈಲಿನಲ್ಲಿ ಇದ್ದಾರೆ ' ಇಷ್ಟು ತಿಳಿಸಿ ಹೊರಟುಬಿಟ್ಟ.

ತಮ್ಮ ? ನಮ್ಮ ಬಾಳ ? ಇನ್ನೂ ಇಪ್ಪತ್ತು ಸಹ ತುಂಬದಿದ್ದ ಅವನು ಎರಡನೆಯ ಬಾರಿಗೆ ಸೆರೆಮನೆ ಸೇರಿದ್ದ. ಅವನ ಬಾಯಿಂದ ರಹಸ್ಯಗಳನ್ನು ಹೊರಡಿಸಲು ಅಮಾನುಷ ಚಿತ್ರಹಿಂಸೆಗೆ ಅವನನ್ನು ಗುರಿಮಾಡಲಾಗಿತ್ತು. ಆದರೆ ಅವನು ದ್ರೋಹಿಯಾಗಲಿಲ್ಲ. 'ತಮ್ಮನು ಇಲ್ಲಿರುವ ಬಗ್ಗೆ ಅಣ್ಣನಿಗೆ ಯಾರಾದರೂ ತಿಳಿಸಿದಲ್ಲಿ ಹತ್ತು ವರ್ಷ ಕರಿನೀರಿನ ಕಠಿನಶಿಕ್ಷೆ' ಎಂದು ಸೂಪರಿಂಟೆಂಡೆಂಟ್ ವಾರ್ಡರುಗಳಿಗೆಲ್ಲ ಎಚ್ಚರಿಕೆ ನೀಡಿದ್ದ. ಆದರೂ, ನನ್ನ ಆ ಪ್ರಥಮ-ಪರಿಚಿತ ವಾರ್ಡರ್ ಇಬ್ಬರ ನಡುವೆ ಸಂದೇಶವಾಹಕನಾಗಿ ಕೆಲಸ ನಿರ್ವಹಿಸಿದ. ಆದರೆ ಎರಡೇ ದಿನಗಳಲ್ಲಿ ಬಾಳನ ಸ್ಥಳಾಂತರ ಆಯಿತು. ಅನಂತರಬಹುದಿನಗಳವರೆಗೆ ಅವನ ಬಗ್ಗೆ ಏನೂ ತಿಳಿದು ಬರಲಿಲ್ಲ.

ಜೈಲಿನ ವಾರ್ಡರ್‌ಗಳ ಮುಖ್ಯಸ್ಥ ಬಲು ಧೂರ್ತ. ಅವನು ನನ್ನೆದುರು ಮಾಡುತ್ತಿದ್ದ ಕುಚೋದ್ಯ, ಅವಹೇಳನ ಅಸಹನೀಯ. ಒಮ್ಮೊಮ್ಮೆ ತನ್ನ ಲಾಠಿಯನ್ನು ಗಾಳಿಯಲ್ಲಿ ಬೀಸಿ, 'ನನ್ನ ಹೊಡೆತಕ್ಕೆ ಗಾಳಿ ಚೂರು ಚೂರಾಯಿತಲ್ಲವೆ?' ಆಗ ವಾರ್ಡರುಗಳೆಲ್ಲ ನಗುತ್ತಿದ್ದರು. ಆಗ ಅವನು ನನ್ನೆಡೆಗೆ ಕೈತೋರಿಸಿ, 'ಏಕೆ ನಗುತ್ತೀರಿ ? ಇಂಥ ವೀರರು ಬ್ರಿಟಿಷ್ ಸರಕಾರದ ವಿರುದ್ಧ ಹೀಗೇ ಗಾಳಿ ಗುದ್ದುವ ಕೆಲಸ ಮಾಡುತ್ತಿಲ್ಲವೇನು ? ಇಲ್ಲಿರುವ ಈ ದೊಡ್ಡಮನುಷ್ಯ, ಒಳಸಂಚು ಮಾಡಿ ಸರಕಾರ ಉರುಳಿಸುತ್ತಾನಂತೆ!'

ಅವನು ಆಗಾಗ್ಗೆ ವಾರ್ಡರುಗಳಿಗೆಲ್ಲ, 'ನೋಡಿ ನನ್ನ ಹುಲಿ!' ಎಂದು ನನ್ನನ್ನು ತೋರಿಸಿ ಹಂಗಿಸುತ್ತಿದ್ದ. ಅವರೆಲ್ಲರ ತಿರಸ್ಕಾರದ ನಗು ನನ್ನ ಹೃದಯ ಇರಿಯುತ್ತಿತ್ತು. ಉರಿಯುವ ಗಾಯದ ಮೇಲೆ ಉಪ್ಪು ಹಾಕಿದಂತಾಗುತ್ತಿತ್ತು. 'ನಿನ್ನ ಹೆಣ ಹೊರಗೆ ಹಾಕುವವರೆಗೆ ನಿನಗೆ ಬಿಡುಗಡೆಯಿಲ್ಲ' ಎಂದೂ ಅವನು ನನಗೆ ಹೇಳುತ್ತಿದ್ದ. 'ಅಜಬ್ ತೇರೀ ಕುದರತ್ ಅಜಬ್ ತೇರಾ ಖೇಲ್ । ಮಕಡೀಕೆ ಜಾಲೇ ಮೇ ಫಸಾಯಾ ಶೇರ್ ।।' (ಓ ವಿಧಾತ, ನಿನ್ನ ಆಟ ಬಲು ವಿಚಿತ್ರ. ಕೋತಿಯ ಬಲೆಯೊಳಗೆ ಹುಲಿಯನ್ನು ಸಿಕ್ಕಿಸಿರುವೆ) ಎಂಬ ಪದ್ಯ ಹೇಳಿಕೊಂಡು ಕುಣಿಯುತ್ತಿದ್ದ. ಅವನ ಪ್ರಶ್ನೆಗಳಿಗೆ ನಾನು ಬಿರುಸಾಗಿ ಉತ್ತರ ಕೊಟ್ಟಾಗ, ತನ್ನ ಸುತ್ತ ಇದ್ದವರಿಗೆ ಹೇಳುತ್ತಿದ್ದ: 'ಇವನು ಖದೀಮ, ಪಕ್ಕಾ ಖದೀಮ !'

ಒಮ್ಮೆ ಒಬ್ಬ ಅಧಿಕಾರಿ ಅಣಕು ದನಿಯಲ್ಲಿ, 'ಏನೂ ಚಿಂತೆ ಮಾಡಬೇಡ ; 1960ರಲ್ಲಿ ನಿನ್ನ ಬಿಡುಗಡೆಯಾಗುವುದು ನಿಶ್ಚಿತ!' ಎಂದ.

'ಆದರೆ ಇನ್ನು ಐವತ್ತು ವರ್ಷಗಳ ಕಾಲ ಬ್ರಿಟಿಷ್ ಸರಕಾರ ತಾನೆ ಎಲ್ಲಿ ಉಳಿದಿರುತ್ತದೆ ?' ಎಂದು ನಾನು ಹೇಳುತ್ತಲೇ ಅವನು ತೆಪ್ಪಗೆ ಹೊರಟುಹೋದ!

ನನ್ನ ಬಳಿ ಒಂದು ಸಣ್ಣ ಆಕಾರದ ಭಗವದ್ಗೀತೆ, ಕನ್ನಡಕ, ಕೆಲವು ಬಟ್ಟೆಗಳಿದ್ದ ಒಂದು ಚೀಲ ಇದ್ದವು. ಹವಾಲದಾರ ಒಂದು ಬೆಳಿಗ್ಗೆ ಅದನ್ನೆಲ್ಲ ತೆಗೆದುಕೊಂಡು ಹೋದ. ಅವನ್ನು ಹರಾಜು ಹಾಕಿ, ಬಂದ ಹಣವನ್ನು ಸರಕಾರಕ್ಕೆ ಸೇರಿಸಿಕೊಳ್ಳಬೇಕೆಂದು ಆಜ್ಞೆಯಾಗಿತ್ತು. ಕೊನೆಗೆ ಮರುದಿನ ಗೀತಾ ಪುಸ್ತಕ ಮತ್ತು ಕನ್ನಡಕ ವಾಪಸು ಬಂತು. 'ಇದು ಈಗ ನಿನ್ನದಲ್ಲ; ಸರಕಾರಿ ಸಾಮಾನು ! ಜೋಪಾನವಾಗಿ ಉಪಯೋಗಿಸಬೇಕು' ಎಂಬ ಎಚ್ಚರಿಕೆಯ ಸೂಚನೆಯೂ ಬಂತು !

ಒಂದು ಮಧ್ಯಾಹ್ನ ಇಡೀ ಸೆರೆಮನೆ ಅಪೂರ್ವ ನಿರೀಕ್ಷಣೆಯಿಂದ ಗಜಬಜಿಸುತ್ತಿತ್ತು. 'ಚಲಾನ್'

ಆಗಮಿಸುವ ದಿನ ಅದು. ದೇಶದಾದ್ಯಂತ ಆರಿಸಿದ ಅತ್ಯಂತ ಕ್ರೂರಕರ್ಮಿ ಕೈದಿಗಳು, ದರೋಡೆಕೋರರು ಮತ್ತು ಖೂನಿಗಾರರನ್ನು ಅಂದಮಾನಿಗೆ ಸಾಗಿಸುತ್ತಾರೆ. ಅಂಥವರ ಮೆರವಣಿಗೆ ಈ ಜೈಲಿಗೆ ಬರುವ ದಿನವೇ 'ಚಲಾನ್ ದಿನ.' 'ಚಲಾನ್ ಬಂದಿತು, ಚಲಾನ್ !' ಎಂದು ವಾರ್ಡರುಗಳು ಮಾತನಾಡಿಕೊಂಡರು.

ಅಂದು ನನಗೆ ವಿಪರೀತ ಜ್ವರ. ನನ್ನ ವೈದ್ಯಕೀಯ ಪರೀಕ್ಷೆ ನಡೆಯಿತು. 'ಅಂದಮಾನಿಗೆ ಹೋಗಲು ಯೋಗ್ಯ' ಎಂದು ಪರೀಕ್ಷಾ ಸಮಿತಿ ಶಿಫಾರಸು ಮಾಡಿತು ! ನನ್ನ ಹಾಸಿಗೆ – ಅಂದರೆ, ಒಂದು ಹರಕು ಗೋಣಿ ಪಟ್ಟೆ – ಸುತ್ತಿ ಕಂಕುಳಲ್ಲಿ ಇಟ್ಟುಕೊಂಡೆ. ತಗಡಿನ ತಟ್ಟೆ, ಲೋಟ ಕೈಲಿ ಹಿಡಿದುಕೊಂಡೆ. ಜೈಲಿನಲ್ಲಿ ಚಲಾನ್ ಇಳಿಸಿದ್ದ ಭಾಗಕ್ಕೆ ಸಾಗಿಸಲ್ಪಟ್ಟೆ. ಅಲ್ಲಿ ಅವರ ನಗು, ಕೇಕೆ, ಕುಣಿತ ಹೇಳತೀರದು. ಗಲಾಟೆ ಮಾಡದೆ ಸುಮ್ಮನಿದ್ದ ಹೊಸಬರನ್ನು ಹಳಬರು ತರಾಟೆಗೆ ತೆಗೆದುಕೊಳ್ಳುತ್ತಿದ್ದರು : 'ಏಳು, ಗದ್ದಲ ಮಾಡು ; ಸುಮ್ಮನಿರಬೇಡ, ಚಲಾನ್ ಹೆಸರಿಗೆ ಮಸಿ ಹಚ್ಚಬೇಡ!' ಅವರಿಗೆ ಅಂದಮಾನಿಗೆ ಹೋಗುವುದೇ ಒಂದು ಹೆಮ್ಮೆಯ ಸಂಗತಿ. ತಾವು ವಿಶೇಷ ಮಹತ್ವವುಳ್ಳ ವ್ಯಕ್ತಿಗಳು, ಸಾಮಾನ್ಯರಲ್ಲ ಎಂಬ ಗರ್ವ. ನಾನು ಬ್ಯಾರಿಸ್ಟರ್ ಎಂದು ತಿಳಿದು, ನನ್ನ ಬಗ್ಗೆ ಅವರೆಲ್ಲರಿಗೂ ವಿಶೇಷ ಗೌರವ.

ಹೊರಡುವ ದಿನ ಬಂತು. ಚಲಾನ್ ನಿಲ್ದಾಣಕ್ಕೆ ಹೊರಟಿತು. ನಾನು ಹಿಂದೆ ಉಳಿದದ್ದು ನೋಡಿ ಅವರು ಮಾತನಾಡಿಕೊಂಡರು : 'ಅವನೊಬ್ಬ ಮಹಾರಾಜ. ನಮ್ಮ ಹಾಗೆ ನಡೆಯುತ್ತಾನೇಕೆ ? ಅವನಿಗೆ ರಥ ಬರುತ್ತದೆ !' ಅದೇ ರೀತಿ ನನಗೆ ವಾಹನ ಬಂತು. ಅದರಿಂದಾಗಿ ಉಳಿದ ಕೈದಿಗಳಿಗೆ ನನ್ನ ಮೇಲೆ ಇನ್ನಷ್ಟು ಗೌರವ ಹೆಚ್ಚಿತು.

ಕಂಕುಳಲ್ಲಿ ಚಾಪೆ, ಕೈಯಲ್ಲಿ ತಟ್ಟೆ ಹಿಡಿದು ನಿಂತೆ. ಧಾಂಡಿಗನಾದ ಯುರೋಪಿಯನ್ ಅಧಿಕಾರಿಯೊಬ್ಬ ನನ್ನ ಕೈಗೊಂದು ಬಲವಾದ ಹಗ್ಗ ಕಟ್ಟಿ, ಅದರ ಇನ್ನೊಂದು ತುದಿಯನ್ನು ತನ್ನ ತೋಳಿಗೆ ಕಟ್ಟಿಕೊಂಡ. ಜೈಲು ಖಾನೆಯ ಕಂಬಿಗಳೊಳಗಿನಿಂದ ಆ ದೃಶ್ಯ ನೋಡುತ್ತಿದ್ದ ಇತರ ಕೈದಿಗಳು – 'ಈ ಪುಟ್ಟ ಮನುಷ್ಯನಿಗೆ ಇಡೀ ಪರಂಗೀ ಸಾಮ್ರಾಜ್ಯವೇ ಹೆದರುತ್ತದೆ' ಎಂದು ಹೆಮ್ಮೆಯಿಂದ ಹೇಳಿಕೊಂಡರು. ವಾಹನ ಹತ್ತಿ ರೈಲುನಿಲ್ದಾಣ ಸೇರಿದೆವು. ಅಲ್ಲಿ ನನ್ನ 'ದರ್ಶನ'ಕ್ಕೆ ಜನಗಳ ಜಾತ್ರೆಯೇ ಸೇರಿತ್ತು. ಗುಂಪಿನ ನಡುವೆ ಬಿಳಿಯರನೇಕರು ತಮ್ಮ ಹೆಂಡತಿಯರನ್ನೂ, ಮಕ್ಕಳನ್ನೂ ಹೆಗಲಮೇಲೆ ಕೂರಿಸಿಕೊಂಡು ನನ್ನನ್ನು ತೋರಿಸುತ್ತಿದ್ದರು ! 'ಹಡಗಿನಿಂದ ಹಾರಿ, ಸಮುದ್ರ ಈಜಿದ ಸಾಹಸಿ ಅವನೇ !' ಎನ್ನುತ್ತಿದ್ದರು.

ಠಾಣಾದಿಂದ ವಿಶೇಷ ರೈಲ್ವೆ ಡಬ್ಬಿಯಲ್ಲಿ, ಸರ್ಪಕಾವಲಿನಲ್ಲಿ ಮದರಾಸಿಗೆ ಪ್ರಯಾಣ. ಕೈಗೂ ಕಾಲಿಗೂ ಬೇಡಿಗಳ ಆಭರಣ! ಅದೇ ರೈಲಿನಲ್ಲಿ ವಿಶೇಷ ಪೊಲೀಸ್ ಅಧಿಕಾರಿಯೊಬ್ಬರು ಬೇರೊಂದು ಡಬ್ಬಿಯಲ್ಲಿ ಪ್ರಯಾಣ ಮಾಡುತ್ತಿದ್ದರು. ನನ್ನನ್ನು ಮದರಾಸು ತಲುಪಿಸುವುದು ಅವರ ಜವಾಬ್ದಾರಿ. ಅವರು ಪ್ರತಿಯೊಂದು ನಿಲ್ದಾಣದಲ್ಲೂ, ನಾನು ಇರುವೆನೋ ಇಲ್ಲವೋ ಎಂದು ಖಚಿತಪಡಿಸಿಕೊಳ್ಳಲು, ಇಳಿದು ಬಂದು ನೋಡುತ್ತಿದ್ದರು ! ಅದರಿಂದ ಇಬ್ಬರೂ ಮಿತ್ರರಾದೆವು. ನನ್ನ ಬಗ್ಗೆ ಅವರ ಮನಸ್ಸಿನಲ್ಲಿದ್ದ ಅನೇಕ ತಪ್ಪು ಅಭಿಪ್ರಾಯಗಳು ದೂರವಾದವು. ಕೊನೆಗೆ ಮದರಾಸಿನಲ್ಲಿ ಬೀಳ್ಕೊಡುವಾಗ ಆ ಅಧಿಕಾರಿ, 'ನಿಮಗೆ ಧನ್ಯವಾದಗಳು; ಡಿಸೆಂಬರಿನಲ್ಲಿ ದಿಲ್ಲಿ ದರಬಾರು ನಡೆಯುವ ಸಂದರ್ಭದಲ್ಲಿ ನಿಮ್ಮ ಬಿಡುಗಡೆ ಆಗಲೆಂದು ಹಾರೈಸುತ್ತೇನೆ' ಎಂದರು.

ನಾನೂ ಅವರಿಗೆ ಧನ್ಯವಾದ ಅರ್ಪಿಸುತ್ತಾ ಹೇಳಿದೆ : 'ನಿಮ್ಮ ಹಾರೈಕೆ ಈಡೇರುವುದು ಸಾಧ್ಯವಿಲ್ಲ. ಸರಕಾರಕ್ಕೆ ನಾವು ಬಲವಾದ ಹೊಡೆತ ಕೊಟ್ಟಿದ್ದೇವೆ ; ಅಷ್ಟು ಬೇಗನೆ ಸರಕಾರ ಆ ಏಟು ಮರೆಯುವುದು

ಸಾಧ್ಯವಿಲ್ಲ!'

'ಹೇಗಾದರೂ ಆಗಲಿ, ನಾನಂತೂ ನಿಮ್ಮ ಧೀರೋದಾತ್ತ ಗುಣವನ್ನು ಎಂದಿಗೂ ಮರೆಯಲಾರೆ' ಎಂದು ಹೇಳಿ ಅವರು ಹೊರಟುಬಿಟ್ಟರು.

ಸಮುದ್ರದ ದಡದಿಂದ ಹಡಗಿಗೆ ನನ್ನನ್ನು ನಾಗಿಸಲು ಬಲವಾದ ಕಾವಲಿದ್ದ ದೋಣಿ ಕಾದಿತ್ತು. 'ಕನಿಷ್ಠ ಬಿಲ್ಲೆ' ಗಳಿಂದ ಹಿಡಿದು ಅಧಿಕಾರಿಗಳವರೆಗೆ ಎಲ್ಲರ ಕಣ್ಣಿನ ಕೇಂದ್ರ ನಾನೇ! ಎಲ್ಲರೂ ಮೈ ನೆಟೆಸಿಕೊಂಡು, ಉಸಿರಾಡದೆ, ಎವೆಯಿಕ್ಕದೆ ಸಂದೇಹದೃಷ್ಟಿಯಿಂದ ನೋಡುತ್ತಿದ್ದರು. ನಾನು ಸಮುದ್ರದ ಕಡೆ ಸ್ವಲ್ಪ ಕಣ್ಣಾಡಿಸಿದರೂ ಅವರಿಗೆ ಅನುಮಾನ! ನೀವೇನೂ ಹೆದರಬೇಡಿ. ಈ ನನ್ನ ಕೈ ಮತ್ತು ಕಾಲು, ಎರಡರಲ್ಲೂ ಬೇಡಿಗಳಿವೆ!' ಎಂದು ನಾನು ನಸುನಗುತ್ತಾ ಆಶ್ವಾಸನೆಯಿತ್ತೆ. ಆಗ ಅವರಿಗೆ ಇನ್ನಷ್ಟು ಗಾಬರಿ! ನಾನು ಯಾವ ಕ್ಷಣದಲ್ಲಿ ನೀರಿನೊಳಕ್ಕೆ ಹಾರುವೆನೋ ಎಂಬ ಭಯ, ಕುತೂಹಲಗಳಿಂದ ಕಾವಲು ಕಾಯುತ್ತಿದ್ದರು!

ದೋಣಿಯಲ್ಲಿರುವಾಗಲೇ ಭಾರತೀಯ ಪೊಲೀಸ್ ಅಧಿಕಾರಿಯೊಬ್ಬ ನನ್ನಿಂದ ಇತರ ಕ್ರಾಂತಿಕಾರಿಗಳ ರಹಸ್ಯ ಹೊರತೆಗೆಯಲು ಪ್ರಯತ್ನಿಸಿದ. ಅಂದಿಗೆ ಹತ್ತು ದಿನಗಳ ಮೊದಲು ತಿನ್ನವೆಲ್ಲಿಯ ಕಲೆಕ್ಟರ್ ಆಶ್ ಎಂಬ ಪರಂಗಿ ಅಧಿಕಾರಿಯ ವಧೆಯಾಗಿತ್ತು. ದರ್ಪಿಷ್ಠನಾಗಿದ್ದ ಆಶ್‌ನನ್ನು ವಿ.ವಿ.ಎಸ್. ಅಯ್ಯರ್ ಅವರ ಶಿಷ್ಯ, ವಂಚಿ ಅಯ್ಯರ್ ಎಂಬ ಕ್ರಾಂತಿಕಾರಿ ತರುಣನು ಮೀನಾಕ್ಷಿ ರೈಲುನಿಲ್ದಾಣದಲ್ಲಿ ಗುಂಡು ಹಾರಿಸಿ ಸಂಹರಿಸಿದ್ದ. ನನಗೆ ಠಾಣಾ ಜೈಲಿನಲ್ಲೇ ಆ ವಿಷಯ ತಿಳಿದಿತ್ತು. ಈಗ ಆ ಪೊಲೀಸ್ ಅಧಿಕಾರಿ, 'ಮದರಾಸು ಪ್ರಾಂತದಲ್ಲಿ ಬುದ್ಧಿಗೇಡಿ ಯುವಕರು ಇಲ್ಲ; ಆದರಿಂದ ಇಲ್ಲಿ ಪರಿಸ್ಥಿತಿ ಶಾಂತವಾಗಿದೆ' ಎಂದು ಹೇಳಿ, ನಾನು ಏನಾದರೂ ಹೇಳುವೆನೋ ಎಂದು ನಿರೀಕ್ಷಿಸುತ್ತಾ ಕುಳಿತ. ನಾನು ನಸುನಕ್ಕು ಕೇಳಿದೆ: 'ಹಾಗೇನು ? ಶಾಂತತೆ ನೆಲಸಿದೆಯೆಂದು ನಿಮಗೆ ನಿಶ್ಚಿತವಾಗಿದೆ ತಾನೆ ?' ಪಕ್ಕದಲ್ಲಿದ್ದ ಇನ್ನೊಬ್ಬ ಅಧಿಕಾರಿಯೂ ನಗುತ್ತಾ ತನ್ನ ಸಂಗಡಿಗನಿಗೆ ಹೇಳಿದ : 'ಇವರಿಗೆ ಎಲ್ಲ ಗೊತ್ತಿರಬೇಕು. ಆದರೆ ಈಗ ನೀನು ಅವರ ಬಾಯಿಂದ ಹೊರಡಿಸಬೇಕೆಂದು ನೋಡುತ್ತಿದ್ದೀ; ನಿನ್ನ ಬಾಯಿಂದಲೇ ಹೊರಡಿಸಲು ಅವರು ನೋಡುತ್ತಿದ್ದಾರೆ!'

ಅಂದು 1911 ಜೂನ್ 27. ನಾನು 'ಮಹಾರಾಜ' ಹಡಗಿಗೆ ನಾಗಿಸಲ್ಪಟ್ಟೆ. ಅಂದಮಾನಿಗೆ ಹೋಗಲು ಹೀಗೆ ಸಾವಿರಾರು ಜನ ವರ್ಷ ವರ್ಷವೂ ಹಡಗು ಹತ್ತುತ್ತಾರೆ. ಆದರೆ, ಅವರಲ್ಲಿ ನೂರಕ್ಕೆ ಒಬ್ಬರೂ ಹಿಂದಿರುಗುವುದಿಲ್ಲ! ಈ ಹಡಗು ಏರುವುದಕ್ಕೂ ಶವಯಾತ್ರೆಯ ರಥ ಏರುವುದಕ್ಕೂ ಏನೂ ವ್ಯತ್ಯಾಸವಿಲ್ಲ! ದಡದಲ್ಲಿ ನಿಂತವರೆಲ್ಲ ಕರುಣೆಯಿಂದ ನಮ್ಮ ಕಡೆ ನೋಡುತ್ತಿದ್ದರು

ಹಡಗಿನ ನೆಲಮಾಳಿಗೆಯಲ್ಲಿ ಕೈದಿಗಳಿಗಾಗಿಯೇ ಒಂದು ಕಬ್ಬಿಣದ ಪಂಜರ, ಕೇವಲ 20-30 ಜನ ಇರಬಹುದಾದ ಅದರೊಳಗೆ 50 ಜನರನ್ನು ದನಗಳಂತೆ ತುಂಬಲಾಗಿತ್ತು. ನಾಕಷ್ಟು ಗಾಳಿ, ಬೆಳಕುಗಳೂ ಇಲ್ಲ. ನನಗೆ ಆಸ್ತಮಾ ತೊಂದರೆ ಇದ್ದುದರಿಂದ, ಆ ಇಕ್ಕಟ್ಟಿನಲ್ಲಿ ಇರುವುದು ಅಪಾಯಕರವೆಂದು, ನನ್ನನ್ನು ಕರೆತಂದ ಇಂಗ್ಲಿಷ್ ಅಧಿಕಾರಿಗೆ ಹೇಳಿದೆ. ಹಡಗಿನ ವೈದ್ಯರು ಬಂದರು; ಒಂದು ಮೂಲೆಯಲ್ಲಿ ನರಳುಗಳ ಪಕ್ಕದಲ್ಲೆ ಸ್ವಲ್ಪ ಗಾಳಿ ಆಡುವಂಥ ಜಾಗ ನನಗೆ ಸಿಕ್ಕಿತು. ಹಡಗು ಚಲಿಸಿತು; ಕತ್ತಲಾಯಿತು.

ಕಾಲು ಚಾಚಲು ನಾಕಷ್ಟು ತಾಣವಿಲ್ಲ. ಎಲ್ಲರೂ ಹೇಗೆ ಹೇಗೋ ಉರುಳಿಕೊಂಡರು. ಒಬ್ಬರ ಮೇಲೆ ಒಬ್ಬರ ತಲೆ, ಕೈಕಾಲುಗಳು! ಕೈದಿಗಳೆಲ್ಲರೂ ಶುದ್ಧ ಕೊಳಕರು; ನಾನಾ ರೀತಿಯ ಹೊಲಸು ರೋಗಗ್ರಸ್ತರು.

ನ್ನ ಎದುರಿಗೇ ಒಂದು ತೆರೆದ ಪೀಪಾಯಿ. ಅಷ್ಟೂ ಜನರ ಮಲಮೂತ್ರ ವಿಸರ್ಜನೆಗೆ ಅದೇ ಜಾಗ. ವಾಂತಿ ಬರಿಸುವಂಥ ಗಬ್ಬು ವಾಸನೆ. ಒಬ್ಬರ ನಂತರ ಒಬ್ಬರು ಅಲ್ಲಿಗೆ ಬಂದು ಹೋಗುತ್ತಲೇ ಇದ್ದರು. 'ಥತ್, ಭೂಮಿಯ ಮೇಲಿನ ನರಕ' ಎಂದುಕೊಂಡು ನಿಟ್ಟುಸಿರು ಬಿಟ್ಟೆ. ಭದ್ರವಾಗಿ ಕಣ್ಣು ಮುಚ್ಚಿಕೊಂಡೆ. ಅಷ್ಟರಲ್ಲೆ ವಿವೇಕ ಎಚ್ಚೆತ್ತು ಹೇಳಿತು :

'ಅರೇ ಹುಚ್ಚಾ! ಅದೆಲ್ಲ ನಿನ್ನ ಮನಸ್ಸಿನ ಮೇಲೆ ನಿಂತಿದೆ ನಿನ್ನ ಹೊಟ್ಟೆಯೊಳಗೇ ಇರುವುದಕ್ಕೆ ಏಕೆ ಅಸಹ್ಯ ಪಡುತ್ತೀ? ಬಹುಶಃ ನಿನ್ನ ಅಹಂಕಾರ, ಪ್ರತ್ಯೇಕತೆ, ನೀನೇ ಉತ್ತಮನೆಂಬ ಭಾವನೆ ಎಲ್ಲವನ್ನೂ ಹೋಗಲಾಡಿಸಲು ದೇವರು ಒಡ್ಡಿರುವ ಪರೀಕ್ಷೆ ಇದು; ಇದೊಂದು ದೈವ ಸಾಕ್ಷಾತ್ಕಾರದ ಸಾಧನೆ. ನೀನು ತಿನ್ನುವ ಆಹಾರದ್ದೇ ಬೇರೊಂದು ರೂಪ "ಅದು", ಅಷ್ಟೆ. ಅದಕ್ಕೇಕೆ ಅಂಜುತ್ತೀ?' ಆಮೇಲೆ ನನಗೆ ಯಾವುದೂ ಹೇಸಿಕೆ ಅನಿಸಲಿಲ್ಲ.

ಹುರಿದ ಕಾಳು ಬಿಟ್ಟರೆ ನಮಗೆ ಇನ್ನೇನೂ ಆಹಾರವಿಲ್ಲ. ನಾನಂತೂ ಎರಡು ದಿನ ಉಪವಾಸ ಮಾಡಿದೆ. ಹಡಗಿನ ಅಧಿಕಾರಿಗಳಿಗೂ ಪ್ರಯಾಣಿಕರಿಗೂ ನನ್ನ ಬಗ್ಗೆ ಆದರ. ಆದರೆ, ಅವರು ನನಗೊಬ್ಬನಿಗೇ ಏನಾದರೂ ತಿನ್ನಲು ಕೊಡುವಂತಿರಲಿಲ್ಲ. ಕೊನೆಗೆ ಕೆಲವು ಉದಾರಿ ವ್ಯಾಪಾರಿಗಳು ನಮ್ಮೆಲ್ಲರಿಗೂ ಸೊಗಸಾದ ಊಟ ಹಾಕಿಸಿದರು. ಅಧಿಕಾರಿಗಳು ಹಗಲು ಅರ್ಧ ಗಂಟೆಯ ಹೊತ್ತು ಎಲ್ಲರನ್ನೂ ಹಡಗಿನ ಮೇಲ್ಭಾಗದ ಗಾಳಿ ಬೆಳಕಿಗೆ ಕರೆದೊಯ್ಯತೊಡಗಿದರು.

'ಈ ಬಾರಿ ನಿಮ್ಮ ಜೊತೆ ಸಿಕ್ಕಿದ್ದು ನಮ್ಮ ಭಾಗ್ಯ' ಎನ್ನುತ್ತಿದ್ದರು, ಉಳಿದ ಕೈದಿಗಳು. 'ಹಾಗಾದರೆ, ನನಗೆ ಶಿಕ್ಷೆ ಆದದ್ದು ಒಳ್ಳೆಯದಾಯಿತಲ್ಲವೆ?' ಎಂಜು ನಾನು ನಗುತ್ತಿದ್ದೆ.

ಅಂದಮಾನಿನಲ್ಲಿ ಎಂಥ ಶಿಕ್ಷೆ ಕಾದಿರಬಹುದು? ನಾನು 'ಜೀವಾವಧಿ ಶಿಕ್ಷೆ' ಎನ್ನುತ್ತಲೇ ಸಿಪಾಯಿಗಳು ಉಚ್ಚರಿಸುತ್ತಿದ್ದ ಮೊಟ್ಟ ಮೊದಲ ಶಬ್ದ - 'ಬಾರಿ ಬಾಬಾ'! ಯಾರಾದರೂ ಶತ ಒರಟು ಕೈದಿಗಳು ತಕರಾರು ಮಾಡಿದರೆ ಸಿಪಾಯಿಗಳೆನ್ನುತ್ತಿದ್ದರು; 'ಅರೇ ಬದ್ಮಾಷ್, ನೀನು ಬಹಳ ಕೊಬ್ಬಿ ಹೋಗಿದ್ದೀಯೆ. ಆದರೆ ಸ್ವಲ್ಪ ತಾಳು. ಒಂದು ಸಲ ಬಾರಿ ಬಾಬಾನನ್ನು ನೋಡಿದರೆ ಸಾಕು, ಕೊಬ್ಬೆಲ್ಲ ಕರಗಿ ಹೋಗುತ್ತದೆ.'

ಜುಲೈ 4ರಂದು ಬೆಳಕು ಹರಿಯಿತು. ಅಂದಮಾನ್ - ನಿಕೋಬಾರ್ ದ್ವೀಪಸಮೂಹ ಕಣ್ಣಿಗೆ ಬಿತ್ತು. 'ಭಾರತ ಸ್ವತಂತ್ರವಾದಾಗ ಈ ದ್ವೀಪದಲ್ಲಿ ಒಂದು ಪ್ರಬಲ ನೌಕಾಬಲ ಸ್ಥಾಪಿಸುವುದು ಅಗತ್ಯ. ಇಲ್ಲವಾದರೆ ಭಾರತದ ಮೇಲೆ ಪೂರ್ವದಿಂದ ಶತ್ರುದಾಳಿ ನಡೆದರೆ, ಮೊದಲು ಕಲ್ಕತ್ತಾ ಆಹುತಿಯಾಗುತ್ತದೆ. ಅಂದಮಾನ್ ಸ್ವತಂತ್ರ ಭಾರತದ ಸಾಗರದ ನಡುವಿನ ಪಹರೆಕಾರ ಆಗಲು ಯೋಗ್ಯವಾಗಿದೆ.' ಹೀಗೆ ಯೋಚನೆಯಲ್ಲಿ ಮುಳುಗಿದ್ದವನಿಗೆ ಗಡಸು ಧ್ವನಿಯೊಂದು ಕೇಳಿಸಿತು :

'ನಡಿ, ಹಾಸಿಗೆ ಎತ್ತಿಕೊಂಡು ಹೊರಡು!' ಸಿಪಾಯಿ ರೇಗುತ್ತಿದ್ದ. ಹಾಸಿಗೆ ತಲೆಯ ಮೇಲೆ ಹೊತ್ತು, ಕೈಲಿ ತಟ್ಟೆ ಲೋಟ ಹಿಡಿದೆ. ಕಾಲಿನ ಬೇಡಿ ಸರಿಪಡಿಸಿಕೊಂಡು ಹೆಜ್ಜೆ ಎತ್ತಿಡುತ್ತಾ ಮುನ್ನಡೆದೆ. ಪೋರ್ಟ್ ಬ್ಲೇರ್ ಬಂದಿತ್ತು. ಬದುಕು ಸಾವಿನ ನಡುವೆ ಹೊಸಿಲಿನಂತಿದ್ದ ಹಡಗಿನ ಕಟ್ಟೆ ದಾಟಿ ಸೆಲ್ಯುಲರ್ ಜೈಲು ಸಮೀಪಿಸಿದೆ. ಸಾಕ್ಷಾತ್ ಯಮಪುರಿಯ ದವಡೆಯಂತಿದ್ದ ಅದರ ಮಹಾದ್ವಾರ ತೆರೆಯಿತು; ಒಳಗೆ ಕಾಲಿಡುತ್ತಲೇ ಮುಚ್ಚಿಕೊಂಡಿತು!





# ಹವಿಸ್ಸು ಇಪ್ಪತ್ತೊಂದು

ಬಿಳಿಯ ಸಾರ್ಜೆಂಟರಿಬ್ಬರು ಬಂದು ನನ್ನ ಎರಡೂ ಕೈಗಳನ್ನು ಹಿಡಿದು ನಿಲ್ಲಿಸಿದರು. 'ಬಾರಿಸಾಹೇಬ್ ಬರುತ್ತಿದ್ದಾರೆ' ಎಂದು ಪಹರೆಕಾರರು ಅಂಜಿಕೆಯ ಸ್ವರದಲ್ಲಿ ಪಿಸುಗುಟ್ಟಿಕೊಂಡರು. ಆ ಹೆಸರು ಕೇಳಿ ನಾನು ಎಷ್ಟು ಹೆದರಿಕೊಳ್ಳುವೆನೆಂಬುದನ್ನು ಗಮನಿಸಲು ನನ್ನ ಮುಖ ನೋಡಿದರು. ಆದರೆ ನಾನಾಗ ಜೈಲಿನ ಗೋಡೆಯ ಮೇಲಿನ ಅಲಂಕಾರ ನೋಡುತ್ತಿದ್ದೆ. ಅಲ್ಲಿ ನಾನಾ ಆಕಾರಗಳ ಕಾಲು ಬೇಡಿ, ಕೈಬೇಡಿ ಇತ್ಯಾದಿಗಳನ್ನು ತೋರಣದಂತೆ ತಗುಲಿಹಾಕಲಾಗಿತ್ತು. ಆ ಜಾಗಕ್ಕೆ ತಕ್ಕ ಶೃಂಗಾರ ! ನೋಡಲು ರುದ್ರ ಮನೋಹರ!

ಇದ್ದಕ್ಕಿದ್ದಂತೆ ಎರಡು ಭಯಾನ ಕಣ್ಣುಗಳು ಗೋಚರಿಸಿದವು. ನಾನು ಸಹ ದೃಷ್ಟಿ ತಗ್ಗಿಸಲಿಲ್ಲ. ನೇರವಾಗಿ ದಿಟ್ಟಿಸಿದೆ. ಆ ಕಣ್ಣುಗಳಿಗೂ ಅರ್ಥವಾಯಿತು - ಇವನು ಎಲ್ಲರಂತಲ್ಲ ಎಂಬುದು. ನನ್ನ ಮನಸ್ಸಿನಲ್ಲಿ 'ಸ್ವಾತಂತ್ರ್ಯ ಲಕ್ಷ್ಮೀ ಕೀ ಜಯ್' ಮೊಳಗುತ್ತಿತ್ತು. ಎದುರಿಗೆ ನಿಂತಿದ್ದವನು - ಆ ಕ್ರೂರ ಕಣ್ಣುಗಳ ಒಡೆಯ - ಓರ್ವ ಭಾರೀ ಶರೀರದ ದರ್ಪಿಷ್ಠ ಯುರೋಪಿಯನ್ ಅಧಿಕಾರಿ. ಅವನೇ ಅಂದಮಾನಿನ ಕುಖ್ಯಾತ 'ಬಾರಿ' ! ಅವನ ಆಕಾರಕ್ಕೆ ತಕ್ಕಂಥದೇ ದಪ್ಪದೊಂದು ದೊಣ್ಣೆ ಅವನ ಕೈಯಲ್ಲಿ. ಅವನ ಗುಡಾಣದಂಥ ಹೊಟ್ಟೆಗೆ ಬಿಗಿದಿದ್ದ ಬೆಲ್ಟ್ ಗಣೇಶನ ಹಾವನ್ನು ನೆನಪಿಗೆ ತರುತ್ತಿತ್ತು ! ಅರೆಶಿಕ್ಷಿತ ಅಹಂಕಾರಿ ಅವನು ; ದರ್ಪೋನ್ಮತ್ತ. ಅಂತರಂಗದಲ್ಲಿ ಹೇಡಿ ; ಬಹಿರಂಗದಲ್ಲಿ ಸ್ವಪ್ರತಿಷ್ಠೆಯ ದಬ್ಬಾಳಿಕೆಗಾರ. ಮೇಲಿನವರ ಕಾಲು ಹಿಡಿಯುವುದರಲ್ಲಿ, ಕೆಳಗಿನವರನ್ನು ಕಾಲಿಂದ ತುಳಿಯುವುದರಲ್ಲಿ ನಿಸ್ಸೀಮ. ಕ್ರೌರ್ಯ, ಹಿಂಸೆಗಳೇ ಅವನ ಮನೋರಂಜನೆಯ ಕ್ರೀಡೆ. ಸಾರ್ಜೆಂಟ್‌ಗಳ ಕಡೆಗೆ ತಿರುಗಿ ಕರ್ಕಶ ಸ್ವರದಲ್ಲಿ ಗರ್ಜಿಸಿದ :

'ಬಿಡಿ ಅವನನ್ನು ; ಅವನೇನೂ ಹುಲಿಯಲ್ಲ.'

ಅನಂತರತನ್ನ ಲಾಠಿಯನ್ನು ನನ್ನ ಕಡೆ ತೋರಿಸುತ್ತಾ, 'ಮಾರ್ಸೇಲ್ಸ್‌ನಲ್ಲಿ ತಪ್ಪಿಸಿಕೊಂಡು ಓಡಲು ಪ್ರಯತ್ನಿಸಿದವನು ನೀನೇಯೋ ?' ಎಂದು ಉದ್ಧಟ ಸ್ವರದಲ್ಲಿ ಕೇಳಿದ.

'ಹೌದು ; ಕೇಳುವ ಕಾರಣವೇನು ?' ಎಂದು ಅದೇ ಧಾಟಿಯಲ್ಲಿ ಉತ್ತರಿಸಿದೆ. ಬಾರಿಯ ಅಧಿಕಾರಾವಧಿಯಲ್ಲಿ ಒಬ್ಬ ಕೈದಿಯಿಂದ ಅಂಥ ಉತ್ತರ ಬಂದದ್ದು ಅದೇ ಮೊದಲು. ಅವನ ಧ್ವನಿ ಸ್ವಲ್ಪ ತಗ್ಗಿತು.

'ಹಾಗೆ ಮಾಡಿದ್ದೇಕೆ ?'

'ಹಲವಾರು ಕಾರಣಗಳಿಗಾಗಿ. ಈ ಎಲ್ಲ ತೊಂದರೆಗಳಿಂದ ಪಾರಾಗಬೇಕೆಂಬುದೂ ಅವುಗಳಲ್ಲೊಂದು.'

'ಆದರೆ ಈ ತೊಂದರೆಗಳಿಗೆ ನೀನಾಗಿ ಸಿಕ್ಕಿಹಾಕಿಕೊಂಡೆ, ಅಲ್ಲವೆ ?'

'ನಿಜ, ಹಾಗೆಯೇ ಅವುಗಳಿಂದ ತಪ್ಪಿಸಿಕೊಳ್ಳುವುದೂ ನನ್ನ ಕರ್ತವ್ಯವೆನಿಸಿತು.'

'ನಿಜ ಹೇಳಬೇಕೆಂದರೆ, ನಾನೇನೂ ಇಂಗ್ಲಿಷಿನವನಲ್ಲ, ಐರಿಷಿನವನು.'

'ಇರಬಹುದು. ಇಂಗ್ಲಿಷಿನವನೇ ಆಗಿದ್ದರೂ, ಆ ಕಾರಣಕ್ಕಾಗಿ ನಿನ್ನ ಬಗ್ಗೆ ನನಗೆ ದ್ವೇಷವಿಲ್ಲ. ನನ್ನ ಯೌವನದ ಅತ್ಯುತ್ತಮ ಭಾಗವನ್ನು ಇಂಗ್ಲೆಂಡಿನಲ್ಲಿ ಕಳೆದಿದ್ದೇನೆ ; ಇಂಗ್ಲಿಷರ ಅನೇಕ ಸದ್ಗುಣಗಳನ್ನು ನಾನು ಮೆಚ್ಚುತ್ತೇನೆ.'

'ಆದರೆ ನೋಡು, ನಾನು ಐರಿಷ್ ಕ್ರಾಂತಿಕಾರಿ ಆಗಿದ್ದೆ; ಐರ್ಲೆಂಡಿನ ಸ್ವಾತಂತ್ರ್ಯಕ್ಕಾಗಿ ಹೋರಾಡಿದೆ. ಅದು ವ್ಯರ್ಥವೆಂದು ಈಗ ಗೊತ್ತಾಗಿದೆ. ಆದ್ದರಿಂದ ಸ್ನೇಹಿತನಂತೆ ಹೇಳುತ್ತೇನೆ ಕೇಳು. ನೀನಿನ್ನೂ ಚಿಕ್ಕವನು; ನಾನು ವಯಸ್ಸಾದವನು....'

ನಡುವೆಯೇ ತಡೆದು ಹೇಳಿದೆ : 'ನಿನ್ನ ಬದಲಾವಣೆಗೆ ಅದೇ ಕಾರಣ ಇರಬಹುದಲ್ಲವೆ! ಬುದ್ಧಿಯ ಬೆಳವಣಿಗೆಯಲ್ಲ, ಅಳಿಯುತ್ತಿರುವ ಶಕ್ತಿ!'

ಅಪ್ರತಿಭನಾಗಿ ಅವನೆಂದ : 'ನೋಡು, ನೀನು ಬ್ಯಾರಿಸ್ಟರ್ ಮತ್ತು ನಾನು ಕೇವಲ ಜೈಲರ್ ಇರಬಹುದು. ಆದರೆ ನನ್ನ ಬುದ್ಧಿವಾದ ಅಲಕ್ಷಿಸಬೇಡ. ಖೂನಿಗಾರರು ಖೂನಿಗಾರರೇ! ಅವರೆಂದಿಗೂ ಸ್ವಾತಂತ್ರ್ಯ ಸಂಪಾದಿಸಲಾರರು.

'ಅದೇನೋ ಸರಿ. ಆದರೆ ನೀನು ಐರ್ಲೆಂಡಿನ ಕ್ರಾಂತಿಕಾರಿಗಳಿಗೆ ಈ ಬುದ್ಧಿವಾದ ಏಕೆ ಹೇಳುವುದಿಲ್ಲ? ಅಲ್ಲದೆ, ನಾನು ಕೊಲೆಯ ಅನುಮೋದಕನೆಂದು ಯಾರು ಹೇಳಿದರು ?'

ಬಾರಿಯು ಇದ್ದಕ್ಕಿದ್ದಂತೆ ಅಧಿಕಾರವಾಣಿಯಲ್ಲಿ ಹೇಳಿದ : 'ನಾನು ನಿಯಮಕ್ಕೆ ವಿರುದ್ಧವಾಗಿ ಮಾತಾಡಿದ್ದೇನೆ ; ಕಾರಣ, ಈ ಕಳ್ಳಕಾಕರ ನಡುವೆ ನಿನ್ನಂಥ ಸುಶಿಕ್ಷಿತ ಹಾಗೂ ಸುಪ್ರಸಿದ್ಧ ಯುವಕನನ್ನು ಕಂಡು ಮರುಕವಾಯಿತು. ನಿನ್ನ ಹಿಂದಿನ ಪುರಾಣ ನನಗೆ ಬೇಕಾಗಿಲ್ಲ. ಇಲ್ಲಿ ನಿಯಮಕ್ಕೆ ತಕ್ಕಂತೆ ನಡೆದುಕೊಳ್ಳಬೇಕೆಂಬುದು ಚೆನ್ನಾಗಿ ನೆನಪಿನಲ್ಲಿರಲಿ. ನಿಯಮಭಂಗವಾದರೆ ಶಿಕ್ಷೆ ನಿಶ್ಚಿತ. ಇನ್ನೊಂದು ಮಾತು ; ಇಲ್ಲಿಂದೇನಾದರೂ ತಪ್ಪಿಸಿಕೊಳ್ಳಲು ಯತ್ನಿಸಿದರೆ, ನರಭಕ್ಷಕರಿಗೆ ಆಹಾರವಾಗುತ್ತೀಯೆ, ಹುಷಾರ್ !'

'ಇದು ಮಾರ್ಸೇಲ್ಸ್ ಅಲ್ಲ, ಪೋರ್ಟ್ ಬ್ಲೇರ್ ಎಂಬುದು ನನಗೆ ಗೊತ್ತು.'

'ಜಮಾದಾರ್, ಇವನನ್ನು ಏಳನೇ ಚಾಳಿನ ಕೊಠಡಿಗೆ ಕರೆದುಕೊಂಡು ಹೋಗು ; ಬೀಗ ಹಾಕು.'

ದಾರಿಯಲ್ಲೊಂದು ದೊಡ್ಡ ನೀರಿನ ತೊಟ್ಟಿ. 'ಇಲ್ಲಿ ಸ್ನಾನ ಮಾಡು' ಎಂದ, ಜಮಾದಾರ.ನಾಲ್ಕೈದು ದಿನಗಳಿಂದ ಸ್ನಾನವಿಲ್ಲದೆ ಮೈಯೆಲ್ಲ ಕೊಳಕಾಗಿತ್ತು. ಆನಂದದಿಂದ ಹೊರಟೆ. ಆದರೆ ನೆನೆಸುವ ಬಟ್ಟೆ? ಜಮಾದಾರ ಒಂದು ಲಂಗೋಟಿ ಕೊಟ್ಟ. ಆ ಬಯಲಿನಲ್ಲಿ ಅದನ್ನು ಹಾಕಿಕೊಳ್ಳಲು ಮನಸ್ಸು ಮೊದಲು ಹಿಂಜರಿಯಿತು. ಆದರೆ, ನಂತರ ಧೈರ್ಯಮಾಡಿದೆ. ಚಂಬು ಹಿಡಿದು ತೊಟ್ಟಿಯ ಬಳಿ ಹೆಜ್ಜೆ ಇಡುತ್ತಿದ್ದಂತೆಯೇ, ಜಮಾದಾರನ ಸ್ವರ ಕೇಳಿಸಿತು : 'ಏಯ್, ನಿಲ್ಲು, ನಿಲ್ಲು ! ಇದು ಅಂದಮಾನ್. ನೀನೀಗ ಕೈದಿ. ''ಪಾನಿ ಲೇವ್'' ಅನ್ನುತ್ತೇನೆ; ಒಂದು ತಂಬಿಗೆ ತೆಗೆದುಕೊಳ್ಳಬೇಕು, ''ಅಂಗ್ ಮಲಾ'' ಎನ್ನುತ್ತಲೇ



ಮೈ ಉಜ್ಜಿಕೋ. ಪುನಃ ''ವಾನಿ ಲೇವ್'' ಅಂದಾಗ ಇನ್ನು ಎರಡು ಚಂಬು ನೀರು ಸುರಿದುಕೋ. ಮೂರಕ್ಕೆ ಮುಕ್ತಾಯವಾಗಬೇಕು!' ಎಂದ.

ನನಗೆ ನಗು ಬಂತು. ನಾಸಿಕದ ಗೋದಾವರಿ ತೀರದಲ್ಲಾದರೆ ಭಟ್ಟರು ಸಂಕಲ್ಪ ಹೇಳುತ್ತಿದ್ದರು. ಇಲ್ಲಿ ಈ ದಾಡಿದೀಕ್ಷಿತ (ಗಡ್ಡದ ಸಾಬ) ನಿಂದ ಮಂತ್ರೋಚ್ಚಾರ! ಒಂದು ತಂಬಿಗೆ ನೀರು ಹಾಕಿಕೊಳ್ಳುತ್ತಲೇ, ಮೈ ಪೂರ್ತಿ ಉರಿಯಹತ್ತಿತು. ಬಾಯಿಗೆ ನೀರು ಹಾಕಿಕೊಂಡರೆ, ನಾಲಗೆ ಸುಟ್ಟಂತಾಯಿತು. 'ಹೀಗೇಕೆ?' ಎಂದೆ. 'ಸಮುದ್ರದ ನೀರು ಎಲ್ಲಿಯಾದರೂ ಸಿಹಿಯಾಗಿರುತ್ತದೇನೋ, ಮಂಕ?' ಎಂದ ಜಮಾದಾರ. ನಾನೆಂದುಕೊಂಡೆ - ಇದು ಶಾಸ್ತ್ರೋಕ್ತ ಸಮುದ್ರಸ್ನಾನ! ದೇವಸ್ಥಾನಕ್ಕೆ ಹೋಗುವವರು ಸ್ನಾನ ಮಾಡಿಕೊಂಡು ಹೋಗಬೇಕಲ್ಲವೆ? ಗೋವಿಂದ ಕವಿಯ ಗೀತೆ ನೆನಪಾಯಿತು :

**ಬಂದೀಸ ದೇವಶಾಲಾ । ಬೇಡೀಸ ಪುಷ್ಪಮಾಲಾ**
**ಹಾತಾಸ ಮಾನು ಝೋಲಾ । ಕಾಳಾಶಿ ಖೇಲು ಖೇಳಾ**
**ಆಮ್ಹೀ ಸ್ವರಾಷ್ಟ್ರಸಂತ । ಕರೂ ಮಾತೃಭೂ ಸ್ವತಂತ್ರ**
**ಪಾರೂನ ಪಾರತಂತ್ರ್ಯ । ಕರೂ ರಾಷ್ಟ್ರಭೂ ಸ್ವತಂತ್ರ ॥**

*(ಸೆರೆಮನೆಯೇ ದೇವಸ್ಥಾನ; ಬೇಡಿಯೇ ಹೂಮಾಲೆ. ಕೈಗೆ ಜೋಳಿಗೆ ಹಾಕಿಕೊಂಡು, ಸಾವಿನೊಡನೆ ಸರಸವಾಡೋಣ. ಮಾತೃಭೂಮಿಯ ಸಂತರು ನಾವು; ಪಾರತಂತ್ರ್ಯವನ್ನು ಕೊನೆಗಾಣಿಸಿ, ರಾಷ್ಟ್ರವನ್ನು ಸ್ವತಂತ್ರಗೊಳಿಸೋಣ.)*

ಈ ಕಾರಾಗೃಹವು ಗೂಡುಗಳಂತಹ ಪ್ರತ್ಯೇಕ ಕೋಣೆಗಳಿಂದ (ಸೆಲ್ಸ್) ಕೂಡಿದ್ದುದರಿಂದ ಅದಕ್ಕೆ 'ಸೆಲ್ಯುಲರ್ ಜೈಲ್' ಎಂದು ಹೆಸರು. ಬಳಕೆಯ ಮಾತಿನಲ್ಲಿ ಅದು 'ಸಿಲ್ವರ್ ಜೈಲ್' ಆಗಿಹೋಗಿತ್ತು!

ಮಧ್ಯಭಾಗದಲ್ಲಿ ಎತ್ತರವಾಗಿ 'ಸೆಂಟ್ರಲ್ ಟವರ್' ಕಟ್ಟಡ. ಅದರ ಸುತ್ತ, ಚಾಚಿದ ಬಾಹುಗಳಂತೆ, ನೀಳವಾದ ಮೂರಂತಸ್ತಿನ ಏಳು ಕಟ್ಟಡಗಳು; ಒಂದೊಂದು ಅಂತಸ್ತಿನಲ್ಲೂ 30ರ ವರೆಗೆ ಕೋಣೆಗಳು. ಅಂದಮಾನಿನ ಸರ್ವೋಚ್ಚ ಅಧಿಕಾರಿಯೆಂದರೆ ಚೀಫ್ ಕಮಿಶನರ್; ಅವನ ಕೈಕೆಳಗೆ ಸೂಪರಿಂಟೆಂಡೆಂಟ್; ಅನಂತರ ಮುಖ್ಯ ಜೈಲರ್. ನಾನು ಹೋದ ಸಮಯದಲ್ಲಿ ಕ್ರಮವಾಗಿ ಕರ್ನಲ್ ಬ್ರೌನಿಂಗ್, ಕ್ಯಾಪ್ಟನ್ ಮೂರ್ ಮತ್ತು ಬಾರಿ ಸಾಹೇಬ ಅಧಿಕಾರಗಳಲ್ಲಿದ್ದರು.

ಸೆಲ್ಯುಲರ್ ಜೈಲು, ಗಾರೆಯಲ್ಲಿ ಕಟ್ಟಿದ ಭದ್ರವಾದ ಕಲ್ಲಿನ ಕಟ್ಟಡ ಎರಡು ಮಹಡಿ ಹತ್ತಿದ ಮೇಲೆ ನನ್ನ ಗೂಡಿನ ಮುಂದೆ ಜಮಾದಾರ. ಏಳನೆಯ ಚಾಳಿನಲ್ಲಿ 42ನೆಯ ಕೊಠಡಿ ಅದು. ನನ್ನ ಆಗಮನದ ಪೂರ್ವ ಸಿದ್ಧತೆಯಾಗಿ, ಆ ಸಾಲಿನಲ್ಲಿದ್ದ ಎಲ್ಲ ಕೊಠಡಿಗಳನ್ನೂ ಖಾಲಿ ಮಾಡಲಾಗಿತ್ತು.

ಕಿರುಕುಳ ಹಾಗೂ ದ್ವೇಷಬುದ್ಧಿಯಲ್ಲಿ ಎತ್ತಿದ ಕೈ ಎನಿಸಿದ ಮೂರು ಮುಸಲ್ಮಾನರು ನನ್ನ ಪಹರೆಕಾರರು. ಬಿಳಿಯ ಅಧಿಕಾರಿಗಳಿಗೆ ಮುಸಲ್ಮಾನರ ಮೇಲೆ ಒಲವು ಹೆಚ್ಚು. ಅಂದಮಾನಿಗೆ ಕೈದಿಗಳಾಗಿ ಬರುತ್ತಿದ್ದ ಕ್ರೂರ ಕರ್ಮಿಗಳೂ, ದರೋಡೆಕೋರರೂ ಆದಂಥ ಮುಸಲ್ಮಾನರನ್ನು ಪಹರೆಕಾರರಾಗಿ ನೇಮಿಸಲಾಗುತ್ತಿತ್ತು. ಹಿಂದು ರಾಜಕೀಯ ಕೈದಿಗಳನ್ನೂ ದೇಶಭಕ್ತರನ್ನೂ ಹಿಂಸಿಸಲು ಅವರೇ ಯೋಗ್ಯರೆಂದು ಇರಬೇಕು!

ಜೈಲಿನಲ್ಲಿ ಎರಡನೆಯ ದಿನ. ಬಾಗಿಲ ಸರಳುಗಳಾಚೆ ದೊಣ್ಣೆಯ ಸಮೇತ ಬಂದ ಬಾರಿಯ ದರ್ಶನವಾಯಿತು. ಅವನೊಡನೆ ನನ್ನನ್ನು ನೋಡಲೆಂದೇ ಓರ್ವ ಆಂಗ್ಲ ದರ್ಶಕನಿದ್ದ. ಬಾರಿ ಸಾಹೇಬನು 1857ರ ಬಗ್ಗೆ ಮಾತು ಆರಂಭಿಸಿದ. ಆದರೆ ಒಂದೊಂದು ಮಾತಿಗೂ ನನ್ನ ನೇರವಾದ ಉತ್ತರ ಅವನ ಬಾಯಿ ಮುಚ್ಚಿಸಿತು. ಕೊನೆಗೆ ಅವನ ಜತೆಗಿದ್ದ ದರ್ಶಕ ಬಾಯಿಹಾಕಿದ : 'ಆದರೆ, ನಾನಾ ಮತ್ತು ತಾತ್ಯಾಟೋಪೆಯಂತಹ ಸ್ವಾರ್ಥ ಕ್ರಾಂತಿಕಾರಿಗಳನ್ನು ನೀವು ಖಂಡಿಸುವುದಿಲ್ಲವೇನು ?'

'ಖಂಡಿಸುವುದೆ ? ನೋಡಿ, ನಾನೊಬ್ಬ ಕೈದಿ. ಇಲ್ಲಿ ಆ ವಿಷಯವನ್ನು ಮುಕ್ತವಾಗಿ ಚರ್ಚಿಸಲಾರೆ. ಈ ಸ್ಥಿತಿಯಲ್ಲಿ ನೀವು ನನ್ನ ರಾಷ್ಟ್ರದ ಘನತೆ ಗೌರವಗಳಿಗೆ ಅಪಚಾರವೆಸಗುವುದು ಶುದ್ಧ ಹೇಡಿತನ.'

ನನ್ನ ಮಾತು ಕೇಳಿದ ಬಾರಿ, ನಾನು ಮುಕ್ತವಾಗಿ ಚರ್ಚಿಸಬಹುದೆಂದು ಅನುಮತಿಯಿತ್ತ. ಆಗ ನಾನೆಂದೆ: 'ಇಂಗ್ಲಿಷರಾದ ನಿಮಗೆ ಅದರ ಬಿಸಿ ತಟ್ಟಿರುವುದು ನನಗೆ ಗೊತ್ತು. ಆದರೂ, ಇದು ಇತಿಹಾಸದ ಮಹತ್ವದ ಅಂಶವಾದ್ದರಿಂದ, ಏನೇ ಆದರೂ, ನಾನು ಚರ್ಚಿಸದ್ದೆ ಬಿಡುವುದಿಲ್ಲ. ಏಕೆಂದರೆ, ರಾಷ್ಟ್ರ ಗೌರವಕ್ಕೆ ಧಕ್ಕೆ ಒದಗಿದಾಗ ಸುಮ್ಮನಿದ್ದರೆ, ಅದು ಸಹ ಹೇಡಿತನವಾಗುತ್ತದೆ.' ಇಷ್ಟು ಹೇಳಿ ನನ್ನ ವಾದ ಪ್ರಾರಂಭಿಸಿದೆ. ಆ ದರ್ಶಕ ಮಹಾಶಯನ ಬಾಯಿಯೂ ಮುಚ್ಚಿಹೋಯಿತು.

ರಾಜಕೀಯ ಬಂದಿಗಳಲ್ಲಿ ಅಂದಮಾನಿನ ಸೆರೆಮನೆಗೆ ಮೊದಲು ಬಂದವರು 1857ರ ಸ್ವಾತಂತ್ರ್ಯ ಸಂಗ್ರಾಮದ ಯುದ್ಧಕೈದಿಗಳು. ಅನಂತರ ವಾಸುದೇವ ಬಲವಂತ ಫಡಕೆಯ ಅನುಯಾಯಿಗಳಲ್ಲಿ ಕೆಲವರು ಸಾಗಿಸಲ್ಪಟ್ಟರು. ಅನಂತರ ಮಾಣಿಕತೋಲಾ ಕ್ರಾಂತಿಕಾರಿಗಳು ; ಕೆಲವು ದೇಶಭಕ್ತ ಪತ್ರಿಕಾ ಕರ್ತರು, ನಮ್ಮ ಅಣ್ಣ ಬಾಬಾ, ವಾಮನರಾವ್ ಜೋಶಿ ಮುಂತಾದವರು ಇತ್ತೀಚೆಗೆ ಬಂದಿದ್ದರು.

ಬಾರಿಯ ಬುದ್ಧಿ, ಮನಸ್ಸು, ನಡವಳಿಕೆ ಪ್ರತಿಯೊಂದೂ ರಾಕ್ಷಸರ ರೀತಿಯೇ. ಇಂಗ್ಲಿಷ್ ಅಧಿಕಾರಿಗಳಿಗಿಂತಲೂ ಅವನ ಜೋರು ಹೆಚ್ಚು ; ಬಿಸಿಲಿಗಿಂತ ಕಾದ ಮರಳು ಹೆಚ್ಚು ಸುಡುವಂತೆ ! ಅವನು ಕ್ರಾಂತಿಕಾರಿಗಳನ್ನು 'ಕೊಲೆಗಡುಕರು', 'ಅನಿಷ್ಟ ರ್‍ಯಾಸ್ಕಲ್‌ಗಳು' ಎಂದೇ ಸಂಬೋಧಿಸುತ್ತಿದ್ದುದು

ಅವರೆಲ್ಲರ ಕೊರಳಿಗೆ **D** ಅಕ್ಷರದ ಪಟ್ಟಿ ಕಟ್ಟುತ್ತಿದ್ದ; 'ಡೇಂಜರಸ್' (ಅಪಾಯಕರ) ಎಂಬುದು ಅವನ ಅರ್ಥ! ಬಾರಿಯಿಂದ ರಾಜಕೀಯ ಬಂದಿಗಳು ಕೇಳದಿದ್ದ ಬೈಗಳು, ಪಡೆಯದಿದ್ದ ಚಿತ್ರಹಿಂಸೆ ಒಂದೂ ಇಲ್ಲ. ಆದರೆ ಅದುವರಿಗೆ ಬಾರಿ ಸಾಹೇಬನ ಈ ಅನಾಚಾರಗಳಿಗೆ ಸಾಮೂಹಿಕ ಪ್ರತಿಭಟನೆ ನಡೆದಿರಲಿಲ್ಲ.

ಕ್ರಾಂತಿಕಾರಿಗಳನ್ನು ಎಣ್ಣೆಯ ಗಾಣಕ್ಕೆ ಹೂಡಲಾಗುತ್ತಿತ್ತು. ಎಂಥ ಬಲಿಷ್ಠ ವ್ಯಕ್ತಿಯಾದರೂ, ಆ ಗಾಣವು ಎಣ್ಣೆಯ ಜತೆಗೆ ಅವನ ಜೀವವನ್ನು ಹಿಂಡುತ್ತಿತ್ತು. ಶತ ಒರಟು ದರೋಡೆ ಕೋರರಿಗೂ ಅದನ್ನು ನೋಡುತ್ತಲೇ ನಡುಕ ಹುಟ್ಟುತ್ತಿತ್ತು. ಇನ್ನು ಸುಶಿಕ್ಷಿತ ರಾಜಕೀಯ ಕೈದಿಗಳು ತಡೆದಾರೆಯೆ ? ಎಣ್ಣೆಯ ಗಾಣಕ್ಕೆ 'ಆತ್ಮಹತ್ಯೆಯ ಗೆಳೆಯ' ಎಂದೇ ನಾಮಕರಣವಾಗಿತ್ತು! ಅಲ್ಲಿ ನಿಗದಿಯಾದಷ್ಟು ಎಣ್ಣೆ ತೆಗೆಯಲೇಬೇಕಾಗಿತ್ತು. ಅದಕ್ಕಾಗಿ ಗಾಣ ಎಳೆಯುತ್ತಿರುವಾಗಲೇ ಆಹಾರವನ್ನು ತೆಗೆದುಕೊಳ್ಳಬೇಕಾಗುತ್ತಿತ್ತು. ಕೈಗಳೆಲ್ಲ ರಕ್ತಮಯ ; ಎದೆಯೆಲ್ಲ ಉರಿ ; ತಲೆ ಸುತ್ತುತ್ತಿತ್ತು. ಕೆಲವರು ನಡುನಡುವೆ ಪ್ರಜ್ಞಾಶೂನ್ಯರಾಗಿ ಬೀಳುತ್ತಿದ್ದರು. ಆದರೆ ಅವರನ್ನು ಯಾರೂ ಮುಟ್ಟುತ್ತಿರಲಿಲ್ಲ. ಅವರು ಎಚ್ಚೆತ್ತಮೇಲೆ ಪುನಃ ಗಾಣ ತಿರುಗಿಸುವುದನ್ನು ಮುಂದುವರಿಸಬೇಕಾಗಿತ್ತು. ಏಕೆಂದರೆ, ಗೊತ್ತು ಪಡಿಸಿದಷ್ಟು ಎಣ್ಣೆ ತೆಗೆಯದಿದ್ದರೆ ಇನ್ನೂ ಭೀಕರ ಶಿಕ್ಷೆಗಳ ಭಯ ! ಎಂಥ ಬಲಾಢ್ಯನೇ ಆಗಲಿ, ತನ್ನ ಪಾಲಿನದನ್ನು ಪೂರ್ತಿಗೊಳಿಸಲು ಸಾಧ್ಯವಾಗುತ್ತಿರಲಿಲ್ಲ.

ಮಲಮೂತ್ರ ವಿಸರ್ಜನೆಗೂ ಸಮಯ ನಿಶ್ಚಿತ! ಒಳಗೆ ಹೋದವರನ್ನು ಪಹರೆಗಾರ ಎಷ್ಟೋ ವೇಳೆ, ಅವರು ಯಾವ ಸ್ಥಿತಿಯಲ್ಲಿದ್ದರೆ ಅದೇ ಸ್ಥಿತಿಯಲ್ಲಿ ಹೊರಗೆಳೆದು ತರುತ್ತಿದ್ದ ! ಬೇರೆ ಸಮಯದಲ್ಲಿ ವಿಸರ್ಜನೆಯಾದರೆ, ಅದಕ್ಕೂ ಶಿಕ್ಷೆ. ಬೆಳಿಗ್ಗೆ 6ರಿಂದ 10ರ ವರೆಗೆ, ಮಧ್ಯಾಹ್ನ 12ರಿಂದ 3ರ ವರೆಗೆ ಗೋಡೆಗೆ ಮುಖಮಾಡಿ ನಿಲ್ಲಿಸಿ ಬೇಡಿಹಾಕುತ್ತಿದ್ದರು. ಆಗ ನಿಂತಲ್ಲೇ ಎಲ್ಲವೂ! ರಾಜಕೀಯ ಕೈದಿಗಳಿಗೆ ಗಾಡಿಯ ಎತ್ತುಗಳಷ್ಟು ಸಹ ಪುರುಸತ್ತು ಕೊಡುತ್ತಿರಲಿಲ್ಲ. ಸುಶಿಕ್ಷಿತರಿಗೆ ಒರಟು ಕೆಲಸಗಳು ; ಅಶಿಕ್ಷಿತರಿಗೆ ಗುಮಾಸ್ತೆ ಕೆಲಸ ! ಪಠಾಣ ಕಾವಲುಗಾರರೂ ಕೆಳದರ್ಜೆ ಅಧಿಕಾರಿಗಳೂ ಕೈದಿಗಳ ಆಹಾರವನ್ನೂ ರೋಗಿಗಳ ಹಾಲನ್ನೂ ನುಂಗಿಹಾಕುತ್ತಿದ್ದರು. ವೈದ್ಯರುಗಳಿಗೆ ರೋಗಪರೀಕ್ಷೆಯಲ್ಲೂ ಬಂದಿಪಾಲ (ಜೈಲರ್)ನೇ ಮಾರ್ಗದರ್ಶಕ!

ಧಾರಾಕಾರವಾದ ಮಳೆ ಅಥವಾ ಉರಿಬಿಸಿಲಿನಲ್ಲಿ ಊಟಕ್ಕೆ ನಿಲ್ಲಬೇಕು. ಆಗ ಸಾಲು ಬಿಟ್ಟು ಹೊರಗೆ ಹೋದರೆ ಅಥವಾ ಅಕ್ಕಪಕ್ಕದವರೊಡನೆ ಮಾತನಾಡಿದರೆ ಶಿಕ್ಷೆ. ಎಂಥ ಶಿಕ್ಷೆ ಎನ್ನುವಿರಾ! ರಾಜಕೀಯ ಕೈದಿಗಳಿಗೆ ವರ್ಷಕ್ಕೆ ಒಂದು ಸಲ ಮನೆಗೆ ಕಾಗದ ಬರೆಯುವ ಅವಕಾಶವಿತ್ತು – ಕಾನೂನು ಪ್ರಕಾರ ; ಆ ಅವಕಾಶ ರದ್ದಾಗುತ್ತಿತ್ತು ! ಊಟ ಎಷ್ಟು ಹೊತ್ತು ಮಾಡಬೇಕು – ಎಂಬುದು ಪಹರೆಕಾರರ ಇಷ್ಟಕ್ಕೆ ಬಿಟ್ಟಿದ್ದು. ಆಹಾರ ಕಡಿಮೆಯಾದರೆ ಕೇಳುವಂತಿಲ್ಲ; ಹೆಚ್ಚಾದರೆ ಚೆಲ್ಲುವಂತಿಲ್ಲ. ಸೇರದೆ ಬಿಸಾಡಿದರೆ, ಅದನ್ನೇ ವಾಪಸು ನೆಲದಿಂದ ಎತ್ತಿಕೊಂಡು ಬಂದು ತಿನ್ನುವಂತೆ ಮಾಡುತ್ತಿದ್ದರು !

ಇನ್ನು ಆಹಾರದ ಗುಣವನ್ನು ಏನೆಂದು ವರ್ಣಿಸಲಿ ? ಅರೆಬೆಂದದ್ದು ; ಮಣ್ಣು, ಕಲ್ಲು, ಬೆವರು ಬೆರೆಸಿದ್ದು. ಆಗಿಂದಾಗ್ಗೆ ವಿಶೇಷ ಅಡಿಗೆ– ಅನ್ನದಲ್ಲಿ ಬೆರೆಸಿದ ಗೆದ್ದಲು ಹುಳ, ಕೊಳೆತ ಹಾವುಗಳ ಚೂರು, ಹುಳಹುಪ್ಪಟೆ! ಉತ್ತಮ ಆಹಾರಕ್ಕಾಗಿ ಒತ್ತಾಯಿಸಿದರೆ, ಜೈಲಿನ ಅಧಿಕಾರಿಗಳಿಂದ ಮಾರ್ಮಿಕ ಉಪದೇಶ ದೊರೆಯುತ್ತಿತ್ತು – 'ಆಹಾರಕ್ಕಾಗಿ ಕಚ್ಚಾಡುವವರು ಕೇವಲ ಸ್ವಾರ್ಥಿಗಳು ; ನಿಮ್ಮಂಥ ದೇಶಭಕ್ತರು ಊಟದ ಬಗ್ಗೆ ಚಿಂತೆ ಮಾಡಬಾರದು !' ಕುಡಿಯಲು ವಿಶೇಷ 'ಪರಿಮಳ'ವುಳ್ಳ ನೀರು ! ಅದರ ಗಬ್ಬು



ನಾತ ತಡೆಯಲಾರದೆ, ಬಾಯಾರಿಕೆಯನ್ನೂ ತಡೆಯಲಾರದೆ, ಕಡೆಗೆ ಅದನ್ನೇ ಮೂಗು ಮುಚ್ಚಿಕೊಂಡು ಬಾಯಿಗೆ ಸುರಿದುಕೊಳ್ಳಬೇಕು.

ನೆರೆಮನೆಯ ಸಣ್ಣಪುಟ್ಟ ಅಧಿಕಾರಿಗಳ ಮನೆಗಳಲ್ಲಿ ಗುಡಿಸುವುದು, ಅವರು ಕುಳಿತ ಗಾಡಿ ಎಳೆಯುವುದು ಮುಂತಾದ ಕೆಲಸಗಳೂ ಬೀಳುತ್ತಿದ್ದವು. ಅಸಹ್ಯ ಪರಿಶ್ರಮದ ಕೆಲಸಗಳಿಂದ ಪಾರಾಗಲು ಕೆಲವರು ವಿಷಪೂರಿತ ಮೂಲಿಕೆಗಳನ್ನು ತಿನ್ನುತ್ತಿದ್ದರು. ಅದರಿಂದ ರಕ್ತಭೇದಿ, ವಾಂತಿ, ಜ್ವರ ಇತ್ಯಾದಿ ರೋಗಗಳುಂಟಾಗುತ್ತಿದ್ದವು. ಅನೇಕರಿಗೆ ಬುದ್ಧಿ ವಿಕೃತಗೊಂಡು ಹುಚ್ಚು ಹಿಡಿಯಿತು. ಅಲ್ಲಿನ ರಾಜಕೀಯ ಕೈದಿಗಳ ಕೊನೆಯ ಆಶ್ರಯವೆಂದರೆ ಆತ್ಮಹತ್ಯೆ ! ಅವರ ಏಕಮಾತ್ರ ರಕ್ಷಕ, ಆಪ್ತ ಮಾರ್ಗದರ್ಶಕ, ಹಗಲಿರುಳೂ ಅವರು ಹಾರೈಸುತ್ತಿದ್ದ ಅತಿಥಿ ಎಂದರೆ ಮೃತ್ಯು! ಹೀಗೆ ಸೆಲ್ಯುಲರ್ ಜೈಲಿನ ಆಡಳಿತ ಯಂತ್ರ ಜಗತ್ತಿನಲ್ಲೆ ಅತ್ಯಂತ ಭಯಾನಕ. ಪೈಶಾಚಿಕ ಹಾಗೂ ಅಮಾನುಷ!

ನನಗೆ ಮೊದಲ ಎರಡು ವಾರ ಪೂರ್ತಿ ಏಕಾಂತದ ಬಂಧನ. ಕೊಠಡಿಯೊಳಗೆ ತೇವ, ದುರ್ವಾಸನೆ, ಕೊಳಕು, ಕತ್ತಲೆ. ಒರಟಾದ ಮರದ ಹಲಗೆಯೇ ಹಾಸಿಗೆ, ಅನಂತರ ಮರದ ಸುತ್ತಿಗೆಯಿಂದ ತೆಂಗಿನ ನಾರು ಬಿಡಿಸುವ ಕೆಲಸ. ಬೆರಳುಗಳು ಊದಿಕೊಂಡು ಗುಳ್ಳೆಗಳಾಗಿ, ಚರ್ಮ ಹರಿದು, ಮುಟ್ಟಿದುದೆಲ್ಲವೂ ರಕ್ತಮಯವಾಗುತ್ತಿತ್ತು. ಬಾರಿಯು ತನ್ನ ಅಧಿಕಾರ ದರ್ಪ ಪ್ರದರ್ಶಿಸಲು ಉಳಿದ ಕೈದಿಗಳನ್ನು ನನ್ನೆದುರಿಗೆ ಭೀಕರವಾಗಿ ಹಿಂಸಿಸುತ್ತಿದ್ದ. ನನ್ನ ಕೊರಳಲ್ಲಿದ್ದ ಬಿಲ್ಲೆಯ ಕಡೆ ಕೈ ತೋರಿಸಿ, 'ನಿನ್ನ ಬಿಡುಗಡೆಯ ವರ್ಷ ನೋಡಿಕೋ' ಎನ್ನುತ್ತಿದ್ದ. ಇತರರರನ್ನು ಅಂಜಿಸಿ, ತಾನು ಆನಂದಿಸುವುದು ಅವನ ಸ್ವಭಾವ.

1911ರ ಆಗಸ್ಟ್ 14ರಂದು ಮುಂಬೈ ಶಿಕ್ಷಣ ಖಾತೆಯಿಂದ ನನಗೊಂದು ಪತ್ರ ಬಂತು. ಅದರ ಪ್ರಕಾರ ನನ್ನ ಬಿ.ಎ. ಪದವಿ ರದ್ದುಪಡಿಸಲಾಗಿತ್ತು! ಅದಾದ ಮರುದಿನವೇ ಗಾಣ ಎಳೆಯುವ ಕೆಲಸ ಆರಂಭ. ಗಾಣ ತಿರುಗಿಸುವಾಗ ಬಾಯಾರಿಕೆ ಬಹಳ ಹೆಚ್ಚು. ಆದರೆ ಎರಡು ಬಟ್ಟಲಿಗಿಂತ ಹೆಚ್ಚಾಗಿ ನೀರು ಕೊಡುತ್ತಿರಲಿಲ್ಲ. ಮೂರನೆಯ ಸಲ ಕೇಳಿದರೆ, 'ನಿಮ್ಮ ಅಪ್ಪನ ಗಂಟಲ್ಲ' ಎನ್ನುತ್ತಿದ್ದ, ಜಮಾದಾರ ! ಇದು ಅವನ ಬಾಯಲ್ಲಿ ಬರುತ್ತಿದ್ದ ಅತ್ಯಂತ ಸೌಮ್ಯವಾದ ಒಳ್ಳೆಯ ಶಬ್ದ. ಅಲ್ಲಿಂದ ಪ್ರಾರಂಭವಾಗಿ ಅದು ಬರೆಯಲಾರದಂಥ ಬೈಗಳಿಗೆ ಮುಟ್ಟುತ್ತಿತ್ತು. ಒಂದು ದಿನಕ್ಕೆ ಒಬ್ಬರು ಮೂವತ್ತು ಪೌಂಡ್ ಕೊಬ್ಬರಿ ಎಣ್ಣೆ ತೆಗೆಯಬೇಕಾಗಿತ್ತು. ತಪ್ಪಿದರೆ ಶಿಕ್ಷೆ ! 'ಸೋಮಾರಿಗಳು, ಮುಟ್ಠಾಳರು, ಅಯೋಗ್ಯರು' ಎಂಬ ದೂಷಣೆ. ರಾತ್ರಿಯ ಹೊತ್ತೂ ಕೆಲಸ ಮುಂದುವರಿಸಬೇಕಾಗಿತ್ತು. ನಡುವೆ ದಣಿವಾಗಿ ನಿಂತರೆ ಚಾವಟಿಯ ಹೊಡೆತ! ಬಾರಿ ನಗುತ್ತಾ ಹೇಳುತ್ತಿದ್ದ : ಬ್ಯಾರಿಸ್ಟರ್ ಬಾಬು, ನಿನಗೆ ನಾರಿನ ಕೆಲಸದಿಂದ ಗಾಣದ ಕೆಲಸಕ್ಕೆ



ಬಡ್ತಿ ಕೊಟ್ಟಿದ್ದೇವೆ!' ಗಾಣ ಎಳೆಯುವಾಗ ತಲೆ ಸುತ್ತಿ ಬಿದ್ದ ದಿನಗಳು ಎಷ್ಟೋ!

ರಾಜಕೀಯ ಕೈದಿಗಳಿಗೆ ನ್ಯಾಯವಾಗಿ ಸಲ್ಲಬೇಕಾಗಿದ್ದ ಅನುಕೂಲತೆಗಳನ್ನೂ ಬಾರಿ ನಿರಾಕರಿಸುತ್ತಿದ್ದ. ಕಾನೂನಿನ ಪ್ರಕಾರ ಪುಸ್ತಕಗಳನ್ನು ಒದಗಿಸಬಹುದಾಗಿದ್ದರೂ ಅವನಿಗೆ ಪುಸ್ತಕಗಳೆಂದರೆ ಆಜನ್ಮ ವೈರ. ಸಂಜೆಯ ವೇಳೆ ಮತ್ತು ಭಾನುವಾರಗಳು ಪುಸ್ತಕ ದೊರೆಯುತ್ತಿತ್ತು. ಆದರೆ ಅದನ್ನು ಅದಲು ಬದಲು ಮಾಡಿಕೊಂಡರೆ ನಾಲ್ಕು ದಿನ ಶಿಕ್ಷೆ! ಬಾರಿ ಸಾಹೇಬನ ಅಜ್ಞಾನ ಹಾಗೂ ಮೂರ್ಖತೆ ಬಲು ವಿಚಿತ್ರ. 'ರಾಷ್ಟ್ರ', 'ದೇಶ', 'ದೇಶಭಕ್ತಿ' ಮುಂತಾದ ಶಬ್ದಗಳಿರುವ ಪುಸ್ತಕಗಳಿಂದ ಮನುಷ್ಯರು ಕ್ರಾಂತಿಕಾರಿಗಳಾಗುತ್ತಾರೆಂದು ಅವನ ನಂಬಿಕೆ. ಅಂಥ ಶಬ್ದಗಳಿರುವ ಹಾಳೆಗಳನ್ನು ಹರಿದು ಹಾಕುತ್ತಿದ್ದ! ಅನೇಕ ದಿನಗಳ ಚಳವಳಿ ಹಾಗೂ ಒತ್ತಾಯದ ಫಲವಾಗಿ, ಕೈದಿಗಳು ಮನೆಯಿಂದ ಆಕ್ಷೇಪಾರ್ಹವಲ್ಲದ ಪುಸ್ತಕ ತರಿಸಿಕೊಳ್ಳಲು ಅವಕಾಶ ಸಿಕ್ಕಿತು. ಹಾಗೆಯೇ ಕೈದಿಗಳಿಗಾಗಿ ಒಂದು ಪುಸ್ತಕ ಭಂಡಾರ ಏರ್ಪಡಿಸಲು ಬ್ರಿಟಿಷ್

ಅಧಿಕಾರಿಗಳು ಅನುಮತಿಸಿದರು.

ಅನಂತರ ಕೈದಿಗಳ ಅನಕ್ಷರತೆ ಹೋಗಲಾಡಿಸಲು ಚಳವಳಿ ಆರಂಭಿಸಿದೆ. ಅನೇಕರು ಓದು ಬರಹ ಚೆನ್ನಾಗಿ ಕಲಿತು, ಗುಮಾಸ್ತರಾದರು. ಕಳ್ಳಕಾಕರಿಗೆ, ತಾವು ಸಹ ವರ್ತಮಾನ ಪತ್ರಿಕೆ ಓದುವಂತೆ ಆಗಬಲ್ಲೆವೆಂಬುದು ತಿಳಿಯುತ್ತಲೇ ಅವರ ಆನಂದ ಹೇಳತೀರದು. ಮೊದಲು ಅಕ್ಷರಸ್ಥರು ಒಬ್ಬರೂ ಇಲ್ಲದಿದ್ದ ಕೈದಿಗಳ ಪೈಕಿ, ನಾನು ಅಂದಮಾನ್ ಬಿಡುವ ವೇಳೆಗೆ ಶೇ. 60ರಷ್ಟು ಅಕ್ಷರಸ್ಥರಾಗಿದ್ದರು. ಬ್ರಿಟಿಷ್ ಅಧಿಕಾರಿಗಳ ಮತ್ತು ಮುಸಲ್ಮಾನರ ನಿರಂತರ ವಿರೋಧ ಎದುರಿಸಿ, ಹಿಂದಿ ಭಾಷೆ ಹಾಗೂ ದೇವನಾಗರಿ ಲಿಪಿ ಬಳಕೆಗೆ ಬರುವಂತೆಯೂ ನಾವು ಮಾಡಿದೆವು. ಅನಂತರ ರಾಜಕೀಯ ಕೈದಿಗಳನ್ನು ಅಗೌರವದ ಕೆಲಸಗಳಿಗೆ ನೇಮಿಸಬಾರದೆಂದು ಚಳವಳಿ ಪ್ರಾರಂಭಿಸಿದೆವು. ಅಧಿಕಾರಿಗಳ ಗಾಡಿ ಎಳೆಯಲು ಆಜ್ಞಾಪಿಸಿದಾಗ ಪೂರ್ತಿ ಹರತಾಳವನ್ನೇ ಆಚರಿಸಿದೆವು.

ಒಂದು ಸಂಜೆ ದಿನದ ಕೆಲಸ ಮುಗಿಸಿ ಹಾಜರಿ ಒಪ್ಪಿಸಲು ಸಾಲಿನಲ್ಲಿ ನಡೆಯುತ್ತಿದ್ದೆ. ಮತ್ತೊಂದು ಸಾಲಿನಲ್ಲಿ ಇದ್ದಕ್ಕಿದ್ದಂತೆ ನಮ್ಮ ಅಣ್ಣ ಬಾಬಾ ಕಣ್ಣಿಗೆ ಬಿದ್ದ. ಇಬ್ಬರ ಕಣ್ಣುಗಳೂ ಸಂಧಿಸಿದವು. ಒಂದು ಕ್ಷಣ ಸ್ತಬ್ಧರಾದೆವು. ಬಾಬಾ ಬಾಯಿಂದ ಪ್ರಶ್ನೆ ಹೊರಟಿತು : 'ಅರೇ ತಾತ್ಯಾ ನೀನು ಹೇಗೆ ಇಲ್ಲಿಗೆ ಬಂದೆ?' ಭೇಟಿಗಾಗಿ ಇಬ್ಬರೂ ಧಾವಿಸಿದೆವು. ಅಷ್ಟರಲ್ಲೆ ಕಾವಲುಗಾರರು ಇಬ್ಬರನ್ನೂ ಕತ್ತಿನ ಪಟ್ಟಿ ಹಿಡಿದು ದೂರ ದೂರ ಎಳೆದೊಯ್ದು ಬಿಟ್ಟರು. ಅದಾದ ನಂತರ ಕೆಲವೇ ದಿನಗಳಲ್ಲಿ ಬಾಬಾನಿಂದ ನನಗೊಂದು ರಹಸ್ಯ ಪತ್ರ ಬಂತು : 'ನೀನು ಮಾತೃಭೂಮಿಯ ಸ್ವಾತಂತ್ರ್ಯದ ಹೋರಾಟವನ್ನು ಮುಂದುವರಿಸುತ್ತಿದ್ದೀಯೆಂಬ ನಂಬಿಕೆಯಿಂದ ನಾನಿಲ್ಲಿ ಜೀವ ಹಿಡಿದುಕೊಂಡಿದ್ದೆ; ಹಿಂಸಾಚಾರಗಳನ್ನು ಸಹಿಸಿಕೊಂಡಿದ್ದೆ. ನಿನ್ನ ಕಾರ್ಯ ಈಗ ಅಲ್ಲಿ ಯಾರು ಮಾಡುತ್ತಾರೆ ? ನಿನ್ನೆಲ್ಲ ಪ್ರತಿಭೆ ಹಾಗೂ ಬುದ್ಧಿಶಕ್ತಿ ಈಗ ವ್ಯರ್ಥವಾಗುತ್ತದೆ.'

ಬಾಬಾನಿಗೆ ರಹಸ್ಯವಾಗಿಯೇ ನಾನೊಂದು ಸಮಾಧಾನದ ಸಂದೇಶ ಕಳಿಸಿದೆ : 'ನನ್ನ ಪ್ರತಿಭೆ ಹಾಗೂ ಶಕ್ತಿ ಸಾಮರ್ಥ್ಯಗಳು ಒರೆಗಲ್ಲ ಮೇಲೆ ತೇರ್ಗಡೆಯಾಗಿವೆ. ಆದರೆ ಹೆಚ್ಚುಗಾರಿಕೆಯೂ ಕಡಿಮೆಯೇನಲ್ಲ; ನುಡಿದಂತೆ ನಡೆದು, ಅಗ್ರೇಸರನಾಗಿ ಹೋರಾಡುತ್ತಾ ಸಿಕ್ಕಿಕೊಂಡಿದ್ದೇನೆ. ನಾವು ಯಾರ ಸಲುವಾಗಿ ಇಷ್ಟೆಲ್ಲ ಕಷ್ಟ ಸಹಿಸುತ್ತಿರುವೆವೋ ಅವರಿಂದಲೇ ಶಾಪ ಹಾಕಿಸಿಕೊಳ್ಳುತ್ತಾ, ಬಂದೀಖಾನೆಯಲ್ಲಿ ಚಿತ್ರಹಿಂಸೆಗೊಳಗಾಗಿ ಕೊಳೆಯುವುದೂ ಒಂದು ಧಾರ್ಮಿಕ ಕರ್ತವ್ಯವೇ ಸರಿ. ಅಂತಿಮ ವಿಜಯಕ್ಕೆ ಇಂದಿನ ನಿಟ್ಟುಸಿರು, ಕಷ್ಟನಷ್ಟಗಳು ಹಾಗೂ ತ್ಯಾಗ ಬಲಿದಾನಗಳು - ವಿಜಯದುಂದುಭಿ ಬಾರಿಸುತ್ತಾ ಬಹಿರಂಗವಾಗಿ ಹೋರಾಡುವಷ್ಟೇ - ಮುಖ್ಯ !'

ರಾಜಕೀಯ ಕೈದಿಗಳ ನಡುವೆ ರಹಸ್ಯ ಕಾಗದ ಪತ್ರಗಳ ವ್ಯವಹಾರ ನಿಲ್ಲಿಸಲು ಯಾರಿಂದಲೂ ಸಾಧ್ಯವಾಗಲಿಲ್ಲ. ಅದಕ್ಕಾಗಿ ನಾವು ಹೊಸ ಹೊಸ ಮಾರ್ಗಗಳನ್ನು ಕಂಡುಹಿಡಿಯುತ್ತಿದ್ದೆವು. ಬಾರಿ ಸಾಹೇಬ ಹತಾಶನಾಗಿ ಸೂಪರಿಂಟೆಂಡೆಂಟರ ಬಳಿ ಹೇಳುತ್ತಿದ್ದ : 'ಜೈಲರ್ ಜಾಗದಲ್ಲಿ ದೆವ್ವವನ್ನೇ ನೇಮಿಸಿದರೂ ಈ ''ಬಾಂಬುಗಾರ''ರ ವ್ಯವಹಾರ ನಿಲ್ಲಿಸುವುದು ಅಸಾಧ್ಯ !' ಒಬ್ಬರಿಂದ ಮತ್ತೊಬ್ಬರಿಗೆ ಸಂದೇಶ ತಲುಪಿಸಲು ಒಂದು ಹೊಸ 'ವೈರ್‌ಲೆಸ್' ಪದ್ಧತಿಯನ್ನೇ ನಾವು ಬಳಕೆಗೆ ತಂದೆವು. ರಾತ್ರಿಯ ಹೊತ್ತು ಕೈಬೇಡಿಗಳನ್ನು ಶಬ್ದ ಮಾಡುವುದು ; ಯಾವ ಶಬ್ದಕ್ಕೆ ಯಾವ ಅಕ್ಷರವೆಂಬುದು ನಿಶ್ಚಿತ ! ಆ ಶಬ್ದಗಳು ಒಬ್ಬರಿಂದ ಒಬ್ಬರಿಗೆ, ಜೈಲಿನ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ನಿರಾತಂಕವಾಗಿ ಸಾಗಿಹೋಗುತ್ತಿದ್ದವು. ಕಾವಲುಗಾರರು ವಿಚಾರಿಸಿದರೆ, 'ನಾವು ತಾಳಕ್ಕೆ ಸರಿಯಾಗಿ ಪ್ರಾರ್ಥನೆ ಮಾಡಿಕೊಳ್ಳುತ್ತಿದ್ದೇವೆ'

ಎನ್ನುತ್ತಿದ್ದೆವು !

ಜೈಲಿನಲ್ಲಿ ಬಹಳ ಕಷ್ಟ ಅನುಭವಿಸಿದವರಲ್ಲಿ ಇಂದುಭೂಷಣ ರಾಯ್ ಒಬ್ಬ. ಸುದೃಢ ಮೈಕಟ್ಟಿನ ಉತ್ಸಾಹಿ ಯುವಕ ಇಂದುವಿಗೆ ಮಾಣಿಕತೋಲಾ ಮೊಕದ್ದಮೆಯಲ್ಲಿ 10 ವರ್ಷ ಕರಿನೀರಿನ ಶಿಕ್ಷೆಯಾಗಿತ್ತು. ಅಂದಮಾನಿನಲ್ಲಿ ಕಾಹಿಲೆ ಬಿದ್ದ. ಅದಕ್ಕೆ ಬಾರಿ ಸಾಹೇಬ ವಿಧಿಸಿದ ಔಷಧಿ - ಎಣ್ಣೆಯ ಗಾಣ ಎಳೆಯುವುದು! ಸದಾ ನಗುನಗುತ್ತಿದ್ದ ಎಲ್ಲರ ನೆಚ್ಚಿನ ಇಂದು ಆ ದಿನ ತುಂಬ ಸೊರಗಿಹೋಗಿದ್ದ. ಗಾಣದ ನೊಗ ಹಿಡಿದು, ಹೆಜ್ಜೆ ಹೆಜ್ಜೆಗೂ ಯಮಯಾತನೆಯಿಂದ ನರಳುತ್ತಾ ಎಳೆಯುತ್ತಿದ್ದ. ಸಮೀಪದಲ್ಲೆ ಕೆಲಸ ಮಾಡುತ್ತಿದ್ದ ನಾನು, ಅವನನ್ನು ಉತ್ಸಾಹಗೊಳಿಸಲು ಎಷ್ಟೋ ಸಮಾಧಾನ ಹೇಳಿದೆ. ಆದರೆ ಉಪಯೋಗವಾಗಲಿಲ್ಲ. ಮರುದಿನ ಬೆಳಿಗ್ಗೆ ಇಂದುಭೂಷಣ ಹಗ್ಗದಿಂದ ನೇತಾಡುತ್ತಿದ್ದುದನ್ನು ಕಂಡೆವು. ನಾಲಗೆ ಹೊರಗೆ ಚಾಚಿತ್ತು ; ಪ್ರಾಣ ಹೊರಟುಹೋಗಿತ್ತು. ಅವನು ಎದೆಗೆ ಅಂಟಿಸಿಕೊಂಡಿದ್ದ ಚೀಟಿಯನ್ನು ಬಾರಿ ಸಾಹೇಬ ಕಣ್ಮರೆ ಮಾಡಿದ. ಇಂದುಭೂಷಣನಿಗೆ ಮನೋ ವಿಕಾರವಾಗಿತ್ತೆಂದು ಹೇಳಿಕೆ ಕೊಟ್ಟ. ಉಪೇಂದ್ರ ಬ್ಯಾನರ್ಜಿ, ಉಲ್ಲಾಸಕರ ದತ್ತ ಮುಂತಾದವರೂ ಚಿತ್ರಹಿಂಸೆಗೊಳಗಾದರು. ದತ್ತನಿಗೆ ವಿದ್ಯುತ್ ಶಾಕ್ ಕೊಡಲಾಗುತ್ತಿತ್ತು. ಅದರಿಂದ ಅವನಿಗೆ ಹುಚ್ಚೇ ಹಿಡಿಯಿತು.

ಪರಮ ಕ್ರೂರಿ ಬಾರಿ ಆಗಾಗ ನನ್ನನ್ನು ಕೇಳುತ್ತಿದ್ದ : 'ನಿನಗೆ ಹುಚ್ಚು ಹಿಡಿಯುವುದು ಯಾವಾಗ ?' 'ಬಹುಶಃ ನಿನಗೆ ಹಿಡಿದ ನಂತರ !' ಎನ್ನುತ್ತಿದ್ದೆ ನಾನು. ಸಹಕಾರಿಗಳೊಡನೆ ನಾನು ವಿಚಾರ ವಿನಿಮಯ ನಡೆಸಿದ ಸುಳಿವು ಸಿಕ್ಕಿದರೆ ವಿಶೇಷ ಶಿಕ್ಷೆಗಳನ್ನು ಅನುಭವಿಸಬೇಕಾಗುತ್ತಿತ್ತು. ಒಮ್ಮೆ ಹೊಸ ಸುದ್ದಿ ತರುವಂತೆ ಒಬ್ಬ ಸಂದೇಶ ವಾಹಕನಿಗೆ ಸೂಚನೆ ಕೊಟ್ಟುದಕ್ಕಾಗಿ 'ಗೋಡೆಯ ಬೇಡಿ' ಶಿಕ್ಷೆಯಾಯಿತು. ಆಳೆತ್ತರದಲ್ಲಿ ಗೋಡೆಯಲ್ಲಿ ನೆಟ್ಟ ಬೇಡಿಗಳಿಗೆ ಕೈಸೇರಿಸಿ ಬೀಗ ಹಾಕಲಾಯಿತು. ಆಗ ಬಾರಿ ಬಂದು ಅಣಕು ದನಿಯಲ್ಲಿ ಕೇಳಿದ : 'ಹೀಗೇಕಾಯಿತು ?' 'ಇದು ಅಂಚೆ ವೆಚ್ಚ' ಎಂದೆ. 'ಬಹಳ ದುಬಾರಿ ಆಯಿತಲ್ಲವೆ ?' ಎಂದ. 'ಖಂಡಿತ ಇಲ್ಲ ! ನೀನಾದರೋ ವರ್ತಮಾನ ಪತ್ರಿಕೆಗಳಿಗೆ ಚಂದಾ ಹಣ ಮತ್ತು ಅಂಚೆ ವೆಚ್ಚ ಎರಡೂ ತೆರಬೇಕು. ನಮಗೆ ಸುದ್ದಿ ಬಿಟ್ಟಿ ಸಿಕ್ಕುತ್ತದೆ. ಕೇವಲ ಈ ರೂಪದಲ್ಲಿ ಅಂಚೆವೆಚ್ಚ ಕೊಡಬೇಕಾಗುತ್ತದೆ - ಆದೂ ಆರು ತಿಂಗಳಿಗೊಮ್ಮೆ !' ಬಾರಿ ಉಸಿರೆತ್ತಲಿಲ್ಲ.

ಅಶುತೋಶ ಲಾಹಿರಿ ಬಂಗಾಲದಿಂದ ಬಂದ ಕ್ರಾಂತಿಕಾರಿ ; ಎಂ. ಎ. ಪದವೀಧರ. ಏಳು ವರ್ಷಗಳ ಕಾಲ ಅಂದಮಾನಿನ ನರಕಯಾತನೆಗಳನ್ನು ದಿಟ್ಟವಾಗಿ ಸಹಿಸಿದ. ಗಾಣದಲ್ಲಿ ನಿಗದಿಯಾದಷ್ಟು ಎಣ್ಣೆ ತೆಗೆಯದಿದ್ದುದಕ್ಕಾಗಿ ಅವನನ್ನು ಅಮಾನುಷವಾಗಿ ಛಡಿಯಿಂದ ಹೊಡೆಯಲಾಯಿತು.

ನಾನಿಗೋಪಾಲ ಇನ್ನೂ ಹದಿನಾರು ವಯಸ್ಸಿನ ಹುಡುಗ ; ಕುಲೀನ ವಂಶದಲ್ಲಿ ಹುಟ್ಟಿದ ಬಂಗಾಲಿ ಕ್ರಾಂತಿಕಾರಿ ಗಾಣಕ್ಕೆ ಅವನನ್ನು ಹೂಡಿದಾಗ ಕೆಲಸ ನಿಲ್ಲಿಸಿದ ; ಮೌನ ಧರಿಸಿದ ; ಜೈಲಿನ ಬಟ್ಟೆ ಬಿಚ್ಚಿ ಎಸೆದ ; ಆಹಾರ ತ್ಯಜಿಸಿದ. ಅಧಿಕಾರಿಗಳು ಅವನಿಗೆ ಛಡಿ ಏಟಿನ ಶಿಕ್ಷೆ ವಿಧಿಸಿದರು. 'ನಾನಿ ಗೋಪಾಲನ ರಕ್ತ ಹರಿಸಿದರೆ ಕ್ರಾಂತಿಕಾರಿಗಳಾದ ನಾವು ಅದರ ಸೇಡು ತೀರಿಸಿಕೊಳ್ಳುತ್ತೇವೆ' ಎಂದು ನಾನು ಬಾರಿಗೆ ಎಚ್ಚರಿಕೆಯಿತ್ತೆ. ಅಷ್ಟರಲ್ಲಿ ಇಂದು ಮತ್ತು ದತ್ತರ ಶೋಚನೀಯ ವಾರ್ತೆ ಹಿಂದುಸ್ಥಾನದ ಪತ್ರಿಕೆಗಳಲ್ಲಿ ಅಚ್ಚಾಯಿತು. ಅಂದಮಾನಿನ ಅಧಿಕಾರಿಗಳು ಗಾಬರಿಗೊಂಡರು. ಕ್ರಾಂತಿಕಾರಿಗಳು ಸೆಲ್ಯುಲರ್ ಜೈಲನ್ನೆ ಬಾಂಬಿನಿಂದ ಉಡಾಯಿಸುವರೆಂಬ ವಾರ್ತೆ ಹಬ್ಬಿತು ! ಪ್ರತಿಯೊಂದು ಕೊಠಡಿಯಲ್ಲೂ ಮೇಲಿಂದ ಮೇಲೆ ತನಿಖೆ, ಬಾಂಬಿಗಾಗಿ ಶೋಧನೆ ನಡೆಯಿತು. ಬಾರಿಯ ಸಿಟ್ಟು ನೆತ್ತಿಗೇರಿತು. ರಾಜಕೀಯ ಕೈದಿಗಳು

ಇಂಗ್ಲಿಷಿನಲ್ಲಿ ಮಾತನಾಡುತ್ತಿದ್ದುದರಿಂದ, ಸಾಮಾನ್ಯ ಕೈದಿಗಳ ದೃಷ್ಟಿಯಿಂದ ಅವರ ಗೌರವ ಹೆಚ್ಚುತ್ತಿದೆಯೆಂದು ಅವನು ಭಾವಿಸಿದ. ಆದರಿಂದ ಇಂಗ್ಲಿಷಿನಲ್ಲಿ ಮಾತನಾಡಬಾರದೆಂದು ಆಜ್ಞೆ ಮಾಡಿದ ಕೂಡಲೆ ಒಬ್ಬ ಕ್ರಾಂತಿಕಾರಿ ಎದ್ದುನಿಂತು ಹಿಂದಿಯಲ್ಲಿ ಹೇಳಿದ .

'ನಮಗೆ ನಿಮ್ಮ ಇಂಗ್ಲಿಷ್ ಬಗ್ಗೆ ಅಂಥದೇನೂ ಆದರವಿಲ್ಲ. ಆದರೆ ನೀವು ಇಂಗ್ಲಿಷಿನಲ್ಲಿ ಪ್ರಶ್ನೆ ಕೇಳುವುದರಿಂದ, ನಾವೂ ಅದರಲ್ಲೇ ಉತ್ತರಿಸಬೇಕಾಗುತ್ತದೆ. ಅದಿರಲಿ; ಆದರೆ ನಾವು ನಮ್ಮ ಭಾಷೆಯನ್ನೇ ಮರೆಯುವುದು ಎಷ್ಟು ನಾಚಿಕೆಗೇಡಿನ ಸಂಗತಿ ! ಉದಾಹರಣೆಗೆ ಈ ಜೈಲರ್ ಸಾಹೇಬರನ್ನೇ ನೋಡಿ. ಅವರದು ಐರಿಷ್ ಜಾತಿ. ಆದರೆ ತಮ್ಮ ಮಾತೃಭಾಷೆಯ ಒಂದು ಶಬ್ದವೂ ಅವರಿಗೆ ತಿಳಿಯದು !'

ಬಾರಿಸಾಹೇಬ ಕೋಪದಿಂದ ಕೆಂಡವಾದ. 'ನೀವು ಇಂಡಿಯನರು, ನಮ್ಮ ಗುಲಾಮರು !' ಎಂದು ಅರಚಿದ. ಕೂಡಲೆ ದಿಟ್ಟಸ್ವರವೊಂದು ಪ್ರಶ್ನಿಸಿತು · 'ನಿನ್ನ ಗುಲಾಮರೆ ? ನೀನು ಯಾರು ? ನೀನೂ ಬ್ರಿಟಿಷರ ಗುಲಾಮನ ಮಗ ಅಲ್ಲವೆ ? ನಾವಾದರೋ ಪ್ರಾಣದ ಹಂಗು ತೊರೆದು, ದಾಸ್ಯದ ನೊಗವನ್ನು ಕಿತ್ತೆಸೆಯಲು ಹೆಣಗುತ್ತಿದ್ದೇವೆ. ಆದರೆ ನೀನು ? ನಿನ್ನ ಸ್ವದೇಶವನ್ನು ಗುಲಾಮಗಿರಿಯಲ್ಲಿ ಕೆಡಹಿರುವವರ ಸಾಮ್ರಾಜ್ಯವನ್ನೇ ನಿನ್ನದೆಂದುಕೊಳ್ಳುತ್ತಿರುವೆ. ಅವರು ಎಸೆಯುವ ಎಂಜಲು ಕೂಳಿನಿಂದ ಜೀವಿಸಿಕೊಂಡಿರುವೆ!' ಹಿಂದಿಯಲ್ಲಿ ಹೇಳಿದ್ದರಿಂದ, ಎಲ್ಲ ಕೈದಿಗಳಿಗೂ ಅರ್ಥವಾಯಿತು. ಗಟ್ಟಿಯಾಗಿ ನಗತೊಡಗಿದರು. ಕೂಡಲೆ ಬಾಬಾಸಾಹೇಬ ಆಜ್ಞೆ ಹೊರಡಿಸಿದ : 'ರಾಜಕೀಯ ಕೈದಿಗಳು ಹಿಂದಿಯಲ್ಲಿ ಮಾತನಾಡಬಾರದು!'

ಅಂದಮಾನಿನ ಕೈದಿಗಳು ಅನುಭವಿಸುತ್ತಿದ್ದ ನರಕಯಾತನೆಯ ವಾರ್ತೆಗಳು ಭಾರತದಾದ್ಯಂತ ಪ್ರಚುರಗೊಂಡವು. ಭಾರತ ಸರಕಾರದ ಮೇಲೆ ಸಾರ್ವಜನಿಕಾಭಿಪ್ರಾಯದ ಒತ್ತಡ ಬಲವಾಯಿತು. ಆಗ 1913ರಲ್ಲಿ ಭಾರತದ ಗೃಹಮಂತ್ರಿ ಸರ್ ರೆಜಿನಾಲ್ಡ್ ಕ್ರಡಾಕ್ ಸ್ವತಃ ಪರಿಸ್ಥಿತಿಯ ಪರಿಶೀಲನೆಗೆ ಅಂದಮಾನಿಗೆ ಆಗಮಿಸಿದರು. ಕೆಲವು ರಾಜಕೀಯ ಕೈದಿಗಳೊಡನೆ ಅವರ ಭೇಟಿಯಾಯಿತು. ಅವರು ಹೇಳಿದ ಪರಿಸ್ಥಿತಿಯ ವರ್ಣನೆಯನ್ನೆಲ್ಲ ಬಾರಿ ಸಾಹೇಬನು 'ಸುಳ್ಳು' ಎಂದು ಹೇಳಿ ಒಂದೇ ಶಬ್ದದಲ್ಲಿ ತಳ್ಳಿಹಾಕಿದ. ಕ್ರಡಾಕ್ ಕೆಲವರಿಗೆ 'ನ್ಯಾಯವಾಗಿ ನಿಮಗೆ ಇನ್ನೂ ಹೆಚ್ಚಿನ ಶಿಕ್ಷೆ ಆಗಬೇಕಾಗಿತ್ತು' ಎಂದು ಸಮಾಧಾನ ಹೇಳಿದರು. ನವೆಂಬರ್ 16ರಂದು ಅವರೊಡನೆ ನನ್ನ ಭೇಟಿ ಹಾಗೂ ಮಾತುಕತೆ ನಡೆಯಿತು.

'ಸಾವರ್‌ಕರ್! ಎಂಥ ದುಃಸ್ಥಿತಿಗೆ ನಿಮ್ಮನ್ನು ನೀವು ತಂದುಕೊಂಡಿದ್ದೀರಿ! ನಾನು ನಿಮ್ಮ ಬರಹಗಳನ್ನು ಓದಿದ್ದೇನೆ. ನಿಮ್ಮ ಪ್ರತಿಭೆಯನ್ನು ಯೋಗ್ಯ ದಿಕ್ಕಿನಲ್ಲಿ ಬಳಸಿದ್ದಲ್ಲಿ ಅತ್ಯುಚ್ಚ ಅಧಿಕಾರ ಪಡೆಯಬಹುದಿತ್ತು. ಆದರೆ ನೀವು ಈ ದಿಕ್ಕು ಹಿಡಿದಿದ್ದೀರಿ !'

'ಆದರೆ, ನನಗೆ ಈ ಕಷ್ಟ ತಪ್ಪಿಸುವುದು ನಿಮ್ಮ ಕೈಯಲ್ಲೇ ಇದೆ. ಕಡ್ಡಾಯ ಶಿಕ್ಷಣದ ಬಗ್ಗೆ ಗೋಖಲೆಯವರ ಮಸೂದೆ ವಿಧಾನ ಮಂಡಲದ ಮುಂದೆ ಬಂದಿದೆಯೆಂದು ತಿಳಿದುಬಂತು. ನಮಗೂ ಅಂಥ ಸದವಕಾಶಗಳು ಸಿಕ್ಕಿದಲ್ಲಿ, ನಮ್ಮ ವಿಚಾರದವರೆಲ್ಲರೂ ಶಾಂತಿವಿಧಾನವನ್ನೇ ಬಯಸುತ್ತೇವೆ.'

'ಅವರೆಲ್ಲರ ಬಗ್ಗೆ ನಿಮಗೆ ಹೇಗೆ ಗೊತ್ತು ? ನಿಮ್ಮ ಸಹಕಾರಿಗಳು ಎಲ್ಲಿರುವರೆಂಬುದೂ ನಿಮಗೆ ಗೊತ್ತೇನು ?'

'ನನಗೆ ಹೇಗೆ ಗೊತ್ತಾಗಬೇಕು ? ನಾನಿಲ್ಲಿ ಜೈಲುಖಾನೆಯ ಏಕಾಂತದಲ್ಲಿ ಇದ್ದೇನೆ. ಆದರೆ ಪರಸ್ಪರ ಅಭಿಪ್ರಾಯಗಳು ಗೊತ್ತು. ಶಾಂತಿಯುತವಾಗಿ ಪ್ರಗತಿ ಸಾಧಿಸುವುದು ಸಾಧ್ಯವಿದ್ದಾಗ ಹಿಂಸಾಮಾರ್ಗ

ಅನುಸರಿಸುವುದು ಧರ್ಮವಲ್ಲ. ಆದ್ದರಿಂದ ಅವರು ಸಹ ಹಾಗೆಯೇ ಯೋಚಿಸುತ್ತಿರಬಹುದು.'

'ಹಾಗೇನಿಲ್ಲ. ಅವರು ಇನ್ನೂ ನಿಮ್ಮ ಹೆಸರಿನಲ್ಲಿ ಭಾರತದಲ್ಲೂ, ಅಮೆರಿಕದಲ್ಲೂ ಯುದ್ಧದ ಘೋಷಣೆ ಹಾಕುತ್ತಿದ್ದಾರೆ.'

'ಈಗ ನೀವು ಹೇಳಿದ್ದರಿಂದ ಆ ವಿಷಯ ತಿಳಿಯಿತು. ನನ್ನ ಹೆಸರನ್ನು ಉಪಯೋಗಿಸದಂತೆ ಅವರನ್ನು ತಡೆಗಟ್ಟುವುದು ಹೇಗೆ?'

'ನಿಮ್ಮ ಈಗಿನ ಅಭಿಪ್ರಾಯವನ್ನು ಅವರಿಗೆ ಬರೆದು ತಿಳಿಸಲು ನೀವು ಸಿದ್ಧರಿದ್ದರೆ, ಆ ಬಗ್ಗೆ ನಾವು ಪರಿಶೀಲಿಸುತ್ತೇವೆ.'

'ನಾನಂತೂ ಸಿದ್ಧ. ಆದರೆ ಕಾಗದವನ್ನು ನಾನೇ ಸ್ವತಂತ್ರವಾಗಿ ಬರೆಯಬೇಕು ; ಇಲ್ಲವಾದರೆ ಉಪಯೋಗವಿಲ್ಲ.'

'ಕಾಗದ ನಮ್ಮ ಮೂಲಕ ಹೋಗಬೇಕು.'

'ಅದರಿಂದ ಅವರು ಅದನ್ನು ಒತ್ತಾಯದ ಹೇಳಿಕೆ ಎಂದು ಭಾವಿಸುತ್ತಾರೆ.'

'ನೇರವಾಗಿ ಬರೆಯಲು ಅನುಮತಿಯಿಲ್ಲ.'

'ಹಾಗಾದರೆ ನಾನು ಏನೂ ಮಾಡಲಾರೆ.'

ಕ್ರಡಾಕ್ ಸಾಹೇಬರು ಚಕಿತರಾದರು. ವಿಷಯ ಬದಲಾಯಿಸಿದರು : 'ಒಳ್ಳೆಯದು ; ನಿಮ್ಮ ದೂರುಗಳೇನಾದರೂ ಇದ್ದರೆ ಹೇಳಿ.' ನಾನು ರಾಜಕೀಯ ಕೈದಿಗಳ ಸ್ಥಿತಿಗತಿಗಳನ್ನು ವಿವರವಾಗಿ ತಿಳಿಸತೊಡಗಿದೆ. ಚೀಫ್ ಕಮಿಶನರ್ ನಡುವೆಯೇ ಬಾಯಿ ಹಾಕಿ ಹೇಳಿದ : 'ಆದರೆ, ನೀವೆಲ್ಲರೂ ಒಳಸಂಚು ಮಾಡಿ, ಅಪಾಯಕರವಾಗಿ ನಡೆದುಕೊಂಡಿದ್ದೀರಿ. ರಶ್ಯದವರೇನಾದರೂ ಭಾರತವನ್ನು ಆಳುತ್ತಿದ್ದಲ್ಲಿ, ಅವರು ನಿಮ್ಮನ್ನು ಸೈಬೀರಿಯಾಕ್ಕೆ ಕಳುಹಿಸುತ್ತಿದ್ದರು ಅಥವಾ ಗುಂಡಿಟ್ಟು ಕೊಲ್ಲುತ್ತಿದ್ದರು.' ಬ್ರಿಟಿಷ್ ಸರಕಾರ ಅದಷ್ಟೂ ಉತ್ತಮವಾಗಿ ನಡೆಸಿಕೊಳ್ಳುತ್ತಿರುವುದಕ್ಕಾಗಿ ರಾಜಕೀಯ ಕೈದಿಗಳು ಕೃತಜ್ಞರಾಗಿರಬೇಕೆಂದೂ ಅವನು ಬೋಧಿಸಿದ !

ನಾನೆಂದೆ : 'ರಶ್ಯನರು ನಮ್ಮನ್ನು ನಿಶ್ಶಸ್ತ್ರಗೊಳಿಸುತ್ತಿರಲಿಲ್ಲ. ಸೈಬೀರಿಯಾದ ಜನರಿಗೆ ಸೇನಾಧಿಕಾರಿಗಳಾಗಲು ಸಹ ಅವಕಾಶವಿದೆ. ನಮಗೆ ಒಂದು ವೇಳೆ ಶಸ್ತ್ರಧಾರಣೆ ಸಾಧ್ಯವಿದ್ದಿದ್ದಲ್ಲಿ, ಮೊಗಲ್ ಸಾಮ್ರಾಜ್ಯದ ಗತಿಯೇ ಬ್ರಿಟಿಷ್ ಸಾಮ್ರಾಜ್ಯಕ್ಕೂ ಒದಗುತ್ತಿತ್ತು.'

ಅಷ್ಟರಲ್ಲಿ ಕ್ರಡಾಕ್ ಸಾಹೇಬರೆಂದರು : 'ನೀವು ಹಿಂದಿನ ನಿಮ್ಮ ಭಾರತೀಯ ರಾಜರ ವಿರುದ್ಧ ದಂಗೆ ಎದ್ದಿದ್ದರೆ ಏನಾಗುತ್ತಿತ್ತು ಗೊತ್ತೆ ? ಅವರು ನಿಮ್ಮೆಲ್ಲರನ್ನೂ ಆನೆಯ ಕಾಲಿನಿಂದ ತುಳಿಸಿಬಿಡುತ್ತಿದ್ದರು.'

'ಅದು ಸರಿ! ಹಿಂದೆ ಇಂಗ್ಲೆಂಡಿನಲ್ಲೂ ಕಳ್ಳತನ ಮಾಡಿದವರನ್ನು ಬೀದಿಯುದ್ದಕ್ಕೂ ಎಳೆದುಕೊಂಡು ಹೋಗುತ್ತಿದ್ದರು; ಅವರ ತಲೆ ಕತ್ತರಿಸಿ ಹಾಕುತ್ತಿದ್ದರು. ಆದರೆ ಈಗ ಹಾಗಿಲ್ಲ. ಕಾಲ ಬದಲಾಗಿದೆ. ಎರಡೂ ಬಣಗಳು ತಮ್ಮ ರೀತಿನೀತಿಗಳನ್ನು ಸುಧಾರಿಸಿಕೊಂಡಿವೆ. ಇದೊಂದು ಪ್ರಗತಿಯ ಸಂಕೇತ. ನೀವು ಕಾಯಿದೆಯ ಪ್ರಕಾರ ನಡೆಯುವುದಿಲ್ಲವೆಂದು ದಿಟ್ಟವಾಗಿ ಹೇಳಿ. ಆಗ ನಾವೂ ಅದಕ್ಕೆ ಸಿದ್ಧರಾಗುತ್ತೇವೆ.'

ಕ್ರಡಾಕ್ ಬಂದರು, ಹೋದರು ಆದರೆ ನಾನಿಗೋಪಾಲನ ಉಪವಾಸ ನಿಲ್ಲಲಿಲ್ಲ. 45 ದಿನಗಳು ಉರುಳಿದವು. ಅಸಹನೀಯ ಶಿಕ್ಷೆಗಳನ್ನು ಅನುಭವಿಸಬೇಕಾಗಿ ಬಂದರೂ ಅವನು ಸ್ವಲ್ಪವೂ ವಿಚಲಿತನಾಗಲಿಲ್ಲ. ಮಿರ್ಜಾಖಾನ್ ಎಂಬೊಬ್ಬ ಪಠಾಣ ಜಮಾದಾರನಿದ್ದ. ಅವನು ಕ್ರೌರ್ಯದಲ್ಲಿ ಬಾರಿ

ಸಾಹೇಬನ ಪ್ರತಿರೂಪ. ಅವನು ನನ್ನ ಬಳಿ ಬಂದು ಹೇಳಿದ : 'ಬಡಾಬಾಬು ! ಆ ಹುಡುಗ ನಿಜಕ್ಕೂ ನಿಮಗೆ ತಕ್ಕ ಶಿಷ್ಯ. ಅವನ ಧೈರ್ಯ ಸಾಹಸಗಳು ಪಠಾಣರಿಗೆ ಯೋಗ್ಯವೇ ಹೊರತು, ಹಿಂದುವಿಗಲ್ಲ.' ಖಾನನಿಗೆ ನಾನು ತಿಳಿಸಿದೆ : 'ಬಡಾ ಜಮಾದಾರ್, ನೀನು ಹೇಳುವುದು ಸರಿಯಲ್ಲ. ನಾನಿಗೋಪಾಲ ಪಠಾಣನಾಗಿದ್ದಿದ್ದರೆ, ಸ್ವದೇಶಕ್ಕಾಗಿ ಜೈಲಿನಲ್ಲಿ ಕೊಳೆಯುತ್ತಿರಲಿಲ್ಲ; ನಿನ್ನ ಹಾಗೆ ಬಾರಿಸಾಹೇಬನ ಬೂಟು ನೆಕ್ಕುತ್ತಿದ್ದ. ಆದರೆ ಅವನು ಹಿಂದುವಾದ್ದರಿಂದ, ಅಷ್ಟೊಂದು ಧೈರ್ಯದಿಂದಿದ್ದಾನೆ. ವಾಸ್ತವವಾಗಿ ಪಠಾಣರೆಲ್ಲರೂ ಶೂರರಾಗಿ, ಹಿಂದುಗಳೆಲ್ಲರೂ ಹೇಡಿಗಳಾಗಿದ್ದಿದ್ದರೆ, ಹಿಂದುಗಳು ಪಠಾಣರ ಅಥವಾ ಮೊಗಲರ ಸಾಮ್ರಾಜ್ಯವನ್ನು ಮುಳುಗಿಸಿದ್ದಾದರೂ ಹೇಗೆ ?'

ನಾನಿಗೋಪಾಲನ ಬಗ್ಗೆ ಸಹಾನುಭೂತಿಗಾಗಿ ಉಳಿದ ರಾಜಕೀಯ ಕೈದಿಗಳೂ ಉಪವಾಸ ಆರಂಭಿಸಿದರು. ನನಗೆ ಆ ಸಿದ್ಧಾಂತದಲ್ಲಿ ನಂಬಿಕೆಯಿಲ್ಲ. ಅದಕ್ಕಾಗಿ ಎಲ್ಲರಿಗೂ ಕ್ರೂರ ಶತ್ರುವಿನೊಡನೆ ಹೋರಾಡುವ ಮಾರ್ಗ ಅದಲ್ಲವೆಂದು ತಿಳಿಸಿ ಒಪ್ಪಿಸಿದೆ. ಆದರೆ ನಾನಿ ಮಾತ್ರ ಒಪ್ಪಲಿಲ್ಲ. ಅವನನ್ನು ಒಪ್ಪಿಸಲು, ಅದಕ್ಕಿಂತ ಹೆಚ್ಚಾಗಿ ಅವನ ಜೀವ ಉಳಿಸಲು ಉಪವಾಸ ಆರಂಭಿಸಿದೆ. ಬಾರಿ ಬಂದು ನಮ್ಮಿಬ್ಬರ ಭೇಟಿ ಏರ್ಪಡಿಸಿದ. ಪ್ರತ್ಯಕ್ಷ ಮಾತುಕತೆಯ ನಂತರ ನಾನಿ ನನ್ನ ಸಲುವಾಗಿ ಆಹಾರ ತೆಗೆದುಕೊಳ್ಳಲು ಒಪ್ಪಿದ. ಅವನ ಕಿವಿಯಲ್ಲಿ ನಾನು ಹೇಳಿದೆ : 'ನಾನಿ, ಹೆಂಗಸಿನಂತೆ ಏಕೆ ಸಾಯುತ್ತೀಯೆ ? ಸಾಯಲೇ ಬೇಕೆಂದಿದ್ದರೆ, ಶೂರರಂತೆ ಹೋರಾಡಿ ಸಾಯಿ. ಮೊದಲು ಶತ್ರುವನ್ನು ಕೊಂದು ಆಮೇಲೆ ಪ್ರಯಾಣ ಹೊರಡು.'

ಹೆಚ್ಚಿನ ಸೌಲಭ್ಯಗಳಿಗಾಗಿ ನಮ್ಮ ಹೋರಾಟ ಮುಂದುವರಿಯಿತು. ಗೆಳೆಯರಿಗೆ ನಾನು ನೀಡಿದ ಸೂತ್ರವೆಂದರೆ - ಆದಷ್ಟು ಹೆಚ್ಚು ಆಹಾರ ಸೇವಿಸಿ ; ಚೆನ್ನಾಗಿ ಬೆಳೆಯಿರಿ ; ಕೆಲಸಕ್ಕೆ ಹೋಗಬೇಡಿ ! ಉಪವಾಸದಿಂದ ಸಾಧಿಸಲಾಗದಿದ್ದ ಕೆಲಸ ನಮ್ಮ ಈ ಮುಷ್ಕರದಿಂದ ಸಿದ್ಧಿಸಿತು. ಜೈಲಿನ ಅಧಿಕಾರಿಗಳು ಸುಧಾರಣೆಗಳನ್ನು ಗಟ್ಟಿಯಾಗಿ ಓದಿ ಹೇಳಿದರು :

1) ಜೀವಾವಧಿಗಿಂತ ಕಡಿಮೆ ಅವಧಿಯ ಶಿಕ್ಷೆಯುಳ್ಳ ಕೈದಿಗಳನ್ನು ಉಳಿದ ಅವಧಿಗಾಗಿ ಭಾರತದ ಸೆರೆಮನೆಗಳಿಗೆ ಕಳುಹಿಸಲಾಗುವುದು ;

2) ಜೀವಾವಧಿ ಶಿಕ್ಷೆಯುಳ್ಳ ಹಾಗೂ ಉತ್ತಮ ನಡತೆಯುಳ್ಳವರನ್ನು 15 ವರ್ಷಗಳ ನಂತರ ಮುಕ್ತಗೊಳಿಸಿ, ಸುಲಭವಾದ ಕೆಲಸ ಕೊಡಲಾಗುವುದು ;

3) 14 ವರ್ಷಗಳ ಅವಧಿಯುಲ್ಲಿ ಉತ್ತಮ ಆಹಾರ ಹಾಗೂ ಬಟ್ಟೆ ಕೊಡಲಾಗುವುದು. ಐದು ವರ್ಷಗಳು ಕಳೆದ ನಂತರ ಅವರ ಆಹಾರ ಅವರೇ ತಯಾರಿಸಿಕೊಳ್ಳಬಹುದು ; ತಿಂಗಳಿಗೆ 12 ಆಣೆಯಿಂದ ರೂ. 1 ರೂ.ವರೆಗೆ ಖರ್ಚಿನ ಹಣ ಕೊಡಲಾಗುವುದು.

ಇಷ್ಟಾದ ನಂತರ ನಾವು ಮುಷ್ಕರ ನಿಲ್ಲಿಸಿ, ಕೆಲಸ ಆರಂಭಿಸಿದೆವು. ಭಾರತಕ್ಕೆ ಕಳುಹಿಸಲ್ಪಡುತ್ತಿರುವ ಕೈದಿಗಳೊಡನೆ, ಅಲ್ಲಿ ಅಂದಮಾನಿನ ಭೀಕರ ಪರಿಸ್ಥಿತಿಯ ಬಗ್ಗೆ ಆದಷ್ಟು ಹೆಚ್ಚು ಪ್ರಚಾರ ಮಾಡುವಂತೆ ಹಾಗೂ ಅಲ್ಲಿಂದ ಬರುವ ಪ್ರತಿಯೊಂದು 'ಚಲಾನ್' ಮೂಲಕ ಅಲ್ಲಿನ ಸುದ್ದಿ ಕಳುಹಿಸುವಂತೆ ತಿಳಿಸಿದೆವು. ಜೀವಾವಧಿ ಶಿಕ್ಷಿತರ ಪೈಕಿ ನನ್ನನ್ನು ಬಿಟ್ಟು ಉಳಿದೆಲ್ಲರಿಗೂ ರಿಯಾಯಿತಿ ಸಿಕ್ಕಿತು. ಅದಕ್ಕೆ ಬಾರಿ ಹೇಳುತ್ತಿದ್ದ ಕಾರಣವೆಂದರೆ : 'ಅಂದಮಾನಿನಲ್ಲಿ ಸಾವರಕರ್ ಅಸಂತೋಷ ಹಬ್ಬಿಸಿದ್ದಾನೆ ; ಅವನಿಗೆ ಹೆಚ್ಚು ಆಸ್ಪದ ಕೊಡಬಾರದು, ದಯೆ ತೋರಿಸಬಾರದು !'

★ ★ ★

1914. ಅಂದಮಾನಿನ ಸೆರೆಮನೆಯ ಕೈದಿಗಳಲ್ಲಿ ಒಗ್ಗಟ್ಟು ಬೆಳೆದಿತ್ತು ; ಹೊಸ ಚೈತನ್ಯ ಮೂಡಿತ್ತು. ಹೊಸ ಹೊಸ ಹೋರಾಟಗಳಿಗಾಗಿ ಹುಮ್ಮಸ್ಸು ಕೆರಳಿತ್ತು

ಹಿಂದು ಕೈದಿಗಳಲ್ಲಿ ಅನೈಕತೆ, ದ್ವೇಷಾಸೂಯೆಗಳು ತಾಂಡವವಾಡುತ್ತಿದ್ದವು. ಒಂದೊಂದು ಜಾತಿಯವರೂ ಒಂದೊಂದು ಗುಂಪು. ಓರ್ವ ಅಸ್ಪೃಶ್ಯ ಬಾಲಕನನ್ನು ಮುಸಲ್ಮಾನರು ಮತಾಂತರಗೊಳಿಸುತ್ತಿದ್ದಾಗ, ನಾನು ಅದನ್ನು ತಪ್ಪಿಸಿದೆ. ಆದರೆ ಹಿಂದುಗಳು ಅವನನ್ನು ಸೇರಿಸಿಕೊಳ್ಳಲು ತಯಾರಾಗಲಿಲ್ಲ. ಆಗ ಆ ಹುಡುಗನನ್ನು ನನ್ನ ಪಕ್ಕದಲ್ಲೇ ಊಟಕ್ಕೆ ಕೂರಿಸಿಕೊಳ್ಳತೊಡಗಿದೆ. ಅದರಿಂದ ನನಗೆ ಎಲ್ಲರೂ 'ಭಂಗಿ ಬಾಬು' ಎಂದು ಹೆಸರಿಟ್ಟು ಹಂಗಿಸತೊಡಗಿದರು. ಆದರೆ ಕ್ರಮೇಣ ಎಲ್ಲರನ್ನೂ ಒಂದುಗೂಡಿಸುವುದರಲ್ಲಿ ಸಫಲತೆ ಸಿಕ್ಕಿತು.

ಅಲ್ಲಿ ಪ್ರತಿಯೊಬ್ಬ ಮುಸಲ್ಮಾನನ ಬಳಿಯಲ್ಲೂ ಒಂದೊಂದು ಕುರಾನು ಗ್ರಂಥವಿತ್ತು. ಕುರಾನು ಓದುವ ನೆವದಲ್ಲಿ ಕೈದಿಗಳು (ಅಕ್ಷರದ ಗಂಧವೇ ಇಲ್ಲದಿದ್ದರೂ) ಕೆಲಸಕ್ಕೆ ತಪ್ಪಿಸಿಕೊಳ್ಳುತ್ತಿದ್ದರು. ಕಾವಲುಗಾರರೂ ಜಮಾದಾರರೂ ಬಹುಮಟ್ಟಿಗೆ ಮುಸಲ್ಮಾನರು. ಅವರ ಬಗ್ಗೆ ಇಂಗ್ಲಿಷ್ ಅಧಿಕಾರಿಗಳಿಗೆ ವಿಶೇಷ ಪ್ರೀತಿ ! ಹೀಗಾಗಿ ಅವರದೇ ರಾಜ್ಯ ಚಲಾಯಿಸುತ್ತಿದ್ದರು. ಹಿಂದು ಕೈದಿಗಳು ಪುಸ್ತಕ ಇಟ್ಟುಕೊಳ್ಳುವಂತಿಲ್ಲ. ಧಾರ್ಮಿಕ ಪುಸ್ತಕ ಓದುವುದೂ ಮಹಾಪರಾಧವಾಗಿತ್ತು. ಮುಸಲ್ಮಾನರಿಗೆ ರಜಾ ದಿನಗಳು ಹೆಚ್ಚು. ಆಗ ಅವರು ಒಟ್ಟುಗೂಡಿ ಹರಟೆ ಹೊಡೆಯುತ್ತಿದ್ದರು, ಸಭೆ ನಡೆಸುತ್ತಿದ್ದರು. ಹಿಂದುಗಳಿಗೆ ಹಬ್ಬದ ದಿನಗಳಲ್ಲೂ ರಜೆಯಿಲ್ಲ. ಅಕಸ್ಮಾತ್ ಯಾವುದಾದರೊಂದು ರಜಾದಿನ ಅವರು ತುಳಸಿ ರಾಮಾಯಣ ಕೇಳಲು ಒಟ್ಟುಗೂಡಿದರೆ ಮುಸಲ್ಮಾನ ಜಮಾದಾರರು, ಪಹರೆಕಾರರು ಅವರನ್ನು ಹೊಡೆದು ಬಡಿದು ಚದರಿಸುತ್ತಿದ್ದರು. ಜೈಲುಖಾನೆಯೊಳಗೇ ಬೇಡಿ ಹಾಕಿ ಕೂಡುತ್ತಿದ್ದರು, ಇಲ್ಲವೆ ಕೆಲಸ ಮಾಡಿಸುತ್ತಿದ್ದರು. ಈ ಅನ್ಯಾಯದ ವಿರುದ್ಧ ಮುಂದಿನ ಹೋರಾಟ ಆರಂಭಿಸಿದೆವು. ಅದಕ್ಕಾಗಿ ಒಂದು ಕೇಂದ್ರ ಸಂಘಟನೆಯನ್ನೂ ನಾನು ರಹಸ್ಯವಾಗಿ ರೂಪಿಸಬೇಕಾಯಿತು. ಸಮಾನವಾದ ನ್ಯಾಯ ದೊರಕಿಸಿ ಕೊಳ್ಳುವುದರಲ್ಲಿ ಯಶಸ್ಸನ್ನೂ ಪಡೆದೆವು.

ರಾಜಕೀಯ ಕೈದಿಗಳಿಗೆ ದೇಶ ಧರ್ಮಗಳ ಬಗ್ಗೆ ಹೆಚ್ಚಿನ ತಿಳಿವಳಿಕೆ ಕೊಡಲು ಅನೇಕ ಮಾರ್ಗಗಳನ್ನು ಅನುಸರಿಸಬೇಕಾಗಿತ್ತು. ಅದರಲ್ಲಿ ಪುಸ್ತಕ ಭಂಡಾರದ ಸ್ಥಾಪನೆಯೂ ಒಂದು. ಮೊದಮೊದಲು ಬಾರಿ ಸಾಹೇಬ ಪುಸ್ತಕಗಳನ್ನು ಸುಟ್ಟುಹಾಕುವುದಾಗಿ ಬೆದರಿಸಿದ. ಆದರೆ ಅವನ ಆಟ ನಡೆಯಲಿಲ್ಲ. ಒಮ್ಮೆ, ಪೇಶ್ವೆಗಳು ಅಳಿದ ನಂತರ ಬಂದ ಭಾರತದ ರಾಷ್ಟ್ರೀಯ ನಾಯಕರ ಪಟ್ಟಿ ತಯಾರಿಸುವಂತೆ ನಾನು ಸೂಚನೆ ಕೊಟ್ಟೆ. ಒಂದು ವಾರದ ಕಾಲ ಆ ಬಗ್ಗೆ ಚರ್ಚಿಸಲು ಅವಕಾಶವಿತ್ತು. ಅನಂತರ ಪಟ್ಟಿಗಳು ಬಂದವು. ಆದರೆ 1857ರ ವೀರರ ಹೆಸರು ಒಂದೂ ಕಾಣಲಿಲ್ಲ. ಕೇವಲ ಒಬ್ಬನು ಮಾತ್ರ ಝಾನ್ಸಿರಾಣಿಯ ಹೆಸರನ್ನು ಬರೆದಿದ್ದ. ಅನಂತರ ನಾನು ಎಲ್ಲರನ್ನೂ ಸೇರಿಸಿ 1857ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಬಗ್ಗೆ ಭಾಷಣ, ಪ್ರಶ್ನೋತ್ತರ, ಸಂಭಾಷಣೆಗಳ ಮೂಲಕ ವಿವರಿಸಿ ಹೇಳಿದೆ. ಅನಂತರ ತಾತ್ಯಾಟೋಪೆ, ನಾನಾಸಾಹೇಬ, ಕುವರಸಿಂಹ ಮುಂತಾದವರ ಹೆಸರುಗಳು ಎಲ್ಲರ ಬಾಯಲ್ಲೂ ಚಿಮ್ಮತೊಡಗಿದವು.

ಅಂದಮಾನಿನಲ್ಲಿ ಮುಸಲ್ಮಾನ ಅಧಿಕಾರಿಗಳೂ ಕಾವಲುಗಾರರೂ ಹಿಂದು ಕೈದಿಗಳಿಗೆ ಕೊಡುತ್ತಿದ್ದ ಕಿರುಕುಳ ಅಸಹನೀಯ. ಅತ್ಯಂತ ಕಷ್ಟದ ಕೆಲಸ ಕೊಡುವುದು, ಹೊಲಸು ಬೈಗಳ ಸುರಿಮಳೆ, ಸುಳ್ಳು

ಆರೋಪ ಹೊರಿಸುವುದು, ನಿಷ್ಕಾರಣವಾಗಿ ಅಮಾನುಷ ಶಿಕ್ಷೆ ವಿಧಿಸುವುದು! ಹಿಂದು ಕೈದಿಗಳ ಪಾಲಿಗೆ ನವನರಕವೇ ಸೃಷ್ಟಿಯಾದಂತಿತ್ತು. 'ಇವೆಲ್ಲ ತೊಂದರೆಗಳಿಂದ ಬಿಡುಗಡೆ ಹೊಂದಲು ನೀವೂ ಮುಸಲ್ಮಾನರಾಗಿ' ಎಂಬ ಬಹಿರಂಗ ಪ್ರಚಾರವೇ ನಡೆದಿತ್ತು. ಅದರಿಂದ, ಈ ಕಿರುಕುಳ ಸಹಿಸಲಾರದೆ ಅಜ್ಞರಾದ ಯುವಕ ಕೈದಿಗಳು ಅಸಹಾಯಕರಾಗಿ ಮುಸಲ್ಮಾನರಾಗುತ್ತಿದ್ದರು. ಹಿಂದುಗಳಲ್ಲಿ ಇನ್ನೊಂದು ಅಜ್ಞಾನವಿತ್ತು. ಮುಸಲ್ಮಾನರು ಮುಟ್ಟಿದ ಆಹಾರ, ನೀರು ತಾವು ಸೇವಿಸಿದರೆ ಜಾತಿ ಹೋಗುತ್ತದೆ ಎಂಬ ಭಾವನೆ! ಊಟದ ಸಮಯದಲ್ಲಿ ಮುಸಲ್ಮಾನ ಕೈದಿಗಳು ಹಿಂದು ಕೈದಿಗಳ ಆಹಾರಕ್ಕೆ ಕೈ ಹಾಕುತ್ತಿದ್ದರು ಅಥವಾ ಉಗುಳುತ್ತಿದ್ದರು. ಆಗ ಹಿಂದುಗಳು ಉಪವಾಸ ಮಾಡುತ್ತಿದ್ದರು! ಊಟ ಮಾಡದಿದ್ದುದಕ್ಕಾಗಿ ಶಿಕ್ಷೆಯನ್ನು ಅನುಭವಿಸಬೇಕಾಗುತ್ತಿತ್ತು. ಜಾತಿ ಉಳಿಸಿಕೊಳ್ಳಲು ತಮ್ಮ ಅನ್ನಕ್ಕೆ ಯಾವ ಮುಸಲ್ಮಾನ ಉಗುಳುತ್ತಿದ್ದನೋ ಅವನಿಗೇ ಕೊಟ್ಟುಬಿಡುತ್ತಿದ್ದರು. ಇಲ್ಲವಾದರೆ, ಆಹಾರ ಚೆಲ್ಲಿದ್ದಕ್ಕೂ ಶಿಕ್ಷೆ! ಆದರೆ ಎಷ್ಟು ದಿನ ಹೀಗೆ ನಡೆದೀತು? ವಿಧಿಯಿಲ್ಲದೆ ಅವರು ಜಾತಿ ಬದಲಾಯಿಸಿಕೊಳ್ಳುತ್ತಿದ್ದರು.

ದಿನದಿನವೂ ಈ ದೃಶ್ಯವನ್ನು ಕಣ್ಣಾರೆ ಕಂಡು ನನ್ನ ರಕ್ತ ಕುದಿಯಿತು. ಹಿಂದು ಕೈದಿಗಳಂತೂ ಈ ಅನ್ಯಾಯವನ್ನು ತಡೆಯಲು ಧೈರ್ಯ ಮಾಡಲಿಲ್ಲ; 'ನಮ್ಮ ಹಣೆಬರಹ ನಮಗೆ' ಎಂದು ಸುಮ್ಮನಾಗುತ್ತಿದ್ದರು. ಸುಶಿಕ್ಷಿತರಾದ ರಾಜಕೀಯ ಕೈದಿಗಳೂ ಪ್ರತಿಭಟನೆ ಮಾಡುವುದಕ್ಕೆ ಅಂಜಿದರು. ಮುಂಜಾವಿನಿಂದ ಸಂಜೆಯವರೆಗೆ ದುಡಿಯುವುದರಲ್ಲೇ ಅವರಿಗೆ ಸಾಕಾಗಿಹೋಗುತ್ತಿತ್ತು. 'ಇದೆಲ್ಲ ಹುಡುಗಾಟ' ಎನ್ನುವುದು ಅವರ ಅಭಿಪ್ರಾಯ. ಕೈದಿಗಳೆಲ್ಲ ಕಳ್ಳರು, ದುಷ್ಟರು, ಪಾಪಿಗಳು. ಆದುದರಿಂದ ಅವರು ಹಿಂದು ಧರ್ಮಕ್ಕೆ ಅರ್ಹರಲ್ಲ, ಮುಸಲ್ಮಾನರಾಗುವುದಕ್ಕೇ ಲಾಯಕ್ಕು ಎಂಬ ವೇದಾಂತ ಬೇರೆ! ಇದು ಕೇವಲ ತಮ್ಮ ಹೇಡಿತನ ಮುಚ್ಚಿಕೊಳ್ಳುವುದಕ್ಕಾಗಿ!

ಏಕಾಂಗಿಯಾಗಿಯೇ ನಾನು ಈ ಅನ್ಯಾಯದ ವಿರುದ್ಧ ಸ್ವರ ಎತ್ತಿದೆ; ಹೋರಾಟ ಆರಂಭಿಸಿದೆ. ಮುಸಲ್ಮಾನರು ಮುಟ್ಟಿದ್ದನ್ನು ಅಥವಾ ಕೊಟ್ಟಿದ್ದನ್ನು ತಿನ್ನುವುದರಿಂದ ಜಾತಿ ಹೋಗುವುದಿಲ್ಲವೆಂದು ಹಿಂದು ಕೈದಿಗಳಿಗೆ ಮನದಟ್ಟು ಮಾಡಿಕೊಟ್ಟೆ. ಜಾತಿ ಹೋಗುವುದಾದರೆ, ನಮ್ಮಿಂದ ಅವರ ಜಾತಿಯೂ ಹೋಗಬೇಕಲ್ಲವೆ? ಆದರೆ ಹಾಗೇಕಿಲ್ಲ? ಅನೇಕ ದಿನಗಳ ಪ್ರಯತ್ನದ ಪರಿಣಾಮ ಕಾಣಿಸಿಕೊಳ್ಳ ತೊಡಗಿತು. ಈಗ ಮುಸಲ್ಮಾನರ ತಂತ್ರ ಅವರ ವಿರುದ್ಧವೇ ತಿರುಗಿತು. ಮೋಸಕ್ಕೆ ಬಲಿಯಾಗಿ ಕುರುಡು ನಂಬಿಕೆಯಿಂದ ಮತಾಂತರ ಹೊಂದಿದ್ದವರು ಒಬ್ಬೊಬ್ಬರಾಗಿ ವಾಪಸು ಬರತೊಡಗಿದರು. ಆದರೆ ಇಷ್ಟೆಲ್ಲ ಸಾಧಿಸಬೇಕಾದರೆ ಬೆದರಿಕೆ, ಪ್ರಾಣಾಪಾಯದ ಗಂಡಾಂತರ ಎಲ್ಲವನ್ನೂ ಎದುರಿಸಬೇಕಾಯಿತು. ಜೈಲಿನಲ್ಲಿ ಆರಂಭವಾದ ಶುದ್ಧಿ ಚಳವಳಿ ಅಂದಮಾನ್ ದ್ವೀಪದಾದ್ಯಂತ, ಹೊರಗೂ ಹರಡಿತು.

ಇದೇ ಸಮಯದಲ್ಲಿ ಹಿಂದುಗಳೆಲ್ಲರನ್ನೂ ಒಂದುಗೂಡಿಸುವ ಒಂದು ಸಮಾನ ಸೂತ್ರವೂ ನನಗೆ ಹೊಳೆಯಿತು.

**ಆಸಿಂಧು-ಸಿಂಧುಪರ್ಯಂತಾಯಸ್ಯ ಭಾರತಭೂಮಿಕಾ ।**
**ಪಿತೃಭೂಃ ಪುಣ್ಯಭೂಶ್ಚೈವ ಸ ವೈ ಹಿಂದುರಿತಿ ಸ್ಮೃತಃ ॥**

ಎಂದು ಅದನ್ನು ಶ್ಲೋಕಬದ್ಧಗೊಳಿಸಿದೆ. ಮುಂದೆ ನನ್ನ 'ಹಿಂದುತ್ವ' ಪುಸ್ತಕಕ್ಕೆ ಇದೇ ಆಧಾರವಾಯಿತು, ಸಿಖ್ಖರೂ, ಆರ್ಯ ಸಮಾಜಿಗಳೂ ಪಟ್ಟಿಯಲ್ಲಿ 'ಹಿಂದು' ಎಂದೇ ತಮ್ಮ ಧರ್ಮ ಬರೆಸುವಂತೆ ಅವರನ್ನು ಒಪ್ಪಿಸುವುದರಲ್ಲಿ ಯಶಸ್ಸು ಸಿಕ್ಕಿತು.

ಹಿಂದು ಸಂಘಟನೆ ಹಾಗೂ ಶುದ್ಧಿ ಚಳವಳಿ ದಿನದಿನಕ್ಕೆ ಬೆಳೆದುದನ್ನು ಕಂಡು ಮುಸಲ್ಮಾನ ಅಧಿಕಾರಿಗಳ ಹಾಗೂ ಕೈದಿಗಳ ಹೊಟ್ಟೆಯುರಿ ಹೇಳತೀರದು. ಅವರ ಸಮಸ್ತ ಕುತಂತ್ರಗಳೂ ಬಯಲಾಗಿ, ನಿಷ್ಫಲ ಗೊಂಡಿದ್ದವು. ಆದ್ದರಿಂದ ಹಿಂದುಗಳ ನೆಮ್ಮದಿ ಕೆಡಿಸಲು ಅವರು ಇನ್ನೊಂದು ತಂತ್ರ ಹೂಡಿದರು. ಬೆಳಗಿನ ಜಾವ ನಿದ್ದೆಯ ಹೊತ್ತಿನಲ್ಲಿ ಎಲ್ಲರೂ ಒಮ್ಮೆಗೇ ಎದ್ದು ಗಟ್ಟಿ ಸ್ವರದಲ್ಲಿ 'ಬಾಂಗ್' (ಒಂದು ಧಾರ್ಮಿಕ ವಿಧಿ) ಕೂಗುವುದು ! ದಿನವಿಡೀ ದುಡಿದು ದಣಿವಿನಿಂದ ಮಲಗಿರುತ್ತಿದ್ದ ಹಿಂದು ಕೈದಿಗಳ ಸುಖ ನಿದ್ರೆಗೆ ಆ ವಿಕಾರ ಸ್ವರ ಧಕ್ಕೆ ತಂದಿತು. ಅದಕ್ಕೆ ಉತ್ತರ ಹೇಗೆ ಕೊಡುವುದು ? ನಾವೂ ನಮ್ಮ ಯೋಜನೆ ತಯಾರಿಸಿಕೊಂಡೆವು. ಕೈದಿಗಳೆಲ್ಲರೂ ಒಂದೊಂದು ಶಂಖ ಹವಣಿಸಿಕೊಂಡರು. ಒಂದು ದಿನ ಬೆಳಿಗ್ಗೆ ಒಟ್ಟಿಗೆ 'ಶಂಖನಾದ' ಭೊಂ ಭೊಂ ಭೋಂ ಎಂದು ಗಗನಭೇದಿಯಾಗಿ ಹೊರಟಿತು. ಆ ಪ್ರಚಂಡ ಗರ್ಜನೆಯ ಎದುರಲ್ಲಿ 'ಬಾಂಗ್' ಸ್ವರ ಕೇಳಿಬರುತ್ತಲೇ ಇರಲಿಲ್ಲ. ಕೆಲವು ದಿನಗಳು ಏಕಕಾಲದಲ್ಲೇ ಎರಡೂ ಪಕ್ಷಗಳ ಸ್ಪರ್ಧೆ ನಡೆಯಿತು. ಆದರೆ ರಂಗನ ಮುಂದೆ ಸಿಂಗನೆ? ದೈವದತ್ತವಾದ ಶಂಖನಾದದ ಮಹಿಮೆಯ ಮುಂದೆ ಮನುಷ್ಯಮಾತ್ರರ ಗಂಟಲು ಗೆದ್ದೀತೆ ? 'ಬಾಂಗ್' ಕಾರ್ಯಕ್ರಮ ನಿಂತು ಹೋಯಿತು. ಅನಂತರನಮ್ಮ ಶಂಖನಾದವನ್ನೂ ನಿಲ್ಲಿಸಿದೆವು. ಏಕೆಂದರೆ, ನಿಷ್ಕಾರಣವಾಗಿ ನಿದ್ದೆ ಕೆಡಿಸುವುದನ್ನು ಹಿಂದು ಧರ್ಮ ಎಂದೂ ಕಲಿಸುವುದಿಲ್ಲ !

ಅಜ್ಞ ಹಿಂದು ಕೈದಿಗಳನ್ನು ಮೋಸಗೊಳಿಸಲು ಮುಸಲ್ಮಾನರು ಒಂದು ಸುದ್ದಿ ಹರಡಿದರು : ಮೊದಲ ಮಹಾಯುದ್ಧದಲ್ಲಿ ಜರ್ಮನಿ ಗೆಲ್ಲುವುದು ನಿಶ್ಚಿತ ; ಆಗ ಟರ್ಕಿಯ ಸುಲ್ತಾನನ ಸಹಾಯದಿಂದ ಕೈಸರ್ ಭಾರತದ ಚಕ್ರವರ್ತಿಯಾಗುತ್ತಾನೆ. ಈಗಾಗಲೇ ಅವನು ಮುಸಲ್ಮಾನನಾಗಿದ್ದಾನೆ ; ಆದ್ದರಿಂದ ಮುಸಲ್ಮಾನರಿಗೆ ಭಾರತದಲ್ಲಿ ಉತ್ತಮ ಅಧಿಕಾರ ಸ್ಥಾನಗಳು ಸಿಕ್ಕುತ್ತವೆ. ಮುಸಲ್ಮಾನ ಕೈದಿಗಳಿಗೆಲ್ಲ ಬಿಡುಗಡೆಯಾಗುತ್ತದೆ; ಹಿಂದು ಕೈದಿಗಳ ಶಿಕ್ಷೆ ಇನ್ನಷ್ಟು ಉಗ್ರವಾಗುತ್ತದೆ; ಆದ್ದರಿಂದ ಅವರು ಈಗಲೇ ಮುಸಲ್ಮಾನರಾಗುವುದು ಒಳ್ಳೆಯದು.... ಇತ್ಯಾದಿ ! ಅನೇಕ ಮುಗ್ಧರು ನನ್ನ ಬಳಿ ಬಂದು, 'ಬಡಾಬಾಬು, ಈಗೇನು ಮಾಡುವುದು ?' ಎಂದು ಭಯಕಂಪಿತರಾಗಿ ಕೇಳತೊಡಗಿದರು. ಅವರನ್ನು ಹೇಗೆ ಸಮಾಧಾನ ಗೊಳಿಸುವುದು ?

ನಾನೂ ಒಂದು ಹೊಸ 'ಅಸ್ತ್ರ' ಪ್ರಯೋಗಿಸಿದೆ ! ಮರುದಿನವೇ ಇಡೀ ಜೈಲಿನಲ್ಲಿ ಸುದ್ದಿ ಹಬ್ಬಿತು. ಯಾವ ಹಿಂದುವಿನ ಬಾಯಲ್ಲಿ ನೋಡಿದರೂ ಅದೇ ಮಾತು ; ಜರ್ಮನಿಯ ಕೈಸರ್ ಆರ್ಯಸಮಾಜಕ್ಕೆ ಸೇರಿದ್ದಾನೆ ; ಅವನು ಭಾರತದ ಚಕ್ರವರ್ತಿ ಆಗುತ್ತಲೇ ಮುಸಲ್ಮಾನರನ್ನು ಯೋಗ್ಯವಾಗಿ ವಿಚಾರಿಸಿ ಕೊಳ್ಳುತ್ತಾನೆ... ಇತ್ಯಾದಿ, ಇತ್ಯಾದಿ.

'ನಿಮಗೆ ಹೇಗೆ ತಿಳಿಯಿತು ?' ಎಂದರು ಮುಸಲ್ಮಾನರು.

'ಟರ್ಕಿ ಸುಲ್ತಾನನ ವಿಷಯ ನಿಮಗೆ ಎಲ್ಲಿಂದ ಬಂತು ?' ಎಂದು ಹಿಂದು ಕೈದಿಗಳು ಪ್ರಶ್ನಿಸಿದರು.

'ಒಂದು ಉರ್ದು ಪತ್ರಿಕೆಯಲ್ಲಿ ಬಂದಿತ್ತು.'

'ಕೈಸರನ ವಿಷಯ ಹಿಂದು ಪತ್ರಿಕೆಯಲ್ಲಿ ನಾವು ಸ್ವತಃ ಓದಿದ್ದೇವೆ !'

ಅಲ್ಲಿಗೆ ಎಲ್ಲವೂ ಮುಕ್ತಾಯ !

ಇಂಗ್ಲಿಷರು ಭಾರತ ಬಿಟ್ಟು ಹೋಗುತ್ತಲೇ ಅಫಘಾನಿಸ್ತಾನದ ಅಮೀರನು ಭಾರತ ಆಳುತ್ತಾನೆ ಎಂಬ ಇನ್ನೊಂದು ಪುಕಾರು ಎದ್ದಿತು. ಅದಕ್ಕೆ, ನೇಪಾಳ ಮಹಾರಾಜರು ಸೈನ್ಯ ಸಮೇತ ಬಂದು ಮೊದಲೇ

ಹುಳಿತಿದ್ದಾರೆ ಎಂಬ ಮರು ಪುಕಾರು ಹೊರಟಿತು ! ಹಿಂದುಗಳನ್ನು ಭಯಗೊಳಿಸುವ ಯಾವ ತಂತ್ರವೂ ಗೆಲ್ಲಲಿಲ್ಲ. ಆದರ ಬದಲು, ಹಿಂದುಗಳ ಮಾತು ನಿಜವಿರಬಹುದೆಂಬ ಭಯ ಮುಸಲ್ಮಾನರಿಗೆ ಹತ್ತಿತು !

ಮೊದಲ ಮಹಾಯುದ್ಧ ಆರಂಭವಾದದ್ದು 1914ರ ಆಗಸ್ಟ್‌ನಲ್ಲಿ. ನಾನು ಲಂಡನ್ನಿನಲ್ಲಿದ್ದಾಗಲೇ, ನಿಶ್ಚಿತವಾಗಿ ಹೀಗೆ ಆಗುವುದೆಂದು ಲೆಕ್ಕಹಾಕಿದ್ದೆ. ವಿಶ್ವಯುದ್ಧದ ಈ ಸದವಕಾಶವನ್ನು ಭಾರತದ ಸ್ವಾತಂತ್ರ್ಯ ಗಳಿಕೆಗೆ ಹೇಗೆ ಬಳಸಿಕೊಳ್ಳಬೇಕೆಂಬ ಬಗ್ಗೆ ಪ್ರಚಂಡ ಯೋಜನೆಯನ್ನು ತಯಾರಿಸಿದ್ದೆ. ಮಹಾಯುದ್ಧ ವೇನೋ ಊಹಿಸಿದ್ದಂತೆ, ಆರಂಭವಾಗಿಯೇ ಬಿಟ್ಟಿತು ; ಆದರೆ ನಾನು ಆ ಸುವರ್ಣಸಂಧಿ ಉಪಯೋಗಿಸಿ ಕೊಳ್ಳಲಾಗದಂತೆ, ಅಂದಮಾನಿನಲ್ಲಿ ಕೊಳೆಯುತ್ತಿದ್ದೆ ! ಆದರೂ, ಯುದ್ಧದಿಂದ ಭಾರತಕ್ಕೆ ಅಲ್ಪಸ್ವಲ್ಪ ಉಪಯೋಗ ಆಗದಿರಲಿಲ್ಲ.

ಹಿಂದೊಂದು ಕಾಲದಲ್ಲಿ ಭಾರತೀಯರು ಸಮುದ್ರ ಪ್ರಯಾಣ ಮಾಡುವುದೇ ದುಸ್ತರವಾಗಿತ್ತು ; ಹಿಂದುಗಳಿಗಂತೂ ಅದು ನಿಷಿದ್ಧವಾಗಿತ್ತು. ಆದರೆ ಈಗ ಸಹಸ್ರಾವಧಿ ಸಂಖ್ಯೆಯಲ್ಲಿ ಭಾರತೀಯ ಸೈನಿಕ ರನ್ನೊಳಗೊಂಡ ಸೇನಾಪಡೆಗಳು ಯುರೋಪಿಗೆ ಹೋಗುತ್ತಿವೆ, ಜಗತ್ತಿನ ಅತ್ಯಂತ ಸುಸಜ್ಜಿತ ಸೈನಿಕ ಶಕ್ತಿಯೊಂದಿಗೆ ಹೋರಾಡಿ ಅನುಭವವನ್ನೂ, ಕೀರ್ತಿಯನ್ನೂ ಗಳಿಸುತ್ತಿವೆ - ಎಂಬುದನ್ನು ಕೇಳಿ ನನ್ನ ಹೃದಯ ಆನಂದದಿಂದ ಪುಲಕಿತವಾಯಿತು. ಸುದೈವದಿಂದ ಭಾರತದಲ್ಲಿ ಗಂಡಸುತನ ಇನ್ನೂ ನತ್ತಿಲ್ಲ ಎಂದುಕೊಂಡೆ. ಆಗ ನಡೆದ (ನನಗೆ ಬಹು ದಿನಗಳ ನಂತರ ತಿಳಿದುಬಂದ) ಇನ್ನಿತರ ಸಂಗತಿಗಳೂ ರೋಮಾಂಚಕಾರಿಯಾಗಿದ್ದವು.

ಯುರೋಪು ಮತ್ತು ಅಮೆರಿಕದಲ್ಲಿದ್ದ ಭಾರತೀಯ ಕ್ರಾಂತಿಕಾರಿಗಳು ಭಾರತದ ವಿಮೋಚನೆಗೆ ಸರ್ವಸನ್ನಾಹ ನಡೆಸಿದರು. ಲಾಲಾ ಹರದಯಾಳ್, ವೀರೇಂದ್ರನಾಥ ಚಟ್ಟೋಪಾಧ್ಯಾಯ ಮತ್ತು ಡಾ. ಚಂಪಕರಮಣ ಪಿಳ್ಳೆ ಜರ್ಮನಿಯ ಬೆಂಬಲ ಪಡೆದು ಬರ್ಲಿನ್ನಿನಲ್ಲಿ 'ಇಂಡಿಯನ್ ಇಂಡಿಪೆಂಡೆನ್ಸ್ ಲೀಗ್' ಸ್ಥಾಪಿಸಿದರು. ಅಭಿನವ ಭಾರತದ ಮುಂದಾಳುಗಳಿಂದ ಸ್ಥಾಪಿತವಾಗಿದ್ದ 'ಗದರ್ ಪಕ್ಷ'ದ ಮೂಲಕ ಸಶಸ್ತ್ರ ಹೋರಾಟಕ್ಕೆ ಸಿದ್ಧತೆ ನಡೆಸಿದರು. ಜಗತ್ತಿನಾದ್ಯಂತ ಎಲ್ಲೆಡೆಗಳಿಂದ ಶಸ್ತಾಸ್ತ್ರಗಳನ್ನು ಸಂಗ್ರಹಿಸಿ ಟಿಬೆಟ್ ಹಾಗೂ ಅಫಘಾನಿಸ್ತಾನಗಳ ಮೂಲಕ ಭಾರತದೊಳಗಿದ್ದ ಕ್ರಾಂತಿಕಾರಿಗಳಿಗೆ ಒದಗಿಸುವುದು ; ಪೂರ್ವ ದಿಕ್ಕಿನಿಂದ ನೇರ ಆಕ್ರಮಣ ನಡೆಸಿ ಅಂದಮಾನನ್ನು ವಶಪಡಿಸಿಕೊಳ್ಳುವುದು ; ಭಾರತೀಯ ಕೈದಿಗಳನ್ನೂ ಜತೆಗೆ ತಮ್ಮ ಮುಖಂಡ ಸಾವರಕರರನ್ನೂ ಬಿಡುಗಡೆ ಮಾಡಿ, ಅವರೆಲ್ಲರಿಗೂ ಶಸ್ತಾಸ್ತ್ರ ಹಂಚಿ ಮುಂದಿನ ಆಕ್ರಮಣಕ್ಕೆ ಹೊರಡುವುದು - ಇದು ಯೋಜನೆ.

ಜರ್ಮನಿಯ ಸಹಕಾರ ಪಡೆದು ಡಾ. ಪಿಳ್ಳೆಯವರು 'ಎಮಡೆನ್' ಎಂಬ ಜಲಾಂತರ್ಗಾಮಿ (ಸಬ್‌ಮೆರಿನ್) ಮೂಲಕ ಭಾರತದ ಪೂರ್ವ ಹಾಗೂ ದಕ್ಷಿಣ ತೀರದ ಸಮುದ್ರದಲ್ಲಿ ಸಂಚರಿಸಲಾರಂಭಿಸಿ ದರು. ಅನೇಕ ಬ್ರಿಟಿಷ್ ಸರಕಿನ ಹಡಗುಗಳನ್ನು 'ಎಮಡೆನ್' ನಾಶಗೊಳಿಸಿತು. ಭಾರತದ ಪೂರ್ವ ತೀರದ ಕೆಲವು ರೇವುಗಳ ಮೇಲೆ ದಾಳಿ ನಡೆಸಿ ಉಡಾಯಿಸಿತು. ಒಮ್ಮೆಯಂತೂ ಡಾ. ಪಿಳ್ಳೆಯವರು ದಕ್ಷಿಣ ಭಾಗದಿಂದ ಭೂಮಿಯನ್ನು ಪ್ರವೇಶಿಸಿ, ಬೆಸ್ತರ ವೇಷ ತೊಟ್ಟು, ಕೊಚಿನ್ ಮಹಾರಾಜರನ್ನು ಭೇಟಿ ಮಾಡಿದ್ದರು. 'ಎಮಡೆನ್' ಅಂದಮಾನಿನ ಮೇಲೂ ದಾಳಿ ನಡೆಸುವುದೆಂಬ ವಾರ್ತೆ ಬಲವಾಗಿ ಹಬ್ಬಿತು. 'ಸಾವರಕರ'ರನ್ನು ಬಿಡುಗಡೆ ಮಾಡಿ ಗದರ್ ಪಕ್ಷದ ಕೇಂದ್ರಕ್ಕೆ ಸಾಗಿಸಲಾಗುವುದೆಂಬ ಸುದ್ದಿಯೂ ಪ್ರಸಾರವಾಯಿತು. ಅಂದಮಾನಿನ ಅಧಿಕಾರಿಗಳಿಗಂತೂ ಹಗಲಿರುಳೂ ಭಯ, ಚಿಂತೆ ಹತ್ತಿತು. ನನ್ನನ್ನು

ಸೆರೆಮನೆಯ ಕೋಣೆಯಿಂದ ಜೈಲಿನ ಕೇಂದ್ರಭಾಗಕ್ಕೆ ಸಾಗಿಸಿ, ರಹಸ್ಯವಾಗಿ ಕೂಡಿಟ್ಟರು. ಆದರೆ 1914 ನವೆಂಬರ್ 11ರಂದು ಪ್ರಸಿದ್ಧ 'ಎಮಡೆನ್' ನಾಶ ಹೊಂದಿದ್ದರಿಂದ, ಅಂದಮಾನಿನಲ್ಲಿ ಅಧಿಕಾರಿಗಳ ಭಯಾತಂಕಗಳೂ ನಮ್ಮೆಲ್ಲರ ಆಸೆ ನಿರೀಕ್ಷಣೆಗಳೂ ಅಲ್ಲಿಗೆ ಕೊನೆಗೊಂಡವು.

★ ★ ★

ಪತಂಜಲಿಯ ಯೋಗಸೂತ್ರಗಳು ನನಗೆ ಬಾಯಿಪಾಠವಾಗಿತ್ತು. ಅವನ್ನು ಆಗಾಗ್ಗೆ ಮನಸ್ಸಿನಲ್ಲಿ ಹೇಳಿಕೊಳ್ಳುತ್ತಿದ್ದೆ. ಜೈಲುಖಾನೆಯಲ್ಲಿ ಮಲಗುವ ಮೊದಲು ಹಾಗೂ ಬೆಳಗಿನ ಜಾವ ಸ್ವಲ್ಪ ಪ್ರಾಣಾಯಾಮ ಮಾಡುತ್ತಿದ್ದೆ. ದಿನವಿಡೀ ದುಡಿದು ದಣಿದ ದೇಹದ ನೋವು ಮರೆಯಾಗಿ, ಅವ್ಯಕ್ತ ಸುಖನಿದ್ರೆ ಆವರಿಸುತ್ತಿತ್ತು. ಹೊಲಸು ಜೈಲುಖಾನೆಯಲ್ಲಿ ಒರಟು ಮರದ ತುಂಡಿನ ಮೇಲೆ ಮಲಗಿದ್ದೇನೆಂಬ ಅರಿವು ಅಳಿಸಿಹೋಗಿತ್ತು. ಪುನಃ ಏಳುವ ಹೊತ್ತಿಗೆ ಅಂತರಂಗ ಪ್ರಶಾಂತವಾಗಿ, ಮಧುರ ಸಮಭಾವ ಮನಸ್ಸನ್ನು ತುಂಬುತ್ತಿತ್ತು. ಮರುದಿನದ ಕಷ್ಟ ಕೋಟಲೆಗಳನ್ನು ಸ್ಥಿರವಾಗಿ ಎದುರಿಸುವ ಧೈರ್ಯ ಮೂಡುತ್ತಿತ್ತು. ಉಚ್ಚ ವ್ಯಾಸಂಗಕ್ಕಾಗಿ ಮಹಾವಿದ್ಯಾಲಯವೊಂದನ್ನು ಪ್ರವೇಶಿಸುತ್ತಿದ್ದೇನೆಂಬ ಭಾವನೆಯಿಂದ ಕೆಲಸಕ್ಕೆ ತೊಡಗುತ್ತಿದ್ದೆ. ಇತ್ತ ಕೈಕಾಲುಗಳು ಯಾಂತ್ರಿಕವಾಗಿ ಕೆಲಸ ಮಾಡುತ್ತಿದ್ದರೆ, ಇನ್ನೊಂದು ಕಡೆ ಮನಸ್ಸು ನದಿ ಸಮುದ್ರಗಳನ್ನೂ, ಕಣಿವೆ ಬೆಟ್ಟಗಳನ್ನೂ ಹಾದು ವಿಶ್ವವ್ಯಾಪಿಯಾಗಿ ಸಂಚರಿಸುತ್ತಿತ್ತು. ಮಕರಂದ ಹೀರುತ್ತಾ ಹಾರುವ ಭೃಂಗದಂತೆ ಸವಿಸವಿಯಾದ, ಉದಾತ್ತ ಕಲ್ಪನೆಗಳನ್ನೂ, ಯೋಜನೆಗಳನ್ನೂ ಸಂಗ್ರಹಿಸುತ್ತಾ ವಿಹರಿಸುತ್ತಿದ್ದೆ. ಜೈಲಿನ ಗೋಡೆ, ಸರಳು, ಬೇಡಿ, ನಿಯಮ ನಿಬಂಧನೆಗಳು ಎಲ್ಲವನ್ನೂ ಮುರಿದುಕೊಂಡು ಸಂಚರಿಸುತ್ತಿದ್ದೆ! ಪಾಪ, ಪಹರೆಕಾರನಿಗೆ ಅದೊಂದೂ ತಿಳಿಯುತ್ತಲೇ ಇರಲಿಲ್ಲ!

ಕೆಲಸವಿರಲಿ, ಬಿಡುವಿರಲಿ, ಮನಸ್ಸಿನಲ್ಲಿ ನನ್ನ ಕಾವ್ಯರಚನೆ ನಿರಂತರವಾಗಿ ನಡೆದಿತ್ತು. ಕೆಲವೊಮ್ಮೆ ನನ್ನ ಕಲ್ಪನೆಗಳು ಎಷ್ಟೇ ಭವ್ಯೋಜ್ವಲವಾಗಿರಲಿ, ಶಬ್ದಗಳಲ್ಲಿ ವರ್ಣಿಸಲಾಗದೆ ಚಡಪಡಿಸುತ್ತಿದ್ದೆ. ಕೆಲವೊಮ್ಮೆ ಸರಿಯಾದ ವಾಕ್ಯ ಅಥವಾ ಪದಕ್ಕಾಗಿ ಗಂಟೆಗಟ್ಟಲೆ ಯೋಚಿಸಬೇಕಾಗುತ್ತಿತ್ತು. ಕೊನೆಗೆ ನನ್ನ ಜ್ಞಾಪಕಶಕ್ತಿಗೇ ನಾನು ಶರಣು ಹೋಗುತ್ತಿದ್ದೆ. ಒಂದು ಕಬ್ಬಿಣದ ಮೊಳೆ ಹವಣಿಸಿಕೊಂಡು ಜೈಲಿನ ಬಾಗಿಲ ಸಂದಿಯಲ್ಲಿ ಯಾರಿಗೂ ಕಾಣದಂತೆ ನೇರಿಸಿದ್ದೆ. ಆ ಮೊಳೆಯೇ ಲೇಖನಿ ; ಗೋಡೆಗಳೇ ಹಾಳೆಗಳು ! ಬರೆಯುವ ಸಂಗತಿ ಹೊರಗಿನವರಿಗೆ ಗೊತ್ತಾದರೆ ಹೆಚ್ಚಿನ ಶಿಕ್ಷೆ ನನಗೆ ಕಾದಿತ್ತು. ಅದಕ್ಕಾಗಿ ವಿಶೇಷ ಜಾಗರೂಕತೆ ; ಕತ್ತಲು ಹೊತ್ತಿನಲ್ಲೆ ಕಾವ್ಯರಚನೆ ! ಅದರಿಂದ ನನ್ನ ಕಣ್ಣುಗಳು ಹೆಚ್ಚು ಚುರುಕಾದವು. ಬರೆದುದನ್ನು ಬಾಯಿಪಾಠ ಮಾಡಿಬಿಡುತ್ತಿದ್ದೆ. ಹೀಗೇ ಸಹಸ್ರಾರು ಸಾಲುಗಳಷ್ಟು ಕಾವ್ಯರಾಶಿ ಸೃಷ್ಟಿಯಾಯಿತು !

ಒಮ್ಮೆ ಸುಮಾರು ಒಂದು ಸಹಸ್ರ ಪಂಕ್ತಿಗಳ 'ಕಮಲಾ' ಕಾವ್ಯದ ಮೊದಲ ಭಾಗ ಗೋಡೆಯ ಮೇಲೆ ಬರೆದೆ. ಆದರೆ ಅದನ್ನು ಕಂಠಪಾಠ ಮಾಡುವಷ್ಟರಲ್ಲೆ ಬೇರೆ ಕೋಣೆಗೆ ನನ್ನ ವಸತಿ ಬದಲಾಯಿತು. ನನ್ನ ಮೊದಲಿನ ಕೋಣೆಯಲ್ಲಿ ರಾಮಹರಿ ಎಂಬುವರು ಕೂಡಲ್ಪಟ್ಟರು. ಅವರು ಪ್ರಯಾಗದ 'ಸ್ವರಾಜ್ಯ' ವಾರಪತ್ರಿಕೆಯ ಸಂಪಾದಕರು. ಕೆಲವೇ ತಿಂಗಳುಗಳಲ್ಲೇ ಶಿಕ್ಷೆ ಮುಗಿದು, ಅಂದಮಾನಿನಿಂದ ಭಾರತಕ್ಕೆ ಹೋಗುವವರಿದ್ದರು. ಅವರ ಮಾತೃಭಾಷೆ ಹಿಂದಿ; ನಾನು ಅವರಿಗೆ ಮರಾಠಿ ಕಲಿಸಿದೆ. ಆದರಿಂದ ಅವರು ಗೋಡೆಯ ಮೇಲಿದ್ದ ಕಾವ್ಯವಷ್ಟನ್ನೂ ಹೃದ್ಗತ ಮಾಡಿಕೊಂಡರು. ಬಿಡುಗಡೆಯಾದ ನಂತರ ಕಲ್ಕತ್ತಾದಲ್ಲಿದ್ದ ನಮ್ಮ ಬಾಳನನ್ನು ಭೇಟಿಯಾಗಿ, ಕಾವ್ಯವನ್ನು ಬರೆದು ಒಪ್ಪಿಸಿದರು. ಹೀಗೆಯೇ ಇನ್ನೂ ಹಲವಾರು ಕವನಗಳು, ಸಂದೇಶಗಳು ಬಿಡುಗಡೆಯಾಗಿ ಹಿಂದಿರುಗುತ್ತಿದ್ದವರ ಮೂಲಕ ಹಿಂದುಸ್ಥಾನದ ದಡ

ಮುಟ್ಟುತ್ತಿದ್ದವು.

ಒಂದು ರಾತ್ರಿ ಇದ್ದಕ್ಕಿದ್ದಂತೆ ಸರಳುಗಳ ಸಂದಿಯಲ್ಲಿ ಚಂದ್ರ ಕಣ್ಣಿಗೆ ಬಿದ್ದ.

**ಟಾಕುನಿ ಕಾಂಬಳಿ ಮೀ ಅಪುಲೀ, ಟಾಕಿತ ಅಂಗಾ ತೈ ದಿಸಲೀ**
**ಸಮೋರಚೀ ನಭೀ ಮಜ ದೇಖಾ, ಚಮಕತ ಚಿಮುಕಲಿ ಶಶಿಲೇಖಾ ॥**
**'ಶಶಿಲೇಖಾ ರೇ ಶಶಿಲೇಖಾ' ಮಾವವು ಶಕುನಿ ನ ತ್ಯಾ ಹರಿಖಾ**
**ಟಾಳೀ ವಾಜವುನಿ ಮೀಚ ಮಶೀ, ಕಥಿಲೀ ವಾರ್ತಾ ಅದ್ಭುತಶೀ ॥**

*(ಕಂಬಳಿ ಹಾಸಿದ ಹೊತ್ತು, ಮಲಗುವ ಸಮಯದಿ ಕಣ್ಣಿಗೆ ಬಿತ್ತು ಸನಿಹದ ನಭದಲಿ*



*ಹೊಳೆಹೊಳೆಯುವ ಚಂದ್ರನ ಚಲುರೇಖೆ 'ಶಶಿಲೇಖೆ ಓ, ಶಶಿಲೇಖೆ', ಸಂತಸ ಮೀರಿತು ಹೃದಯವನೆ ಕೈತಟ್ಟುತ ನನ್ನೊಳು ನಾನೇ ಅದ್ಭುತ ಕಥೆಯನು ಬಣ್ಣಿಸಿದೆ.)*

**ಆನಂದಾಚಾ ಪೂರ ಪರೀ ಮಧೇಚಿ ಬುಡವಿತ ತೀ ಸಾರಿ**

**ಬೋಲಾಚಲೀ ನೇಈ ಮಲಾ, ಉಂಚ ಉಂಚ ತ್ಯಾ ಉಂಚ ಸ್ಥಲಾ ॥**

*(ಆನಂದದ ಮಹಾಸಾಗರ ಸುತ್ತಲಿನ ಕಷ್ಟಕಾರ್ಪಣ್ಯಗಳನ್ನೆಲ್ಲ ಮುಳುಗಿಸಿ ನನ್ನನ್ನು ಆ ಉನ್ನತ ಆಕಾಶಕ್ಕೆ ಕರೆದೊಯ್ದಿತು.)*

**ಗೋಢ ಕಲ್ಪನಾ ತಶಾ ತದಾ ಆನಂದಾಚಾ ಮಧ ಖಾತಾ**

**ಮಮ ಮಸ್ತಿಷ್ಕೀ ಶತ ಗಾಣೀ, ಗುಣಗುಣತೀ ಮಂಜುಳವಾಣೀ ॥**

*(ಆಗ ಆನಂದದ ಜೇನನ್ನು ಸವಿಯುವ ಮಧುರ ಕಲ್ಪನೆಗಳು; ಮಿದುಳೊಳಗೆ ಮೊಳಗುವ ನೂರಾರು ಮಂಜುಳ ಗೀತೆಗಳು!)*

ಬಾಲ್ಯದ ನೆನಪುಗಳ ಮಾಯಾಬಜಾರು ತೆರೆಯಿತು ; ನಮ್ಮ ಆ ಭಗೂರಿನ ಮನೆ ; ಅಂಗಳದಲ್ಲಿ ಒಂದು ಬದಿಗೆ ನಿಂಬೆಯ ಗಿಡ ; ಪಕ್ಕದಲ್ಲಿ ಕುಣಿದು ಕುಪ್ಪಳಿಸುತ್ತಿದ್ದ ನಾವು ! ಬೆಳದಿಂಗಳಲ್ಲಿ ಒಟ್ಟಾಗಿ ಚಪ್ಪಾಳೆ ತಟ್ಟಿಕೊಂಡು ಹಾಡುತ್ತಿದ್ದೆವು.

**ಚಾಂದೋಬಾ ಚಾಂದೋಬಾ ಭಾಗಲಾಸ ಕಾ ?**

**ಲಿಂಬುಣಿಚ್ಯಾ ಝಾಡಾಖಾಲಿ ಲಪಲಾಸ ಕಾ ?**

*(ಚಂದುಮಾಮ ಚಂದುಮಾಮ ಓಡುವೆಯೇತಕ್ಕೆ ?*

*ನಿಂಬೆಯ ಗಿಡದಡಿ ಕಣ್ಮರೆಯಾಗುವುದಕ್ಕೆ ?)*

**ಚಾಂದೋಬಾ ಯೇವುನಿ ಜಾ । ತೂಪರೋಟೀ ಖಾವುನಿ ಜಾ**

*(ಚಂದುಮಾಮಾ ಬಂದು ಹೋಗು, ತುಪ್ಪದ ರೊಟ್ಟಿ ತಿಂದುಹೋಗು!)*

★ ★ ★

ಅದೇ ಜೈಲುಖಾನೆ, ಮರದ ಹಲಗೆ; ಕೊರೆಯುವ ಚಳಿ; ಹರಕು ಕಂಬಳಿ! ಅದೇ ತೆಂಗಿನ ಜುಂಗು, ಅದೇ ಎಣ್ಣೆಯ ಗಾಣ ; ಇಲ್ಲವೆ ಅಧಿಕಾರಿಗಳ ಮನೆಗೆ ಬೆಟ್ಟದ ಮೇಲಿನ ಬಾವಿಯಿಂದ ನೀರು ಹೊರುವುದು ; ಅಥವಾ ಕಟ್ಟಡ ನಿರ್ಮಾಣಕ್ಕೆ ಇಟ್ಟಿಗೆ ಹೊರುವುದು !

ಒಂದು ದಿನ ಇದ್ದಕ್ಕಿದ್ದಂತೆ ಬಾಗಿಲಿನ ಸರಳಿಗೆ ಕಲ್ಲೊಂದು ಠಣ್ಣನೆ ಬಡಿದು ಕೆಳಗೆ ಬಿತ್ತು. ಚೀಟಿಯೊಂದನ್ನು ಅದು ಹೊತ್ತು ತಂದಿತ್ತು! ಶಬ್ದ ಕೇಳಿ ಕಾವಲುಗಾರರು ಬಂದರು. ಆದರೆ ಅಷ್ಟರೊಳಗೆ ಆ ಚೀಟಿ ನನ್ನ ಶರೀರದ ಗುಪ್ತ ಭಾಗ ಸೇರಿತ್ತು. ಅವರಿಗೆ ಏನೂ ಸಿಕ್ಕಲಿಲ್ಲ. ಒಬ್ಬನೇ ಉಳಿದೆ. ಅನಂತರಪತ್ರ ತೆಗೆದು ಓದಿಕೊಂಡೆ. ಕರಿನೀರಿನ ಶಿಕ್ಷೆಗೊಳಗಾಗಿ ಬಂದಿದ್ದ ಹೋತಿಲಾಲ ವರ್ಮಾ ಅದನ್ನು ಬರೆದಿದ್ದ. ಕೆಲವು ಬಂಗಾಲಿ ಕ್ರಾಂತಿಕಾರಿಗಳು ಹಿಂಸೆ ತಾಳಲಾರದೆ, ಸರಕಾರಿ ಸಾಕ್ಷಿದಾರರಾಗಿದ್ದಾರೆಂದು ತಿಳಿಸಿದ್ದ. ನನಗೆ ಆ ಸೆರೆಮನೆಯಲ್ಲಿ ದೊರೆತ ಮೊದಲ ರಹಸ್ಯ ಪತ್ರ ಅದು.

1911ರ ಡಿಸೆಂಬರಿನಲ್ಲಿ, ಬ್ರಿಟಿಷ್ ದೊರೆಯ ರಾಜ್ಯಾರೋಹಣದ ಸಂದರ್ಭ ; ಆಗ ದಿಲ್ಲಿಯಲ್ಲೊಂದು ದರ್ಬಾರು ನಡೆಯಲಿತ್ತು. ಆ ಸಂದರ್ಭದಲ್ಲಿ ಜೈಲಿನಲ್ಲಿ ಎಲ್ಲರೂ, 'ಬ್ಯಾರಿಸ್ಟರ್ ಬಾಬು, ನಿಮ್ಮನ್ನು ಬಿಡುಗಡೆ ಮಾಡುತ್ತಾರೆ' ಎನ್ನತೊಡಗಿದರು. ಕೈದಿಗಳೆಲ್ಲರಿಗೂ ಆಗ ಒಂದು ವರ್ಷ ಶಿಕ್ಷಾವಧಿಗೆ

ಒಂದು ತಿಂಗಳಿನಂತೆ ರಿಯಾಯಿತಿ ಸಿಕ್ಕಿತು. ಆದರೆ 'ಸಾವರ್‌ಕರ್' ಸೋದರರ ಶಿಕ್ಷೆಯಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ. ಅಷ್ಟರಲ್ಲಿ ಡಿಸೆಂಬರ್ 23ರಂದು ಕಲ್ಕತ್ತಾದಿಂದ ದಿಲ್ಲಿಗೆ ರಾಜಧಾನಿಯ ಬದಲಾವಣೆಯ ಮುಹೂರ್ತ ಬಂತು. ಅಂದು ಮೆರವಣಿಗೆ ಹೊರಟಿದ್ದ ವೈಸ್‌ರಾಯ್ ಮೇಲೆ ಚಾಂದನಿ ಚೌಕದಲ್ಲಿ ಕ್ರಾಂತಿಕಾರಿಗಳು ಬಾಂಬ್ ಪ್ರಯೋಗಿಸಿದರು.

ಅನಂತರ ಒಂದು ಮಧ್ಯಾಹ್ನ ಸೂಪರಿಂಟೆಂಡೆಂಟ್ ನನ್ನ ಬಳಿ ಬಂದು ಕೇಳಿದ : 'ನಿನಗೊಬ್ಬ ತಮ್ಮನಿದ್ದಾನೆಯೇ ಮತ್ತು ಇನ್ನೂ ಹೊರಗೇ ಇದ್ದಾನೆಯೆ ?' ನಾನು ಉತ್ತರ ಹೇಳುವಷ್ಟರಲ್ಲೆ ಕುತ್ಸಿತ ಬುದ್ಧಿಯಿಂದ ಬಾರಿಸಾಹೇಬ, 'ಅವನು ಒಂದು ಪಕ್ಷ ಹೊರಗೆ ಇದ್ದರೂ, ಬೇಗ ಇಲ್ಲಿಗೆ ಬರುತ್ತಾನೆ' ಎಂದ.

'ಇಡೀ ಭಾರತವೇ ಜೈಲಾಗಿದೆ – ಐರ್ಲೆಂಡಿನ ರೀತಿಯಲ್ಲಿ ! ಅಂದ ಮೇಲೆ ನನ್ನ ತಮ್ಮ ಇಲ್ಲಿಗೆ ಬಂದರೂ ಆಶ್ಚರ್ಯವೇನಿಲ್ಲ' ಎಂದೆ. ಐರಿಷ್ ಆದ ಬಾರಿ ತಲೆ ತಗ್ಗಿಸಿದ ! ಆಗ ಸೂಪರಿಂಟೆಂಡೆಂಟ್ ಹೇಳಿದ :

'ನಿನ್ನ ತಮ್ಮ ಹೇಡಿ ಅಲ್ಲವೆ ?'

'ಹೇಗೆ ಹೇಳುತ್ತೀರಿ ?'

'ದಿಲ್ಲಿಯ ವಿಚಾರ ಗೊತ್ತಾಗುತ್ತಲೇ ಅವನು ಪೊಲೀಸರಿಗೆ ಫೋನ್ ಮಾಡಿ, ತಾನು ಕಲ್ಕತ್ತಾದಲ್ಲಿ ಇರುವುದಾಗಿಯೂ, ತನಗೂ ಅದಕ್ಕೂ ಸಂಬಂಧವಿಲ್ಲವೆಂದೂ ತಿಳಿಸಿದ.'

'ಹಾಗಾದರೆ ಅವನಷ್ಟು ಬುದ್ಧಿವಂತ ಇನ್ನೊಬ್ಬನಿಲ್ಲ. ಬಾಂಬ್ ಹಾಕಿದವನು ಅವನಲ್ಲ ಎಂಬುದು ಅದರ ಅರ್ಥ. ಒಂದು ವೇಳೆ ಅವನೇ ಬಾಂಬ್ ಎಸೆದಿದ್ದರೂ ಪೊಲೀಸರನ್ನು ದಾರಿ ತಪ್ಪಿಸುವ ಉಪಾಯ ಅದು. ಅವನು ಹೇಡಿಯಲ್ಲ, ವೀರ. ಏಕೆಂದರೆ ದಾಳಿ ನಡೆಸುವುದು ಮತ್ತು ತಪ್ಪಿಸಿಕೊಳ್ಳುವುದು, ಎರಡೂ ಅವನಿಗೆ ಗೊತ್ತು !'

ನನ್ನ ಉತ್ತರ ಕೇಳಿ ಅಧಿಕಾರಿಗಳಿಬ್ಬರೂ ಸದ್ದು ಮಾಡದೆ ಹೊರಟುಬಿಟ್ಟರು. ನನ್ನ ತಮ್ಮ ಬಾಳನನ್ನು ಪೊಲೀಸರು ಬಂಧಿಸಿ ಅನಂತರಬಿಡುಗಡೆ ಮಾಡಿದರೆಂಬ ಸುದ್ದಿ ಆಮೇಲೆ ತಿಳಿದುಬಂತು. ಇನ್ನೊಮ್ಮೆ ಬಾರಿ ಸಾಹೇಬನು ಒಂದು ಸುಳ್ಳು ಸುದ್ದಿ ಹೇಳಿದ : 'ಲಾಲಾ ಹರದಯಾಳನನ್ನು ಬಂಧಿಸಿ, ಮುಂಬೈಗೆ ತರಲಾಗಿದೆ.' ಅದರಿಂದ ಕ್ಷಣಕಾಲ ನನಗೆ ಚಿಂತೆಯಾಯಿತು. ಆದರೆ ದಿಟ್ಟವಾಗಿ ಉತ್ತರಿಸಿದೆ : 'ಅವರ ಬಗ್ಗೆ ನನಗೆ ಮೊದಲಿನಿಂದಲೇ ಬಹಳ ಗೌರವವಿತ್ತು. ಈಗ ಅದು ಇನ್ನೂ ಹೆಚ್ಚಾಯಿತು, ಬಿಡು !'

ನಾನು ಇಂಗ್ಲೆಂಡಿನಲ್ಲಿದ್ದಾಗ ಸರದಾರ ಹರನಾಮ ಸಿಂಹನಿಗೆ, ಸಿಖ್ಖರಲ್ಲಿ ಜಾಗೃತಿ ನಿರ್ಮಿಸುವ ಬಗ್ಗೆ ಒತ್ತಿ ಹೇಳುತ್ತಿದ್ದೆ. ಆದರೆ ಅವನು, 'ಅವರು ತಮ್ಮ ಪಂಥದ ಸಂಕುಚಿತ ದೃಷ್ಟಿ ಬಿಡುವುದು ಸಾಧ್ಯವಿಲ್ಲ' ಎನ್ನುತ್ತಿದ್ದ. ಆಗ ನಾನು, 'ನೀನೇ ಈಗ ರಾಷ್ಟ್ರೀಯವಾದಿ ಅಲ್ಲವೇನು ? ಅದೇ ರೀತಿ, ಇನ್ನು ನಾಲ್ಕೈದು ವರ್ಷಗಳಲ್ಲಿ ಉಳಿದ ಸಿಖ್ಖರಲ್ಲೂ ರಾಷ್ಟ್ರೀಯ ಜಾಗೃತಿ ನಿರ್ಮಾಣವಾಗುವುದು ನಿಶ್ಚಿತ' ಎನ್ನುತ್ತಿದ್ದೆ. ಅದಕ್ಕೆ ಸಾಕ್ಷಿಯೆಂಬಂತೆ 1914ರ ವೇಳೆಗೆ ಅಂದಮಾನಿನ ಕಾರಾಗೃಹಕ್ಕೆ ಸಿಖ್ ಕ್ರಾಂತಿಕಾರಿಗಳ ಆಗಮನ ಪ್ರಾರಂಭ ವಾಯಿತು. ಆ ಸಮಯದಲ್ಲಿ ಭಾಯಿ ಪರಮಾನಂದರೂ ಶಿಕ್ಷೆ ಅನುಭವಿಸಲು ಬಂದರು.

ಅಮೆರಿಕದಲ್ಲಿ ಗದರ್ ಚಳವಳಿಯ ಮುಖಂಡರಲ್ಲೊಬ್ಬನಾಗಿದ್ದ ಪಂಡಿತ ಜಗತರಾಮ್ ನನ್ನೊಡನೆ ಹೇಳಿದ : 'ಮೊದಲು ನಾನೊಬ್ಬ ವಿಲಾಸಿ ವ್ಯಕ್ತಿಯಾಗಿದ್ದೆ. ಸುಖೋಪಭೋಗಕ್ಕಿಂತ ಹೆಚ್ಚಿನ ಸಂಗತಿ

ಇದೆಯೆಂದು ತಿಳಿದಿರಲಿಲ್ಲ. ಆದರೆ ಒಂದು ದಿನ ನಿಮ್ಮ ಪುಸ್ತಕ, 1857ರ ಇತಿಹಾಸ ಸಿಕ್ಕಿತು ಇಡೀ ಒಂದು ಹಗಲು, ಒಂದು ರಾತ್ರಿ ಪುಸ್ತಕ ಮುಗಿಯುವವರೆಗೂ ಕೆಳಗಿಡಲಿಲ್ಲ. ಅದನ್ನು ಪಕ್ಕಕ್ಕಿಡುವಾಗ, ನನ್ನ ಸುಖ ವಿಲಾಸದ ಜೀವನವನ್ನೂ ಬದಿಗೆ ತಳ್ಳಿದ್ದೆ. ಸ್ವದೇಶದ ಸ್ವಾತಂತ್ರ್ಯದ ಶಪಥ ಸ್ವೀಕರಿಸಿದೆ. ಅದರ ಫಲವಾಗಿ ನಾನು ಇಂದು ಇಲ್ಲಿಗೆ ಬಂದಿದ್ದೇನೆ.'

'ಹಾಗಾದರೆ, ನನ್ನ ಪುಸ್ತಕ ನಿಮಗೆ ಅಂದಮಾನಿನ ಟಿಕೆಟ್ ದೊರಕಿಸಿಕೊಟ್ಟಿತು' ಎಂದೆ!

ಪ್ರೌಢವಯಸ್ಸಿನ ಸಿಖ್ ದೇಶಭಕ್ತನೊಬ್ಬ ಹೇಳಿದ : 'ನಾನು ಪ್ರಪಂಚದ ಅನೇಕ ದೇಶಗಳಲ್ಲಿ ಸಂಚರಿಸಿದ್ದೇನೆ. ಯಾವ ದೇಶಕ್ಕೆ ಹೋದರೂ, ''ಸಾವರಕರ್ ಎಲ್ಲಿದ್ದಾರೆ? ಅವರನ್ನು ಯಾವ ಜೈಲಿನಲ್ಲಿ ಇಡಲಾಗಿದೆ ?'' ಎಂದು ಮೊದಲು ಕೇಳುತ್ತಾರೆ.' ಅಮೆರಿಕದಲ್ಲಿದ್ದು, ಕೈದಿಗಳಾಗಿ ಬಂದಿದ್ದ ಅನೇಕ ಸಿಖ್ ಕ್ರಾಂತಿಕಾರಿ ತರುಣರು ಹೇಳುತ್ತಿದ್ದರು : 'ನಿಮ್ಮನ್ನು ಎಣ್ಣೆಯ ಗಾಣಕ್ಕೆ ಕಟ್ಟಿದಂತಹ ಚಿತ್ರವನ್ನು ಅಮೆರಿಕದ ಒಂದು ಪತ್ರಿಕೆಯಲ್ಲಿ ನಾವು ಕಂಡೆವು. ಪತ್ರಿಕೆಯನ್ನು ಕೊಂಡು ಓದಿದೆವು. ಆ ಚಿತ್ರ ನೋಡಿ ಮನಸ್ಸಿಗೆ ದುಃಖವಾಯಿತು ; ಕಣ್ಣಲ್ಲಿ ನೀರು ಹರಿಯಿತು. ನಿಮ್ಮಂಥವರು ದೇಶಕ್ಕಾಗಿ ಸರ್ವತ್ಯಾಗ ಮಾಡಿರಬೇಕಾದರೆ, ನಾವು ಸುಖೋಪಭೋಗಗಳಲ್ಲಿ ಜೀವನ ವ್ಯರ್ಥಗೊಳಿಸುವುದು ಸರಿಯಲ್ಲ ಅನ್ನಿಸಿತು. ನಮಗೆ ನಿಜಕ್ಕೂ ನಾಚಿಕೆಯಾಯಿತು. ನಾವು ಭಾರತಕ್ಕೆ ಹಿಂದಿರುಗಿ ಬಂದೆವು. ಕ್ರಾಂತಿಯ ಹೋರಾಟಕ್ಕೆ ಧುಮುಕಿದೆವು. ಈಗ ನಿಮ್ಮ ದರ್ಶನವಾಯಿತು.'

ಹೀಗೆ ಲೆಕ್ಕವಿಲ್ಲದಷ್ಟು ನಿದರ್ಶನಗಳು. ನಾನು, ಗಾಣ ಎಳೆಯುತ್ತ ದಣಿವಾದಾಗ, ಕೈಕಾಲು ಸೋತು ತಲೆ ಸುತ್ತಿದಾಗ, ಇನ್ನೇನು ಜೀವ ಹೋಗುತ್ತದೆ ಎಂಬ ಹತಾಶತೆ ಆವರಿಸಿದಾಗ ಮನಸ್ಸಿನಲ್ಲೆ ಸಮಾಧಾನ ಹೇಳಿಕೊಳ್ಳುತ್ತಿದ್ದೆ : 'ಚಿಂತೆಯಿಲ್ಲ; ಇದನ್ನೆಲ್ಲ ನಾನು ಸಹಿಸಲೇಬೇಕು. ಇದೆಂದಿಗೂ ವ್ಯರ್ಥವಾಗದು... ನನ್ನ ಶ್ರಮದಿಂದ ಕೆಳಗೆ ಇಳಿಯುತ್ತಿರುವ ಎಣ್ಣೆಯ ಹನಿಹನಿಯೂ ಕ್ರಾಂತಿಯ ಜ್ವಾಲೆಗೇ ಬೀಳುತ್ತಿದೆ ; ಅದನ್ನು ಇನ್ನಷ್ಟು ಭುಗಿಲೆಬ್ಬಿಸುತ್ತಿದೆ. ಇದು ವ್ಯರ್ಥವಲ್ಲ!'

ಮತ್ತೊಬ್ಬ ಸಿಖ್ ಗೆಳೆಯ ತಿಳಿಸಿದ : 'ನಿಮ್ಮ 1857ರ ಇತಿಹಾಸದ ಪುಸ್ತಕವನ್ನು ಬ್ರೆಜಿಲ್‌ನಲ್ಲಿ ಒಬ್ಬ ಸ್ನೇಹಿತನಿಗೆ ಕೊಟ್ಟೆ. ಆ ದೇಶದಲ್ಲಿ ಅದರ ಒಂದು ಪ್ರತಿಯ ಬೆಲೆ 150 ರೂ.ಗಳಷ್ಟು ಏರಿತ್ತು ; ಬಹು ಜನಪ್ರಿಯವಾಗಿತ್ತು.'

ಈ ಸುದ್ದಿಗಳ ಜತೆಗೆ ಅಮೆರಿಕ, ಕೆನಡಾ, ಯುರೋಪ್, ಸಯಾಂ, ಸಿಂಗಾಪುರ, ಬಂಗಾಲ, ಪಂಜಾಬ್ ಮುಂತಾದ ಕಡೆಗಳಲ್ಲಿ ಭಾರತದ ಸ್ವಾತಂತ್ರ್ಯಕ್ಕಾಗಿ ನಡೆದ ಅತ್ಯಂತ ರಹಸ್ಯ ಕ್ರಾಂತಿ ಯೋಜನೆಗಳೂ ನನಗೆ ತಿಳಿದುಬಂದವು. 1909ರಿಂದ ಮೊದಲ ಮಹಾಯುದ್ಧದವರೆಗಿನ ಆ ಎಲ್ಲ ಸಂಗತಿಗಳನ್ನೂ ಇತಿಹಾಸ ರೂಪದಲ್ಲಿ ಬರೆಯಬೇಕೆನಿಸಿತು. ಆದರೆ ಮನಸ್ಸಿಗೆ ಶಾಂತಿ, ದೇಹಕ್ಕೆ ಬಿಡುವು ಇರಲಿಲ್ಲ. ಬರೆಯುವ ಬಗ್ಗೆ ಒತ್ತಾಯಿಸುತ್ತಿದ್ದ ಜತೆಯವರಿಗೆಲ್ಲ ಸಮಾಧಾನ ಹೇಳುತ್ತಿದ್ದೆ : 'ಇತಿಹಾಸ ಬರೆಯುವುದು ಅಷ್ಟು ಮಹತ್ವದ್ದಲ್ಲ, ಇತಿಹಾಸ ನಿರ್ಮಿಸಬೇಕು!'

1915ರ ನಂತರ ನನ್ನ ಆರೋಗ್ಯ ಹದಗೆಟ್ಟಿತು. ಆಗಿಂದಾಗ್ಗೆ ಜ್ವರ ಬರಲಾರಂಭಿಸಿತು. ಆದರೆ ಕೆಲಸ ಮಾತ್ರ ಕಡಿಮೆಯಾಗಲಿಲ್ಲ. ಅದೇ ಸತ್ವಶೂನ್ಯವಾದ ಹೊಲಸು ಆಹಾರ. ಜೀರ್ಣಶಕ್ತಿ ಕುಂದಿ, ಆಮಶಂಕೆ ಪ್ರಾರಂಭವಾಯಿತು. ಹೊಟ್ಟೆಯಲ್ಲಿ ಭಯಂಕರ ನೋವು, ಬಿಡುವಿಲ್ಲದ ರಕ್ತಭೇದಿ; ಜೈಲರ್‌ನ ಸೂಚನೆ ಹೋಗದೆ ವೈದ್ಯರು ಬರುವಂತಿಲ್ಲ! ಆಹಾರ ತಿನ್ನಲಾಗದೆ ಶರೀರ ಸೊರಗಿತು. ಇಡೀ ರಾತ್ರಿ ಜ್ವರದ ಕಾವು

ಏರುತ್ತಿತ್ತು. ಒಮ್ಮೆ ವೈದ್ಯರು ಬಂದಾಗ, 'ಆರೋಗ್ಯ ಸರಿಯಿಲ್ಲವೆಂಬ ಸಂದೇಹ ಬರುತ್ತಿದೆ' ಎಂದು ಅಭಿಪ್ರಾಯ ಪಟ್ಟರು ! ಇನ್ನೊಮ್ಮೆ ಅವರ ಎದುರಿಗೇ ರಕ್ತಭೇದಿ ಆದಾಗ, ಒಂದೆರಡು ದಿನ ಔಷಧಿ ಮತ್ತು ಹಾಲು ಪಡೆಯಲು ನಾನು ಅರ್ಹನಾದೆ ! ಆದರೆ ಪುನಃ ಮೊದಲಿನಂತೆಯೇ ಆಹಾರ, ಮೊದಲಿನಂತೆಯೇ ಕೆಲಸ.

ಭಾನುಸಿಂಗ್ ಎಂಬ ವೃದ್ಧ ಕ್ರಾಂತಿಕಾರಿ ಕೈದಿಯನ್ನು ಬಾರಿಯು ಅಮಾನುಷವಾಗಿ ಹೊಡೆದ ಪ್ರಯುಕ್ತ ನಾವೆಲ್ಲರೂ ನಾಲ್ಕನೆಯ ಬಾರಿ ಮುಷ್ಕರ ಹೂಡಬೇಕಾಗಿ ಬಂತು. ಆಗ ಉಳಿದವರನ್ನು ನನ್ನ ವಿರುದ್ಧ ತಿರುಗಿಸಲು ಬಾರಿಯು ನಾನಾ ತಂತ್ರಗಳನ್ನು ಹೂಡಿದರೂ ಫಲಿಸಲಿಲ್ಲ. ನಮ್ಮ ಕೆಲವು ಬೇಡಿಕೆಗಳಿಗೆ ಅಧಿಕಾರಿಗಳು ತಲೆಬಾಗಲೇಬೇಕಾಯಿತು. ಆದರೆ ಅದರಿಂದ ವೈಯಕ್ತಿಕವಾಗಿ ನನಗೆ ಏನೂ ಅನುಕೂಲ



(ಎಡ) ಈ 'ಕಂಬಿ ಬೇಡಿ ಅವಸ್ಥೆಯಲ್ಲಿ ಕಾಲನ್ನು ಕಿಂಚಿತ್ತೂ ಮಡಿಸುವಂತಿಲ್ಲ. ತಿಂಗಳಗಟ್ಟಲೆ ಇದೇ ಅವಸ್ಥೆ! (ಮೇಲೆ) ಹಿಂಭಾಗದ ಕೈಬೇಡಿಗಳು (ಕೆಳಗೆ) ಅಡ್ಡಕಂಬಿ ಬೇಡಿ ; ವಾರಗಟ್ಟಲೆ ಓಡಾಟ, ಕೆಲಸ, ನಿದ್ದೆ ಎಲ್ಲಾ ಈ ಸ್ಥಿತಿಯಲ್ಲೇ!

ವಾಗಲಿಲ್ಲ. ಕೆಲಸ ಹೆಚ್ಚಿತು ಕಾಯಿಲೆ ಬಿಗಡಾಯಿಸಿತು ಆಸ್ಪತ್ರೆಗೆ ಸಾಗಿಸಲ್ಪಟ್ಟೆ. ಅಲ್ಲಿ ಜ್ವರ ಇಳಿಸಲು ಒಂದೇ ಸಮನೆ ಕ್ವಿನೈನ್ ಕೊಡತೊಡಗಿದರು. ಆದರಿಂದ ಆಮಶಂಕೆ ಹೆಚ್ಚಿತು. ಮಲೇರಿಯ, ರಕ್ತಭೇದಿ ಮತ್ತು ಕ್ಷಯ ಇವು ಮೂರಕ್ಕೂ ಪೋರ್ಟ್ ಬ್ಲೇರ್ ಪ್ರಸಿದ್ಧಿ! ಮೊದಲೆರಡನ್ನು ಪಡೆದಾಗಿತ್ತು; ಮೂರನೆಯದಕ್ಕಾಗಿ ನಾನು ಸಿದ್ಧತೆ ಮಾಡಿಕೊಳ್ಳುತ್ತಿದ್ದೆ. ಅನೇಕ ಬಾರಿ ಸಾವು ಹತ್ತಿರ ಬಂದಂತಾಗಿ, ಅದಕ್ಕೊಂದು ಸ್ವಾಗತಗೀತೆಯನ್ನೂ ನಾನು ರಚಿಸಿ ಹಾಡಿಕೊಳ್ಳತೊಡಗಿದೆ!

**ಯೇ ಮೃತ್ಯೋ ! ಯೇ ತೂ ಯೇ ಯಾವಯಾಪ್ರತೀ**

**ನಿಘಾಲಾಚಿ ಅಸಶಿಲ ಜರಿ ಯೇ ತರೀ ಸುಖೇ**

............

*(ಬಾ ಮೃತ್ಯು, ಬಂದುಬಿಡು! ಬರಲು ನೀನು ಮನಸ್ಸು ಮಾಡಿದ್ದರೆ, ನಿನಗಿದೋ ಸುಸ್ವಾಗತ!)*

ಆದರೆ ಮೃತ್ಯು ಹಿಂದೆಗೆಯಿತು! ನಿತ್ಯವೂ ಹತ್ತಿರ ಬಂದು ನರ್ತಿಸುತ್ತಿತ್ತು; ಭೀಷಣ ಭಂಗಿಗಳನ್ನು ಪ್ರದರ್ಶಿಸುತ್ತಿತ್ತು. ಆದರೆ, ಪ್ರಾರ್ಥಿಸಿಕೊಂಡರೂ ಪ್ರಾಣಕ್ಕೆ ಕೈಹಾಕಲಿಲ್ಲ.

ಅಂದಮಾನಿನ ರಾಜಕೀಯ ಕೈದಿಗಳಿಗೆ ಐದು ವರ್ಷಕ್ಕೊಮ್ಮೆ ಮನೆ ಮಂದಿಯನ್ನು ಕಾಣಲು ಅವಕಾಶವುಂಟು. ಆದರೆ ಅಂಥ ಅವಕಾಶ ನನಗೆ ದೊರೆತುದು ಎಂಟು ವರ್ಷಗಳ ನಂತರ. ನನ್ನ ತಮ್ಮ ಬಾಳಾ ಆ ಭೇಟಿಗಾಗಿ ಮಾಡದಿದ್ದ ಪ್ರಯತ್ನವೇ ಇಲ್ಲ. ಅನುಮತಿಗಾಗಿ ಮುಂಬೈ ಸರಕಾರವನ್ನು ಕೇಳಿದರೆ, ಪೋರ್ಟ್ ಬ್ಲೇರ್‌ಗೆ ಬರೆಯಿರಿ ಎನ್ನುತ್ತಿದ್ದರು. ಅಲ್ಲಿಗೆ ಬರೆದರೆ, ಭಾರತ ಸರಕಾರದ ಕಡೆಗೆ ಕೈತೋರಿಸುತ್ತಿದ್ದರು. ಭಾರತ ಸರಕಾರ ಪುನಃ ಮುಂಬೈ ಸರಕಾರದ ಹೆಸರು ಹೇಳುತ್ತಿತ್ತು! ಒಮ್ಮೆಯಂತೂ ಬಾಳನು ನನ್ನ ಹೆಂಡತಿಯೊಡನೆ ಕಲ್ಕತ್ತಾಕ್ಕೆ ಹೊರಟುಬಿಟ್ಟಿದ್ದ; ಅಷ್ಟರಲ್ಲೇ, ಅನುಮತಿ ಹಿಂತೆಗೆದುಕೊಳ್ಳಲಾಗಿದೆಯೆಂದು ತಂತಿ ಬಂತು! ಎಂಥ ನಿರಾಶೆಯ ಪರಮಾವಧಿ! ಕರಾಳ ವಿಧಿಯ ವಿಕಟ ಅಟ್ಟಹಾಸ!

ಕೊನೆಗೂ ಅನುಮತಿ ಸಿಕ್ಕಿತು. ಯಮುನಾ, ಬಾಳಾ ಮತ್ತು ಅವನ ಹೆಂಡತಿ ಶಾಂತಾ ಅಂದಮಾನಿನ 'ಸಿಲ್ವರ್ ಜೈಲಿ'ಗೆ ಬಂದರು. 1919ರ ಮೇ ತಿಂಗಳ ಉತ್ತರಾರ್ಧ. ನಮ್ಮ ಅಣ್ಣ ಬಾಬಾ, ನಾನು ಮತ್ತು ಬಾಳ ಒಂದೆಡೆ ಸೇರಿದೆವು; ಹೀಗೆ ಮೂವರೂ ಒಟ್ಟುಗೂಡಿದುದು, ನಾನು 1909ರಲ್ಲಿ ಮುಂಬೈ ಬಿಟ್ಟ ನಂತರ, ಇದೇ ಮೊದಲ ಸಲ. ಬಾಳ ಮತ್ತು ಶಾಂತಾ ; ನಾನು ಮತ್ತು ಯಮುನಾ ; ಬಾಬಾ ಮತ್ತು... ಮತ್ತು ?

'ಅರೆ, ಬಾಳಾ! ಅತ್ತಿಗೆ ಎಲ್ಲೋ? ಯೇಸೂವಹಿನಿ ಏಕೆ ಬರಲಿಲ್ಲ? ಮೈಯಲ್ಲಿ ಹುಷಾರಿಲ್ಲವೆ?'

ಬಾಳನ ಕಣ್ಣಲ್ಲಿ ನೀರು ಉಕ್ಕಿತು. ಬಾಬಾ ಶೂನ್ಯದೃಷ್ಟಿಯಿಂದ ಎತ್ತಲೋ ನೋಡತೊಡಗಿದ. ಯಮುನಾ ತಲೆತಗ್ಗಿಸಿ, ಸೆರಗಿನಿಂದ ಕಣ್ಣು ಒರೆಸಿಕೊಳ್ಳುತ್ತಾ ಹೇಳಿದಳು: 'ಇಲ್ಲಿಗೆ ಕಾಗದ ಬರೆದಿದ್ದೆವು....' ಅವಳ ಬಿಕ್ಕಳಿಕೆ ಹೆಚ್ಚಿ, ಶಬ್ದ ನಿಂತುಹೋಯಿತು.

ಬಾಳನೇ ನಡೆದ ಸಂಗತಿ ತಿಳಿಸಿದ. ದುಃಖದಿಂದ ಗಂಟಲು ಬಿಗಿದುಕೊಂಡಾಗ, ಶಾಂತಾ ಅವನ ಅರ್ಧ ವಾಕ್ಯಗಳನ್ನು ಪೂರೈಸಿದಳು: ಯೇಸೂವಹಿನಿ ಅಸಹ್ಯ ಯಾತನೆಗಳನ್ನು ಸಹಿಸಿದಳು; ಪೊಲೀಸರ ಕಾಟದಿಂದ ಆ ಅನಾಥೆ ಬೀದಿಯ ಪಾಲಾಗಿ ಬಿದ್ದಳು. ಅವಳು ಅಡಿಗೆ ಮಾಡಿಕೊಳ್ಳುತ್ತಿದ್ದ ಮಡಕೆ ಕುಡಿಕೆಗಳನ್ನೂ ಸರ್ವಶಕ್ತ ಬ್ರಿಟಿಷ್ ಸರಕಾರ ವಶಪಡಿಸಿಕೊಂಡಿತು; ಒಲೆ ಒಡೆದು ಹಾಕಿತು! ಆದರೂ ಅತ್ತಿಗೆಗೆ ಒಂದು ಆಸೆಯಿತ್ತು - ತನ್ನ ಪತಿ ಮುಕ್ತನಾಗಿ ಬರುತ್ತಾನೆಂದು ; ಕೊನೆಯ ಪಕ್ಷ ಸಾಯುವ ಮೊದಲು ಆತನ

ದರ್ಶನವಾದರೂ ಆಗುತ್ತದೆಂದು! ಅದಕ್ಕಾಗಿ ಜೀವ ಹಿಡಿದುಕೊಂಡಿದ್ದಳು - ಸುದೀರ್ಘವಾಗಿ ಹತ್ತು ವರ್ಷಗಳವರೆಗೆ. ಆದರೆ ಅಂದಮಾನಿನ ಪ್ರಯಾಣಕ್ಕೆ ನಾಲ್ಕಾರು ಬಾರಿ ಸರಕಾರ ಅನುಮತಿ ನಿರಾಕರಿಸಿದಾಗ ಅವಳ ಎದೆ ಬಿರಿಯಿತು ; ಕೊನೆಯಾಸೆಯ ಕುಡಿ ಸೀದುಹೋಗಿ, ಕೊನೆಯುಸಿರು ಎಳೆದಳು. ಅತ್ತಿಗೆ ಸತ್ತಳು ; ಸತ್ತ ಮರುದಿನವೇ ದಿಲ್ಲಿಯಿಂದ ಅವಳಿಗೆ ತಂತಿ ಬಂತು! ಏನೆಂದು? ಅವಳಿಗೆ ಅನುಮತಿ ಸಿಕ್ಕಿದೆಯೆಂದು! ಅಂದಮಾನಿಗೆ ಹೋಗಿ ಗಂಡನನ್ನು ನೋಡಬಹುದು, ಎಂದು!

ಸಂದರ್ಶನಕ್ಕೆ ನೀಡಿದ ಸಮಯ ಕೇವಲ ಒಂದೂವರೆ ಗಂಟೆ. ನಿಮಿಷಗಳು ಜಾರಿಹೋಗುತ್ತಿದ್ದವು. ಬಾಳ ಈಗ ವೈದ್ಯಕೀಯ ಪರೀಕ್ಷೆ ಮುಗಿಸಿ, 'ಡಾಕ್ಟರ್ ನಾರಾಯಣರಾವ್ ಸಾವರಕರ್' ಆಗಿದ್ದ. ಖಾಸಗಿಯಾಗಿ ವೃತ್ತಿಯನ್ನೂ ಆರಂಭಿಸಿದ್ದ. ಅವನ ಹೆಂಡತಿಯನ್ನು ನಾನು ಕಂಡುದು ಅದೇ ಮೊದಲು. ಒಂದೆರಡು ಹಾಸ್ಯದ ಚಟಾಕಿ ಹಾರಿಸಿದೆ. ಮಾತಿನ ವಿಷಯ ಬದಲಾಗಿ, ಎಲ್ಲರ ಮುಖದಲ್ಲೂ ಗೆಲುವು ಮೂಡಿತು. ಸ್ವಂತದ ಮನೋವೇದನೆ, ಕಷ್ಟನಷ್ಟಗಳನ್ನೆಲ್ಲ ಮರೆತು ನಗುನಗುತ್ತಾ ಮಾತನಾಡಿದೆವು. ಒಬ್ಬರಿಗಿಂತ ಒಬ್ಬರು, ಆನಂದವಾಗಿದ್ದೇವೆಂದು ತೋರಿಸಿಕೊಳ್ಳಲು ಪ್ರಯತ್ನಿಸಿದೆವು.

ಭೇಟಿಯ ಸ್ಥಳ ಜೈಲುಖಾನೆ. ಎದುರಿಗೆ ಜೈಲಿನ ಸೂಪರಿಂಟೆಂಡೆಂಟ್ ಹಾಜರಿದ್ದ. ನಾವು ಮೂವರೂ ಅಣ್ಣತಮ್ಮಂದಿರೂ ಲೋಕದ ತುಂಬ ಪ್ರಸಿದ್ಧರಾಗಿದ್ದೆವು - ಒಳಸಂಚುಗಾರರೆಂದು! ನಾವು ಮರಾಠಿ ಭಾಷೆಯಲ್ಲಿ ಮಾತನಾಡಿಕೊಂಡರೆ? ಏನಾದರೂ ಹೊಸ ಒಳಸಂಚು ನಡೆಸಿಬಿಟ್ಟರೆ? ಸರಕಾರಕ್ಕೆ ಭಯ! ಅದಕ್ಕಾಗಿ ಸಮೀಪದಲ್ಲೆ ಪರದೆಯ ಹಿಂದೆ ಮರಾಠಿ ತಿಳಿದಂತಹ ಒಬ್ಬ ಕಾವಲುಗಾರನನ್ನು ನಿಲ್ಲಿಸಲಾಗಿತ್ತು!

ಬಾಬಾ ಮಾತನಾಡಿದ್ದು ಬಹು ಕಡಿಮೆ. ಸಮಯವಾಯಿತು. ನಾವು ಅಗಲಿದೆವು. ಬಾಬಾ ಹಿಂದಕ್ಕೆ ತೆರಳುವಾಗಲೂ ಆಕಾಶದತ್ತ ನೋಡುತ್ತಲೇ ಹೆಜ್ಜೆಯಿಡುತ್ತಿದ್ದ. ಅವನಿಗೆ ಪುನರ್ಜನ್ಮದಲ್ಲಿ ನಂಬಿಕೆ ; ನಾವೆಲ್ಲರೂ ಸೇರಿದ ಜಾಗದಲ್ಲಿ ಅತ್ತಿಗೆಯ ಆತ್ಮ ಸುತ್ತುತ್ತಿದೆಯೆಂಬ ವಿಶ್ವಾಸ! ಬಾಳ ಮೊದಲೇ ಅತ್ತಿಗೆಯು ಸತ್ತ ಸುದ್ದಿ ಪತ್ರದಲ್ಲಿ ಬರೆದಿದ್ದ. ಆದರೆ ಬಾರಿ ಸಾಹೇಬನು ಆ ಪತ್ರವನ್ನು ನಮ್ಮಿಂದ ಮರೆಮಾಚಿದ್ದ. ಕೆಟ್ಟ ಸುದ್ದಿ ತಿಳಿಸಬಾರದೆಂಬ ಅನುಕಂಪದಿಂದ ಅಲ್ಲ; ಸುದ್ದಿ ತಡವಾಗಿ ತಿಳಿದ ನಂತರ ನಾವು ಅನುಭವಿಸಬಹುದಾದ ಮೂಕ ವೇದನೆಯನ್ನು ಕಂಡು ಆನಂದಿಸುವುದಕ್ಕಾಗಿ!

ನಾನು ದುಃಖಿಸಲಿಲ್ಲ. ಮನಸ್ಸಿನಲ್ಲೆ ಹೇಳಿಕೊಂಡೆ : 'ಮೊದಲಿನಿಂದ ನನ್ನ ಅತ್ತಿಗೆಯಾಗಿ, ತಾಯಿಯಾಗಿ, ಆಟದ ಗೆಳತಿಯಾಗಿ, ಕ್ರಾಂತಿಯ ಸಹಕಾರಿಯಾಗಿ - ಒಬ್ಬಳೇ ಎಲ್ಲವೂ ಆಗಿ ಇದ್ದವಳು ಯೇಸೂವಹಿನಿ! ನಿಜಕ್ಕೂ ಪತಿಯೊಡನೆ ಚಿತೆಯೇರುವ ಸತಿಯ ಮನೋಭಾವದಿಂದ ಅವಳು ಸತ್ತಳು! ಪ್ಹಾ! ಸ್ವದೇಶಕ್ಕಾಗಿಯೋ ಸ್ವಧರ್ಮಕ್ಕಾಗಿಯೋ ಪ್ರಾಣಾರ್ಪಣೆ ಮಾಡುವ ಹುತಾತ್ಮರಿಗೆ ಸರಿಸಮಾನವಾಗಿ ಇಂದಿನ ಈ ಹಿಂದು ಬಾಲೆಯರು - ಪುನಃ ತಮ್ಮನ್ನು ಎಂದೆಂದಿಗೂ ಸಂಧಿಸಲಾರದಂಥ ತಮ್ಮ ಪ್ರೇಮಿಗಳಿಗಾಗಿ ತಳಮಳಿಸುತ್ತಾ, ಬಿಕ್ಕಳಿಸುತ್ತಾ, ಕಾತರದಿಂದ ಎದುರು ನೋಡುತ್ತಾ - ಕೊನೆಯುಸಿರೆಳೆಯುತ್ತಾರೆ! ಮೂಕವಾಗಿ ನರಕ ಯಾತನೆಗಳನ್ನನುಭವಿಸುತ್ತಾ, ಅಜ್ಞಾತರಾಗಿದ್ದೂ ಸೇವೆ ಸಲ್ಲಿಸುತ್ತಾ, ಪ್ರತಿಫಲವಿಲ್ಲದಿದ್ದರೂ, ತ್ಯಾಗ ಮಾಡುತ್ತಾ, ಸ್ವದೇಶಕ್ಕಾಗಿ, ಸ್ವಧರ್ಮಕ್ಕಾಗಿ ಈ ಹಿಂದು ಬಾಲಕಿಯರು ಜೀವ ತೇಯುತ್ತಾರೆ, ಪ್ರಾಣಾರ್ಪಣೆ ಮಾಡುತ್ತಾರೆ!'

ಅತ್ತಿಗೆಯದು ವೀರಮರಣವೇ ಸರಿ; ಅವಳಿಗೆ ಸದ್ಗತಿ ನಿಶ್ಚಿತ! ನಾನು ಸಮಾಧಾನ ತಾಳಿಕೊಳ್ಳುತ್ತಾ, ನನ್ನ ಗೂಡು ಸೇರಿಕೊಂಡೆ. ಅಲ್ಲಿಂದ ಸಮುದ್ರದ ಏರಿಳಿತಗಳ ಕಡೆಗೆ ನೋಡುತ್ತಾ ಮೈಮರೆತೆ.

ನನ್ನ ಅಣ್ಣ ಬಾಬಾನಿಗೆ ಕ್ಷಯರೋಗ ಆರಂಭವಾಗಿತ್ತು. ಅವನಿಗೆ ಹೊಟ್ಟೆಯಲ್ಲಿ ನೋವು, ಆಮಶಂಕೆ, ಕೆಮ್ಮು, ನರಳಿಕೆ! ಕಪ್ಪು ಗೋಣಿ ಬಟ್ಟೆಯ ಕೋಟಿನಲ್ಲಿ ತೂರಾಡುತ್ತಾ, ಆಸ್ಪತ್ರೆಗೆ ಹೋಗುತ್ತಿದ್ದ. ಅಲ್ಲಿ ಗಂಟೆಗಟ್ಟಲೆ ಕಾದು ನಿಂತ ನಂತರ, ದುರಹಂಕಾರವೇ ಮೂರ್ತಿವೆತ್ತಂತೆ ಇದ್ದ ಭಾರತೀಯ ವೈದ್ಯನೊಬ್ಬನಿಂದ ಪರೀಕ್ಷೆಯ ಪ್ರಹಸನ! ರೋಗಕ್ಕೆ ಸಂಬಂಧವಿಲ್ಲದಿದ್ದರೂ ಆ ವೈದ್ಯ ಕೇಳುತ್ತಿದ್ದ ಹೊಲಸು ಪ್ರಶ್ನೆಗಳು! ಕೊನೆಗೆ 'ನಿನಗೇನು ಕೇಡು ? ಸರಿಯಾಗಿಯೇ ಇದ್ದೀಯೆ !' ಎಂಬ ವೈದ್ಯರ ಅಪಮಾನಕಾರಕ ತೀರ್ಪು. ಅದನ್ನು ಸಹಿಸಲಾರದೆ ಬಾಬಾ ಆಸ್ಪತ್ರೆಯ ಕಡೆ ತಲೆಹಾಕುವುದನ್ನೇ ನಿಲ್ಲಿಸಿದ. ಔಷಧವಿಲ್ಲ, ಉಪಚಾರವಿಲ್ಲ; ಅದೇ ಗೋಣಿಪಟ್ಟೆ, ಕೆಮ್ಮು, ನರಳಾಟ, ಆಮಶಂಕೆ, ಜ್ವರ, ಬಾಗಿದ ಬೆನ್ನು! ಅವನು ವರ್ಷಗಟ್ಟಲೆ ಈ ನವನರಕ ಅನುಭವಿಸಿದ.

ಮೊದಲ ಮಹಾಯುದ್ಧದಲ್ಲಿ ಇಂಗ್ಲೆಂಡಿಗೆ ವಿಜಯವಾಗಿತ್ತು. ಅದರ ಸಂಕೇತವಾಗಿ ಆ ವರ್ಷ 150 ಜನ ರಾಜಕೀಯ ಕೈದಿಗಳೂ, 500 ಜನ ಇತರ ಕೈದಿಗಳೂ ಬಿಡುಗಡೆ ಹೊಂದಿದರು. ಆದರೆ ಬಾಬಾನಿಗೆ ಬಿಡುಗಡೆಯ ಕ್ಷಣ ಬರಲಿಲ್ಲ! ಆದರೂ ಆ ಕರ್ಮಯೋಗಿ ಅಂಜಲಿಲ್ಲ; ಹತಾಶನಾಗಲಿಲ್ಲ; ಭರವಸೆ ಕಳೆದುಕೊಳ್ಳಲಿಲ್ಲ; ತತ್ವ ಬಿಟ್ಟುಕೊಡಲಿಲ್ಲ. ಇದಿಷ್ಟು ಅಂದಮಾನಿನ ಬಗ್ಗೆ ಆಯಿತು. ಆದರೆ ಮುಂದೆ ಭಾರತದಲ್ಲಿ ಜೈಲಿನಿಂದ ಜೈಲಿಗೆ ವರ್ಗಾವಣೆಯಾದಾಗ ಇನ್ನೂ ಭಯಂಕರವಾದ ವಿಪತ್ತುಗಳನ್ನು ಅವನು ಎದುರಿಸಬೇಕಾಗಿ ಬಂತು. ಅವುಗಳಿಗೆ ಹೋಲಿಸಿದರೆ, ಅಂದಮಾನಿನ ಶಿಕ್ಷೆ ಕೇವಲ ಸಪ್ಪೆ. ಅವೆಲ್ಲದರ ಅನುಭವ ನೀಡುವ ಸಲುವಾಗಿಯೋ ಎಂಬಂತೆ, ವಿಧಿ ಅವನನ್ನು ಉಳಿಸಿಕೊಂಡಿತ್ತು!

ನಾನು ಬಂದು ಸೇರಿದ ಕಾಲಕ್ಕೂ ಇಂದಿಗೂ ಅಂದಮಾನಿನ ರಾಜಕೀಯ ಕೈದಿಗಳ ಸ್ಥಿತಿಗತಿಗಳು ಉತ್ತಮಗೊಂಡಿದ್ದವು. ಒಬ್ಬರನ್ನು ಒಬ್ಬರು ನೋಡುವುದೇ ಮಹಾಪರಾಧವಾಗಿದ್ದ ಆ ಕಾಲವೆಲ್ಲಿ, ಪ್ರತಿನಿತ್ಯ ಸಂಜೆ ಒಟ್ಟುಗೂಡಿ ಸಭೆ ನಡೆಸುತ್ತಿದ್ದ ಈ ಕಾಲವೆಲ್ಲಿ! ಅಂದಮಾನು ಇದೀಗ ಕೈದಿಗಳ ಪಾಲಿಗೆ 'ನಲಂದ ವಿಶ್ವವಿದ್ಯಾಲಯ' ಆಗಿತ್ತು. ದಿನವೂ ರಾತ್ರಿ ಊಟದ ನಂತರ ರಾಜಕಾರಣ ಹಾಗೂ ಇತಿಹಾಸ ಕುರಿತು ನಾನು ತಿಳಿಸುತ್ತಿದ್ದೆ. ಭಾನುವಾರದ ಸಭೆಗಳಲ್ಲೂ ಭಾಷಣ ಮಾಡಲು ತೊಡಗಿದೆ. ರಾಷ್ಟ್ರೀಯ ಶಿಕ್ಷಣವು ವಿಶೇಷ ಉತ್ಸಾಹ ಹಾಗೂ ತೀವ್ರಗತಿಯಿಂದ ಸಾಗಿತು. ಗದರ್ ಕ್ರಾಂತಿಕಾರಿಗಳು ರಾಷ್ಟ್ರಭಕ್ತಿಯ ಗೀತೆಗಳನ್ನು ಹೇಳಿಕೊಡುತ್ತಿದ್ದರು. ಅದನ್ನು ಕೇಳಲು ಉಳಿದ ಕೈದಿಗಳು, ಕಾವಲುಗಾರರು, ಜಮಾದಾರರು, ಅಧಿಕಾರಿಗಳು ಎಲ್ಲರೂ ತಮ್ಮ ತಮ್ಮ ಜೈಲುಖಾನೆಗಳ ಮುಂದೆ ಬಂದು ನಿಲ್ಲುತ್ತಿದ್ದರು.

ಸಂಜೆ ಕೆಲಸ ಮುಗಿಯುತ್ತಲೇ ಕ್ರಾಂತಿಕಾರಿಗಳು ಮರದ ನೆರಳಿನಲ್ಲಿ ಕುಸ್ತಿಯ ಅಭ್ಯಾಸವನ್ನೂ ಪ್ರಾರಂಭಿಸಿದರು! ಹೆಚ್ಚಿನ ಅನುಭವವಿದ್ದ ಉಸ್ತಾದರು ಹೊಸಬರಿಗೆ ಶಿಕ್ಷಣ ಕೊಡುತ್ತಿದ್ದರು. ಭಾರತದ ಹಳ್ಳಿಗಾಡುಗಳಿಂದ ಬಂದಿದ್ದ ಅನೇಕ ಕ್ರಾಂತಿಕಾರಿ ಯುವಕರಿಗೆ ಗುಂಡಿನ ಗಾಯಗಳಾಗಿದ್ದವು. ಅದರ ಕಲೆಗಳ ಮೇಲೆ ಕೈ ಆಡಿಸುತ್ತಾ ನಾನು ಅನ್ನುತ್ತಿದ್ದೆ: 'ನೋಡಿ, ನಮ್ಮ ಈ ಯೋಧರನ್ನು; ಅವರು ಧರಿಸಿರುವ ಈ ಪ್ರಶಸ್ತಿಗಳನ್ನು! ಚಿನ್ನದ ಪದಕಗಳಿಗಿಂತಲೂ ಇವು ಅಮೂಲ್ಯವಾಗಿವೆ. ಪರಿಶುದ್ಧ ಪ್ರಾಮಾಣಿಕತೆಯಿಂದ ಪಡೆದಂಥವು ಇವು; ಎಂದೆಂದಿಗೂ ಉಳಿಯುವಂತಹವು!'

ಇಷ್ಟೆಲ್ಲ ಬದಲಾವಣೆಗಳಾಗುತ್ತಿದ್ದಾಗ ಬಾರಿ ಸಾಹೇಬ ಎಲ್ಲಿದ್ದ ? ಅಂದಮಾನಿನ ಆ ದೈತ್ಯದೇವತೆ, ಕೈದಿಗಳ ಆ ಯಮಸ್ವರೂಪಿ, ಕ್ರೌರ್ಯದ ಅಪರಾವತಾರ, ಬೆಳಗಿನಿಂದ ಬೈಗಿನವರೆಗೂ ಅಬ್ಬರಿಸುತ್ತಾ, ದೂಷಿಸುತ್ತಾ ಮೆರೆಯುತ್ತಿದ್ದ ಆ ದರ್ಪೋನ್ಮತ್ತ ಬಾರಿ ಎಲ್ಲಿ ಹೋಗಿದ್ದ ? ಅಲ್ಲಿಯೇ ತನ್ನ ಕೊಠಡಿಯಲ್ಲಿ

ಕುಳಿತಿದ್ದ. ಕಲ್ಲಿನಂತೆ ಮೂಕನಾಗಿ, ಮಂಕಾಗಿಹೋಗಿದ್ದ. ನನ್ನ ಹತ್ತು ವರ್ಷಗಳ ಹೋರಾಟ, ಚಳವಳಿ ಹಾಗೂ ರಾಜಕೀಯ ಕೈದಿಗಳ ಮುಷ್ಕರದ ಪರಿಣಾಮವಾಗಿ ಹಣ್ಣಾಗಿಹೋಗಿದ್ದ. ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ತನ್ನ ಭೀಭತ್ಸ ವರ್ಣನೆಗಳನ್ನೂ, ಅಕೃತ್ಯಗಳ ಖಂಡನೆಗಳನ್ನೂ ಕಂಡು ತನ್ನ ಬಗ್ಗೆಯೇ ಉದಾಸೀನತೆ ತಾಳಿದ್ದ. ಕೆಳದರ್ಜೆ ಅಧಿಕಾರಿಗಳು ಏನಾದರೂ ದೂರು ತೆಗೆದುಕೊಂಡು ಹೋದರೆ, 'ಅವರು ನನ್ನ ಕಣ್ಣೆದುರಿಗೆ ಸಭೆ ನಡೆಸದಿದ್ದರೆ ಸಾಕು, ಏನಾದರೂ ಮಾಡಿಕೊಳ್ಳಲಿ. ಹೆಚ್ಚು ಕೆಲಸ ಅವರಿಗೆ ಕೊಡಬೇಡಿ ; ಗಲಭೆಗೆ ಅವಕಾಶವಾಗುವಂತೆ ಮಾಡಬೇಡಿ. ಆ ಪಿಶಾಚಿಗಳು ಎಲ್ಲಾದರೂ ಹಾಳಾಗಿ ಹೋಗಲಿ. ನನ್ನ ತಂಟೆಗೆ ಬರದಿದ್ದರೆ ಸಾಕು. ಅವರ ವಿಷಯ ನೀವೇ ನೋಡಿಕೊಳ್ಳಿ, ನನ್ನ ತನಕ ಬರಬೇಡಿ' ಎನ್ನುತ್ತಿದ್ದ !

ಬಾರಿ ಸಾಹೇಬನ ನಿವೃತ್ತಿಯ ಸಮಯ ಸಮೀಪಿಸಿತು. ಆಗ ಅವನು ಸಮಾಧಾನದಿಂದ ನನ್ನೊಡನೆ ಬಂದು ಹೇಳುತ್ತಿದ್ದ : 'ಮಿಸ್ಟರ್ ಸಾವರ್‌ಕರ್, ನನ್ನ ಇಪ್ಪತ್ತು ವರ್ಷಗಳ ಕರಿನೀರಿನ ಶಿಕ್ಷೆ ಮುಗಿದಿದೆ ; ನಾನೀಗ ವಾಪಸಾಗುತ್ತಿದ್ದೇನೆ. ಇಲ್ಲಿರುವಷ್ಟು ದಿನವೂ ನಿನ್ನಂತೆಯೇ ನಾನೂ ಒಂದು ರೀತಿಯಲ್ಲಿ ಬಂದಿಯೇ ಆಗಿದ್ದೆ !'

ಬಾರಿಗೆ ಬೆದರಿಕೆ ಹಾಕಲು ಕೆಲವು ರಾಜಕೀಯ ಕೈದಿಗಳು ಒಂದು ಸುದ್ದಿ ಹರಡಿದರು : 'ಭಾರತದ ಕ್ರಾಂತಿಕಾರಿಗಳು ಬಾರಿಯನ್ನು ಜೀವಸಹಿತ ಬಿಡುವುದಿಲ್ಲ' ಎಂದು ! ಅದರಿಂದ ಅವನ ಭಯ ಹಾಗೂ ತಾನೊಬ್ಬ ಮಹತ್ವದ ವ್ಯಕ್ತಿಯೆಂಬ ದಂಭ ಎರಡೂ ಏರಿತು. ಅದೇ ದಿನ ಸಾಯಂಕಾಲ ನನ್ನ ಬಳಿ ಬಂದು ಕೇಳಿದ : 'ಸಾವರಕರ್, ನಾನು ಭಾರತದಲ್ಲಿ ಕಾಲಿಡುತ್ತಲೇ ನಿನ್ನ ಸ್ನೇಹಿತರು ನನ್ನ ಮೇಲೆ ಬಾಂಬ್ ಹಾಕುತ್ತಾರಂತೆ, ನಿಜವೇ ?' ನಾನು ಮಾರ್ಮಿಕ ಸ್ವರದಲ್ಲಿ ಉತ್ತರಿಸಿದೆ : 'ನಾನಂತೂ ನಂಬುವುದಿಲ್ಲ. ಕಾಗೆ ಗುಬ್ಬಿಗಳನ್ನು ಕೊಲ್ಲಲು ಅವರು ಬಾಂಬುಗಳನ್ನು ವ್ಯರ್ಥ ಮಾಡುವುದಿಲ್ಲ. ಆ ಕ್ರಾಂತಿಕಾರಿಗಳು ಹುಲಿಗಳನ್ನು ಬಲಿ ತೆಗೆದುಕೊಳ್ಳುತ್ತಾರೆಯೇ ಹೊರತು, ಬಡಜೀವಿಗಳನ್ನು ಕೊಲ್ಲುವಷ್ಟು ಮೂರ್ಖರಲ್ಲ!'

ಕೊನೆಗಾಲದಲ್ಲಿ, ಸಹಸ್ರಾರು ಕೈದಿಗಳ ಶಾಪದಿಂದ ಬಾರಿ ರೋಗ ಪೀಡಿತನಾದ. ಅಂದಮಾನಿನಿಂದ ಹೊರಡುವಾಗ ಅವನನ್ನು ಇಬ್ಬರು ಹೊತ್ತುಕೊಂಡು ಹೋಗಿ ಹಡಗಿನಲ್ಲಿ ಮಲಗಿಸಬೇಕಾಯಿತು. ಬಹಳ ನರಳಿಕೆ ಅನುಭವಿಸಿ ಭಾರತದಲ್ಲಿ ಅವನು ಸತ್ತುಹೋದ. ಬಾರಿಯ ಹೆಂಡತಿ ಮತ್ತು ಮಗಳು ಒಳ್ಳೆಯ ಸ್ವಭಾವದವರು. ಅವರು ವರ್ಷಕ್ಕೊಮ್ಮೆ ಕ್ರಿಸ್‌ಮಸ್ ಹಬ್ಬದ ದಿನ ಬಾರಿಯು ಕೆಟ್ಟ ಮಾತುಗಳನ್ನಾಡದಂತೆ ತಡೆಹಾಕುತ್ತಿದ್ದರು. ಬಾರಿಯ ಹೆಂಡತಿಗೆ ಒಂದು ಕಾಲು ಕುಂಟು. ಒಬ್ಬಳೇ ಮಗಳಾದ ಕ್ಯಾಥೆಲಿನ್ ಬುದ್ಧಿವಂತೆ; ರಂಗೂನಿನಲ್ಲಿ ಮೆಟ್ರಿಕ್ ಮುಗಿಸಿದ ನಂತರ ಶಿಕ್ಷಕಿಯ ಕೆಲಸಕ್ಕೆ ತರಬೇತಿ ಪಡೆಯುತ್ತಿದ್ದಳು. ರಜೆಯಲ್ಲಿ ಬಂದಾಗಲೆಲ್ಲ ನನ್ನ ಭೇಟಿಯಾಗದೆ ಹೋಗುತ್ತಿರಲಿಲ್ಲ. ತಮ್ಮ ಮನೆಯಲ್ಲಿ ಬೆಳೆದ ಹಣ್ಣುಗಳನ್ನೂ ತಂದುಕೊಡುತ್ತಿದ್ದಳು. ಕೊನೆಕೊನೆಗೆ ಬಾರಿಯ ಅವಸ್ಥೆ ಕೇಳಿ ನಿಜಕ್ಕೂ ನನಗೆ ಮರುಕವಾಗುತ್ತಿತ್ತು.

ಅನಂತರ 'ಎರಡನೆ ಬಾರಿ' ಎಂದು ಹೆಸರಾಗಿದ್ದ ಜಮಾದಾರ ಮಿರ್ಜಾಖಾನನ ಸರದಿ! ಯಾವುದೋ ಕಾಯಿಲೆಯಿಂದ ಅವನಿಗೆ ಅಸಾಧ್ಯ ಕೈನೋವು ಬರುತ್ತಿತ್ತು. ನಾನು ನನ್ನ 'ಮಾಂತ್ರಿಕ ಶಕ್ತಿ' ಯಿಂದ ಬಾರಿಗೂ ತನಗೂ ಕೆಟ್ಟದು ಮಾಡಿದ್ದೇನೆಂದು ಖಾನನ ನಂಬಿಕೆ ! 'ಸಾವರಕರ್ ಬಾಬು ಕೃಪೆ ಮಾಡಿದರೆ ನನ್ನ ಆರೋಗ್ಯ ಸರಿಹೋಗುತ್ತದೆ. ದಯವಿಟ್ಟು ಅವರನ್ನು ನನ್ನ ಕೈ ಸರಿಮಾಡುವಂತೆ ಪ್ರಾರ್ಥಿಸಿಕೊಳ್ಳಿ. ಅವರು ನನಗೆ

ಅಷ್ಟು ಕೃಪೆ ತೋರಿದರೆ ಸಾಕು' ಎಂದು ಎಲ್ಲರೊಡನೆ ಹೇಳುತ್ತಿದ್ದ! ನನಗೆ ಯಕ್ಷಿಣಿ ವಿದ್ಯೆಯಲ್ಲಿ ನಂಬಿಕೆ ಇಲ್ಲವೆಂದರೂ ಅವನು ನಂಬಲಿಲ್ಲ. ಕೊನೆಗೆ ಅವನ ಸಮಾಧಾನಕ್ಕಾಗಿ, 'ಆಗಲಿ, ಅವನೇ ಬಂದರೆ ಗುಣಪಡಿಸುತ್ತೇನೆ' ಎಂದೆ. ಹಿಂದು ಕೈದಿಗಳನ್ನು ಕ್ರೂರ ವ್ಯಾಘ್ರದಂತೆ ಹೆದರಿಸಿ ಹಿಂಸಿಸುತ್ತಿದ್ದ ಖಾನ ಸಾಹೇಬನು ಸಾಧು ಕುರಿಮರಿಯಂತೆ ಬಂದ 'ನಿನ್ನ ಬಗ್ಗೆ ನನಗೆ ವೈರವಿಲ್ಲ. ನಿನಗೆ ನನ್ನ ಅದ್ಭುತ ಶಕ್ತಿಯಲ್ಲಿ ಅಚಲವಾದ ನಂಬಿಕೆ ಇದ್ದಲ್ಲಿ, ದೇವರು ನಿನ್ನನ್ನು ಸರಿಪಡಿಸಲಿ' ಎಂದೆ. ಕೆಲವು ದಿನಗಳ ನಂತರ ಅವನ ನೋವು ಮಾಯವಾಯಿತು - ಅವನು ಹಚ್ಚುತ್ತಿದ್ದ ಔಷಧಿಗಳ ಪ್ರಭಾವದಿಂದ ! ಆದರೂ ಖಾನನು, 'ಇದೆಲ್ಲ ಆ ಏಳನೇ ವತಾರದ ಬಡಾಬಾಬುವಿನ ಪ್ರಭಾವ' ಎನ್ನುತ್ತಿದ್ದ! ಹಿಂದುಗಳನ್ನು ಪೀಡಿಸುವುದರಲ್ಲಿ ಆನಂದ ಕಾಣುತ್ತಿದ್ದ ಪಠಾಣ, ಬಲೂಚಿ, ಸಿಂಧಿ, ಮುಸಲ್ಮಾನ ಪಹರೆಕಾರರೆಲ್ಲ ಗೋಳಾಡತೊಡಗಿದರು: 'ಅರೇ, ಏನು ಹೇಳೋಣ, ಈಗೆಲ್ಲ ಅಂದಮಾನಿನಲ್ಲಿ ಹಿಂದು ರಾಜ್ಯ ಬಂದುಬಿಟ್ಟಿದೆ!'

1920ರ ವೇಳೆಗೆ ರಾಜಕೀಯ ಕೈದಿಗಳನೇಕರಿಗೆ ದಯಾಭಿಕ್ಷೆ ಸಿಕ್ಕಿತು. ಅವರಲ್ಲನೇಕರು ಅಂದಮಾನಿನ ನಮ್ಮ 'ನಲಂದ ವಿಹಾರ' ದಿಂದ ಹೊರಬಂದ ಪದವೀಧರರು ! ಭಾರತಕ್ಕೆ ಹಡಗು ಹತ್ತುವಾಗ ದೇಶಭಕ್ತಿ ಗೀತೆಗಳನ್ನು ಉಚ್ಚ ಸ್ವರದಲ್ಲಿ ಹಾಡತೊಡಗಿದರು ಅದನ್ನು ಕಂಡು ಕೇಳಿದ ಚೀಫ್ ಕಮಿಶನರ್ ತನ್ನ ವರದಿಯಲ್ಲಿ ಹೀಗೆ ಬರೆದನಂತೆ : 'ಈ ದೆವ್ವಗಳು ಪುನಃ ಕರಿನೀರಿನ ಶಿಕ್ಷೆ ಪಡೆಯಲು ಅಂದಮಾನಿಗೆ ಬರುವುದು ನಿಶ್ಚಿತ!' ಆ ಸಮಯದಲ್ಲಿ ಬಿಡುಗಡೆ ಹೊಂದಿದವರಲ್ಲಿ ಭಾಯಿ ಪರಮಾನಂದರೂ ಒಬ್ಬರು. ಹೊರಡುವ ಮೊದಲು ಅವರು ನನ್ನ ಬಳಿ ಬಂದು ಭಾವಪರವಶರಾಗಿ ಹೇಳಿದರು : 'ಸಾವರಕರ್, ಮೊದಲು ನಿಮ್ಮ ಬಿಡುಗಡೆ ಆಗಬೇಕಾಗಿತ್ತು. ಈಗ ನೀವಿಲ್ಲದೆ ಒಬ್ಬನೇ ಹೋಗಲು ಮನಸ್ಸು ಹಿಂದೆಗೆ ಯುತ್ತದೆ.' ಆ ಮಾತು ಹೇಳುವಾಗ ಅವರ ಕಣ್ಣುಗಳಿಂದ ನೀರು ಸುರಿಯುತ್ತಿತ್ತು.

ಅಂದಮಾನಿಗೆ ಯಾವುದೇ ಸುದ್ದಿ ಅಥವಾ ಸರಕಾರಿ ಆಜ್ಞೆ ಬರಲಿ, ಅಧಿಕಾರಿಗಳಿಗೆ ತಿಳಿಯುವುದಕ್ಕೆ ಮೊದಲೇ ಅದರ ಪ್ರತಿ ನನ್ನ ಕೈಸೇರುತ್ತಿತ್ತು. ನಮ್ಮ 'ರಹಸ್ಯ ಅಂಚೆ ವ್ಯವಸ್ಥೆ' ಅಷ್ಟು ಕಟ್ಟುನಿಟ್ಟಾಗಿತ್ತು ! ಒಂದು ದಿನ ಅರ್ಧರಾತ್ರಿಯಲ್ಲಿ ಲೋಕಮಾನ್ಯ ತಿಲಕರು ನಿಧನರಾದ ವಾರ್ತೆ ತಿಳಿದುಬಂತು. ಬೆಳಗಾಗುವು ದರೊಳಗೆ ಸುದ್ದಿ ಇಡೀ ಜೈಲಿಗೆ ಮಾತ್ರವಲ್ಲ, ಅಂದಮಾನಿನ ದ್ವೀಪಸಮೂಹಕ್ಕೆಲ್ಲ ತಲುಪಿತು - ರಹಸ್ಯವಾಗಿ. ತಮ್ಮ ಶಿಕ್ಷೆಯ ಅವಧಿ ಕಳೆದ ನಂತರ ದ್ವೀಪದಲ್ಲಿ ನೆಲೆಸಲು ಅನುಮತಿ ಪಡೆದಂಥ ಸಹಸ್ರಾರು ಕೈದಿಗಳು ಅಲ್ಲಲ್ಲಿ ವಸತಿ ಹೂಡಿ, ಸಂಸಾರ ಸಾಗಿಸುತ್ತಿದ್ದರು. ಅವರು ಕೆಲವು ನಿಯಮ ನಿಬಂಧನೆಗಳಿಗೆ ಒಳಪಟ್ಟು ನಡೆದುಕೊಳ್ಳಬೇಕಾಗಿತ್ತು. ಅಂಥವರ ನಡುವೆಯೂ ನಾವು ಗುಪ್ತ ಸಂಘಟನೆ ನಿರ್ಮಿಸಿ, ಸಂಪರ್ಕ ಸಾಧಿಸಿಕೊಂಡಿದ್ದೆವು. ಆದರಿಂದಾಗಿ ಒಂದೆರಡು ಗಂಟೆಗಳ ಅವಧಿಯಲ್ಲಿ ದ್ವೀಪದ ಒಂದು ತುದಿಯಿಂದ ಮತ್ತೊಂದು ತುದಿಗೆ ಸೂಚನೆ ತಲುಪಿಸಬಹುದಾಗಿತ್ತು. ಮರುದಿನ ಪ್ರತಿಯೊಬ್ಬರೂ ದುಃಖಸೂಚಕವಾಗಿ ನಿರಶನ ಆಚರಿಸಿದೆವು. ಒಬ್ಬಿಬ್ಬರನ್ನು ಬಿಟ್ಟರೆ, ಉಳಿದ ಅಧಿಕಾರಿಗಳಿಗೆಲ್ಲ ತಿಲಕರ ಸಾವಿನ ಸುದ್ದಿ ತಿಳಿದದ್ದು ಒಂದು ದಿನದ ನಂತರವೇ. ಏಳೆಂಟು ವರ್ಷಗಳ ಹಿಂದೆ 'ತಿಲಕ್' ಎಂದರೆ ವಸ್ತುವೋ ಪ್ರಾಣಿಯೋ ಎಂದು ಸಂದೇಹಪಡುತ್ತಿದ್ದ ನಿರಕ್ಷರಕುಕ್ಷಿಗಳಿಗೂ ಇಂದು ಅಂದಮಾನಿನಲ್ಲಿ ಆ ಮಹಾಪುರುಷರ ವ್ಯಕ್ತಿತ್ವದ ಶ್ರೇಷ್ಠತೆಯ ಅರಿವಾಗಿತ್ತು; ಅವರ ಬಗ್ಗೆ ಪೂಜ್ಯ ಭಾವನೆ ಬೆಳೆದಿತ್ತು. ನಮ್ಮ 'ನಲಂದ ವಿಹಾರ' ದ ಶಿಕ್ಷಣದ ಫಲ ಅದು !

ಜೈಲಿನಲ್ಲಿ ನಾವು ಸಹಭೋಜನ, ದಸರಾ - ದೀಪಾವಳಿ ಹಬ್ಬಗಳ ಆಚರಣೆ ಸಹ ಆರಂಭಿಸಿದೆವು.

ಗುರು ಗೋವಿಂದ ಸಿಂಹ ಜಯಂತಿಯ ಸಂದರ್ಭದಲ್ಲಿ ನಾನು ಜೈಲಿನ ಇತರ ವಠಾರಗಳಿಗೂ ಹೋಗಿ ಅಲ್ಲಿನ ಕೈದಿಗಳನ್ನು ನೇರಿಸಿ ಭಾಷಣ ಮಾಡಿದೆ. ಕೊನೆಯಲ್ಲಿ 'ಖಡಾ ಪ್ರಸಾದ' ಹಂಚಲಾಯಿತು. ಅಂದು ದಿನವಿಡೀ ಕಾವಲುಗಾರರು ಮತ್ತು ಜೈಲಿನ ಆಡಳಿತ ಸಿಬ್ಬಂದಿಯವರು ನಮ್ಮ ಪರವಾಗಿ ಕೆಲಸ ಮಾಡಿದರು; ಅರ್ಥಾತ್, ಹಿರಿಯ ಅಧಿಕಾರಿಗಳು ಬಂದು ನಮ್ಮ ಕಾರ್ಯಕ್ರಮಕ್ಕೆ ಧಕ್ಕೆ ತಾರದಂತೆ ಹಾಗೂ ನಮಗೆ ಮುನ್ನೆಚ್ಚರಿಕೆ ನೀಡುವ ಸಲುವಾಗಿ ಕಾವಲು ನಿಂತಿದ್ದರು!

ನಾನು ಅಂದಮಾನಿಗೆ ಹೋದಾಗ 'ನಮಸ್ಕಾರ' ಅಥವಾ 'ರಾಮ ರಾಮ್' ಹೇಳುವುದು ನಿಷಿದ್ಧವಾಗಿತ್ತು. ಕೈದಿಗಳೆಲ್ಲರೂ ಪರಸ್ಪರ ಭೇಟಿಯಾದಾಗ ಅಥವಾ ಪಹರೆಕಾರರು ಸಿಕ್ಕಿದಾಗ 'ಸಲಾಂ' ಮಾಡುತ್ತಿದ್ದರು. ಈ ಪದ್ಧತಿಯನ್ನು ಬದಲಿಸುವ ಚಳವಳಿಯೂ ಯಶಸ್ವಿಯಾಯಿತು. ಯಾರೇ ಸಿಕ್ಕಲಿ, ಹಿಂದು ಕೈದಿಗಳೆಲ್ಲರ ಬಾಯಲ್ಲೂ 'ರಾಮ ರಾಮ್', 'ನಮಸ್ಕಾರ' ಅಥವಾ 'ಜಯ್ ಭಾರತ್' ಕೇಳಿಬರತೊಡಗಿತು.

ನಮ್ಮ ತಮ್ಮ ಬಾಳ ಒಂದು ವರ್ಷದ ನಂತರ ಪುನಃ ಸೋದರರ ಭೇಟಿಗಾಗಿ ಅಂದಮಾನಿಗೆ ಬಂದ. ಮೂರು ಜನರೂ ಒಟ್ಟುಗೂಡಿದೆವು. ಆಗ ಬಾಬಾ ಮತ್ತು ನಾನು ಅನಾರೋಗ್ಯದಿಂದ ತೀರಾ ಕೃಶರಾಗಿದ್ದೆವು. ತಮ್ಮನಿಗೆ ನಾನು ಹೇಳಿದೆ: 'ಬಾಳ, ಸತ್ಯ ಎಷ್ಟೇ ಕಠೋರವಾಗಿದ್ದರೂ ಅದರಿಂದ ನೀನು ಎದೆಗೆಡುವುದಿಲ್ಲವೆಂಬ ನಂಬಿಕೆ ನನಗಿದೆ. ಆದ್ದರಿಂದ ನಿಜ ಹೇಳಿಬಿಡುತ್ತೇನೆ.... ನಾವಿಬ್ಬರೂ ಹೆಚ್ಚು ದಿನ ಬದುಕುವ ಸಂಭವವಿಲ್ಲ. ಅಕಸ್ಮಾತ್ ಉಳಿದರೂ ಉಳಿಯಬಹುದು. ಆದರೂ ಇದೇ ಕೊನೆಯ ಭೇಟಿಯೆಂದು ತಿಳಿದುಕೋ!'

ಒಂದು ಸಂಜೆ ಇದ್ದಕ್ಕಿದ್ದಂತೆ ನನ್ನ ನಂಬಿಕಸ್ಥ ಕಾವಲುಗಾರನೊಬ್ಬ ಬಂದು ಕೈಗೊಂದು ಚೀಟಿ ಕೊಟ್ಟು ಹೇಳಿದ: 'ಒಳ್ಳೆಯ ಸುದ್ದಿ!' ಅವನು ಕೂಡಲೇ ಕಣ್ಮರೆಯಾಗಿ ಹೋದ. ನಾನು ಚೀಟಿ ತೆರೆದೆ.

'ಹಿಂದುಸ್ಥಾನ ಸರಕಾರದಿಂದ ಇದೀಗ ಆಜ್ಞೆ ಬಂದಿದೆ - ಸಾವರಕರ ಸೋದರರನ್ನು ವಾಪಸು ಕಳಿಸುವಂತೆ. ಇದು ಕೇವಲ ಸಮಾಚಾರ ಅಲ್ಲ, ಆಜ್ಞೆಯನ್ನು ಪ್ರತ್ಯಕ್ಷ ನೋಡಿದ್ದೇನೆ!'

ಹಾಗಾದರೆ ಇದು ಬಿಡುಗಡೆಯಲ್ಲ; ಇಲ್ಲಿನ ಕಾರಾಗೃಹದಿಂದ ಅಲ್ಲಿನ ಕಾರಾಗೃಹಕ್ಕೆ, ಅಷ್ಟೆ! ಮರುದಿನ ಬೆಳಿಗ್ಗೆ ಅಧಿಕಾರಿಗಳು ಬಂದು ಆಜ್ಞಾಪಿಸಿದರು - 'ಹೊರಡಲು ಗಂಟು ಕಟ್ಟು' ಎಂದು.

ಸೆರೆಮನೆಯ ಆದ್ಯಂತ, ಹೊರಗೆ ಸಹ ನನ್ನ ಪ್ರಯಾಣದ ಸುದ್ದಿ ಹಬ್ಬಿತು. ತಂಡೋಪತಂಡವಾಗಿ ಬಂದೀವಾಸಿಗಳೆಲ್ಲರೂ ಬೀಳ್ಕೊಡಲು ನನ್ನ ಗೂಡಿನ ಬಾಗಿಲಿಗೆ ಬರತೊಡಗಿದರು. ಅಧಿಕಾರಿಗಳು ಅವರ ಮೇಲೆ ಎಲ್ಲಿ ದರ್ಪ ತೋರಿಸುವರೋ ಎಂದು ನಾನು ಹೆದರಿದೆ. ಆದರೆ ಹಾಗೇನೂ ಆಗಲಿಲ್ಲ. ನನ್ನನ್ನು ನೋಡಲು ಆಗದಿದ್ದ ದ್ವೀಪವಾಸಿಗಳನೇಕರು ಹಣ್ಣು, ಹೂ, ಮಿಠಾಯಿ, ಸೋಡಾಶೀಶೆ, ಬಿಸ್ಕತ್ ಡಬ್ಬಿ ಇತ್ಯಾದಿಗಳನ್ನು ಕಾಣಿಕೆಯಾಗಿ ಕಳಿಸಿದ್ದರು. ಕೋಣೆಯ ಸರಳುಗಳ ಬಳಿ ಆ ವಸ್ತುಗಳ ದೊಡ್ಡ ರಾಶಿಯೇ ಬಿದ್ದಿತು. ದಾರಿದ್ರ್ಯದಲ್ಲಿ ತೊಳಲುತ್ತಿದ್ದ ಅವರು ಅದನ್ನು ಹೇಗೆ ಕಳಿಸಿಕೊಟ್ಟರೋ! ಅಧಿಕಾರಿಗಳಿಂದ ನಿರ್ಬಂಧ ಇದ್ದರೂ ಅನೇಕರು ಬಾಳೆಹಣ್ಣು, ಕಲ್ಲಂಗಡಿ ಹವಣಿಸಿಕೊಂಡು ತಂದಿದ್ದರು. ಮಧ್ಯಾಹ್ನ ನಾನು ಬಾಗಿಲ ಬಳಿ ಹೋಗಿ, ಹೊರಗೆ ನಿಂತಿದ್ದವರಿಗೆ ಅದನ್ನು ಹಂಚಿಬಿಟ್ಟೆ. ವಿವಿಧ ಚಳವಳಿಗಳನ್ನು ನಡೆಸುವ ಸಲುವಾಗಿ ನಾನು ಅಲ್ಲಿ ಸ್ಥಾಪಿಸಿದ್ದ ರಹಸ್ಯ ಸಂಸ್ಥೆಯ ಉತ್ಸಾಹಿ ಕಾರ್ಯಕರ್ತರು ಇನ್ನೂ ನಿಂತೇ ಇದ್ದರು. ಅವರನ್ನು ಸರಳ ಬಳಿಗೆ ಕರೆದು ಕಿವಿಯಲ್ಲಿ ಕೊನೆಯ ಸಂದೇಶ ಉಸಿರಿದೆ:

**ಏಕ ದೇವ ಏಕ ದೇಶ ಏಕ ಆಶಾ**

**ಏಕ ಜಾತಿ ಏಕ ಜೀವ ಏಕ ಭಾಷಾ ॥**

ಆ ಸಂದೇಶದ ಅರ್ಥವನ್ನೂ ನಾನು ವಿವರಿಸಿ ಹೇಳಿದೆ. ಆ 'ಏಕ ಆಶೆ' ಯ ಸಾಧನೆಗಾಗಿ ಅದರೊಡನೆ ಸಮರಸನಾದ ಪ್ರತಿಯೊಬ್ಬ ಹಿಂದುವೂ ಪ್ರಾಣಾರ್ಪಣೆಗೆ ಸಹ ಸಿದ್ಧನಾಗಬೇಕು. ಈ ಬಗ್ಗೆ ಅಂದಮಾನಿನಲ್ಲಿ ಏನೆಲ್ಲ ಸಾಧಿಸಬಹುದೆಂಬುದನ್ನು ನಾನು ಅವರಿಗೆ ತಿಳಿಸಿದೆ.

'ಸಾಹೇಬರು ಬರುತ್ತಿದ್ದಾರೆ. ನಿಮ್ಮನ್ನು ಕರೆದೊಯ್ಯಲು ಸಿಪಾಯಿಗಳೂ ಬರುತ್ತಿದ್ದಾರೆ' ಎಂದು ಕಾವಲುಗಾರ ಎಚ್ಚರಿಸಿದ.

ನಾನು ಹೊರಡಲು ಸಿದ್ಧನಾದೆ. ಮನಸ್ಸಿಗೆ ಸಮಾಧಾನವಾಗಿತ್ತು. ಏಕೆಂದರೆ, ನಾನು ಬಾಲ್ಯದಲ್ಲಿ ತೊಟ್ಟಿದ್ದ ಶಪಥವನ್ನೇ ಇಲ್ಲಿಯೂ ಸಹಕಾರಿಗಳಿಗೆ ಕೊಟ್ಟು ಹೋಗುತ್ತಿದ್ದೆ; ಅವರ ಹೃದಯದಲ್ಲಿ ನೆಟ್ಟು ಹೋಗುತ್ತಿದ್ದೆ ! ನಾನು ಭಾರತದ ತರುಣ ಜನಾಂಗಕ್ಕೆ ಯಾವ ಮಂತ್ರವನ್ನು ಉಪದೇಶಿಸಿದ ಪರಿಣಾಮವಾಗಿ ಅಂದಮಾನಿಗೆ ಬರಬೇಕಾಯಿತೋ, ಅದೇ ಮಂತ್ರವನ್ನು ದೇವರ ಕೃಪೆಯಿಂದ ಅಂದಮಾನಿನ ಯುವಕರಿಗೂ ಬೋಧಿಸಿ ಹೋಗುತ್ತಿದ್ದೆ !

**ಏಕ ದೇವ ಏಕ ದೇಶ ಏಕ ಆಶಾ**

**ಏಕ ಜಾತಿ ಏಕ ಜೀವ ಏಕ ಭಾಷಾ ॥**

ಹೆಬ್ಬಾಗಿಲು ತೆರೆಯಿತು. 1909ರಲ್ಲಿ ಅದು ತೆರೆದುಕೊಂಡಾಗ ನಮ್ಮ ಬಾಬಾನನ್ನು ನುಂಗಿಹಾಕಿತ್ತು; 1911ರಲ್ಲಿ ಪುನಃ ತೆರೆದುಕೊಂಡಾಗ ಅದರ ಯಮದವಡೆ ನನ್ನನ್ನೂ ನುಂಗಿಹಾಕಿತ್ತು. ಅದರೊಳಗಿನಿಂದ ಪುನಃ ಜೀವಂತವಾಗಿ ನಾವು ಹೊರಬರುವೆವೆಂಬ ಆಸೆ ಆಗ ಕಿಂಚಿತ್ತೂ ಇರಲಿಲ್ಲ. ಈಗ 1921ರಲ್ಲಿ ನಮ್ಮ ರಕ್ತಮಾಂಸಗಳನ್ನೆಲ್ಲ ಚಪ್ಪರಿಸಿ ಜೀವಚ್ಛವಗಳನ್ನಾಗಿ ಮಾಡಿ, ಹೊರಕ್ಕೆ ಉಗುಳುತ್ತಿತ್ತು – ಈ ಮೃತ್ಯುವಿನ ಕರಾಳ ಬಾಯಿ !

ಆ ಮಹಾದ್ವಾರದ ಹೊಸ್ತಿಲು ತೋರಿಸುತ್ತಾ ನಾನೆಂದೆ: 'ಬಾಬಾ ! ಬದುಕು – ಸಾವುಗಳ ನಡುವಿನ ಸೀಮಾರೇಖೆ ಇದು. ನಾವಿಂದು ಯಮಪುರಿಯಿಂದ ಜೀವಲೋಕಕ್ಕೆ ಕಾಲಿಡುತ್ತಿದ್ದೇವೆ. ಇನ್ನು ಏನು ಬೇಕಾದರೂ ಆಗಲಿ.'

ಜೈಲಿನ ಹೊರಗೆ ದ್ವೀಪದಲ್ಲಿ ನೆಲಸಿದ್ದವರು ನನ್ನ ಭೇಟಿಗೆ ನೇರದಂತೆ, ಕಟ್ಟುನಿಟ್ಟಾದ ಕಾವಲು ಏರ್ಪಟ್ಟಿತ್ತು. ಆದರೂ ದೂರ ದೂರದಿಂದಲೇ ಕೆಲಸ ಮಾಡುತ್ತಿದ್ದ ಕೈದಿಗಳೂ, ಇತರ ಜನರೂ ಕೃತಜ್ಞತೆಯ ನೋಟ ಬೀರುತ್ತಿದ್ದರು. ಎರಡು ಹೆಜ್ಜೆ ಮುಂದೆ ಹೋಗುತ್ತಲೇ ಜಮಾದಾರನೊಬ್ಬ ಸಶಸ್ತ್ರ ಸಿಪಾಯಿಗಳ ನಡುವೆ ನುಸುಳಿಕೊಂಡು ಧಾವಿಸಿ ಬರುತ್ತಿದ್ದ. ಅವನ ಹೆಸರು ಕುಶಬಾ ! ಅಂದಮಾನಿಗೆ ಕೈದಿಯಾಗಿ ಬಂದಿದ್ದ, ಅವನು. ಶಿಕ್ಷೆಯ ಅವಧಿ ಮುಗಿಯುತ್ತ ಬಂದಿತ್ತು. ಜಮಾದಾರನಾಗಿ ಬಡ್ತಿ ಸಿಕ್ಕಿತ್ತು. ಅವನ ಬಿಡುಗಡೆಯ ಚೀಟಿಯೂ ದೊರಕಿತ್ತು. ನಿಯಮಪಾಲನೆಗೆ ಸ್ವಲ್ಪ ಭಂಗ ತಂದರೂ, ಅವನು ಪುನಃ ಸಾಮಾನ್ಯ ಕೈದಿಯಾಗಿ ಕೊಳೆಯುವುದು, ಹೆಚ್ಚಿನ ಶಿಕ್ಷೆಗೆ ಒಳಗಾಗುವುದು ನಿಶ್ಚಿತವಿತ್ತು. ಆದರೂ ಅವನು ನನ್ನೆಡೆಗೆ ಧಾವಿಸಿ ಬಂದ. ಏತಕ್ಕೆ ಹೀಗೆ ಬರುತ್ತಿದ್ದಾನೆ ಎಂದುಕೊಳ್ಳುವಷ್ಟರಲ್ಲೇ ನನ್ನ ಕೊರಳಿಗೊಂದು ಹಾರ ಹಾಕಿದ – ದೂರ ನಿಂತ ಕೈದಿಗಳೆಲ್ಲರ ಪರವಾಗಿ! ಒರಟಾಗಿ ಕಟ್ಟಿದ ಬಿಳಿ ಸಂಪಿಗೆಯ ಹಾರ ಅದು. ಸಿಪಾಯಿಗಳು ಗಲಾಟೆ ಮಾಡುವ ಮೊದಲೇ ನನಗೊಮ್ಮೆ ಜೈಕಾರ ಹಾಕಿ, ಕಾಲಿಗೆ ನಮಸ್ಕರಿಸಿ

ಹೊರಟುಬಿಟ್ಟ. ಅದೇ ಸಮಯಕ್ಕೆ ನನಗೆ ಕೈಬೇಡಿ ತೊಡಿಸಲು ಅಧಿಕಾರಿಯೊಬ್ಬ ಮುಂದೆ ಬಂದ. ಅತ್ತ ಕೊರಳಿಗೆ ಹೂವಿನ ಹಾರ, ಇತ್ತ ಕೈಗೆ ಸಂಕೋಲೆಯ ಭಾರ!

ಆ ಪುಷ್ಪಹಾರವು ಅಸಂಖ್ಯ ನಿರ್ಮಲ ಹೃದಯಗಳ ಸ್ನೇಹ ಗೌರವದ ಸೌರಭದಿಂದ ಘಮಘಮಿಸುತ್ತಿತ್ತು! ಕಳೆದ ಹತ್ತು ವರ್ಷಗಳಲ್ಲಿ ಅಂದಮಾನಿನ ಪ್ರಗತಿಗಾಗಿ ನಾನು ಸುರಿದ ಶ್ರಮಕ್ಕೆ ಸಂದ ಕೃತಜ್ಞತೆಯಾಗಿತ್ತು. ಅನಂತರನನ್ನ ಜೀವನದುದ್ದಕ್ಕೂ ನೂರಾರು, ಸಾವಿರಾರು ಸಮಾರಂಭಗಳಲ್ಲಿ ಭಾಗವಹಿಸಿದ್ದೇನೆ; ವೇದಿಕೆ ಏರಿ ಕುಳಿತಿದ್ದೇನೆ; ದೇವದುರ್ಲಭವೆನಿಸುವ ಸ್ವಾಗತ ಸತ್ಕಾರ, ಪುಷ್ಪಹಾರ ಎಲ್ಲ ಅನುಭವಿಸಿದ್ದೇನೆ. ಆದರೆ, ಯಾರಾದರೂ 'ಸಾವರಕರ್‌ಜೀ, ಈ ಎಲ್ಲ ದಿವ್ಯ ಸಮಾರಂಭಗಳ ಬಗ್ಗೆ ನಿಮಗೇನನಿಸುತ್ತದೆ' ಎಂದು ಕೇಳಿದ್ದೇ ಆದರೆ, ನಾನು ಹೇಳುವುದಿಷ್ಟೆ:

'ನಿಜಕ್ಕೂ ಅದೆಲ್ಲ ಭವ್ಯವೇ ಸರಿ; ಅವುಗಳ ವ್ಯವಸ್ಥಾಪಕರಿಗೆ ನಾನು ಕೃತಜ್ಞ. ಆದರೆ ನೋಡಿ, ನಾನು ಅಂದಮಾನಿನ ಮಹಾದ್ವಾರದಿಂದ ಹೊರಬರುವಾಗ, ಸಿಪಾಯಿಗಳ ಸರ್ಪಕಾವಲನ್ನೂ ಭೇದಿಸಿಕೊಂಡು ಕೈದಿಯೊಬ್ಬ ಬಂದು ನನ್ನ ಕೊರಳಿಗೆ ಕಾಡುಸಂಪಿಗೆಯ ಹಾರ ಹಾಕಿಯೇ ಬಿಟ್ಟ! ಆ ಕೈದಿಯ ಪರಿಶುದ್ಧ ಪ್ರೇಮಕ್ಕಿಂತ - ಅದೂ ಅಂತಹ ಭೀಷಣ ಪರಿಸ್ಥಿತಿಯಲ್ಲಿ - ಮಿಗಿಲಾದುದು ಜಗತ್ತಿನಲ್ಲಿ ಇನ್ನಾವುದಿದ್ದೀತು?'

ಅವನು ಹಾರ ಹಾಕಿದಾಗ ದೂರದಲ್ಲಿ ನಿಂತಿದ್ದವರೆಲ್ಲ ಚಪ್ಪಾಳೆ ತಟ್ಟಿದ್ದರು. ಹಡಗು ಹತ್ತುವ ಮೊದಲು ಕೆಲವು ವಸಾಹತಿನ ಜನರೊಡನೆ ಮಾತನಾಡುವ ಅವಕಾಶ ದೊರಕಿಸಿಕೊಂಡೆ. ಅವರಿಗೆ ಜಗತ್ತಿನ ಪರಿಸ್ಥಿತಿಯನ್ನು ತಿಳಿಸಿ, 'ಅಂದಮಾನಿನಲ್ಲೆ ನೀವು ನೆಲಸಿ; ಇಲ್ಲೆ ಸಂಸಾರ ಹೂಡಿ ಹಿಂದು ಸಮಾಜವನ್ನು ಬೆಳೆಸಿ; ಇಲ್ಲಿನ ಎಲ್ಲ ದ್ವೀಪಗಳಲ್ಲೂ ಹಿಂದು ಸಂಸ್ಕೃತಿಯನ್ನು ವಿಸ್ತರಿಸಿ' ಎಂದು ಕೊನೆಯ ಮಾತು ಹೇಳಿದೆ.

'ಮಹಾರಾಜ' ಹಡಗು ಬಂದು ನಿಂತಿತ್ತು; ಕಲ್ಕತ್ತಾ ಕಡೆಗೆ ಹೊರಡಲಿತ್ತು. ನಾವು ಅದನ್ನೇರುತ್ತಿದ್ದಂತೆ ವಿಚಿತ್ರ ಭಾವನೆಗಳು ಮನಸ್ಸಿನಲ್ಲಿ ಸುಳಿದುಹೋದವು. ಬಹುಶಃ ನನಗೆ ಅಂದಮಾನಿನಲ್ಲಿದ್ದ ಅಲ್ಪಸ್ವಲ್ಪ ಸ್ವಾತಂತ್ರ್ಯವೂ ಭಾರತದಲ್ಲಿ ಕೊನೆಗೊಳ್ಳಬಹುದು, ಅನಿಸಿತು. ಹಡಗಿನ ಕೆಳಭಾಗದಲ್ಲಿದ್ದ ಕೈದಿಗಳ ಪಂಜರ ಸೇರಿದೆವು. ನಾನು ಅಂದಮಾನಿಗೆ ಬರುವಾಗಲೂ ಅದೇ ಪಂಜರದಲ್ಲಿದ್ದೆ. ಆದರೆ ಈಗ ಬಾಬಾ ಜತೆಗಿದ್ದ. ಬಿಡುವಿಲ್ಲದೆ ಅವನು ಕೆಮ್ಮುತ್ತಿದ್ದ; ಸವೆದು ಅಸ್ಥಿಪಂಜರದಂತಾಗಿಹೋಗಿದ್ದ; ಜ್ವರದ ತಾಪದಿಂದ ನರಳುತ್ತಿದ್ದ. ಅಂದಮಾನಿನಲ್ಲಿದ್ದು, ಹುಚ್ಚು ಹಿಡಿದಿದ್ದವರ ನಡುವೆ ನಮ್ಮನ್ನೂ ಕೂಡಲಾಗಿತ್ತು. ಅವರ ಪರಸ್ಪರ ಬೈಗಳ, ಆತ್ಮಹತ್ಯೆಯ ಪ್ರಯತ್ನ, ತಮ್ಮ ವಾಂತಿ, ಮಲಮೂತ್ರಗಳಲ್ಲೆ ಹೊರಳಾಡುವ ದೃಶ್ಯ ಎಲ್ಲವನ್ನೂ ನಾವು ಸಹಿಸಿಕೊಳ್ಳಬೇಕಾಯಿತು. 'ಯಾರಿಗೆ ಗೊತ್ತು? ಅವರ ದೃಷ್ಟಿಯಲ್ಲಿ ನಾವೇ ಹುಚ್ಚರಿರಬಹುದು' ಎಂದು ಸಮಾಧಾನ ಹೇಳಿಕೊಂಡೆ. ಮರುಕ್ಷಣವೇ, ಈ ರೀತಿಯ ಭಾವನೆಯು ನನಗೂ ಹುಚ್ಚು ಹಿಡಿಯುತ್ತಿರುವುದರ ಲಕ್ಷಣ ಅನ್ನಿಸಿ ಭಯವಾಯಿತು!

ಮೊದಲ ದಿನ ಹೇಗೋ ಕಳೆಯಿತು. ಅನಂತರ ಹಡಗಿನಲ್ಲಿದ್ದ ಇತರ ಪ್ರಯಾಣಿಕರ ಒತ್ತಾಯದಿಂದಾಗಿ, ನಮ್ಮಿಬ್ಬರ ಸ್ಥಳಾಂತರವಾಯಿತು. ಅಲ್ಲಿದ್ದ ಅನುಕೂಲ ಎಂದರೆ, ದಿನಕ್ಕೆ ಎರಡು ಸಲ ಹೊಸ ಗಾಳಿ ಬರುವಂತೆ ಕಿಟಕಿಯ ಬಾಗಿಲು ತೆಗೆದು ಮುಚ್ಚುತ್ತಿದ್ದರು! ರಾತ್ರಿಯ ಹೊತ್ತು ಬಾಬಾ, ನಾನು ಇಂಗ್ಲೆಂಡಿಗೆ ಹೊರಟ ನಂತರ ಭಾರತದಲ್ಲಿ ಜರುಗಿದ ಘಟನೆಗಳನ್ನು ವಿವರಿಸುತ್ತಿದ್ದ.

ಐದನೆಯ ದಿವಸ ಹಡಗಿನ ಮೇಲುಗಟ್ಟೆಯಲ್ಲಿ, ಅರ್ಧ ಗಂಟೆಯ ಗಾಳಿ ಬೆಳಕಿನ ಸಲುವಾಗಿ

ಕುಳಿತಿದ್ದೆವು. ದೂರದಲ್ಲೊಂದು ಗೋಡೆ ಕಂಡಿತು. ಸಹ ಪ್ರಯಾಣಿಕನೊಬ್ಬ ಉದ್ಗರಿಸಿದ : 'ಅದೋ ನೋಡಿ, ಹಿಂದುಸ್ಥಾನದ ಗಡಿ !'

ಹಿಂದುಸ್ಥಾನದ ಗಡಿ ? ಯಾವ ಮಾತೃಭೂಮಿಯನ್ನು ಕೇವಲ ಮನಸ್ಸಿನಲ್ಲಿ ಸ್ಮರಿಸಿಕೊಂಡು, ಆ ಸ್ಮರಣೆಯಿಂದಲೇ ಸ್ಫೂರ್ತಿಗೊಂಡು ವರ್ಷಗಟ್ಟಲೆ ಅಂದಮಾನಿನ ಅಸಹ್ಯ ಯಾತನೆಗಳನ್ನು ಸಹಿಸಿದೆವೋ ಅಂಥ ಮಾತೃಭೂಮಿಯ ಪ್ರತ್ಯಕ್ಷ ಮೂರ್ತಿ ! ಅದರ ಚರಣ ಪುನಃ ಕಾಣಿಸಿತು ; ಇದೇ ಜನ್ಮದಲ್ಲೇ ಕಾಣಿಸಿತು. ಆನಂದಪುಲಕಿತನಾಗಿ ನಾನು ಪಕ್ಕಕ್ಕೆ ತಿರುಗಿ ಬಾಬಾನಿಗೆ ಹೇಳಿದೆ : 'ಬಾಬಾ ! ನೋಡು, ಇದೇ ಭಾರತ. ಅಲ್ಲಿ ಕಾಣುತ್ತಿದೆ ನೋಡು, ಆಕೆಯ ನೀಲಸಿಂಧು ಜಲ, ಧೌತಚರಣ ತಲ !'

ನಾವಿಬ್ಬರೂ ಮೇಲೆದ್ದು ನಿಂತೆವು. ಭಕ್ತಿಭಾವನೆಯಿಂದ ಮೈ ಕಂಪಿಸುತ್ತಿತ್ತು. ಕೈಜೋಡಿಸಿ ಘೋಷಿಸಿದೆವು : 'ಸ್ವಾತಂತ್ರ್ಯ ಲಕ್ಷ್ಮೀ ಕೀ ಜಯ್ ! ವಂದೇ ಮಾತರಂ !'





# ಹವಿಸ್ಸು ಇಪ್ಪತ್ತೆರಡು

ಮೈಮೇಲೆ ಕೈದಿಗಳ ಬಟ್ಟೆ. ಕಂಕುಳಲ್ಲಿ ಸುತ್ತಿಟ್ಟುಕೊಂಡ ಗೋಣಿಯ ಪಟ್ಟೆ. ಕೈಯಲ್ಲಿ ಚಂಬು, ತಟ್ಟೆ. ಕಾಲುಗಳಲ್ಲಿ ಸರಪಳಿ ಈ ಅಲಂಕಾರಗಳೊಂದಿಗೆ ಸಿಪಾಯಿಗಳು ನಮ್ಮನ್ನು ಕಳ್ಳರನ್ನು ಒಯ್ಯುವಂತೆ ಆಲಿಪುರ ಜೈಲಿಗೆ ಕರೆದೊಯ್ದರು ಅಲ್ಲಿ ಬೇರೆ ಬೇರೆ ಕೊರಡಿಗಳಲ್ಲಿ ಕೂಡಿಟ್ಟರು ಬಿಡುವಿಲ್ಲದೆ ಕೆಮ್ಮುತ್ತಾ, ನರಳುತ್ತಾ, ನಡು ಬಗ್ಗಿಸಿಕೊಂಡು ನಡೆಯುತ್ತಿದ್ದ ಬಾಬಾನನ್ನು ಬೇರೆ ಕಡೆಗೆ ದಬ್ಬಿಕೊಂಡು ಹೋದುದನ್ನು ಕಂಡು, 'ಇನ್ನು ಇವನನ್ನು ಪುನಃ ನೋಡುತ್ತೇನೋ ಇಲ್ಲವೋ' ಅನ್ನಿಸಿತು.

ನನ್ನ ಕೋಣೆಯ ಪಕ್ಕದಲ್ಲೆ ಚೀನಿ ಯುವಕನೊಬ್ಬ ಕೈದಿಯಾಗಿದ್ದ 'ಸಾವರಕರ್ ಬಹಳ ದೊಡ್ಡ ಮನುಷ್ಯರು' ಎಂದು ಅವನು ಚೀನಾದಲ್ಲಿ ಕೇಳಿದ್ದನಂತೆ ಅಷ್ಟು ದೊಡ್ಡ ಮನುಷ್ಯರು ಜೈಲುಖಾನೆಯೊಳಗೆ ಹಿಡಿಸುವರೆಂಬ ಕಲ್ಪನೆ ಅವನಿಗಿರಲಿಲ್ಲ ! ಆದ್ದರಿಂದ ನಾನೇ ಆ ಸಾವರಕರ್ ಎಂದು ತಿಳಿದಾಗ ಅವನಿಗೆ ಹೃದಯಾಘಾತವೇ ಆಯಿತು ! 'ಬಂದೂಕದ ಗುಂಡು ನಿಮ್ಮ ಮೈಯೊಳಗೆ ತೂರಬಲ್ಲುದೆ ?' ಎಂದು ಅವನು ಪ್ರಶ್ನಿಸಿದ. 'ಸಂಶಯವೇ ಇಲ್ಲ' ಎಂದೆ, ನಾನು ಆಗಂತೂ ಅವನಿಗಾದ ನಿರಾಶೆ ಮುಖದ ಮೇಲೆ ಎದ್ದು ಕಾಣುತ್ತಿತ್ತು.

ಒಮ್ಮೆ ಒಬ್ಬ ಸಿಪಾಯಿ ಕೇಳಿದ · 'ನೀವು ಸಮುದ್ರದಲ್ಲಿ ಅದೆಷ್ಟು ಹಗಲು ರಾತ್ರಿಗಳವರೆಗೆ ಈಜುತ್ತಿದ್ದೀರಿ ?'

'ಹಗಲು ರಾತ್ರಿಗಳೆಲ್ಲಿ ಬಂತು ? ಹತ್ತು ನಿಮಿಷ ಈಜುವುದರೊಳಗೆ ದಡ ಸಿಕ್ಕಿತು' ಎಂದೆ

ಆಗ ಅವನಿಗಾದ ದಿಗ್ಭ್ರಾಂತಿ ಹೇಳತೀರದು. ನನ್ನ ಮೇಲೆ ಅವನಿಗಿದ್ದ ಗೌರವವೆಲ್ಲ ಇಳಿದು ಹೋಯಿತು ಬಹುಶಃ ನಾನು ಸುಳ್ಳು ಹೇಳಿದ್ದರೆ ಅವನ ಮನಸ್ಸಿಗೆ ಅಷ್ಟೊಂದು ಆಘಾತ ಆಗುತ್ತಿರಲಿಲ್ಲವೇನೊ ! ನಿಜವನ್ನೆ ಹೇಳುತ್ತಿದ್ದುದರಿಂದ, ನನ್ನ ಜೀವನದಲ್ಲಿ ಅನೇಕರ 'ಸ್ನೇಹ ಗೌರವ'ಗಳನ್ನು ನಾನು ಕಳೆದುಕೊಳ್ಳಬೇಕಾಗಿಬಂತು.

ಕೆಲವೇ ದಿನಗಳಲ್ಲಿ ನಾನು ಹಿಂದುಸ್ಥಾನದ ಪೂರ್ವದ ತುದಿಯಿಂದ ಪಶ್ಚಿಮದ ತುದಿಗೆ ಸಾಗಿಸಲ್ಪಟ್ಟೆ ರತ್ನಾಗಿರಿ ಸೆರೆಮನೆ ಸೇರಿದಾಗ ರಾತ್ರಿ ಹತ್ತು ಗಂಟೆಯ ಸಮಯ. ಅಂದಮಾನಿನಲ್ಲಿ ಸಿಕ್ಕಿದ್ದ ಅನೇಕ ರಿಯಾಯಿತಿಗಳು ಇಲ್ಲಿ ರದ್ದಾದವು ಏಕಾಂತ ಬಂಧನ ; ಓದು ಬರಹಕ್ಕೆ ನಿಷೇಧ ; ಹತ್ತಿ ನೂಲುವ ಕೆಲಸ ಆ

ಕೆಲಸದ ಅಭ್ಯಾಸ ಇರದಿದ್ದುದರಿಂದ, ಅದರಲ್ಲಿ ನಿಧಾನ ; ಕೆಳದರ್ಜೆಯ ನೌಕರಚಾಕರರಿಂದ ಭರ್ತ್ಸನೆ, ಖಂಡನೆ, ಮುಖಭಂಗ! ನನ್ನ ಮನೋವೇದನೆ ಅಂದಮಾನಿಗಿಂತಲೂ ದುಸ್ಸಹವಾಯಿತು. ಇನ್ನೂ ಎಷ್ಟು ದಿನ ಹೀಗೆ? ಕೊರಳಲ್ಲಿ ನೇತಾಡುವ ಬಿಲ್ಲೆ ಸಾರಿ ಹೇಳುತ್ತಿತ್ತು - 1960! ಆತ್ಮಹತ್ಯೆಯ ಯೋಚನೆ ಇಣುಕಿತು. ಬರುಬರುತ್ತಾ ಮನಸ್ಸು ಬುದ್ಧಿಗಳನ್ನೆಲ್ಲ ಅದು ಆವರಿಸಿತು. ಹನ್ನೆರಡು ವರ್ಷಗಳ ನಿರಂತರ ಬಂಧನ ಹಾಗೂ ಶಿಕ್ಷೆಗಳಿಂದ ಬುದ್ಧಿ ವಿಕಲಗೊಂಡಿತ್ತು. ಇನ್ನು ಹೀಗೆ ಕೊಳೆಯುವುದು ಸಾಕು, ಅನ್ನಿಸಿತು. ಇನ್ನು ಬದುಕಿ ಪ್ರಯೋಜನವಿಲ್ಲ ಎಂದುಕೊಂಡೆ. ಎದುರಿಗೆ ಎತ್ತರದಲ್ಲಿದ್ದ ಕಿಟಕಿಯ ಸರಳುಗಳತ್ತ ದೃಷ್ಟಿ ಹರಿಯಿತು. ಅದಕ್ಕೆ ಹಗ್ಗದ ಒಂದು ತುದಿ ಕಟ್ಟಬೇಕು ; ಇನ್ನೊಂದು ತುದಿಗೆ ನಾನು ! ಕುಣಿಕೆ ಹಾಕಿ ಕೊರಳು ತೂರಿಸಿದರೆ ಆಯಿತು ! ಸಮಸ್ತ ನರಕಯಾತನೆಗಳಿಂದ ಒಂದೇ ಸಲಕ್ಕೆ ಬಿಡುಗಡೆ !

ರಾತ್ರಿಯಾಗಲೆಂದು ಕಾದು ಕುಳಿತೆ. ಅದಕ್ಕಿನ್ನೂ ಬಹಳ ಸಮಯವಿತ್ತು. ನಾನಾ ವಿಚಾರಗಳ ದ್ವಂದ್ವದ ನಡುವೆ, ಮನಸ್ಸು ಪುನಃ ಎಂದಿನಂತೆ ಸಮಸ್ಥಿತಿಗೆ ಬರತೊಡಗಿತು. ಹತಾಶತೆಯ ಅಂಚು ಮುಟ್ಟಿದ್ದ ಆಲೋಚನೆಗಳು ವಿವೇಕದ ಹಾದಿಗೆ ಮರಳತೊಡಗಿದವು. ನನಗೆ ನಾನೇ ಹೇಳಿಕೊಂಡೆ : 'ಅಯ್ಯೋ ಹುಚ್ಚ! ಇದೆಂಥ ಮೂರ್ಖತನ ಮಾಡಹೊರಟಿದ್ದೀ? ಅಂದಮಾನಿನಲ್ಲಿ ಇಂದುಭೂಷಣನಿಂದ ಹಿಡಿದು ಭಾಯಿ ಪರಮಾನಂದರವರೆಗೆ ಅನೇಕ ಬಂಗಾಲಿ ಹಾಗೂ ಪಂಜಾಬಿ ಕ್ರಾಂತಿಕಾರಿಗಳಿಗೆ ನೀನೇ ಉಪದೇಶ ಮಾಡಿರಲಿಲ್ಲವೆ? ಅವರ ಆತ್ಮಹತ್ಯೆಗೆ ತಡೆ ಹಾಕಿ, ಧೈರ್ಯದ ಮಾತಾಡಿರಲಿಲ್ಲವೆ? ನಿನ್ನ ಪ್ರಾಣಕ್ಕೆ ಬದಲು ಒಬ್ಬನಾದರೂ ಶತ್ರುವಿನ ಪ್ರಾಣ ಬಲಿ ತೆಗೆದುಕೊಳ್ಳದೆ ಸಾಯಲು ನಿನಗೇನು ಅಧಿಕಾರ ?'

ಇಂದಿನ ಪರಿಸ್ಥಿತಿಯಲ್ಲಿ ಏನೇ ಬರಲಿ, ಎಲ್ಲವನ್ನೂ ಸಹಿಸಬೇಕು. ಅದೊಂದು ರಾಷ್ಟ್ರೀಯ ಕರ್ತವ್ಯ ಎಂಬ ನಿಶ್ಚಯಕ್ಕೆ ಬಂದೆ. ಬಿಡುವಿನ ಸಮಯದಲ್ಲಿ ನನ್ನ ಅಂದಮಾನಿನ ಜೀವನವನ್ನು ಹೆಂಚಿನ ಚೂರಿನಿಂದ ಗೋಡೆಗಳ ಮೇಲೆ ಬರೆದು, ಕಂಠಪಾಠ ಮಾಡತೊಡಗಿದೆ. ಅಲ್ಲದೆ, ನಾನು ಅಂದಮಾನಿನಲ್ಲಿದ್ದಾಗ ಹಿಂದುತ್ವ ಕುರಿತು ಒಂದು ಸೂತ್ರ ರಚಿಸಿದ್ದೆನಷ್ಟೆ. ಅದರ ಬಗ್ಗೆ ವಿವರವಾದ ಗ್ರಂಥವನ್ನೂ ಬರೆಯತೊಡಗಿದೆ.

ಲಂಡನ್ನಿನಲ್ಲಿದ್ದ ಕಾಲದಲ್ಲೇ ಆ ವಿಷಯ ನನ್ನ ಗಮನ ಸೆಳೆದಿತ್ತು. ಏಕೆಂದರೆ ಆಗ 'ಯಾರು ಹಿಂದು?' ಎಂಬುದೊಂದು ಪುಸ್ತಕ ಪ್ರಕಟವಾಗಿತ್ತು. ಅದರಲ್ಲಿ ಗ್ರಂಥಕರ್ತರು 'ಹಿಂದು' ಎಂಬುದಕ್ಕೆ ಪ್ರಚಲಿತವಿದ್ದ ಸುಮಾರು ಐವತ್ತು ವ್ಯಾಖ್ಯೆಗಳನ್ನು ಸಂಗ್ರಹಿಸಿಕೊಟ್ಟು, ಕೊನೆಗೆ 'ಹಿಂದು' ಶಬ್ದಕ್ಕೆ ವ್ಯಾಖ್ಯಾನ ಸಾಧ್ಯವೇ ಇಲ್ಲವೆಂದು ತೀರ್ಪು ಕೊಟ್ಟುಬಿಟ್ಟಿದ್ದರು. ಅಲ್ಲದೆ, ಹಿಂದುಗಳು ಆರ್ಯಸಮಾಜಿ, ಬ್ರಹ್ಮಸಮಾಜಿ, ಸನಾತನಿ, ಜೈನ, ಸೀಖ ಇತ್ಯಾದಿ ಹೆಸರುಗಳಿಂದ ತಮ್ಮನ್ನು ತಾವು ಕರೆದುಕೊಳ್ಳುತ್ತಿದ್ದರು. ಎಲ್ಲರಿಗೂ ಅನ್ವಯಿಸುವ ಸಮಾನ ಸೂತ್ರ ತಯಾರಿಸಲು ಪ್ರಯತ್ನಿಸದ. ಅನೇಕರು ನಿರಾಶೆಗೊಂಡಿದ್ದರು. ಏಕೆಂದರೆ ಅವರ ಸೂತ್ರಗಳು ದೀರ್ಘವಾದ ವಿವರಣೆಯ ರೂಪವನ್ನೇ ತಾಳಿದ್ದವು ಅಥವಾ ಅನೇಕ ಪುನರುಕ್ತಿಗಳಿಂದ ತುಂಬಿದ್ದವು. 'ಹಿಂದು' ಶಬ್ದವನ್ನು ಒಂದು ಮತ ಅಥವಾ ಸಂಪ್ರದಾಯ ಎಂಬ ಹಿನ್ನೆಲೆಯಿಂದ ನೋಡಿದ್ದರಿಂದಲೇ ಇಷ್ಟೆಲ್ಲ ಗೊಂದಲಕ್ಕೆ ಕಾರಣ ಆಗಿದೆಯೆಂಬುದು ನನ್ನ ಗಮನಕ್ಕೆ ಬಂತು.

ಆದ್ದರಿಂದ ಈ ಸಮಸ್ಯೆಯನ್ನು ವೇದಕಾಲದಿಂದ ಇದುವರೆಗೆ ಆನುವಂಶಿಕ, ಐತಿಹಾಸಿಕ, ರಾಜಕೀಯ, ಭೌಗೋಳಿಕ ದೃಷ್ಟಿಗಳಿಂದಲೂ ಅಧ್ಯಯನ ಮಾಡಲು ಆರಂಭಿಸಿದೆ. ಆದರೆ ಸೂತ್ರದ ರೂಪುರೇಷೆಗಳನ್ನು

ನಿರ್ಧರಿಸುವಷ್ಟರಲ್ಲೇ ನನ್ನ ಬಂಧನ ಹಾಗೂ ಶಿಕ್ಷೆಯಾಯಿತು. ಅಂದಮಾನಿನಲ್ಲಿ ಆ ವಿಷಯವಾಗಿ ಒಂದು ಸಣ್ಣ ಕೈಪಿಡಿ ತಯಾರಿಸಬೇಕೆಂಬ ವಿಚಾರ ಬಂತು. ಆದರೆ ಬರೆಯುವುದು ಎಲ್ಲಿ ? ಅಷ್ಟು ಹೊತ್ತಿಗೆ ಗೋಡೆಗಳೆಲ್ಲಾ ನನ್ನ 'ಕಮಲಾ' ಕಾವ್ಯದಿಂದ ತುಂಬಿಹೋಗಿದ್ದವು. ವರ್ಷಕ್ಕೊಮ್ಮೆ ಸುಣ್ಣ ಬಳಿಯುವುದು ಅಂದಮಾನಿನ ಸಂಪ್ರದಾಯ. ಆದ್ದರಿಂದ ನಾನು ಬರೆದುದನ್ನೆಲ್ಲ ಬೇಗ ಬೇಗ ಕಂಠಪಾಠ ಮಾಡಿಕೊಂಡು, ಹೊಸ ಹಲಗೆಗಾಗಿ (ಕಪ್ಪು ಹಲಗೆಯಲ್ಲ, ಬಿಳಿ ಹಲಗೆ, ಅರ್ಥಾತ್ ಸುಣ್ಣ ತೊಡೆದ ಗೋಡೆಗಳು!) ನಿರೀಕ್ಷಿಸತೊಡಗಿದೆ. ಅದು ಸಿದ್ಧವಾಗುತ್ತಲೇ ಪುಸ್ತಕದ ಸ್ಥೂಲ ಸ್ವರೂಪ, ಅಧ್ಯಾಯಗಳು, ಮುಖ್ಯ ಅಂಶಗಳನ್ನು ಗುರುತಿಸಿದೆ. ಆಗಲೇ ನನಗೆ ಹೊಳೆದದ್ದು :

**ಆಸಿಂಧು-ಸಿಂಧುಪರ್ಯಂತಾ ಯಸ್ಯ ಭಾರತಭೂಮಿಕಾ ||**
**ಪಿತೃಭೂಃ ಪುಣ್ಯಭೂಶ್ಚೈವ ಸ ವೈ ಹಿಂದುರಿತಿ ಸ್ಮೃತಃ ||**

*(ಸಿಂಧೂ ನದಿಯಿಂದ ಹಿಡಿದು ಸಮುದ್ರದ ವರೆಗಿನ ಈ ಭಾರತ ಭೂಮಿಯನ್ನು ಪಿತೃಭೂಮಿ ಹಾಗೂ ಪುಣ್ಯಭೂಮಿ (ಅರ್ಥಾತ್ ತನ್ನ ಧರ್ಮದ ತವರು) ಎಂದು ಕಾಣುವವನೇ ಹಿಂದು.)*

ಈ ಶ್ಲೋಕ ಯಾವುದೋ ಸ್ಮೃತಿ ಅಥವಾ ಪುರಾಣ ಗ್ರಂಥದಲ್ಲಿ ಇರಬೇಕೆಂದು ಭಾವಿಸುವಷ್ಟರಮಟ್ಟಿಗೆ ಅದಿಂದು ಜನಮನದಲ್ಲಿ ಪ್ರಸಾರವಾಗಿ ಹೋಗಿದೆ. ಆಗ ನಾನು ಜೈಲಿನಿಂದ ಹೊರಗೆ ಜೀವಂತವಾಗಿ ಬರುವ ಸಂಭವವೇ ಕಾಣುತ್ತಿರಲಿಲ್ಲ ; ಆದ್ದರಿಂದ ಗೋಡೆಯ ಮೇಲೆ ಬರೆದ ಚೂರುಪಾರುಗಳನ್ನು 1917-19ರ ಸಮಯದಲ್ಲಿ ಬಿಡುಗಡೆ ಹೊಂದಿದವರ ಮೂಲಕ ಹೊರ ಪ್ರಪಂಚದ ನನ್ನ ಗೆಳೆಯರಿಗೆ ಕಳುಹಿಸಿದ್ದೆ. ಆದರೆ ಆ ವಿಷಯ ಯೋಚಿಸಿದಷ್ಟೂ ಬೆಳೆಯುತ್ತಾ ಹೋಗುತ್ತಿತ್ತು. 'ಹಿಂದುತ್ವ' ಎಂಬ ಹೊಸ ಪದ ಪ್ರಯೋಗವನ್ನು, ಅದೊಂದು ಸಮಗ್ರ ರಾಷ್ಟ್ರೀಯತೆಯ ಸೂಚಕ ಎಂಬ ಅರ್ಥದಲ್ಲಿ ಬಳಕೆಗೆ ತರುವ ಅವಶ್ಯಕತೆ ಕಂಡುಬಂತು. ರತ್ನಾಗಿರಿಯ ಸೆರೆಮನೆ ಸೇರುತ್ತಲೇ ಗ್ರಂಥರಚನೆಗೆ ತೊಡಗಿದೆ. ಅಲ್ಲಿದ್ದ ಕೆಲವು ಅಪಾಯಕರರಲ್ಲದ ರಾಜಕೀಯ ಕೈದಿಗಳಿಗೆ' ಕಾಗದ - ಲೇಖನಿ ಒದಗಿಸುತ್ತಿದ್ದರು. ಆದರೆ ಬರವಣಿಗೆಗೆ ಕಾಗದ - ಲೇಖನಿ ಇದ್ದರೆ ಸಾಕೆ? ತಲೆಯೊಳಗೆ ವಿಷಯವೇ ಇಲ್ಲದವನು ಏನು ತಾನೆ ಬರೆಯಬಲ್ಲ ? ಆದ್ದರಿಂದ ಬರೆಯದಿದ್ದವರ ಲೇಖನಿ - ಕಾಗದಗಳನ್ನು ರಹಸ್ಯವಾಗಿ ಸಂಪಾದಿಸಿ ನಾನು 'ಹಿಂದುತ್ವ' ಗ್ರಂಥ ಪೂರೈಸಿದೆ.

ಸರಕಾರಕ್ಕೆ ಪತ್ತೆಯಾಗದ ರೀತಿಯಲ್ಲಿ ಹಸ್ತಪ್ರತಿ ಜೈಲಿನಿಂದ ಹೊರಕ್ಕೆ ಸಾಗಿತು. ನಾಗಪುರದ ನ್ಯಾಯವಾದಿ ವಿ.ವಿ. ಕೇಳ್ಕರ್ ಅದನ್ನು 1923ರಲ್ಲಿ ಮೊದಲ ಬಾರಿಗೆ ಪ್ರಕಟಿಸಿದರು. ಲೇಖಕನ ಹೆಸರು 'ಓರ್ವ ಮರಾಠ' ಎಂದಿತ್ತು. ಆ ಪುಸ್ತಕವನ್ನು ಓದಿದ ಲಾಲಾ ಲಜಪತರಾಯ್, ಮದನ ಮೋಹನ ಮಾಳವೀಯ ಮುಂತಾದ ಹಿರಿಯ ನಾಯಕರು - ಹಿಂದು ತತ್ವಜ್ಞಾನಕ್ಕೆ ಇದೊಂದು ನವಪ್ರತಿಭೆಯ ವಿದ್ವತ್ಪೂರ್ಣ ಕೊಡುಗೆ- ಎಂದರು. ಸ್ವಾಮಿ ಶ್ರದ್ಧಾನಂದರಂತೂ - 'ನಮ್ಮ ಋಷಿಮುನಿಗಳ ಸತ್ಯ ಸಾಕ್ಷಾತ್ಕಾರಕ್ಕೆ ಪ್ರೇರಕವಾದಂಥ ಒಂದು ವೇದಕಾಲೀನ ಪ್ರಭಾತ ಮುಹೂರ್ತವೇ ''ಹಿಂದುತ್ವ'' ಲೇಖಕರಿಗೆ ಈ ಮಂತ್ರವನ್ನು, ಹಿಂದುತ್ವದ ಈ ಸೂತ್ರವನ್ನು ಮನವರಿಕೆ ಮಾಡಿಕೊಟ್ಟಿರಬೇಕು' ಎಂದು ಬರೆದರು.

ದಕ್ಷಿಣ ಭಾರತದ ವೃದ್ಧ ಪಿತಾಮಹರೆನಿಸಿಕೊಂಡಿದ್ದ ವಿಜಯರಾಘವಾಚಾರಿಯವರು 1914ರಲ್ಲಿ ಪುಸ್ತಕವನ್ನು ಓದಿದ ನಂತರ ಹೀಗೆ ಬರೆದರು : 'ನಾನು ಸರಸತನೆ ''ಹಿಂದುತ್ವ'' ಓದಿ ಮುಗಿಸಿದೆ. ವಿಶೇಷವಾಗಿ ಕೊನೆಯ ಅಧ್ಯಾಯವಂತೂ ಅಪ್ರತಿಮ ಶಬ್ದಸ[redacted]ಹಾಗೂ ದೇಶಭಕ್ತಿಯ ಭಾವನೆಯಿಂದ

ಕೂಡಿದೆ. ಪುಸ್ತಕದ ಬಗ್ಗೆ, ಅದರಲ್ಲೂ ಕೊನೆಯ ಅಧ್ಯಾಯದ ಬಗ್ಗೆ ನನ್ನ ಮನಸ್ಸಿನಲ್ಲಿರುವುದನ್ನು ವರ್ಣಿಸಲು ನನಗೆ ಬಾಯೇ ಹೊರಡುತ್ತಿಲ್ಲ. ಲೇಖಕರ ಈ ಉತ್ಕೃಷ್ಟ ಕಾರ್ಯಕ್ಕಾಗಿ ನಾನು ಅವರಿಗೆ ಹಾರ್ದಿಕ ಅಭಿನಂದನೆ ಸಲ್ಲಿಸುತ್ತೇನೆ ಮತ್ತು ಅವರಿಗೆ ಆರೋಗ್ಯವನ್ನೂ ದೀರ್ಘಾಯುಸ್ಸನ್ನೂ ಕರುಣಿಸುವಂತೆ ದೇವರನ್ನು ಪ್ರಾರ್ಥಿಸುತ್ತೇನೆ.'

ನಾನು ರತ್ನಾಗಿರಿಯ ಸೆರೆಮನೆಯಲ್ಲಿ ಸುಮಾರು ಮೂರು ಸಾವಿರ ಸಾಲುಗಳ ಕಾವ್ಯ 'ಗೋಮಾಂತಕ'ವನ್ನೂ ಪೂರೈಸಿದೆ. 1924ರ ವೇಳೆಗೆ ಅದು ಹೊರಗೆ ಸಾಗಿಹೋಗಿ, ಪ್ರಕಟಗೊಂಡಿತು. ಗೋವಾದಲ್ಲಿ ಪೋರ್ಚುಗೀಸರು ನಡೆಸುತ್ತಿದ್ದ ಅಮಾನುಷ ಹಿಂಸಾಚಾರ, ಮತಾಂತರ ಹಾಗೂ ಹಿಂದುಗಳ ಸ್ವಾತಂತ್ರ್ಯದ ಹೋರಾಟ – ಇವು ಪುಸ್ತಕದ ಕಥಾವಸ್ತು.

ನಾನು ರತ್ನಾಗಿರಿ ಸೇರಿದ ಕೆಲ ದಿನಗಳಲ್ಲೆ ಖಿಲಾಫತ್ ಚಳವಳಿಯ ಕೈದಿಗಳಿಂದ ಜೈಲು ತುಂಬತೊಡಗಿತು. ಅವರ ಮಾತುಕತೆಗಳು ಬಲು ವಿಚಿತ್ರವಾಗಿದ್ದವು. ಒಬ್ಬರು, 'ಮಲಬಾರಿನಲ್ಲಿ ಮುಸ್ಲಿಮರು ಹಿಂದುಗಳ ಮೇಲೆ ಅತ್ಯಾಚಾರ ನಡೆಸಿದರು ಎಂದು ಹೇಳಬಾರದು' ಎಂದರೆ, ಇನ್ನೊಬ್ಬರು, 'ಹಿಂದುಗಳೆಲ್ಲ ಮುಸಲ್ಮಾನರಾದರೂ ಚಿಂತೆಯಿಲ್ಲ, ನಮಗೆ ಸ್ವರಾಜ್ಯ ಮುಖ್ಯ' ಎನ್ನುತ್ತಿದ್ದರು. ಅವರ 'ಸತ್ಯ', 'ಅಹಿಂಸೆ'ಗಳ ವ್ಯಾಖ್ಯೆಗಳೂ ಅದ್ಭುತ !

ಹೊರಗಿನ ವಾರ್ತೆಗಳನ್ನು ತಿಳಿಯಲು ನಾನು ಅಂದಮಾನಿನಲ್ಲಿ ಹೂಡಿದ್ದ ತಂತ್ರವನ್ನೇ ಇಲ್ಲೂ ಪ್ರಯೋಗಿಸುತ್ತಿದ್ದೆ. ಕಸದ ಬುಟ್ಟಿಗಳಲ್ಲಿನ ಹಳೆ ಪತ್ರಿಕೆಗಳನ್ನು ರಹಸ್ಯವಾಗಿ ಸಂಪಾದಿಸಿ ಓದುತ್ತಿದ್ದೆವು. ಅಸಹಕಾರ ಚಳವಳಿಕಾರರಲ್ಲೊಬ್ಬರು ಹೊರಗಿನ ವರಾಂಡದಲ್ಲೆ ಅದನ್ನು ಓದತೊಡಗಿದರು. ಆಗ ಅವರಿಗೆ ಸೂಚನೆ ನೀಡಿದೆ: 'ಇದು ಅಧಿಕಾರಿಗಳಿಗೆ ತಿಳಿದರೆ, ನಮಗೆ ಮುಂದೆ ಪತ್ರಿಕೆಯ ಚೂರುಗಳೂ ಸಿಕ್ಕದಂತೆ ವ್ಯವಸ್ಥೆ ಮಾಡುತ್ತಾರೆ.' ಅದಕ್ಕೆ ಆ ಮಹಾಶಯರು, 'ಹಾಗಾದರೆ ಇದನ್ನು ರಹಸ್ಯವಾಗಿ ಓದಬೇಕೇನು ? ನಾನು ಗಾಂಧೀ ವಾದಿ. ಗುಪ್ತ ಕಾರ್ಯಗಳು ಸತ್ಯಕ್ಕೆ ವಿರುದ್ಧ. ನಾನು ಹಾಗೆ ಮಾಡಲಾರೆ' ಎಂದರು. ನಾವು ಅವರಿಗೆ ಪತ್ರಿಕೆ ಕೊಡುವುದನ್ನು ನಿಲ್ಲಿಸಿದೆವು. ಆಗ ಅವರು ಸಿಟ್ಟಿನಿಂದ ಬೆದರಿಕೆ ಹಾಕಿದರು :

'ನೀವು ಕಳ್ಳತನದಿಂದ ಪತ್ರಿಕೆ ತರಿಸುತ್ತಿರುವ ವಿಷಯ ಅಧಿಕಾರಿಗಳಿಗೆ ನಾಳೆಯೇ ಹೇಳುತ್ತೇನೆ. ಸತ್ಯವನ್ನು ಮುಚ್ಚಿಡುವುದು ಮಹಾ ಪಾಪ.'

'ಇದಕ್ಕೆ ಮೊದಲೂ ಹಾಗೆಯೇ ತರಿಸುತ್ತಿದ್ದೆವು. ಆಗ ಅದು ತಿಳಿದಿದ್ದೂ, ನೀವೇಕೆ ಓದುತ್ತಿದ್ದಿರಿ ? ಪತ್ರಿಕೆ ಒದಗಿಸುತ್ತಿರುವ ಸ್ನೇಹಿತರನ್ನು ಬಿಟ್ಟುಕೊಡುವುದು ದ್ರೋಹವಲ್ಲವೇನು ?' ಎಂದು ಸವಾಲು ಹಾಕಿದೆವು. ಆದರೆ ಅವರು 'ಗುಪ್ತ ಕಾರ್ಯಗಳೆಲ್ಲವೂ ಪಾಪಕರ. ಕ್ರಾಂತಿಕಾರಿಗಳೆಲ್ಲರೂ ಮಹಾಪರಾಧಿಗಳು' ಎಂಬ ಪಲ್ಲವಿಯನ್ನೇ ಹಾಡುತ್ತಿದ್ದರು. ಆ ಮಹಾಶಯರಿಗೆ ಚಪಾತಿ ಎಂದರೆ ಪಂಚಪ್ರಾಣ. ದಿನವೂ ಅಡಿಗೆಯವನನ್ನು ಬೇಕಾದ ಹಾಗೆ ಹೊಗಳಿ, ಒಂದು ಚಪಾತಿ ಹಾಕಿಸಿಕೊಂಡು ತಿನ್ನುತ್ತಿದ್ದರು. ಒಂದು ದಿನ ನಮ್ಮ ಪೈಕಿ ಕೆಲವರು ಊಟದ ಸಮಯದಲ್ಲಿ ಇದ್ದಕ್ಕಿದ್ದಂತೆ 'ಸೂಪರಿಂಟೆಂಡೆಂಟ್ ಬರುತ್ತಿದ್ದಾರೆ' ಎಂದು ಗುಲ್ಲೆಬ್ಬಿಸಿದರು. ಆ ನಮ್ಮ ಸಜ್ಜನ ಬಂಧು, ತಮ್ಮ ಚಪಾತಿಯನ್ನು ಕೂಡಲೆ ತಟ್ಟೆಯ ಕೆಳಗೆ ಮುಚ್ಚಿಟ್ಟು, ಸಾವಕಾಶವಾಗಿ ಅನ್ನ ತಿನ್ನತೊಡಗಿದರು ! ಅಕ್ಕಪಕ್ಕದವರೆಲ್ಲವೂ ನಗತೊಡಗಿದರು. ಒಬ್ಬ ಕೇಳಿಯೇಬಿಟ್ಟ: 'ಮಹಾಸ್ವಾಮಿ, ಚಪಾತಿ ಮುಚ್ಚಿಡುವುದು, ನಿತ್ಯವೂ ಕದ್ದು ತಿನ್ನುವುದು ಪಾಪಕರವಲ್ಲವೆ?' ತಟ್ಟನೆ ಇನ್ನೊಬ್ಬ ಮಾರ್ಮಿಕವಾಗಿ ಉತ್ತರಿಸಿದ : 'ಹೊಟ್ಟೆಯ ಪಾಡಿಗಾಗಿ ಸಣ್ಣ ಚಪಾತಿ ತಿನ್ನುವುದು



ನತ್ಯವಾದಿಗಳ ದೃಷ್ಟಿಯಲ್ಲಿ ಪಾಪವಲ್ಲ. ಆದರೆ ನೀವು ಪತ್ರಿಕೆ ಓದುವುದರಿಂದ ರಾಷ್ಟ್ರಕ್ಕೆ ದೊಡ್ಡ ಹಾನಿಯಾಗುತ್ತದೆ. ದೇಶದ ಹಿತಕ್ಕಾಗಿ ಸುಳ್ಳು ಹೇಳುವುದು ಪಾಪಕರ, ಅಕ್ಷಮ್ಯ ಅಪರಾಧ! ಹೇಡಿತನ! ಆದರೆ ಸ್ವಾರ್ಥ ಹಾಗೂ ಹೊಟ್ಟೆಯ ನಲುವಾಗಿ ಸುಳ್ಳು ಹೇಳುವುದು ಉದಾತ್ತವಾದ ಪುಣ್ಯಕಾರ್ಯ!

ತಿಳಿಯಿತೋ ?'

ಕೇವಲ ಒಬ್ಬಿಬ್ಬರ ಸಂಗತಿಯಾಗಿದ್ದರೆ ನಾನು ಈ ವಿಷಯವನ್ನೇ ಎತ್ತುತ್ತಿರಲಿಲ್ಲ. ಆದರೆ ಆಗಿನ ಅಸಹಕಾರ ಚಳವಳಿಕಾರರೆಲ್ಲರಲ್ಲೂ ಸ್ವಲ್ಪ ಹೆಚ್ಚುಕಡಿಮೆ ಇಂಥದೇ ಮನೋಭಾವ ಎದ್ದುಕಾಣುತ್ತಿತ್ತು.

ಅಂದಮಾನಿನಂತೆ ರತ್ನಾಗಿರಿಯಲ್ಲೂ ಮುಸ್ಲಿಂ ಕೈದಿಗಳೂ, ಪಹರೆಕಾರರೂ ಹಿಂದು ಕೈದಿಗಳನ್ನು ರಹಸ್ಯವಾಗಿ ಮತಾಂತರಿಸುತ್ತಿದ್ದರು. ಅದರ ವಿರುದ್ಧ ಹೋರಾಡಲು ಶುದ್ಧಿ ಹಾಗೂ ಸಂಘಟನೆಯ ಚಳವಳಿ ಆರಂಭಿಸಿದೆ. ಮೊದ ಮೊದಲು ಅಸಹಕಾರ ಚಳವಳಿಕಾರರಿಂದ ಅದಕ್ಕೆ ವಿರೋಧವಿತ್ತು. ಅನಂತರ ನಡೆದ ಒಂದು ಘಟನೆಯಿಂದಾಗಿ ಅವರಿಗೂ ಹಿಂದು ಸಂಘಟನೆಯ ಆವಶ್ಯಕತೆ ಅರಿವಾಯಿತು. ಒಂದು ದಿನ ಇದ್ದಕ್ಕಿದ್ದಂತೆ ಮುಸಲ್ಮಾನ ಕೈದಿಗಳು ಹಿಂದುಗಳ ಮೇಲೆ ಆಕ್ರಮಣ ನಡೆಸಿದರು. ಹಿಂದು ಕೈದಿಗಳಿಗೂ ಕಾವಲುಗಾರರಿಗೂ ಬಲವಾದ ಹೊಡೆತಗಳು ಬಿದ್ದವು. ಎರಡು ಪಕ್ಷಗಳಿಗೂ ಭೀಕರ ಯುದ್ಧವೇ ಜರುಗಿತು. ನಾನು ಈ ಆದಾಯದ ಬಗ್ಗೆ ಮೊದಲೇ ಕೆಲವರನ್ನು ಎಚ್ಚರಿಸಿದ್ದುದರಿಂದ, ಮುಸಲ್ಮಾನರಿಗೂ ಸಾಕಷ್ಟು ಬಿಸಿ ತಟ್ಟಿತು. ಅಷ್ಟರಲ್ಲಿ ಪೊಲೀಸರು ಪ್ರವೇಶಿಸಿ ಗೂಂಡಾಗಳನ್ನು ಬಂಧಿಸಿದರು. ಅನಂತರ ಅನೇಕ ದಿನಗಳವರೆಗೆ ಮುಸಲ್ಮಾನರು ನನ್ನನ್ನು ಕೊಲ್ಲುವುದಾಗಿ ಬೆದರಿಕೆ ಹಾಕುತ್ತಿದ್ದರು. ಆದರೆ, ನನ್ನ ಜಾಗರೂಕತೆಯಿಂದಾಗಿ ಅವರ ಸಂಚುಗಳು ನಡೆಯಲಿಲ್ಲ.

ರತ್ನಾಗಿರಿ ಸೆರೆಮನೆಯಲ್ಲೂ ನಾನು ಅನಕ್ಷರಸ್ಥ ಕೈದಿಗಳಿಗೆ ಶಿಕ್ಷಣ, ಪುಸ್ತಕ ಭಂಡಾರದ ವ್ಯವಸ್ಥೆ ಮುಂತಾದ ಕಾರ್ಯಗಳನ್ನು ಕೈಗೊಂಡೆ. ಮುಸ್ಲಿಂ ಮತ್ತು ಕ್ರಿಶ್ಚನ್ ಹಬ್ಬಗಳ ಸಮಯದಲ್ಲಿ ಮೌಲ್ವಿಗಳೂ ಪಾದ್ರಿಗಳೂ ಜೈಲಿಗೆ ಬಂದು ಧರ್ಮೋಪದೇಶ ಮಾಡುತ್ತಿದ್ದರು ; ಆದರೆ ಹಿಂದುಗಳಿಗೆ ಆ ರೀತಿಯ ಅವಕಾಶವಿರಲಿಲ್ಲ. ಆದ್ದರಿಂದ ಆ ದಿಕ್ಕಿನಲ್ಲಿ ಪ್ರಯತ್ನಿಸಿ, ನಾವು ಗೋಕುಲಾಷ್ಟಮಿಯನ್ನು ಆಚರಿಸಿದೆವು. ಅಂದು ಕೀರ್ತನಕಾರರೊಬ್ಬರನ್ನು ಕರೆಸಿ, ಹರಿಕಥೆಯನ್ನು ಏರ್ಪಡಿಸಿದೆವು.

ರತ್ನಾಗಿರಿಯಲ್ಲಿ ಮೊದಮೊದಲು ಓದಲು ಪುಸ್ತಕಗಳನ್ನು ಕೊಡುತ್ತಿರಲಿಲ್ಲ. ಅನಂತರ 'ದಾಸಬೋಧ', 'ಪೃಥ್ವಿರಾಜನ ಜೀವನ', 'ಭವಿಷ್ಯ ಪುರಾಣ', 'ವೇದಕಾಲೀನ ಭಾರತ' ಇತ್ಯಾದಿ ಗ್ರಂಥಗಳು ಸಿಕ್ಕಿದವು. ಇದೇ ಸಮಯದಲ್ಲಿ ನನ್ನ ಅಣ್ಣ ಬಾಬಾ ಬಿಜಾಪುರ ಜೈಲಿನಲ್ಲಿದ್ದ. ಅವನ ಆರೋಗ್ಯ ಹದಗೆಟ್ಟು, ದಿನದಿನಕ್ಕೂ ಸಾವಿನ ದವಡೆ ಸಮೀಪಿಸುತ್ತಿದ್ದ. ಅಂಥ ಸ್ಥಿತಿಯಲ್ಲಿ ನನ್ನ ತಮ್ಮ ಬಾಳ ಅವನ ಭೇಟಿಗೆ ಹೋದ. ಆದರೆ ಬಾಳನು ಖಾದಿ ಬಟ್ಟೆ ತೊಟ್ಟಿದ್ದುದರಿಂದ, ಅದನ್ನು ತೆಗೆದರೆ ಮಾತ್ರ ಒಳಗೆ ಬಿಡುವುದಾಗಿ ಅಧಿಕಾರಿಗಳು ತಿಳಿಸಿದರು. ಸ್ವಾಭಿಮಾನಿಯಾದ ಬಾಳ ಆ ಷರತ್ತಿಗೆ ತಲೆಬಾಗಲಿಲ್ಲ. ವಾಪಸು ಬಂದು, ಗವರ್ನರರವರೆಗೂ ದೂರು ಮುಟ್ಟಿಸಿ, ಅಧಿಕಾರಿಗಳ ಉದ್ಧಟತನಕ್ಕೆ ತಕ್ಕ ಶಾಸ್ತಿ ಮಾಡಿದ. ಕೊನೆಗೆ ಖಾದಿ ಉಡುಪಿನಲ್ಲೇ ಜೈಲಿನ ಒಳಗೆ ಪ್ರವೇಶಿಸಿ ಅಣ್ಣನನ್ನು ನೋಡಿಕೊಂಡು ಬಂದ !

ಅತ್ತ ಅಣ್ಣ ಸಾಯುವ ಸ್ಥಿತಿಯಲ್ಲಿದ್ದ. ಇತ್ತ ನಾನು ಅಸಹಾಯಕತೆಯಿಂದ ಚಡಪಡಿಸುತ್ತಿದ್ದೆ. ಚಿಂತೆ ಹತ್ತಿ, ನಿದ್ದೆ ಹತ್ತದಂತಾಯಿತು. ಕೊನೆಗೆ ಮನಸ್ಸಿನಲ್ಲೆ ನಿಶ್ಚಯಿಸಿದೆ: ಒಂದು ವೇಳೆ ಬಾಬಾ ಸತ್ತರೆ, ಅವನನ್ನು ಹಿಂಸಿಸಿದ ಅಧಿಕಾರಿಗಳ ವಿರುದ್ಧ ಸೇಡು ತೀರಿಸಿಕೊಳ್ಳುತ್ತೇನೆ ; ಆ ರೂಪದಲ್ಲಿ ಅವನ ಶ್ರಾದ್ಧ ಆಚರಿಸುತ್ತೇನೆ! ಇಷ್ಟು ಹೇಳಿಕೊಂಡ ಅನಂತರ ಮನಸ್ಸು ಸ್ವಲ್ಪ ಶಾಂತವಾಯಿತು. ಅದಾದ ಕೆಲವು ದಿನಗಳಲ್ಲೇ ಬಾಬಾ ಜೀವಸಹಿತ ಜೈಲಿನಿಂದ ಬಿಡುಗಡೆ ಹೊಂದಿದ ಆನಂದದ ವಾರ್ತೆಯನ್ನು ಕೇಳಿದೆ !

1923ರಲ್ಲಿ ಯರವಾಡ ಕಾರಾಗೃಹಕ್ಕೆ ನನ್ನ ಸ್ಥಳಾಂತರವಾಯಿತು. ಅಂದಮಾನಿನಲ್ಲಿ ಎಂಟು ಹತ್ತು

ವರ್ಷಗಳ ಘೋರ ಶಿಕ್ಷೆಗಳನ್ನನುಭವಿಸಿದ್ದ ಕ್ರಾಂತಿಕಾರಿ ಮಿತ್ರರನೇಕರ ಭೇಟಿ ಅಲ್ಲಾಯಿತು. ಅಸಹಕಾರ ಆಂದೋಲನದಲ್ಲಿ ಭಾಗವಹಿಸಿ ನಾಲ್ಕಾರು ತಿಂಗಳುಗಳ ಶಿಕ್ಷೆಗೊಳಗಾದವರೂ ಅಲ್ಲಿದ್ದರು. ಅವರು ಕ್ರಾಂತಿ ಕಾರಿಗಳನ್ನು ಪಾಪಿಗಳಂತೆ ಹಾಗೂ ಖೂನಿಗಾರರಂತೆ ಕಾಣುತ್ತಿದ್ದರು. ಕೆಲವಾರು ತಿಂಗಳ ಶಿಕ್ಷೆಗೊಳಗಾದ ತಾವು ದೇಶಕ್ಕೆ ಮಾಡಿದ 'ಅಗಾಧ' ತ್ಯಾಗ ಬಲಿದಾನಗಳನ್ನು ಅವರು ಬಣ್ಣಿಸುತ್ತಿದ್ದರು. ಅವರ ಬಗ್ಗೆ ನಮಗೆ ಮರುಕವಾಗುತ್ತಿತ್ತು.

ಯರವಾಡದಲ್ಲಿ ರಾಜಕೀಯ ಕೈದಿಗಳಿದ್ದ ವಿಭಾಗಕ್ಕೂ ಉಳಿದ ಕೈದಿಗಳ ವಿಭಾಗಕ್ಕೂ ನಡುವೆ ದೊಡ್ಡ ಗೋಡೆಯಿತ್ತು. ಎಲ್ಲರಲ್ಲೂ ರಾಜಕೀಯ ಜಾಗೃತಿ ನಿರ್ಮಿಸಿ ಸಂಘಟನೆ ಕೈಗೊಳ್ಳುವುದು ಹೇಗೆ? ಅದಕ್ಕಾಗಿ ನಾನು ನಮ್ಮ ಕಡೆಯ ಅಂಗಳದಲ್ಲಿದ್ದ ಮರದ ಮೇಲೆ ಹತ್ತಿ ನಿಂತು ಭಾಷಣ ಮಾಡುತ್ತಿದ್ದೆ. ಎಲ್ಲರೂ ಅದನ್ನು ಆಲಿಸುತ್ತಿದ್ದರು. ಶುದ್ಧಿ ಚಳವಳಿಯೂ ಪ್ರಗತಿದಾಯಕವಾಗಿ ನಡೆಯಿತು. ಕಾರಾಗೃಹದ ವೈದ್ಯರು ಕ್ರಿಶ್ಚನ್ನರು. ಅವರೊಡನೆ ಅನೇಕ ದಿನಗಳು ಮಾತುಕತೆ ನಡೆದ ನಂತರ ಅವರು ಹಿಂದು ಧರ್ಮಕ್ಕೆ ಹಿಂದಿರುಗುವ ನಿಶ್ಚಯ ಮಾಡಿದರು. ಅವರ ಉಡಿಗೆ ತೊಡಿಗೆಗಳೆಲ್ಲ ಬದಲಾದವು. ಮನೆಯ ಮುಂದೆ ರಂಗೋಲಿ, ಒಳಗೆ ಶ್ರೀಕೃಷ್ಣನ ಭಾವಚಿತ್ರ, ಅವರ ಹಣೆಯ ಮೇಲೆ ತಿಲಕ ಶೋಭಿಸತೊಡಗಿದವು.

'ಸಾವರಕರ್, ನಾನು ಪೂರ್ತಿ ಹಿಂದುವಾಗಲು ಇನ್ನೇನು ಮಾಡಬೇಕು, ಹೇಳುವಿರಾ?' ಎಂದರು. ನನ್ನ ಸಲಹೆಯಂತೆ ವಿಜೃಂಭಣೆಯಿಂದ ಸತ್ಯನಾರಾಯಣ ಪೂಜೆಯನ್ನು ನೆರವೇರಿಸಿ, ಮಾತೃಧರ್ಮಕ್ಕೆ ತಮ್ಮ ಪುನರಾಗಮನದ ಕಾರ್ಯವನ್ನು ಪೂರ್ಣಗೊಳಿಸಿದರು! 'ಪ್ರಸಾದ' ಸ್ವೀಕರಿಸಿ ನಾವೂ ಕೃತಾರ್ಥ ರಾದೆವು!

ಆ ಸಮಯದಲ್ಲಿ ಮಹಾತ್ಮಾ ಗಾಂಧಿಯವರೂ ಯರವಾಡ ಜೈಲಿನಲ್ಲೇ ಇದ್ದರು. ಹೊಸದಾಗಿ ಬಂದ ಸತ್ಯಾಗ್ರಹಿಗಳಿಗೆ ಹಿಂದಿನ ಸ್ವಾತಂತ್ರ್ಯ ಹೋರಾಟಗಳ ಮಹತ್ವ ಹಾಗೂ ಇತಿಹಾಸ ತಿಳಿಸಲು ನಾನು ಉಪ ನ್ಯಾಸ ಮಾಲೆ ಆರಂಭಿಸಿದೆ. ಭಾಷಣದ ಸಮಯದಲ್ಲಿ ಅಧಿಕಾರಿಗಳು ಬಂದರೆ ಕಾವಲುಗಾರರೇ ನನಗೆ ಮುನ್ಸೂಚನೆ ಕೊಡುತ್ತಿದ್ದರು.

ಒಂದು ದಿನ ಮದನಲಾಲ ಧಿಂಗ್ರಾನ ಜೀವನಕಥೆ ಆರಂಭಿಸಿದ್ದೆ. ಅವನ ಸಾಹಸದ ರೋಮಾಂಚಕಾರಿ ವರ್ಣನೆ ಕೇಳುವುದರಲ್ಲಿ ಶ್ರೋತೃಗಳು ತಲ್ಲೀನರಾಗಿದ್ದರು. ಅಷ್ಟರಲ್ಲಿ ನಮ್ಮ ಪರವಾಗಿ ಮುಖ್ಯದ್ವಾರದ ಬಳಿ ಕಾವಲಿದ್ದ ವ್ಯಕ್ತಿ, 'ಯಾರೋ ಬರುತ್ತಿದ್ದಾರೆ' ಎಂಬ ಎಚ್ಚರಿಕೆಯಿತ್ತ. ಕೂಡಲೆ ಸಭೆ ಚದುರಿತು. ಒಬ್ಬ ಸಾರ್ಜೆಂಟ್ ಪ್ರವೇಶಿಸಿ, ನನ್ನನ್ನು ಸೂಪರಿಂಟೆಂಡೆಂಟ್ ಬಳಿ ಕರೆದೊಯ್ದ. 'ನಿಮ್ಮ ಬಿಡುಗಡೆಯಾಗ ಬಹುದು ; ಆದರೆ ನೀವು ಕೆಲವು ಷರತ್ತುಗಳಿಗೆ ಒಪ್ಪಬೇಕು' ಎಂದ ಸೂಪರಿಂಟೆಂಡೆಂಟ್.

ಬಿಡುಗಡೆಯ ಹಿಂದಿನ ರಾತ್ರಿ ನನಗೆ ನಿದ್ದೆ ಬರಲಿಲ್ಲ. ಜೈಲಿನಲ್ಲಿ ಅದೇ ಕೊನೆಯ ರಾತ್ರಿ ಎಂಬುದು ಅದಕ್ಕೆ ಕಾರಣವಲ್ಲ. ಬಟ್ಟೆಗಳೆಲ್ಲ ಮಳೆಯಲ್ಲಿ ಒದ್ದೆಯಾಗಿದ್ದವು. ಚಳಿ ವಿಪರೀತವಾಗಿತ್ತು. ಒಂದು ಮೂಲೆ ಯಲ್ಲಿ ಆದಷ್ಟು ಚಿಕ್ಕದಾಗಿ ಮುದುರಿ ಕುಳಿತು ಗಡಗಡನೆ ನಡುಗುತ್ತಾ ನಾನು ಬೆಳಗಾಗುವವರೆಗೂ ತೂಕ ಡಿಸುತ್ತಿದ್ದೆ. ಅನಂತರನಿತ್ಯದಂತೆ ಕೆಲಸ ಶುರುವಾಯಿತು. ಅಂದು 1924ರ ಜನವರಿ 6, ಭಾನುವಾರ; ಹಿಂದಿನ ದಿನ ಅರ್ಧಕ್ಕೆ ನಿಲ್ಲಿಸಿದ್ದ ಧಿಂಗ್ರಾನ ಕಥೆಯನ್ನು ಮುಂದುವರಿಸಿ ಹೇಳುತ್ತಿದ್ದೆ. ಪುನಃ ಅಧಿಕಾರಿ ಗಳಿಂದ ಕರೆ ಬಂತು.

'ಇನ್ನು ಐದು ವರುಷಗಳು ರಾಜಕಾರಣದಲ್ಲಿ ಭಾಗವಹಿಸಬಾರದು ; ರತ್ನಾಗಿರಿ ಜಿಲ್ಲೆಯೊಳಗೆ

ಸ್ಥಾನಬದ್ಧತೆಯಲ್ಲಿ ಇರಬೇಕು' ಎಂದು ಆಜ್ಞೆಯಾಯಿತು. ಕೈದಿಯ ಉಡುಪುಗಳನ್ನು ಕಳಚಿಟ್ಟೆ, ನಾಗರಿಕ ವೇಷ ತೊಟ್ಟೆ. ಜೈಲಿನ ಬಾಗಿಲು ದಾಟಿ ವಾಹನ ಹತ್ತಿದೆ. ಕಾರಾಗೃಹಕ್ಕೆ ಕೊನೆಯ ನಮಸ್ಕಾರ ಹಾಕಬೇಕೆನಿಸಿತು. ಆದರೆ ಅಷ್ಟರಲ್ಲೆ ವಿವೇಕ ಎಚ್ಚರಿಸಿತು : ಪುನಃ ಯಾವ ಕ್ಷಣದಲ್ಲಿ ಬರಬೇಕಾದೀತೋ ಗೊತ್ತಿಲ್ಲ; ಹಿಂದೆ ಮಾರ್ಸೇಲ್ಸ್‌ನಲ್ಲಿ 'ಇನ್ನು ಮುಕ್ತನಾದೆ' ಎಂದು ಉಬ್ಬಿರಲಿಲ್ಲವೆ? ಈಗಲೂ ಹಾಗೆಯೇ ಆದರೆ? ಮೂರ್ಖ, ಸುಮ್ಮನಿರು !

ಪುಣೆಯಲ್ಲಿ ನಮ್ಮ ಭಾವೂ (ಡಾ. ವಿ.ಮ. ಭಟ್) ನನ್ನನ್ನು ಮನೆಗೆ ಕರೆದುಕೊಂಡು ಹೋದ. ಅಲ್ಲಿ ನಾಲ್ಕೈದು ಗಂಟೆಗಳಿದ್ದು, ಮಧ್ಯಾಹ್ನದ ರೈಲಿನಲ್ಲಿ ಮುಂಬೈಗೆ ಹೊರಟೆ. ಮುಂಬೈನಲ್ಲೂ ಒಂದೆರಡು ದಿನ ಬಾಳನ ಮನೆಯಲ್ಲಿ ತಂಗಿದ್ದೆ. ನನ್ನ ಬಿಡುಗಡೆ ಹಾಗೂ ಸ್ಥಾನಬದ್ಧತೆಯ ಬಗ್ಗೆ ಬರೆಯುತ್ತಾ ಜನವರಿ 7ರ 'ಟೈಂಸ್ ಆಫ್ ಇಂಡಿಯಾ' ಪತ್ರಿಕೆ ಅಪಶಕುನ ಹಾಡಿತ್ತು :

'ಈಗ ಸಾವರಕರ್ ಹೊರಟಿರುವ ರತ್ನಾಗಿರಿಯಲ್ಲೆ ಮೊದಲು ಬೇರೆ ರೀತಿಯ ಸ್ಥಾನಬದ್ಧ ವ್ಯಕ್ತಿಯೊಬ್ಬರಿದ್ದರು. ಮೂರನೆ ಬರ್ಮಾ ಯುದ್ಧದ ನಂತರ ಅಲ್ಲಿನ ಥಿಬಾ ರಾಜರನ್ನು ಇಲ್ಲಿ ತಂದು ಇಡಲಾಗಿತ್ತು, ಮತ್ತು ಇಲ್ಲಿಯೇ ಅವರು ಸತ್ತುಹೋದರು !'

  

ಜನವರಿ 7, ಸೋಮವಾರ ಮುಂಬೈನಲ್ಲಿ ಬಾಳನ ಮನೆಯಲ್ಲಿದ್ದೆ. ಬೆಳಗಾಗುತ್ತಲೇ ತರುಣರು ತಂಡೋಪತಂಡವಾಗಿ ಬರತೊಡಗಿದರು. 9-30ರ ಹೊತ್ತಿಗೆ ಖ್ಯಾತ ಲೇಖಕರೂ ಹಿರಿಯರೂ ಆದ ಕೃಷ್ಣಾಜಿ ಖಾಡಿಲಕರ್ ಆಗಮಿಸಿದರು. ಕುಶಲ ಪ್ರಶ್ನೆಗಳಾದವು. ಅನಂತರನಾನು ಅವರನ್ನು ಕೇಳಿದೆ : 'ಕಾಕಾ ! ಬೆಳಗಿನಿಂದಲೂ ನನ್ನ ದರ್ಶನಕ್ಕೆಂದು ತರುಣರೂ, ವಿದ್ಯಾರ್ಥಿಗಳೂ ಕಿಕ್ಕಿರಿದು ಸೇರಿದ್ದಾರೆ. ಆದರೆ ಅವರನ್ನು ನೋಡಿ ಮನಸ್ಸಿನಲ್ಲೊಂದು ಪ್ರಶ್ನೆ ಏಳುತ್ತಿದೆ. ಅದಕ್ಕೆ ನೀವು ಮಾತ್ರ ಉತ್ತರ ಕೊಡಬಲ್ಲಿರಿ, ಕೇಳಲೆ ?'

'ಅಗತ್ಯವಾಗಿ.'

'ತಮ್ಮಂಥ ಲೇಖಕರು ಕ್ರಾಂತಿಕಾರಿಗಳಾದ ನಮ್ಮನ್ನು ಸ್ಫೂರ್ತಿಗೊಳಿಸಿದಿರಿ. ಆ ಕಾಲದ ತರುಣರ ಮುಖದಲ್ಲಿ ಮಿಂಚುತ್ತಿದ್ದ ತೇಜಸ್ಸು ಹಾಗೂ ಉತ್ಸಾಹ ಇಂದಿನ ತರುಣರ ಮುಖದಲ್ಲಿ ಕಂಡುಬರುತ್ತಿಲ್ಲ. ಅದಕ್ಕೆ ಹೊಣೆ ಯಾರು ?'

'ಈಗಿನ ಶಿಕ್ಷಣ ಪದ್ಧತಿ' ಎಂದು ನಸುನಕ್ಕರು ಕಾಕಾ.

'ಛೇ, ಛೇ, ನಾನು ಒಪ್ಪಲಾರೆ. ''ಕೀಚಕವಧೆ'' ಯಂತಹ ನಾಟಕಗಳನ್ನು ಬರೆದು ತರುಣ ಹೃದಯಗಳಲ್ಲಿ ಕ್ರಾಂತಿಯ ಕಿಚ್ಚು ಕೆರಳಿಸುತ್ತಿದ್ದ ಖಾಡಿಲಕರರ ಲೇಖನಿಯು ಎಂದಿನಿಂದ ಪ್ರಣಯಸಾಹಿತ್ಯ ಸೃಷ್ಟಿಸತೊಡಗಿತೋ ಅಂದಿನಿಂದ ಈ ತರುಣರ ತೇಜಸ್ಸೂ ಓಜಸ್ಸೂ ಕಳೆಗುಂದತೊಡಗಿರಬೇಕೆಂದು ಅನಿಸುತ್ತದೆ ನನಗೆ. ನಿಮ್ಮಂಥ ಮುಂದಾಳುಗಳೇ ಇದಕ್ಕೆ ಹೊಣೆಗಾರರು !'

ಕಾಕಾ ನಕ್ಕು ಮಾತು ಹಾರಿಸಲು ಯತ್ನಿಸಿದರು. ಆದರೂ, ಅವರ ಮುಖ ಕಳೆಗುಂದಿತ್ತು !

ರತ್ನಾಗಿರಿಯಲ್ಲಿ ನನಗೆ ಮನೆ ಬಾಡಿಗೆಗೆ ಕೊಡಲು ಮೊದಮೊದಲು ಯಾರಿಗೂ ಧೈರ್ಯವಾಗಲಿಲ್ಲ. ಎಲ್ಲರಿಗೂ ಸರಕಾರದ ಭಯ ! ಕೊನೆಗೆ ಅಲ್ಲಿಗೆ ಸಮೀಪದ ಶಿರಗಾವಿಯ ವಿಷ್ಣುಪಂತ ದಾಮಲೆಯವರ ಗೃಹದಲ್ಲಿ ಕೆಲದಿನಗಳಿದ್ದು, ಮನೆ ಸಿಕ್ಕಿದ ನಂತರ ಸಂಸಾರ ಸಹಿತ ರತ್ನಾಗಿರಿಯಲ್ಲಿ ವಾಸಿಸತೊಡಗಿದೆ.

ನಾನು ಹೋಗುತ್ತಲೇ ಅಲ್ಲಿ ಹಿಂದು ಸಂಘಟನೆಯ ಕಾರ್ಯವೂ ಆರಂಭವಾಯಿತು.

1924ರ ಮೇ ತಿಂಗಳಲ್ಲಿ ಶಿವರಾಜ್ಯೋತ್ಸವ ಆಚರಿಸಿದೆವು. ಅಷ್ಟರಲ್ಲಿ ರತ್ನಾಗಿರಿಯಲ್ಲಿ ಪ್ಲೇಗ್ ಹರಡಿತು. ಆಗ ಕೆಲದಿನಗಳ ಮಟ್ಟಿಗೆ ನಾಸಿಕಕ್ಕೆ ಹೋಗಲು ನನಗೆ ಸರಕಾರದ ಅನುಮತಿ ಸಿಕ್ಕಿತು.

ನಾಸಿಕ! ಅಭಿನವಭಾರತದ ಉಗಮಸ್ಥಾನ! ಕ್ರಾಂತಿಕಾರಿಗಳ ಯಾತ್ರಾ ಸ್ಥಾನ! 18 ವರ್ಷಗಳ ನಂತರ ಅಲ್ಲಿಗೆ ಕಾಲಿಡುತ್ತಿದ್ದೆ. ಬಾಲ್ಯದ ಗೆಳೆಯರೂ ಧ್ಯೇಯಮಾರ್ಗದ ಸಹಚಾರಿಗಳೂ ಒಬ್ಬೊಬ್ಬರಾಗಿ ನೆನಪಿಗೆ ಬರತೊಡಗಿದರು. ಆ ದಿನಗಳಲ್ಲಿ ಮೂರು ಹೊತ್ತೂ ನಮ್ಮ ನಾಲಗೆಯ ಮೇಲೆ ನರ್ತಿಸುತ್ತಿದ್ದ ಕಾವ್ಯ ಪಂಕ್ತಿಗಳು ಮನದಾಳದಿಂದ ತೇಲಿಬರತೊಡಗಿದವು :

**ಭಾರತಾ ತಾರಯಾ ಕಾಲಿ ಕಾಲಿ । ಹರಿ ವಾಜಿವ ಗೀತಾಮುರಲೀ !**

*(ಹೇ ಶ್ರೀಕೃಷ್ಣ! ಗೀತಾಮುರಲಿಯನ್ನು ಬಾರಿಸು ; ಕಾಲಕಾಲಕ್ಕೆ ಈ ಭಾರತವನ್ನು ರಕ್ಷಿಸು !)*

**ಧೋ ಧೋ ಧೋ ಸಿಂಧು ಉಸಳಲಾ ತ್ಯಾಚ್ಯಾ ರಕ್ತಾಚಾ**

**ಸ್ವಾತಂತ್ರ್ಯಾಚಾ ಭಕ್ತ ಸಂಗಲಾ ಭಗವ್ಯಾ ಝೇಂಡ್ಯಾಚಾ ॥**

*(ಸ್ವಾತಂತ್ರ್ಯದ ಭಕ್ತನ ರಕ್ತಸಮುದ್ರವು ಉಕ್ಕೇರಿತು ; ಭಗವಾಧ್ವಜದ ಉಪಾಸಕನನ್ನು ರಂಗುಗೊಳಿಸಿತು.)*

**ರಾಜಾ ನಾಹೀ ರಾಜದ್ರೋಹ ಮಗ ಕೈಸಾ ರೇ ವ್ಹಾವಾ ?**

*(ರಾಜನೇ ಇಲ್ಲದಿದ್ದ ಮೇಲೆ ರಾಜದ್ರೋಹ ಎಲ್ಲಿ ಬಂತು ?)*

**ದೇವಾ ಘೇ ಹಾತೀ ತರವಾರ ರೇ ! ಹೋ ಸಂಗರಾ ತಯಾರ್ !**

*(ದೇವರೇ, ಖಡ್ಗ ಕೈಗೆತ್ತಿಕೋ, ಯುದ್ಧಕ್ಕೆ ಸಿದ್ಧನಾಗು !)*

**ರಣಾವೀಣ ಸ್ವಾತಂತ್ರ್ಯ ಕೋಣಾ ಮಿಳೇನಾ**

**ಅಸಾ ಭೂತಕಾಲೀವೆ ಸಿದ್ಧಾಂತ ಜಾಣಾ**

**ಸ್ವರಾಜ್ಯೇಚ್ಛುನೇ ಪಾಹಿಜೇ ಯುದ್ಧ ಕೇಲೇ**

**ರಣಾವೀಣ ಸ್ವಾತಂತ್ರ್ಯ ಕೋಣಾ ಮಿಳಾಲೇ ?**

*(ಯುದ್ಧ ಮಾಡದೆ ಯಾರಿಗೂ ಸ್ವಾತಂತ್ರ್ಯ ಸಿಕ್ಕದು – ಎಂಬ ಹಿಂದಿನ ಸಿದ್ಧಾಂತ ಅರಿತುಕೊಳ್ಳಿ. ಸ್ವರಾಜ್ಯ ಬೇಕಾದವರು ಹೋರಾಡಲೇಬೇಕು ; ಯುದ್ಧವಿಲ್ಲದೆ ಯಾರಿಗೆ ತಾನೆ ಸ್ವಾತಂತ್ರ್ಯ ಸಿಕ್ಕಿದೆ ?)*

......................

ಇವೆಲ್ಲವೂ ಬ್ರಿಟಿಷ್ ಸರಕಾರದಿಂದ ನಿಷೇಧಿಸಲ್ಪಟ್ಟಿದ್ದ ಸಾಲುಗಳು. ನಮ್ಮ ಆಬಾ ದರೇಕರ್ – ಗೋವಿಂದ ಕವಿ – ಅದರ ಸೃಷ್ಟಿಕರ್ತ. ಸ್ವತಃ ಎದ್ದು ನಿಲ್ಲಲಾಗದಿದ್ದರೂ ಕುಂಟ ಆಬಾ ನೂರಾರು ತರುಣರನ್ನು ಎತ್ತಿ ನಿಲ್ಲಿಸಿದ್ದ ; ಕ್ರಾಂತಿಕಾರಿ ಯುವಕರಿಗೆ ಸ್ಫೂರ್ತಿಯ ರೆಕ್ಕೆಗಳನ್ನು ಒದಗಿಸಿದ್ದ ! ನಾಸಿಕದಲ್ಲಿ ಅವನ ದರ್ಶನ ಪಡೆಯದಿರುವುದು ಸಾಧ್ಯವೆ ?

'ಓ, ತಾತ್ಯಾ ! ಕಡೆಗೂ ಬಂದೆಯಲ್ಲ ! ಆದರೆ ಸ್ವಾಗತಕ್ಕೆ ನಾನು ಏಳಲಾರೆ' ಎಂದ.

'ಆಬಾ, ಏಳುವ ಅಗತ್ಯವಿಲ್ಲ. ನೀನು ದೇಶವನ್ನು ಎಬ್ಬಿಸಿರುವುದೇನು ಕಡಿಮೆಯೆ ?' ಎಂದೆ.

ತಾತ್ಯಾ, ತುಂಬ ಇಳಿದುಹೋಗಿದ್ದೀಯೆ. ನಿನ್ನನ್ನು ಬಹಳ ಸತಾಯಿಸಿದರೇನೋ ?'

ನಾನು ನಕ್ಕು ಹೇಳಿದೆ : 'ಅಂದಮಾನಿಗೆ ಸುಖಪಡುವುದಕ್ಕೆ ಹೋಗುತ್ತಾರೇನು ? ಶರೀರ ಸೊರಗಿತು,

ಆದರೆ ಮನಸ್ಸು ದೃಢವಾಗಿದೆ. ನೀನೇ ಹಾಡಿಲ್ಲವೇನು - ಸ್ವಾತಂತ್ರ್ಯದೇವಿ ಪದಿ ಲೀನ ಝಾಲಾ, ಕಾರಾಗೃಹಾ ಚೇ ಭಯ ಕಾಯ ತ್ಯಾಲಾ ?'

'ತಾತ್ಯಾ, ಬಹಳ ದೊಡ್ಡ ಸಾಹಸ ಮಾಡಿದೆ, ಬಿಡು !'

'ಆಬಾ, ಪ್ರತಿಯೊಂದು ಸಾಹಸದ ಸಮಯದಲ್ಲೂ ನಿನ್ನ ಸ್ವಾತಂತ್ರ್ಯ ಮಂತ್ರಗಳು ಕಿವಿಯಲ್ಲಿ ಮೊರೆಯುತ್ತಿದ್ದವು - ಪಾರತಂತ್ರ್ಯ ಮಾಯಭೂ ಝಾಲಿ ಝಾಲಿ, ಹರಿ ವಾಜಿವ ಗೀತಾ ಮುರಲೀ !'

ಆಬಾ ಪಾಂಗಳೆಯ ಕಣ್ಣುಗಳಲ್ಲಿ ಆನಂದಾಶ್ರುಗಳು ಉಕ್ಕಿದವು. 'ಅರೇ ತಾತ್ಯಾ, ನಾನು ಕುಂಟ ; ಇಡೀ ಜನ್ಮ ವ್ಯರ್ಥವಾಯಿತೆಂದು ಕೊರಗುತ್ತಿದ್ದೆ. ಆದರೆ ಈಗ ಸಮಾಧಾನವಾಯಿತು. ಬಾಬಾನನ್ನು ನೋಡಿದೆ; ಈಗ ನಿನ್ನನ್ನೂ ನೋಡಿದೆ. ಮನಸ್ಸಿಗೆ ಆನಂದವಾಗಿದೆ. ನಾನು ನಿಜಕ್ಕೂ ಧನ್ಯ. ಇನ್ನು -

**ಸುಂದರ ಮೀ ಹೋಣಾರ್ । ಹೋ, ಮರಣಾನೇ ಜಗಣಾರ್ !**
**ಜನೀ ಇಂದ್ರಿಯೇ, ಜನಾ ಪಿಸಾರಾ, ಸರ್ವ ಸರ್ವ ಝಡಣಾರ್ । ಹೋ**
**ಮೃತ್ಯೂ ಮ್ಹಣಜೇ ವಸಂತ ಮಾಝಾ ಮಜವರತೀ ಖುಲಣಾರ್ । ಹೋ**
**ಸೌಂದರ್ಯಾಚಾ ಬ್ರಹ್ಮಾ ತೋ ಮಜ ಸೌಂದರ್ಯೇ ಘಡಣಾರ್ । ಹೋ ॥**

*(ನಾನು ಸುಂದರ ರೂಪಿಯಾಗಲಿದ್ದೇನೆ ; ಮರಣದ ಮೂಲಕ ಎಚ್ಚರಗೊಳ್ಳಲಿದ್ದೇನೆ. ಹಳೆಯ ಇಂದ್ರಿಯ, ಹಳೆಯ ರೆಕ್ಕೆ ಪುಕ್ಕಗಳೆಲ್ಲವೂ ಉದುರಿ ಹೋಗಲಿವೆ. ನೂತನ ದೇಹ, ನೂತನ ಶಕ್ತಿಯ ರೆಕ್ಕೆಗಳು ಹುಟ್ಟಿಕೊಳ್ಳಲಿವೆ. ಮರಣವೆನ್ನುವುದು ನನ್ನ ನವಜೀವನಕ್ಕೆ ನಾಂದಿ ; ಅದು ಇನ್ನೇನು ಬರಲಿದೆ. ನಾನು ಬ್ರಹ್ಮಾನಂದದ ಸೌಂದರ್ಯದೊಡನೆ ಏಕರೂಪಿಯಾಗಲಿದ್ದೇನೆ.)*

ಭೇಟಿಯಾಗಿ ಹದಿನೈದು ದಿನಗಳೂ ಆಗಿರಲಿಲ್ಲ. ಅಷ್ಟರಲ್ಲೆ ಆಬಾನ ಪ್ರಾಣಪಕ್ಷಿ ಹಳೆಯ ದೇಹವನ್ನು ಒಗೆದು, ಬ್ರಹ್ಮಾನಂದದ ವ್ಯೋಮಧಾಮಕ್ಕೆ ಹಾರಿಹೋಯಿತು.

ನಾಸಿಕದ ಜನತೆಯಿಂದ ನನಗೊಂದು ವೈಭವದ ಸನ್ಮಾನ ಸಮಾರಂಭ ; ಇಡೀ ಮಹಾರಾಷ್ಟ್ರದ ಪರವಾಗಿ ಮಾನಪತ್ರ ಹಾಗೂ ಹನ್ನೆರಡು ಸಹಸ್ರ ರೂ.ಗಳ ನಿಧಿ ಸಮರ್ಪಣೆ. ಪುರಿ ಶಂಕರಾಚಾರ್ಯರಿಂದ ಅಂದು ಮಹಾವಸ್ತ್ರ ಸಹಿತವಾದ ಆಶೀರ್ವಾದ ಪತ್ರ ಬಂದಿತ್ತು. ನಾನು ಪೂರ್ಣ ಬಿಡುಗಡೆ ಹೊಂದಿ, ದೇಶಕಾರ್ಯವನ್ನು ನಿರ್ವಿಘ್ನವಾಗಿ ಮುಂದುವರಿಸುವಂತೆ ಆಗಬೇಕು ಎಂಬುದು ಎಲ್ಲರ ಹರಕೆಯಾಗಿತ್ತು.

ಅದೇ ಸಮಯಕ್ಕೆ ನಾಸಿಕದಲ್ಲಿ ಕೆಲವು ಮಹಾರ ಹಿಂದುಗಳನ್ನು ಅಲ್ಲಿನ ಮುಸ್ಲಿಮರು ಮತಾಂತರಿಸಲು ಸಂಚು ಹೂಡಿದ್ದರು. ಕೊನೆಗೆ ಅದನ್ನು ತಪ್ಪಿಸುವುದರಲ್ಲಿ ನನಗೆ ಯಶಸ್ಸು ಸಿಕ್ಕಿತು. ನಾಸಿಕದಿಂದ ಭಗೂರು, ತ್ರ್ಯಂಬಕ, ಯವಲೆ ಮುಂತಾದ ಸ್ಥಳಗಳಿಗೂ ನಾನು ಹೋದೆ. ಭಗೂರಿನಲ್ಲಿ ಓರ್ವ ಅಸ್ಪೃಶ್ಯ ಬಂಧುವಿನ ಮನೆಯಲ್ಲಿ ಚಹ ಕುಡಿದೆ ; ನಾನು ಸತ್ತ ನಂತರ ನನ್ನ ದೇಹವನ್ನು ಓರ್ವ ಬ್ರಾಹ್ಮಣ, ಒಬ್ಬ ಮರಾಟಿಗ ಮತ್ತು ಕೀಳುಜಾತಿಯವರೆಂದು ಕರೆಯಲ್ಪಡುವವರು ಇಬ್ಬರು (ಮಾಂಗ್ ಮತ್ತು ಮಹಾರ್) ಹೊತ್ತು ಸಾಗಿಸಬೇಕೆಂಬ ಇಚ್ಛೆ ವ್ಯಕ್ತಪಡಿಸಿದೆ. ಆ ಸುದ್ದಿ ಕೇಳಿ ಸಂಪ್ರದಾಯನ್ಥ ವರ್ಗದವರಿಗೆ ಆಕಾಶವೇ ಕಳಚಿಬಿದ್ದಷ್ಟು ಗಾಬರಿ ! ನನಗೆ ಎಲ್ಲೆಡೆ ದೊರೆತ ಭವ್ಯ ಸ್ವಾಗತ ಹಾಗೂ ನನ್ನ ಭಾಷಣ ಸರಕಾರಕ್ಕೆ ಸಹನವಾಗಲಿಲ್ಲ. ರತ್ನಾಗಿರಿಗೆ ಕೂಡಲೆ ಹಿಂದಿರುಗುವಂತೆ ಸೂಚನೆ ಬಂತು.

ದಾರಿಯಲ್ಲೆ ಮುಂಬೈ. ಆಗ 1924ರ ನವೆಂಬರ್ ಎರಡನೆಯ ವಾರ ಇದ್ದೀತು. ಮುಸ್ಲಿಂ ನಾಯಕ ಶೌಕತ್ ಅಲಿ ಭೇಟಿಗೆ ಬಂದರು. ನನ್ನ ದೇಶಭಕ್ತಿ ಹಾಗೂ ತ್ಯಾಗದ ಗುಣಗಾನ ಮಾಡಿ ಮಾತುಕತೆ

ಆರಂಭಿಸಿದರು ಅನಂತರ ಒಂದು ಬೆದರಿಕೆಯನ್ನೂ ಹಾಕಿದರು :

'ನಿಮ್ಮ ಹಿಂದು ಸಂಘಟನೆ ಮತ್ತು ಶುದ್ಧಿ ಚಳವಳಿಯಿಂದ ಮುಸ್ಲಿಮರಿಗೆ ಕೋಪ ಬಂದಿದೆ. ನೀವು ಈಗಲಾದರೂ ತಿದ್ದಿಕೊಳ್ಳದಿದ್ದರೆ, ಅದರ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ. ಇಷ್ಟರ ಮೇಲೆ ನಿಮ್ಮ ಹಣೆಬರಹ!'

'ಪ್ರಚಂಡ ಬ್ರಿಟಿಷ್ ಸಾಮ್ರಾಜ್ಯಕ್ಕೇ ಅಂಜಲಿಲ್ಲ, ಇನ್ನು ಮುಸ್ಲಿಂ ಗೂಂಡಾಗಳ ಚಾಕು ಕತ್ತರಿಗಳಿಗೆ ಹೆದರಬೇಕೆ ?'

'ನೋಡಿ, ಮುಸ್ಲಿಮರ ರಕ್ಷಣೆಗೆ ಬೇರೆ ಎಷ್ಟೋ ದೇಶಗಳಿವೆ. ಇಲ್ಲಿ ಸರಿಬರದಿದ್ದರೆ ಅವರು ಹಿಂದುಸ್ಥಾನ ಬಿಟ್ಟು ಹೋಗಿಬಿಡಬಹುದು !'

'ಓಹೋ, ಅಗತ್ಯವಾಗಿ! ಇಷ್ಟು ದಿನ ಕಾದಿರುವರಾದರೂ ಏಕೆ? ದಿನನಿತ್ಯವೂ ಫ್ರಾಂಟಿಯರ್ ಮೈಲ್ ಆ ಕಡೆಗೆ ಓಡುತ್ತಿದೆಯಲ್ಲ !'

ಭೀಮಕಾಯದ ಶೌಕತ್ ಅಲಿ ರೋಷದಿಂದ ಮೇಲೆದ್ದರು. ಹೊರಗೆ ಹೋಗುತ್ತಾ, ಗರ್ಜಿಸಿ ಹೇಳಿದರು : 'ನಿಮ್ಮಂಥ ಚೋಟುದ್ದದ ವ್ಯಕ್ತಿಯನ್ನು ಒಂದೇ ಹೊಡೆತಕ್ಕೆ ತೀರಿಸಬಲ್ಲೆ.'

'ಈಗಲೇ ಆಗಲಿ. ನಿಮ್ಮ ಸವಾಲನ್ನು ನಾನೇನು ತಿರಸ್ಕರಿಸುವುದಿಲ್ಲ. ಬನ್ನಿ. ಅಫಜಲಖಾನನ ದೈತ್ಯಾಕಾರದ ಮುಂದೆ ಶಿವಾಜಿ ಸಹ ಕುಳ್ಳನೇ ಆಗಿದ್ದ ; ಅವರಿಬ್ಬರೂ ಭೇಟಿಯಾಗಿದ್ದರು. ಅನಂತರ ನಡೆದ ಇತಿಹಾಸ ಎಲ್ಲರಿಗೂ ಗೊತ್ತೆ ಇದೆ !'

ಅಲಿ ಸಾಹೇಬರು ಮರುಮಾತನಾಡದೆ ಹೊರಟುಬಿಟ್ಟರು.

ರತ್ನಾಗಿರಿಯಲ್ಲಿ ಇನ್ನೂ ಪ್ಲೇಗಿನ ಹಾವಳಿ ನಿಂತಿರಲಿಲ್ಲ. ಅದರಿಂದ ನಾನು ಮತ್ತು ಯಮುನಾ ಶಿರಗಾವಿಯ ದಾಮಲೆಯವರ ಅತಿಥಿಗಳಾಗಿ ಉಳಿದೆವು. ದಿನವೂ ಊಟವಾದ ಬಳಿಕ ಅಂಗಳದಲ್ಲಿ ಶತಪಥ ನಡೆಯುವುದು ನನ್ನ ರೂಢಿ. ಆ ಸಮಯದಲ್ಲಿ ಆ ಮನೆಯಲ್ಲಿ ಕೆಲಸ ಮಾಡುತ್ತಿದ್ದ ಆಳಿಗೆ ಅಕ್ಷರಾಭ್ಯಾಸ ಮಾಡಿಸುತ್ತಿದ್ದೆ.

1925ರ ಮಾರ್ಚ್ ತಿಂಗಳು. ಆಗೊಂದು ದಿನ ನಾಗಪುರದ ವಿಶ್ವನಾಥರಾವ್ ಕೇಳಕರ್ ಮತ್ತು ನನ್ನ ತಮ್ಮ (ಡಾ. ನಾರಾಯಣರಾವ್ ಸಾವರಕರ್) ಶಿರಗಾವಿಗೆ ಬಂದರು. ಅವರು ತಮ್ಮ ಜೊತೆಯಲ್ಲಿ ತರುಣ ಹಿಂದು ಯುವಕನೊಬ್ಬನನ್ನು ನನ್ನ ಭೇಟಿಗೆಂದು ಕರೆತಂದಿದ್ದರು. ಅವರು ಭೀಮಕಾಯದ ತೇಜಸ್ವಿ ವ್ಯಕ್ತಿ. ಅಪಾರ ಕರ್ತೃತ್ವಶಾಲಿ. ಬಂಗಾಲದಲ್ಲೂ ಮಹಾರಾಷ್ಟ್ರದಲ್ಲೂ ಕ್ರಾಂತಿ ಸಂಸ್ಥೆಗಳೊಡನೆ ನಿಕಟ ಸಂಬಂಧ ಹೊಂದಿದ್ದ ಕ್ರಾಂತಿಕಾರಿ ಅವರು ; ಆಗಿನ ಪ್ರಸಿದ್ಧ ದೇಶನಾಯಕರೆಲ್ಲರಿಗೂ ಬೇಕಾದವರಾಗಿದ್ದ ಅಭಿಜಾತ ದೇಶಭಕ್ತ. ಅವರೇ ಡಾಕ್ಟರ್ ಕೇಶವರಾವ್ ಹೆಡಗೆವಾರ್ ; ರಾಷ್ಟ್ರೀಯ ಸ್ವಯಂಸೇವಕ ಸಂಘ ಸ್ಥಾಪಿಸಿದರು.

ಮತ್ತೊಂದು ದಿನ ನೀಳಗಡ್ಡದ ಗಂಭೀರ ವ್ಯಕ್ತಿಯೊಬ್ಬರು ಹೊರಗಿನಿಂದ ಬರುತ್ತಿದ್ದುದನ್ನು ಕಂಡೆ. ಯಾರೆಂದು ವಿಚಾರಿಸಲು ಅಂಗಳಕ್ಕಿಳಿದೆ. ಪರಸ್ಪರ ದೃಷ್ಟಿ ಸಂಧಿಸಿತು. ತಟ್ಟನೆ ಇಬ್ಬರೂ ಮೂಕವಿಸ್ಮಿತರಾಗಿ ಆಲಿಂಗಿಸಿಕೊಂಡೆವು. ಅವರನ್ನು ಒಳಗೆ ಕರೆದೊಯ್ದು ಕೂಡಿಸಿದೆ. ದೀರ್ಘ ರಜೆಯ ನಂತರ ಒಟ್ಟುಗೂಡಿದ ಶಾಲಾ ಬಾಲಕರಂತೆ ನಾವು ಆನಂದವಾಗಿ ಮಾತನಾಡತೊಡಗಿದೆವು. ಅವರು - ಶ್ರೀಯುತ ವಿ.ವಿ.ಎಸ್. ಅಯ್ಯರ್ - ಮದರಾಸಿನಿಂದ ನನ್ನ ಭೇಟಿಯ ಸಲುವಾಗಿ ಬಂದಿದ್ದರು. ನಾನು ಅವರನ್ನು ಬ್ರಿಕ್ಸ್‌ಟನ್ ಜೈಲಿನ ಸರಳುಗಳ ಹಿಂದಿನಿಂದ ನೋಡಿ ಮಾತನಾಡಿದಾಗ ಅದೇ ಕೊನೆಯ ಭೇಟಿ ಅಂದುಕೊಂಡಿದ್ದೆ. ಆದರೆ ಹಾಗಾಗದಿದ್ದುದು ದೈವಕೃಪೆ ! ಹದಿನಾಲ್ಕು ವರ್ಷಗಳ 'ವನವಾಸ' (ನನ್ನ ಭಾಗಕ್ಕೆ 'ಕಾರಾವಾಸ,'

ಅವರ ಭಾಗಕ್ಕೆ 'ಅಜ್ಞಾತವಾಸ')ದ ನಂತರ, ನಾವು ನೋವಿನ ಅಸಂಖ್ಯ ಸ್ಪರ್ಶಗಳಿಂದ ಹೇಗೋ ಉಳಿದುಕೊಂಡು ನಾವು ಸಂಧಿಸಿದ್ದೆವು. ಅಯ್ಯರ್ ಅವರಿಗೆ ರೌಲೆಟ್ ಸಮಿತಿಯು ಒಂದು ಬಿರುದು ಕೊಟ್ಟಿತ್ತು - ಸಾವರಕರರ 'ಬಲಗೈ ಭಂಟ' ಎಂದು. ಅವರು ಶಿರಗಾವಿಯಿಂದ ವಾಪಸು ಹೊರಟಾಗ, ಮನಸ್ಸಿನಲ್ಲೆ ಹೇಳಿಕೊಂಡೆ : 'ಪರವಾಗಿಲ್ಲ, ಅಯ್ಯರ್ ಅವರನ್ನು ಇನ್ನು ಇಚ್ಛೆ ಪಟ್ಟಾಗಲೆಲ್ಲ ಕರೆದು ಮಾತಾಡಿಸಬಲ್ಲೆ!' ಆದರೆ.... ಕೆಲವು ತಿಂಗಳುಗಳ ನಂತರ ಅವರ ನಿಧನದ ವಾರ್ತೆ ನನಗೆ ಮುಟ್ಟಿತು. ನನ್ನ ಆತ್ಮೀಯ ಜೀವವೊಂದು ಅಳಿದುಹೋಯಿತು. ಹಿಂದು ಜನಾಂಗ ಹಾಗೂ ಸಂಸ್ಕೃತಿಯ ಉದಾತ್ತ ಗುಣಸೌರಭದಿಂದ ವಿರಾಜಿಸುತ್ತಿದ್ದ ಪೂರ್ಣ ವಿಕಸಿತ ಪುಷ್ಪವೊಂದು ಮುದುಡಿಹೋಯಿತು. ನಮ್ಮ ಪ್ರೀತಿಯ 'ಋಷಿಜಿ' ಇನ್ನಿಲ್ಲವಾದರು !

ಅಸ್ಪೃಶ್ಯತೆ ಮತ್ತು ಜಾತಿಭೇದ ನಿವಾರಣೆಯಲ್ಲಿ ಮಹಿಳೆಯರು ಮಹತ್ವದ ಪಾತ್ರ ನಿರ್ವಹಿಸ ಬಲ್ಲರೆಂದು ನಂಬಿಕೆ ನನ್ನದು. ಅದಕ್ಕಾಗಿ ನಾವು 'ಅರಿಶಿನ - ಕುಂಕುಮ'ದ ಕಾರ್ಯಕ್ರಮ ರೂಪಿಸಿದೆ. ಎಲ್ಲ ವರ್ಗಗಳ ಮಹಿಳೆಯರೂ ಒಂದೆಡೆ ಸೇರಬೇಕು ; ಪರಸ್ಪರ 'ಅರಿಶಿನ - ಕುಂಕುಮ' ಕೊಡಬೇಕು. ಅಂಥ ಮೊದಲ ಸಾರ್ವಜನಿಕ 'ಅರಿಶಿನ - ಕುಂಕುಮ' ಕಾರ್ಯಕ್ರಮ ದಾಮಲೆಯವರ ಮನೆಯಲ್ಲಿ ನಡೆಯಿತು. ಆಗ ಉಚ್ಚವರ್ಣೀಯ ಸ್ತ್ರೀಯರು ಅಸ್ಪೃಶ್ಯರಿಗೆ 'ಅರಿಶಿನ - ಕುಂಕುಮ' ಕೊಡಲು ಹಿಂದೆಗೆದರು. ನಾನು ಯಮುನಾಳಿಗೆ ಹೇಳಿ, ಎಲ್ಲರಿಗೂ ಕೊಡಿಸಿದೆ. ಅದರಿಂದ ಮೇಲು ವರ್ಗದವರಲ್ಲಿ ದೊಡ್ಡ ಕೋಲಾಹಲವೇ ಎದ್ದಿತು. ಅನೇಕ ದಿನಗಳು ನೆರೆಹೊರೆಯವರು ದಾಮಲೆಯವರ ಮನೆಗೆ ಬಂದುಹೋಗುವುದನ್ನು ಸಹ ನಿಲ್ಲಿಸಿಬಿಟ್ಟರು.

ರತ್ನಾಗಿರಿಯಲ್ಲಿ ನಾನು ಕೆಲ ಕಾಲ ಕಾಂಗ್ರೆಸ್ ಮುಂದಾಳು ಅಪ್ಪಾ ಸಾಹೇಬ ಪಟವರ್ಧನರ ಮನೆಯಲ್ಲೂ, ಆಮೇಲೆ ಬಿ.ಜಿ. ಖೇರರ ಮನೆಯಲ್ಲೂ ತಂಗಿದ್ದೆ. ನನ್ನ ಬಗ್ಗೆ ಜಾಗರೂಕತೆಯಿಂದಿರುವಂತೆ ಈ ಆತಿಥೇಯರಿಗೆ ಅವರ ಹಿರಿಯ ನಾಯಕರಿಂದ ಎಚ್ಚರಿಕೆ ಬಂತು. ಆದರೆ ಅದನ್ನು ಇವರು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ರತ್ನಾಗಿರಿ ಎಂದರೆ ಹಿಂದು ಸನಾತನಿಗಳ ದುರ್ಗಮ ಕೋಟೆ ಇದ್ದಂತೆ. ಅಲ್ಲಿ ಸಾಮಾಜಿಕ ಸುಧಾರಣೆ, ಅಸ್ಪೃಶ್ಯತಾ ನಿವಾರಣೆ ಮುಂತಾದ ಕಾರ್ಯಗಳಿಗೆ ಪ್ರಾರಂಭದಲ್ಲಿ ಕಡು ವಿರೋಧ ಏರ್ಪಟ್ಟಿತ್ತು. ಆದರೂ ಪಾಲುಕಾಕ ಜೋಶಿ, ರಾ.ಬ. ಪರೂಳೇಕರ್, ದತ್ತೋಪಂತ ಲಿಮಯೆ, ಗಜಾನನ ರಾವ್ ಪಟವರ್ಧನ್, ಡಾ. ಸಾವಂತ್ ಮುಂತಾದ ಅನೇಕ ಗಣ್ಯರ ಸಹಕಾರದಿಂದ ಹಿಂದು ಸಂಘಟನೆಯ ಕಾರ್ಯ ಭರದಿಂದ ಸಾಗಿತು.

ಆಗ ಸಾಂಸ್ಕೃತಿಕ ಹಾಗೂ ಸಾಮಾಜಿಕ ಸಂಸ್ಥೆಯಾಗಿ ಪ್ರಾರಂಭಗೊಂಡ ಹಿಂದು ಸಭೆಗೆ ಸದಸ್ಯರನ್ನೂ, ನಿಧಿಯನ್ನೂ ಸಂಗ್ರಹಿಸಲು ಕಾರ್ಯಕರ್ತರ ಗುಂಪಿನೊಡನೆ ಬೀದಿ ಬೀದಿ ಸುತ್ತುತ್ತಿದ್ದೆ. ಒಮ್ಮೆ ಓರ್ವ ಕಟ್ಟರ ಸನಾತನಿ ಗೃಹಸ್ಥರ ಬಾಗಿಲಿಗೆ ಹೋದೆವು. ಜತೆಗಾರರೆಲ್ಲರೂ, 'ಅವರನ್ನು ಮಾತನಾಡಿಸಿ ಉಪಯೋಗವಿಲ್ಲ, ಮುಂದೆ ಹೋಗೋಣ' ಎಂದರು. ಆದರೆ ನಾನು ಕದಲಲಿಲ್ಲ. ಸಹಾಯ ನಿಧಿಗೆ ಕೈಚಾಚಿ ನಿಂತೆ. ಆಗ ಮನೆಯೊಡೆಯರು, 'ನಿಮ್ಮ ಕೆಲಸ ಸರಿಯಲ್ಲ. ಆದರೂ ನೀವೇ ಬಂದು ಕೈಯೊಡ್ಡು ತ್ತಿರುವುದರಿಂದ, ಕೊಡುತ್ತಿದ್ದೇನೆ' ಎಂದು ಹೇಳಿ ಎರಡು ರೂ. ನೀಡಿದರು. ನಾನು ಅವರನ್ನು ಹೊಗಳಿ ಹಾರ್ದಿಕ ಧನ್ಯವಾದಗಳನ್ನು ಅರ್ಪಿಸಿದೆ. ಕೆಲ ದಿನಗಳು ಉರುಳಿದ ನಂತರ ಅದೇ ಮಹನೀಯರು 'ಕಟ್ಟರ ಸಾವರಕರ್‌ವಾದಿ' ಆದರು !

ಇನ್ನೊಬ್ಬ ಮಹನೀಯರು ಬೈಗಳದ ಸುರಿಮಳೆಯನ್ನೇ ಪ್ರಾರಂಭಿಸಿದರು ನನ್ನ ಜತೆಗಿದ್ದ ಆರೇಳು ಉತ್ಸಾಹಿ ಕಾರ್ಯಕರ್ತರ ಮುಖ ಸಪ್ಪೆಯಾಯಿತು. ನಾನು ಎಲ್ಲವನ್ನೂ ಶಾಂತವಾಗಿ ಕೇಳಿದೆ. ಆ ಹಿರಿಯರು ಹೊರಡುವ ಸಮಯದಲ್ಲಿ ಬಗ್ಗಿ ನಮಸ್ಕರಿಸಿ, ನಮ್ಮ ಕಾರ್ಯಕ್ಕೆ ನಿಮ್ಮ ಆಶೀರ್ವಾದ ಬಲ ಇದ್ದರೆ ಅಷ್ಟೇ ಸಾಕು, ಎಂದೆ. ಅನಂತರ ಒಬ್ಬ ಕಾರ್ಯಕರ್ತ ನನ್ನನ್ನು ಪ್ರಶ್ನಿಸಿದ: 'ನಿಮ್ಮಂಥ ಜಗತ್ಪ್ರಸಿದ್ಧ ವ್ಯಕ್ತಿಯನ್ನು ಅವರು ಬಾಯಿ ಬಂದಂತೆ ಅಂದರು. ಅವರಿಗೆ ನೀವು ಅಷ್ಟು ಬಗ್ಗಿ ನಮಸ್ಕರಿಸುವ ಆಗತ್ಯವೇನಿತ್ತು ?' 'ಅವರಿಗೆ ಭಿನ್ನಾಭಿಪ್ರಾಯ ಇದ್ದರೂ ಅವರ ಆಶೀರ್ವಾದದಿಂದ ನಮಗೆ ಲಾಭವಿದೆ' ಎಂದು ಹೇಳಿ, ನಾನು ಮುಂದಕ್ಕೆ ಹೊರಟೆ.

ಸಾರ್ವಜನಿಕ ಶಾಲೆಗಳಲ್ಲಿ ಮಹಾರ (ಅಸ್ಪೃಶ್ಯ)ರ ಮಕ್ಕಳಿಗೂ ಪ್ರವೇಶ ದೊರಕಿಸಲು ಮೊದಲ ಹೋರಾಟ ಆರಂಭಿಸಿದೆ. ಸನಾತನಿಗಳು ಬದ್ಧ ವೈರಿಗಳಂತೆ ನನ್ನನ್ನು ದ್ವೇಷಿಸರಾರಂಭಿಸಿದರು. ತಮ್ಮ ಮಕ್ಕಳು ಮುಸ್ಲಿಂ ಅಥವಾ ಕ್ರಿಶ್ಚನ್ ಹುಡುಗರ ಮಗ್ಗುಲಲ್ಲಿ ಕುಳಿತರೆ ಅವರಿಗೆ ಆತಂಕವಿಲ್ಲ; ಆದರೆ ತಮ್ಮ ಹಿಂದು ಧರ್ಮಬಾಂಧವರ ಜತೆ ಸೇರಬಾರದು! ಅಸ್ಪೃಶ್ಯರೆಂದರೆ ಬೆಕ್ಕು ನಾಯಿಗಿಂತ ಕೀಳು! ಸನಾತನಿಗಳಿಗೆ ನನ್ನ ಉತ್ತರ ಸ್ಪಷ್ಟವಾಗಿತ್ತು : 'ನೀವು ಕ್ರಿಶ್ಚನ್ ಮಕ್ಕಳಿಗೆ ಅಡ್ಡಿ ಮಾಡಬಲ್ಲಿರಾ ? ಇಲ್ಲ, ನಿಮಗೆ ಅಷ್ಟು ಧೈರ್ಯವಿಲ್ಲ. ಅದರ ಪರಿಣಾಮ ಏನಾದೀತೆಂಬುದು ನಿಮಗೆ ಗೊತ್ತಿದೆ. ಬ್ರಿಟಿಷ್ ಸರಕಾರ ಗುಂಡು ಹಾಕುತ್ತದೆ! ಆದರೆ ಅದೇ ಅಸ್ಪೃಶ್ಯರಾದರೆ, ಅವರು ಅಸಹಾಯಕರು ; ಅಶಿಕ್ಷಿತರು ; ಅದಕ್ಕಾಗಿ ನೀವು ಅವರನ್ನು ಅಪಮಾನಿಸುತ್ತೀರಿ. ಮುಸ್ಲಿಮರ ಅನ್ಯಾಯದ ಧೋರಣೆಗಳನ್ನೂ ಒಪ್ಪುತ್ತೀರಿ – ಏಕೆಂದರೆ ಗೂಂಡಾಗಳ ಏಟನ ಭಯ! ಅಸ್ಪೃಶ್ಯನು ಮುಸ್ಲಿಂ ಅಥವಾ ಕ್ರಿಶ್ಚನ್ ಆಗಿ ಮತಾಂತರಗೊಂಡರೆ ಆಗ ಮಾತ್ರ ಸಮಾನ ಸ್ಥಾನಮಾನ ಕೊಡುತ್ತೀರಿ. ಛೀ, ನಾಚಿಕೆಗೇಡು!'

ಈ ದಿಕ್ಕಿನಲ್ಲಿ ಪ್ರಯತ್ನಗಳು ಫಲಿಸತೊಡಗಿದವು ; ಕೊನೆಗೆ ಶಾಲೆಗಳಿಗೆ ಸಂದರ್ಶನವಿತ್ತ ಜಿಲ್ಲಾ ನ್ಯಾಯಾಧೀಶರು ತಮ್ಮ ವರದಿಯಲ್ಲಿ, 'ಶ್ರೀ ಸಾವರಕರರ ಭಾಷಣ ಹಾಗೂ ಪ್ರಯತ್ನಗಳ ಸತ್ಪರಿಣಾಮವಾಗಿ ಅಸ್ಪೃಶ್ಯ ಮಕ್ಕಳು ಸಹ ಎಲ್ಲರೊಡನೆ ಸಮಾನವಾಗಿ ಕುಳಿತು ಶಿಕ್ಷಣ ಪಡೆಯುವಂತಾಗಿದೆ' ಎಂದು ಬರೆದರು. ಇದರ ಜತೆಗೆ ಮೋಸ ಅಥವಾ ಆಸೆಗೆ ಬಲಿಯಾಗಿ ಮತಾಂತರ ಹೊಂದಿದವರ ಶುದ್ಧಿಯೂ ಪ್ರಾರಂಭವಾಯಿತು. ರತ್ನಾಗಿರಿಯಲ್ಲಿ ಕಾರ್ಯನಿರತರಾಗಿದ್ದ ಅಮೆರಿಕನ್ ಮಿಶನ್ ಗಂಟು ಮೂಟೆ ಕಟ್ಟಿಕೊಂಡು ಊರು ಬಿಟ್ಟು ಹೊರಟಿತು.

ಅಸ್ಪೃಶ್ಯರಿಗೆ ದೇವಾಲಯ ಪ್ರವೇಶ ದೊರಕಿಸಿಕೊಡಲು ಮತ್ತೊಂದು ಹೋರಾಟ ನಡೆಯಿತು. ಪುನಃ ಅದಕ್ಕೆ ಸನಾತನಿಗಳ ವಿರೋಧ ; ತಮ್ಮ ದೇವರು, ಧರ್ಮ ಹಾಗೂ ಪರಂಪರೆಗಳು ಅಪಾಯಕ್ಕೊಳಗಾಗಿವೆಯೆಂದು ಅವರು ಬೊಬ್ಬೆ ಹಾಕಿದರು. ಮಹಾರರಾಗಲೀ ಭಂಗಿಗಳಾಗಲೀ ತಮ್ಮ ದೇವರನ್ನು ನೋಡಿದರೆ ಸಾಕು, ಅದು ಮೈಲಿಗೆಯಾಗುವುದೆಂದು ಹೇಳತೊಡಗಿದರು. 'ಅಷ್ಟಕ್ಕೆಲ್ಲ ಮೈಲಿಗೆಯಾಗುವವನು ಅದೆಂಥ ದೇವರು ?' ಎಂದು ನಾನು ಪ್ರಶ್ನಿಸಿದೆ. 'ದೇವರೆಂದರೆ ನಿಜಕ್ಕೂ ಪತಿತಪಾವನ ಅವನು. ಅವನ ಕೃಪೆಯಿಂದ, ದರ್ಶನದಿಂದ ಎಂಥವರೂ ಪುನೀತರಾಗುತ್ತಾರೆ. ಅದಕ್ಕಾಗಿ ಅವನಿಗೆ ಆ ಹೆಸರು ಬಂತು' ಎಂದೆ. ಆದ್ದರಿಂದ 'ಅಸ್ಪೃಶ್ಯತೆಯ ನಿವಾರಣೆ' ಎಂದರೆ, ತಮ್ಮ ಸಹಬಂಧುಗಳನ್ನೇ ದೂರವಿಟ್ಟು ಮನುಷ್ಯತ್ವಕ್ಕೆ ಕಳಂಕಪ್ರಾಯರಾಗಿ ಕೀಳುದೆಸೆಗಿಳಿದಿರುವ ಹಾಗೂ ಹಾದಿ ತಪ್ಪಿಸುವ ಸನಾತನಿ ಸ್ಪೃಶ್ಯರ ಉದ್ಧಾರಕಾರ್ಯ, ಎಂದೆ!

ದಲಿತ ವರ್ಗದ ನಾಯಕ ಪುಣೆಯ ಪಿ.ಎನ್. ರಾಜಭೋಜ್ ನನ್ನೊಡನೆ ಮಾತುಕತೆಯಾಡಿದ ನಂತರ, ತಾವು ಹೋದೆಡೆಯಲ್ಲೆಲ್ಲ, 'ರಾಜಕೀಯ, ಕ್ರಾಂತಿಕಾರಿಗಳ ಜಗತ್ಪ್ರಸಿದ್ಧ ನಾಯಕ ಸಾವರಕರರು ಅಗ್ರಗಣ್ಯ ಸಾಮಾಜಿಕ ಕ್ರಾಂತಿಕಾರಿಯೂ ಆಗಿದ್ದಾರೆ!' ಎನ್ನತೊಡಗಿದರು.

ಕೆಲವು ಕ್ರಿಶ್ಚನ್ ಪಾದ್ರಿಗಳು ಮುಂಬೈ ಗವರ್ನರ್‌ಗೆ ಶುದ್ಧಿ ಚಳವಳಿಯ ವಿರುದ್ಧ ನನ್ನ ಮೇಲೆ ದೂರು ಸಲ್ಲಿಸಿದ್ದೂ ಇದೇ ಸಮಯದಲ್ಲೇ. ಆಗ ಸರಕಾರ ನನ್ನಿಂದ ಸ್ಪಷ್ಟೀಕರಣ ಕೇಳಿತು. ನನ್ನ ಮೊದಲ ಉತ್ತರಕ್ಕೇ ಶಾಸನಕ್ಕೆ 'ಪೂರ್ಣ ಸಮಾಧಾನ' ಆಯಿತು : 'ನಿಮ್ಮ ರಾಜ್ಯದಲ್ಲಿ ಧರ್ಮ ಪರಿವರ್ತನ ಸ್ವಾತಂತ್ರ್ಯ ಇದ್ದೇ ಇದೆ. ಆದ್ದರಿಂದ ಹಿಂದುಗಳ ಶುದ್ಧಿ ಕಾರ್ಯದ ಮೇಲೆ ಮಾತ್ರ ಪ್ರತಿಬಂಧ ಹಾಕಲಾಗದು. ಹಿಂದುಗಳು ಕ್ರಿಶ್ಚನರಾಗುವುದನ್ನು ನೀವು ನಿಲ್ಲಿಸಿ; ಆಮೇಲೆ ನಾವು ಶುದ್ಧಿಕಾರ್ಯ ನಿಲ್ಲಿಸುವ ಬಗ್ಗೆ ಯೋಚನೆ ಮಾಡುತ್ತೇವೆ.'

1926ರ ನವೆಂಬರ್ ತಿಂಗಳಲ್ಲೊಂದು ಶುಭ ದಿನ. ಭಾರತದ ಸಹಸ್ರಾರು ವರ್ಷಗಳ ಇತಿಹಾಸದಲ್ಲೊಂದು ಅಪೂರ್ವ ಮುಹೂರ್ತ. ರತ್ನಾಗಿರಿಯ ಪ್ರಸಿದ್ಧ ವಿಠೋಬ ಮಂದಿರದ ಮುಂದೆ ಸಹಸ್ರಾವಧಿ ನಾಗರಿಕರ ಜನಸಾಗರ ಸೇರಿತ್ತು. ಅಂದು ಮಂದಿರದೊಳಕ್ಕೆ ಅಸ್ಪೃಶ್ಯರ - ಅಲ್ಲ ಪೂರ್ವಾಸ್ಪೃಶ್ಯರ - ಪ್ರವೇಶ. ಊರಿನ ತುಂಬ ಅದೇ ಮಾತು ; ಪರವಾಗಿ, ವಿರೋಧವಾಗಿ ವಾಗ್ವಾದಗಳು. ಸಭೆ ಒಪ್ಪಿದ ನಂತರ ಪ್ರವೇಶಿಸಲಡ್ಡಿಯಿಲ್ಲ ಎಂಬುದು ಬಹು ಜನಾಭಿಪ್ರಾಯ. ಪ್ರಾರಂಭದಲ್ಲಿ ನನ್ನ ಭಾಷಣವನ್ನು ಸಭಿಕರು ಸ್ತಬ್ಧರಾಗಿ ಆಲಿಸಿದರು. ಭಾಷಣ ಕೇಳಿ, ಅಲ್ಲಿಯೇ ಇದ್ದ ನಗರ ನ್ಯಾಯಾಧೀಶರು ಸಹ ಆವೇಶಭರಿತರಾದರು. ತಾವು ಸರಕಾರಿ ಅಧಿಕಾರಿ ಎಂಬುದನ್ನೂ ಮರೆತು, 'ಈಗ ಇನ್ನೂ ಸಹ ಯಾರಿಗಾದರೂ ಸಂದೇಹವಿದೆಯೆ ?' ಎಂದು ಸಭೆಗೆ ಸವಾಲು ಹಾಕಿದರು. ಯಾರೂ ವಿರೋಧಿಸಲು ಮುಂದೆ ಬರಲಿಲ್ಲ.

ಶಿವು ಎಂಬ ಭಂಗಿ ಬಾಲಕನ ಕಂಠ ಬಲು ಮಧುರ. ಆ ಸಮಾರಂಭಕ್ಕಾಗಿಯೇ ನಾನು ರಚಿಸಿದ್ದ ಹಾಡನ್ನು ಅವನು ಕಂಠಪಾಠ ಮಾಡಿದ್ದ. ಸಭೆಯ ಅನುಮತಿಯಂತೆ ಅವನು ಮಂದಿರದ ಸಭಾಮಂಟಪದ ಕೆಳಗಿನ ಮೆಟ್ಟಿಲ ಮೇಲೆ ನಿಂತು ಹಾಡಲಾರಂಭಿಸಿದ. ಅವನ ಸ್ವರದ ಇಂಪು, ಹಾವಭಾವಕ್ಕೆ ಇಡೀ ಜನಸಮುದಾಯ ತಲೆದೂಗುತ್ತಾ ಆನಂದಾಶ್ರುಗಳನ್ನು ಸುರಿಸತೊಡಗಿತು.

**'ತುಮ್ಹೀ ದೇವಾಚ್ಯಾ ಯೇಲು ದಿಲೇ ತೀ ದಾರೀ**
**ಆಭಾರ ಜಾಹಲೇ ಭಾರೀ.....**

*(ನೀವು ಈ ದೇವರ ಬಾಗಿಲಿಗೆ ಬರಲು ಅವಕಾಶ ಕೊಟ್ಟಿರಿ, ನಿಮಗೆ ಅನಂತ ಕೃತಜ್ಞತೆಗಳು.)*

ಕರುಣಾರ್ದ್ರ ಸ್ವರದಲ್ಲಿ ಹಾಡುತ್ತಾ, ಒಂದೊಂದು ಸಾಲಿಗೂ ಒಂದೊಂದು ಮೆಟ್ಟಿಲೇರುತ್ತಾ ಶಿವು ಸಭಾಮಂಟಪವನ್ನು ಪ್ರವೇಶಿಸಿ ದ್ರುತಗತಿಯಲ್ಲಿ ಕೊನೆಯ ಚರಣ ಮುಗಿಸಿದ :

**ಹೇ ಸುತಕ ಯುಗಾಚೇ ಸುಟಲೇ**
**ವಿಧಿಲಿಖಿತ ವಿಟಾಳಹಿ ಫಿಟಲೇ**
**ಜನ್ಮಾಂಚೇ ಭಾಂಡಣ ಮಿಟಲೇ**
**ಶತ್ರೂಂಚೇ ಜಾಳೇ ತುಟಲೇ**
**ಅಮ್ಹಿ ಶತಕಾಚೇ ದಾಸ – ಅಜ ಸಹಕಾರೀ**
**ಆಭಾರ ಜಾಹಲೇ ಭಾರೀ ॥ ....**

*(ಯುಗಯುಗಗಳ ಕಳಂಕ ಕಳೆಯಿತು. ಮೈಲಿಗೆಯ ಹಣೆಬರಹ ತೊಳೆದುಹೋಯಿತು. ಜನ್ಮಾಂತರಗಳ ಜಗಳ ಅಳಿಯಿತು ಸಮಾಜದ ಶತ್ರುಗಳ ಸಂಚು ಮುರಿಯಿತು. ಶತಕಗಳ ಕಾಲ ದಾನರಾಗಿದ್ದ ನಾವು ಇಂದು ಸಹಕಾರಿಗಳಾಗಿದ್ದೇವೆ; (ಆ ಉಪಕಾರಕ್ಕಾಗಿ) ಚಿರಋಣಿಗಳಾಗಿದ್ದೇವೆ.)*

ಪ್ರಚಂಡ ಕರತಾಡನವಾಯಿತು. ಅದುವರೆಗೂ ದೇವಸ್ಥಾನದ ದಿಕ್ಕಿನಲ್ಲಿ ದಿಟ್ಟಿಸಲು ಸಹ ಅಂಜುತ್ತಿದ್ದ ನೂರಾರು ಪೂರ್ವಾಸ್ಪೃಶ್ಯರು ತಮ್ಮ ಮಕ್ಕಳನ್ನು ಮುಂದೆ ಮಾಡಿಕೊಂಡು ವಿಠೋಬ ದೇವರ ದರ್ಶನಕ್ಕೆ ಕಾತರದಿಂದ ಮೆಟ್ಟಿಲುಗಳನ್ನೇರತೊಡಗಿದರು. ಅವರ ಹೃದಯಗಳು ಆನಂದೋದ್ವೇಗದಿಂದ ದುಮುದುಮಿಸುತ್ತಿದ್ದವು; ಕಣ್ಣುಗಳಲ್ಲಿ ಹೊಸ ಕಾಂತಿ ಮಿನುಗುತ್ತಿತ್ತು. ಅವರ ಕಂಠಗಳಿಂದ ಸ್ವರ ಮಿಡಿಯುತ್ತಿತ್ತು.

**ಏಕ ದೇವ ಏಕ ದೇಶ ಏಕ ಆಶಾ**

**ಏಕ ಜಾತಿ ಏಕ ಜೀವ ಏಕ ಭಾಷಾ !**

ಅಖಿಲ ಹಿಂದು ಗಣಪತಿ ಉತ್ಸವ ಹಾಗೂ ಮಹಿಳೆಯರಿಂದ ಸಾರ್ವಜನಿಕ ಅರಿಶಿನ – ಕುಂಕುಮ ಕಾರ್ಯಕ್ರಮಗಳು ನಡಗರದಿಂದ ನಡೆಯತೊಡಗಿದವು. ಆ ಸಮಾರಂಭಗಳಲ್ಲಿ ಭಂಗಿ ಬಾಲಕ, ಬಾಲಕಿಯರು ಗಾಯತ್ರಿ ಹಾಗೂ ದೇವಮಂತ್ರಗಳನ್ನು ಸುಶ್ರಾವ್ಯವಾಗಿ ಹಾಡತೊಡಗಿದರು !

ಒಮ್ಮೆ ಯವಲೆ ಎಂಬ ಊರಿಗೆ ನಾನು ಆಮಂತ್ರಿತನಾಗಿ ಹೋದೆ. ಅಂದಿನ ಸಭೆಯ ಭಾಷಣದ ವಿಷಯ 'ಸ್ಪೃಶ್ಯೋದ್ಧಾರ' ಎಂದು ಹಸ್ತಪತ್ರಗಳಲ್ಲಿ ಅಚ್ಚಾಗಿತ್ತು. ಮೊದಲು ಇರಬೇಕಾದ 'ಅ' ಎಲ್ಲಿ ಹೋಯಿತು ಎಂಬ ಪ್ರಶ್ನೆ ಊರಿನ ತುಂಬ ಎದ್ದಿತು. ಭಾಷಣ ಮಾಡುತ್ತಾ ನಾನೆಂದೆ : 'ಅಸ್ಪೃಶ್ಯರೆಂದು ಭಾವಿಸಲ್ಪಡುವವರ ಬಗ್ಗೆ ಶತಕಾನುಶತಕಗಳಿಂದ ಸ್ಪೃಶ್ಯರು ಮಾಡಿರುವ ಘೋರ ಅನ್ಯಾಯದ ಪಾಪಕ್ಕೆ ಈಗ ತಕ್ಕ ಪ್ರಾಯಶ್ಚಿತ್ತ ಮಾಡಿಕೊಂಡು ಈಗ ಸ್ಪೃಶ್ಯರು ಉದ್ಧಾರ ಹೊಂದಲಿದ್ದಾರೆ ; ಆದ್ದರಿಂದ 'ಸ್ಪೃಶ್ಯೋದ್ಧಾರ' ಎಂಬ ಶಬ್ದವನ್ನು ಯೋಗ್ಯವಾಗಿ ಹಾಗೂ ಯೋಜನಾಪೂರ್ವಕವಾಗಿಯೇ ಬಳಸಲಾಗಿದೆ.'

1930ರಲ್ಲಿ ಅಖಿಲ ಹಿಂದುಗಳ ಸಹಭೋಜನ ಏರ್ಪಡಿಸಿದೆವು. ಪ್ರಾರಂಭದಲ್ಲಿ ನಾನು ಘೋಷಿಸಿದೆ· "ಇಂದಿನಿಂದ ನಾನು ಜಾತಿಸಂಬಂಧವಾದ ಮೇಲುಕೀಳುಗಳನ್ನು ಪರಿಗಣಿಸುವುದಿಲ್ಲ ; ಎಲ್ಲ ಹಿಂದುಗಳೊಡನೆಯೂ ನಾನು ಆಹಾರ ಸ್ವೀಕರಿಸುತ್ತೇನೆ; ಹುಟ್ಟಿನಿಂದ ಅಥವಾ ವೃತ್ತಿಯಿಂದ ಆಗುವ ಜಾತಿಯಲ್ಲಿ ನನಗೆ ನಂಬಿಕೆಯಿಲ್ಲ; ಇನ್ನು ಮುಂದೆ ನಾನು ನನ್ನನ್ನು ಹಿಂದು ಎಂಬುದಾಗಿ ಮಾತ್ರ ಕರೆದುಕೊಳ್ಳುತ್ತೇನೆ" – ಹೀಗೆಂದು ನೀವೆಲ್ಲರೂ ಪ್ರತಿಜ್ಞೆ ಮಾಡಬೇಕು !'

ಈ ರೀತಿಯ ಸಹಭೋಜನ ಕಾರ್ಯಕ್ರಮಗಳು ಆಗಿಂದಾಗ್ಗೆ, ಪೂರ್ವಾಗ್ರಹಪೀಡಿತರಾದ ಸಂಪ್ರದಾಯವಾದಿಗಳ ಹಾಗೂ ಕಪಟ ಸುಧಾರಕರ ತೀವ್ರ ವಿರೋಧದ ನಡುವೆಯೂ ಜಯಪ್ರದವಾಗಿ ನಡೆಯತೊಡಗಿದವು.

ನನ್ನ ಮುಂದಿನ ಯೋಜನೆ – 'ಅಖಿಲ ಹಿಂದು ಕೇಂದ್ರ'ದ ಸ್ಥಾಪನೆ. ಅದಕ್ಕಾಗಿ ರತ್ನಾಗಿರಿಯ ಪ್ರಸಿದ್ಧ ಕೈಗಾರಿಕೋದ್ಯಮಿ ಭಾಗೋಜಿರಾವ್ ಕೀರ್ ಅವರ ಸಂಪರ್ಕ ಮಾಡಿದೆ. ಕೀರ್ ಅವರು ಮಹಾರಾಷ್ಟ್ರದಲ್ಲಿ ಅನೇಕ ದೇವಾಲಯಗಳ ನಿರ್ಮಾಣಕ್ಕೆ ನೆರವಾಗಿದ್ದ ಧನದಾತರು. ನನ್ನ ಮಾತೆಂದರೆ ಅವರಿಗೆ ಅಪಾರ ಶ್ರದ್ಧೆ. ಅವರ ಔದಾರ್ಯದ ಫಲವಾಗಿ ರತ್ನಾಗಿರಿಯಲ್ಲಿ ಭವ್ಯಾಕೃತಿಯ 'ಪತಿತಪಾವನ ಮಂದಿರ' ಮೇಲೆದ್ದಿತು. ಹಿಂದುಸ್ಥಾನದ ಇತಿಹಾಸದಲ್ಲೆ ವೈಶಿಷ್ಟ್ಯಪೂರ್ಣವೆನಿಸುವ ದೇವಸ್ಥಾನ ಅದು.

'ಪತಿತಪಾವನ ಮಂದಿರ'ದ ಉದ್ಘಾಟನೆಯ ಸಮಾರಂಭಕ್ಕೆ ಮೊದಲು ವಿದ್ವತ್ ಸಭೆಯೊಂದನ್ನು ಏರ್ಪಡಿಸಿದೆವು. ಆ ಬಗ್ಗೆ ಪ್ರತ್ಯಕ್ಷ ದರ್ಶಿಯಾಗಿದ್ದ ಹಿಂದುಳಿದ ವರ್ಗಗಳ ನಾಯಕ ಕೃಷ್ಣರಾವ್ ಗಾಂಗುರ್ಡೆ ಹೀಗೆಂದಿದ್ದಾರೆ : 'ಕಾಶಿ, ಪ್ರಯಾಗ ಮುಂತಾದ ಕಡೆಗಳಿಂದ ವೇದಶಾಸ್ತ್ರ ಸಂಪನ್ನರಾದ ಮಹಾ ಮಹಾ ಪಂಡಿತರನ್ನು ತಾತ್ಯಾರಾವ್ ಕರೆಸಿದರು. ಮಹಾರಾಷ್ಟ್ರದ ನಾನಾ ಭಾಗಗಳಿಂದ ಹರಿಜನರನ್ನೂ ಕರೆಸಿದರು. ಸ್ವತಃ ಜಗದ್ಗುರು ಪುರಿ ಶಂಕರಾಚಾರ್ಯರು (ಡಾ. ಕುರ್ತಕೋಟಿ) ಸಹ ಆಗಮಿಸಿದ್ದರು. ಒಂದು ಕಡೆ- 100- 125 ಪಂಡಿತರ ಸಮೂಹ, ಇನ್ನೊಂದು ಕಡೆ ಸ್ವಾತಂತ್ರ್ಯವೀರ ತಾತ್ಯಾರಾವ್ ಸಾವರಕರ್ ! ಅಸ್ಪೃಶ್ಯತೆಯ ಬಗ್ಗೆ ವಾದವಿವಾದ ಆರಂಭವಾಯಿತು. ಧರ್ಮಗ್ರಂಥ ಹಾಗೂ ಸಂಸ್ಕೃತ ಶ್ಲೋಕಗಳ ಆಧಾರ ಗಳೊಡನೆ ಖಂಡನೆ ಮಂಡನೆಗಳು ಆರಂಭಗೊಂಡವು. ಮೂರು ಹಗಲು ಮತ್ತು ಮೂರು ರಾತ್ರಿಗಳ ಕಾಲ ಚರ್ಚೆ ನಡೆಯಿತು. ಸಾವರಕರರಿಗೆ ಆಗಾಗ್ಗೆ ಶಂಕರಾಚಾರ್ಯರು ಬೆಂಬಲ ನೀಡುತ್ತಿದ್ದರು.... ''ಆ ಸಂಸ್ಕೃತ ವಚನಗಳು, ವಾದವಿವಾದಗಳು ನಮಗೆ ಹೇಗೆ ತಿಳಿಯಬೇಕು ? ನಮಗೆ ಯಾರೂ ಕಲಿಸಲಿಲ್ಲ; ನಾವೂ ಕಲಿಯಲಿಲ್ಲ. ಆದರೆ ಇಷ್ಟಂತೂ ಅರ್ಥವಾಯಿತು : ಅಸ್ಪೃಶ್ಯತೆ ಹಿಂದು ಧರ್ಮಕ್ಕೆ ಸೇರಿದ್ದಲ್ಲ, ಅದು ಕೇವಲ ರೂಢಿಯಾಗಿ ಬೆಳೆದುಬಂದದ್ದು'' ಎಂದು ಘೋಷಿಸಿ ಸ್ವಾತಂತ್ರ್ಯವೀರ ಸಾವರಕರರು ಆ ಎಲ್ಲ ಪಂಡಿತರನ್ನೂ ಸೋಲಿಸಿದರು ; ಈ ಮಹತ್ವಪೂರ್ಣ ವಿವಾದದಲ್ಲಿ ಜಯಗಳಿಸಿದರು. ದೇವರು ಅಸ್ಪೃಶ್ಯರಾದ ನಮ್ಮ ಭಾಗಕ್ಕೆ ಎಂತಹ ಮಹಾಪುರುಷನನ್ನು ಕರುಣಿಸಿದ್ದಾನೆ, ಎಂಬ ಕೃತಜ್ಞತಾಭಾವದಿಂದ ನಮ್ಮೆಲ್ಲರ ಅಂತಃಕರಣ ಪುಲಕಿತವಾಯಿತು.'

ಕೊನೆಗೆ, ಅಲ್ಲಿ ಬಂದಿದ್ದ ವಿದ್ವಾಂಸರು ನನಗೆ ಹೇಳಿದರು : ಶಾಸ್ತ್ರರೀತಿಯಾಗಿ ನೋಡಿದರೆ ನಿಮ್ಮ ಮಾತು ನಿಜಕ್ಕೂ ಸರಿಯಾಗಿದೆ. ಆದರೆ ಸಮಾಜ ಇಂದಿಗೂ ಬಹಳ ಹಿಂದೆ ಉಳಿದಿದೆ, ನಿಮ್ಮ ಕೃತಿಯನ್ನು ಅದು ಸಹಿಸುವುದಿಲ್ಲ.'

'ಸರಿ, ಸರಿ' ಎಂದಷ್ಟೆ ಹೇಳಿ ನಾನು ನಕ್ಕೆ!

ಪತಿತಪಾವನ ಮಂದಿರದಲ್ಲಿ ಶಾಸ್ತ್ರೋಕ್ತವಾಗಿ ಮೂರ್ತಿ ಪ್ರತಿಷ್ಠಾಪನೆ ಮಾಡಲು ಭಾಗೋಜಿ ಕೀರ್ ಅವರು ಕಾಶಿ, ಮುಂಬೈ, ನಾಸಿಕ್ ಮುಂತಾದ ಸ್ಥಳಗಳಿಂದ ವಿದ್ಯಾಸಂಪನ್ನ ಬ್ರಾಹ್ಮಣರನ್ನು ಕರೆಸಿದ್ದರು. ಅದನ್ನು ಸಹಿಸಲಾರದೆ ರತ್ನಾಗಿರಿಯ ಸನಾತನಿಗಳು ಪರ ಊರಿನ ಬ್ರಾಹ್ಮಣರ ಬಳಿ, 'ಭಾಗೋಜಿ ಕೀರರು ಭಂಡಾರಿ ಜಾತಿಯವರು. ಅವರು ಕಟ್ಟಿಸಿದ ಮಂದಿರದಲ್ಲಿ ವೇದೋಕ್ತ ಪದ್ಧತಿಯಿಂದ ಮೂರ್ತಿ ಪ್ರತಿ ಷ್ಠಾಪಿಸುವುದು ಯೋಗ್ಯವಲ್ಲ' ಎಂದು ಹೇಳಿ ಬುದ್ಧಿಭೇದ ಉಂಟುಮಾಡಿದರು. ಆಗ ಹೊರಗಿನ ಬ್ರಾಹ್ಮಣರು ಸಹ ಸಮಾರಂಭದಲ್ಲಿ ಭಾಗವಹಿಸಲು ನಿರಾಕರಿಸಿದರು. ನಾನು ಅವರನ್ನು ಕರೆಸಿ, ನಿರ್ಧಾರದ ಧ್ವನಿಯಲ್ಲಿ ಹೇಳಿದೆ :

'ನೀವು ವೇದೋಕ್ತವಾಗಿಯೇ ಎಲ್ಲವನ್ನೂ ನಡೆಸಿಕೊಡಬೇಕು. ಇಲ್ಲವಾದರೆ ನಾನಂತೂ ಕೆಲಸ ನಿಲ್ಲಿ ಸುವುದಿಲ್ಲ. ''ಹಿಂದು ಧರ್ಮ ಕೀ ಜಯ್'' ಎಂಬ ಒಂದೇ ಒಂದು ಮಂತ್ರ ಉಚ್ಚರಿಸಿ, ಮೂರ್ತಿಯನ್ನು ಸ್ಥಾಪಿಸಿಬಿಡುತ್ತೇನೆ.'

ಈ ಮಾತು ಕೇಳಿ, ಅವರಲ್ಲಿ ಕೆಲವರು ಮನಸ್ಸು ಗಟ್ಟಿಮಾಡಿ ಕಾರ್ಯಕ್ಕೆ ನಿಂತರು.

1931ರ ಫೆಬ್ರವರಿ 22 ಉದ್ಘಾಟನೆ ದಿನ. ಅಂದು ಸಭೆಯಲ್ಲಿ ಐದು ಸಹಸ್ರಕ್ಕೂ ಮೇಲ್ಪಟ್ಟು ಜನ. ಎಲ್ಲ ಜಾತಿಮತ ಪಂಥಗಳ ಹಿಂದುಗಳೂ ಒಂದಾಗಿ ಸೇರಿದ್ದರು. ಪುರಿಯ ಶಂಕರಾಚಾರ್ಯರೇ

ಸಮಾರಂಭದ ಅಧ್ಯಕ್ಷರು. ನಾನು ಮೊದಲೇ ಸಿದ್ಧಗೊಳಿಸಿದ ಕ್ರಮದಲ್ಲಿ ಕಾರ್ಯಕ್ರಮಗಳು ಆರಂಭವಾದವು. ಬ್ರಾಹ್ಮಣರಿಂದ ಭಂಗಿಗಳವರೆಗೆ ಎಲ್ಲ ಜಾತಿ ಮತಗಳಿಗೂ ಸೇರಿದ ಇಪ್ಪತ್ತು ಹಿಂದು ಹೆಣ್ಣು ಮಕ್ಕಳು ಒಕ್ಕೊರಲಿನಿಂದ ಕೈಜೋಡಿಸಿ ಹಾಡಿದರು :

**ಉದ್ಧರಸೀ ಗಾ ಹಿಂದುಜಾತಿಸೀ ಕೇವ್ಹಾ**
**ಹೇ ಹಿಂದುಜಾತಿಚ್ಯಾ ದೇವಾ ॥**
**ಅಬ್ರಾಹ್ಮಣ ಚಂಡಾಲ ಪತಿತಚೀ ಆಮ್ಹೀ**
**ತುಮ್ಹಿ ಪತಿತಪಾವನ ಸ್ವಾಮೀ....**

*(ಹೇ, ಹಿಂದುಜಾತಿಯ ಪರಮೇಶ್ವರ, ಹಿಂದು ಜಾತಿಯನ್ನು ಎಂದಿಗೆ ಉದ್ಧರಿಸುವೆಯೋ ! ನಾವೆಲ್ಲರೂ (ರಾಷ್ಟ್ರಕ್ಕೆ ರಾಷ್ಟ್ರವೇ) ಅಬ್ರಾಹ್ಮಣರೂ ಚಂಡಾಲರೂ ಪತಿತರೂ ಆಗಿದ್ದೇವೆ ; ನೀನು ಪತಿತಪಾವನನಾದ ಸ್ವಾಮಿ.... ಎಂದಿಗೆ ಉದ್ಧರಿಸುವೆ ?)*

ಮಂತ್ರಗಳು ಮೊಳಗುತ್ತಿರಲು, ವೇದವಿದ್ಯಾ ಸಂಪನ್ನನಾದ ಭಂಗಿ ಬಾಲಕನೊಬ್ಬ ಸೀತಾಲಕ್ಷ್ಮಣ ಸಮೇತನಾದ ಪತಿತಪಾವನನ ಮೂರ್ತಿಯನ್ನು ಪ್ರತಿಷ್ಠಾಪಿಸಿದ. ಅರ್ಚಕನ ಕಾರ್ಯ ನಿರ್ವಹಿಸಲು ಅವನಿಗೆ ವಿಶೇಷ ಶಿಕ್ಷಣ ಕೊಡಿಸಿದ್ದೆ. ಪೂಜ್ಯ ಶಂಕರಾಚಾರ್ಯರು ಮಂದಿರವನ್ನು ಉದ್ಘಾಟಿಸಿದರು. ಭಾರಿ ವೈಭವದ ಹಬ್ಬದಂತೆ ಕಾರ್ಯಕ್ರಮ ನಡೆಯಿತು. ಕೊನೆಯದಾಗಿ ಅಲ್ಲಿ ಉಪಸ್ಥಿತನಿದ್ದ ಪ್ರಸಿದ್ಧ ಚಿತ್ರಕಾರ ದ.ಘೋ. ರೇಗೆ ಹೇಳುವಂತೆ– 'ತಾತ್ಯಾ ಅವರು ತಮ್ಮ ಮಧುರ ವಾಣಿಯಿಂದ ಎಲ್ಲರನ್ನೂ ಮಂತ್ರಮುಗ್ಧಗೊಳಿಸಿದರು. ಭಾಗೋಜಿರಾವ್ ಕೀರರ ಔದಾರ್ಯ, ಭಕ್ತಿಭಾವನೆ, ಅಪೂರ್ವ ಕರ್ತೃತ್ವಗಳನ್ನು ತಮ್ಮ ಪ್ರಭಾವಶಾಲಿ ಶೈಲಿಯಲ್ಲಿ ವರ್ಣಿಸುತ್ತಿದ್ದಾಗಲಂತೂ, ಸಭಿಕರು ಚಿತ್ರದಂತೆ ನಿಶ್ಚಲರಾಗಿ ಅವರ ಕಡೆಗೇ ದಿಟ್ಟಿಸುತ್ತಿದ್ದರು. ಕೀರರಿಗಂತೂ ಹೃದಯ ತುಂಬಿಬಂತು ; ಅವರ ಕಣ್ಣುಗಳಿಂದ ನೀರು ತೊಟ್ಟಿಡುತ್ತಿದ್ದುದನ್ನು ನಾನು ಕಣ್ಣಾರೆ ನೋಡಿದೆ !'

ಪತಿತಪಾವನ ಮಂದಿರವು ಅಖಿಲ ಹಿಂದುಗಳ ಪೂಜೆಗೆ, ಸಭೆ ಸಮಾರಂಭಗಳಿಗೆ, ಸಹಭೋಜನಗಳಿಗೆ, ಪ್ರಚಾರಕ್ಕೆ ಕೇಂದ್ರವಾಯಿತು. ಸಕಲ ಹಿಂದೂಗಳು ಅಲ್ಲಿ ದಿನವೂ ಬಂದು ಸೇರತೊಡಗಿದರು. ಆಗ ನಾನು ಹೋಗಿ, ಪಕ್ಕದಲ್ಲಿದ್ದ ವಿಶಾಲ ವೃಕ್ಷದ ಕೆಳಗೆ ನಿಂತು ಭಜನೆ ರಚಿಸಿ ಹೇಳಿಕೊಡುತ್ತಿದ್ದೆ :

**ತುಮ್ಹೀ ಅಮ್ಹೀ ಸಕಲ ಹಿಂದೂ । ಬಂಧು ಬಂಧೂ ।**
**ತೋ ಮಹಾದೇವಜೀ ಪಿತಾ ಅಪುಲಾ ಚಲಾ ತಯಾ ವಂದೂ !**

**...........**

**ಅಖಿಲ ಹಿಂದು ವಿಜಯಧ್ವಜ ಹಾ ಉಭವು ಯಾ ಪುನ್ಹಾ.....**

**...........**

**ಸಂತ ರೋಹಿದಾಸ । ರೋಹಿದಾಸ ಸಂತ**
**ಜಯಾಸೀ ಭೇಟೇ ಭಗವಂತ !**

**...........**

**ಘ್ಯಾ ಘ್ಯಾ ಘ್ಯಾ ಶಪಥಾ**
**ತರುಣಾನೋ ! ಮರುಹೀ ದೇಶಾಕರಿತಾ !**

.............

ಮತ್ತು ಕೊನೆಯದಾಗಿ -

...........................

**ಆಯೀಚ್ಯಾಚೀ ಬಾಗೇಮಧುನೀ**
**ತಾಜೀ ತಾಜೀ ವೇಚುನಿ ವೇಚುನಿ**
**ಮುಲೀ ಗುಂಫಿತೀ ಆಯೀಚ್ಯಾಚೀ ವೇಣೀಂತೂನಿ ಫುಲಾ**
**ದಾವಿತೀ, ದೇವಾ ದೀಪ ತುಲಾ**

*(ತಾಯಿಯದೇ ಪುಷ್ಪೋದ್ಯಾನದಲಿ*
*ಹೊಸ ಹೊಸ ಹೂಗಳನಾರಿಸಿ ಕೊಯ್ದು*
*ಬಾಲಿಕೆಯರಿದೊ ತಾಯಿಯ ಹೆರಳಿಗೆ ಹಾರವ ಕಟ್ಟಿ*
*ಅರ್ಪಿಸಿ, (ದೇವಾ) ಆರತಿಯನಿದೋ ಬೆಳಗುವೆವು!)*

ಪತಿತಪಾವನ ಮಂದಿರದ ಪಕ್ಕದಲ್ಲಿ ಅಖಿಲ ಹಿಂದು ಉಪಾಹಾರ ಗೃಹವೊಂದು ಆರಂಭವಾಯಿತು. ಓರ್ವ ಬ್ರಾಹ್ಮಣ ಯುವಕ ಅದರ ವ್ಯವಸ್ಥಾಪಕ ; ತಿಂಡಿ ತಯಾರಕ ಓರ್ವ ಮಹಾರ ಬಾಲಕ ! ಬಂದು ಹೋಗುವವರ ಅಭಿಪ್ರಾಯ ಸಂಗ್ರಹಕ್ಕಾಗಿ ಅಲ್ಲಿ ಒಂದು ಪುಸ್ತಕವನ್ನೂ ಇಟ್ಟಿದ್ದೆವು.

ರತ್ನಾಗಿರಿಯ ಕೋಟೆ ಭಾಗದಲ್ಲಿ ಶ್ರೀಮಂತ ಕೀರರು ನಿರ್ಮಿಸಿದ್ದ ಭಾಗೇಶ್ವರ ದೇವಾಲಯವಿತ್ತು. ಅದನ್ನು ಸಹ ಪೂಜ್ಯ ಶಂಕರಾಚಾರ್ಯರ ಸಮ್ಮುಖದಲ್ಲಿ ಪೂರ್ವಾಸ್ಪೃಶ್ಯರಿಗೆ ತೆರೆಯಲಾಯಿತು. ನಾನು ಹೇಳಿಕೊಟ್ಟಿದ್ದ ಪ್ರಾರ್ಥನೆಯನ್ನು ಭಂಗಿ ಬಾಲಕಿಯರಿಬ್ಬರು ಆರ್ತಸ್ವರದಲ್ಲಿ ಹೃದಯ ಕರಗುವಂತೆ ಹಾಡಿದರು :

**ಮಲಾ ದೇವಾಚೀ ದರ್ಶನ ಘೇವು ದ್ಯಾ**
**ಡೋಳೇ ಭರೂನ್ ದೇವಾಸ ಮಲಾ ಪಾಹು ದ್ಯಾ ||**

................

**ಮೀ ತಹಾನ್, ಜಲ ತೋ ಜಾಣ್**
**ಮೀ ಕುಡಿ ಮರ್ಝಾ ತೋ ಪ್ರಾಣ್**
**ಮೀ ಭಕ್ತ ನಿ ತೋ ಭಗವಾನ್ -**
**ಚರಣ ತ್ಯಾಚೇ ಶಿವೂ ದ್ಯಾ**
**ತೋ ಹಿಂದುದೇವ, ಮೀ ಹಿಂದು**
**ಮೀ ದೀನ ತೋ ದಯಾಸಿಂಧು**
**ತುಮ್ಹೀ ಮಾರ್ಝೀ ಧರ್ಮಾಚೇ ಬಂಧು**
**ಅಡವು ನಕಾ ಜಾಊ ದ್ಯಾ ||**

*(ನನ್ನನ್ನು ದೇವರ ದರ್ಶನ ಮಾಡಲು ಬಿಡು ; ಕಣ್ತುಂಬ ದೇವರನ್ನು ನೋಡಲು ಬಿಡು.... ನಾನೇ ದಾಹ, ಅವನೆನ್ನ ಪಾನ ; ನಾನು ಜಡದೇಹ, ಅವನೇ ನನ್ನ ಪ್ರಾಣ ! ನಾನು ಭಕ್ತ, ಆತ ನನ್ನ ಭಗವಂತ ! ಆತನ ಚರಣ ಮುಟ್ಟಲು ಅವಕಾಶ ಕೊಡು. ಅವನು ಹಿಂದುದೇವ, ನಾನು ಹಿಂದು ; ನಾನು ದೀನ,*

*ಅವನು ದಯಾಸಿಂಧು ನೀನು ನನ್ನ ಧರ್ಮಬಂಧು - ಅಡ್ಡಿಪಡಿಸಬೇಡ, ಮುಂದೆ ಹೋಗಲು ಬಿಡು!)*

ಅಂದು ಓರ್ವ ಭಂಗಿ ಬಾಲಕ ರತ್ನಾಗಿರಿಯ ಹಿಂದುಗಳ ಪರವಾಗಿ ಶಂಕರಾಚಾರ್ಯರಿಗೆ ಪುಷ್ಪಹಾರ ಅರ್ಪಿಸಿದ. ಅದನ್ನು ನೋಡಿ, ಆದ್ಯ ಶಂಕರರು ಗಂಗೆಯ ದಡದಲ್ಲಿ ಅಸ್ಪೃಶ್ಯ ಅದ್ವೈತಿಯೊಬ್ಬನ್ನು ಅಪ್ಪಿಕೊಂಡ ಅತೀತ ದೃಶ್ಯ ಕಣ್ಣಿಗೆ ಕಟ್ಟಿತು.

ನನ್ನ ಶರೀರ ಈಗ ನೀರೋಗಿಯಾಗಿತ್ತು; ಆರೋಗ್ಯ ಸಂಪನ್ನತೆಯಿಂದ ಕಾರ್ಯೋತ್ಸಾಹ ತುಂಬಿ ತುಳುಕ ತೊಡಗಿತು. ಸಹಕಾರಿಗಳ ಗುಂಪಿನೊಡನೆ ಗ್ರಾಮದಿಂದ ಗ್ರಾಮಕ್ಕೆ ಯಾತ್ರೆ ಹೊರಟೆ. ಜನವಸತಿಗಳು ಇದ್ದೆಡೆಯಲ್ಲೆಲ್ಲ ನಾವು ಹಿಂದು ಸಂಘಟನೆಯ ಕಹಳೆ ಮೊಳಗಿಸುತ್ತಾ ಹೊರಟೆವು; ಅಸ್ಪೃಶ್ಯರನ್ನು 'ಪೂರ್ವಾಸ್ಪೃಶ್ಯ' ರನ್ನಾಗಿ ಮಾಡುತ್ತಾ ಮುನ್ನಡೆದೆವು.

ರತ್ನಾಗಿರಿಯಲ್ಲಿ ಮಸೀದಿಯ ಮುಂದೆ ವಾದ್ಯಸಹಿತ ಹಿಂದುಗಳು ಮೆರವಣಿಗೆ ಮಾಡುವುದನ್ನು ಮುಸ್ಲಿಮರು ವಿರೋಧಿಸಲಾರಂಭಿಸಿದರು. ತುರ್ಕಿ ಮುಂತಾದ ಇತರ ಮುಸ್ಲಿಂ ದೇಶಗಳಲ್ಲಿ ವಾದ್ಯಗಳಿಗೆ ನಿಷೇಧವಿಲ್ಲ. ಆದರೆ ಇಲ್ಲಿ ಹಿಂದುಗಳನ್ನು ಅಪಮಾನಿಸಿ, ವಿರೋಧಿಸುವ ಸಲುವಾಗಿಯೇ ಮುಸ್ಲಿಮರು ಆ ವಿಷಯ ಮುಂದೆ ಮಾಡುತ್ತಿದ್ದರೆಂಬುದು ಸ್ಪಷ್ಟವಾಗಿಯೇ ಇತ್ತು. ಆದರೆ ನಾವು ಅವರ ಬೆದರಿಕೆಗೆ ತಲೆಬಾಗಲಿಲ್ಲ ; ನಮ್ಮ ಧಾರ್ಮಿಕ, ಸಾಮಾಜಿಕ ಹಾಗೂ ನಾಗರಿಕ ಹಕ್ಕುಬಾಧ್ಯತೆಗಳಿಗನುಗುಣವಾಗಿ ವೈಭವದಿಂದ ಮೆರವಣಿಗೆ ನಡೆಸಿದೆವು. ಅದಾದ ನಂತರ ಮುಸ್ಲಿಮರೂ ಮೆರವಣಿಗೆ ನಡೆಸಿ, 'ನಮಗೆ ಸ್ವರಾಜ್ಯ ಬೇಕಾಗಿಲ್ಲ ; ಸ್ವರಾಜ್ಯ ಚಳವಳಿಯಲ್ಲಿ ನಾವು ಸಹಕರಿಸುವುದಿಲ್ಲ' ಎಂಬ ಫಲಕಗಳನ್ನು ಪ್ರದರ್ಶಿಸಿದರು. ಅದಕ್ಕೆ ನಾವು ದಿಟ್ಟವಾಗಿ ಉತ್ತರಿಸಿದೆವು: 'ಮಿತ್ರಶ್ರೇಷ್ಠರೇ! ನಿಮ್ಮ ಕುಲಗೋತ್ರಗಳೆಲ್ಲ ನಮಗೆ ಗೊತ್ತು. ನಿಮ್ಮಿಂದ ಸಹಕಾರ ಬಯಸುವಷ್ಟು ಅವಿವೇಕಿಗಳು ನಾವಲ್ಲ!' ಇಷ್ಟಾದರೂ ನಾವು ರಾಷ್ಟ್ರೀಯ ಹಬ್ಬಗಳ ಸಮಯದಲ್ಲಿ ಮುಸ್ಲಿಂ ಹಾಗೂ ಕ್ರಿಶ್ಚನ್ ಮನೆಗಳಿಗೂ ಹೋಗಿ ಶುಭಾಶಯ ಹೇಳಿ ಬರುತ್ತಿದ್ದೆವು.

ಜಿಲ್ಲೆಯ ನಾನಾ ಸ್ಥಳಗಳಿಂದ ಹಿಂದು ಸಂಘಟನೆಯ ಕಾರ್ಯಕ್ಕಾಗಿ ಪ್ರಚಾರಕರನ್ನು ಕಳುಹಿಸುವಂತೆ ಬೇಡಿಕೆಗಳು ಬರತೊಡಗಿದವು. ಆಗ, 'ಪ್ರಚಾರಕರು ಯಾರೂ ಇಲ್ಲ, ನಾನೇ ಬರುತ್ತೇನೆ' ಎಂದು ಉತ್ತರ ಬರೆದು ಹೋಗಿಬರುತ್ತಿದ್ದೆ.

ರತ್ನಾಗಿರಿಯಲ್ಲಿ ಶುದ್ಧ ಚಳವಳಿಯ ಆರಂಭದಲ್ಲಿ, ಮಾತೃಧರ್ಮಕ್ಕೆ ಮೊಟ್ಟಮೊದಲಾಗಿ ಮರಳಿದವರೆಂದರೆ ಅಲ್ಲಿನ ಥಾಕ್ರನ್ ಕುಟುಂಬದವರು - ಗಂಡ, ಹೆಂಡತಿ ಮತ್ತು ಆರು ಮಕ್ಕಳು. ಹಾಗೆ ವಾಪಸಾದವರಿಗೆ ಸಮಾಜದಲ್ಲಿ ಯೋಗ್ಯ ಸ್ಥಾನಮಾನ, ಸಂಪರ್ಕ ಕಲ್ಪಿಸುವ ಬಗ್ಗೆಯೂ ನಾವು ವಿಶೇಷ ಗಮನ ವಹಿಸುತ್ತಿದ್ದೆವು.

ನನ್ನ ಭೇಟಿಗೆಂದು ಬಂದುಹೋಗುತ್ತಿದ್ದವರನ್ನು ಸ್ವದೇಶಿ ವಸ್ತುಗಳನ್ನೇ ಬಳಸುವಂತೆ ಒತ್ತಾಯಿಸುವುದು ನನ್ನ ರೂಢಿ. ನನ್ನ ಸಲಹೆಯಂತೆ ರತ್ನಾಗಿರಿಯ ಪ್ರಾಥಮಿಕ ಶಾಲೆಯ ಶಿಕ್ಷಕಿಯರು ಒಂದು 'ಸ್ವದೇಶಿ ಭಂಡಾರ' ತೆರೆದರು. ಮೊದಲ ತಿಂಗಳು ಕಳೆದ ನಂತರ ಅವರು ಸಪ್ಪೆ ಮುಖ ಹಾಕಿಕೊಂಡು ಬಂದು ಹೇಳಿದರು : 'ತಾತ್ಯಾ, ಒಂದು ತಿಂಗಳಲ್ಲಿ ನಮಗೆ ಬಂದಿರುವ ಲಾಭ ಬರೀ ಎರಡು ರೂಪಾಯಿ.'

'ನೀವು ಈಗಿನಷ್ಟೂ ಪ್ರಯತ್ನಿಸದಿದ್ದರೆ, ಆ ಎರಡು ರೂ. ಸಹ ಪರದೇಶಕ್ಕೆ ಹೊರಟುಹೋಗುತ್ತಿತ್ತು.

ಆದ್ದರಿಂದ ಕೇವಲ ಎರಡು ರೂ. ಆದರೂ, ಅದು ನಮ್ಮದೇ ಆಗಿದೆ ; ಅದರ ನಿಜವಾದ ಬೆಲೆ ಬಹಳ ಹೆಚ್ಚಿನದು' ಎಂದೆ

ಬಂದಿದ್ದವರ ಮುಖ ಗೆಲುವಾಯಿತು !

ಮಹಾತ್ಮಾ ಗಾಂಧಿಯವರು ರತ್ನಾಗಿರಿಗೆ ಬಂದದ್ದು 1927ರ ಮಾರ್ಚ್ 1ರಂದು. ಅಂದು ಅವರು ಸಾರ್ವಜನಿಕ ಸಭೆಯಲ್ಲಿ, 'ನಾನು ರತ್ನಾಗಿರಿಗೆ ಬಂದದ್ದು ಮುಖ್ಯವಾಗಿ ಸಾವರಕರರ ದರ್ಶನಕ್ಕೆ' ಎಂದರು. ನನಗೆ ಆ ವಿಷಯ ತಿಳಿದದ್ದು ಆಗಲೇ - ಯಾರೋ ಸಭೆಗೆ ಹೋಗಿದ್ದವರ ಮೂಲಕ ! ಕೂಡಲೆ ನಾನು ಅವರ ಆತಿಥ್ಯಕ್ಕೆ ಮನೆಯಲ್ಲಿ ಸರಳ ಸಿದ್ಧತೆ ಮಾಡಿಕೊಂಡೆ. ನಾನಿದ್ದ ಬೀದಿಯ ತುದಿಗೆ ಹೋಗಿ ನಿರೀಕ್ಷಿಸುತ್ತಾ ನಿಂತೆ. ಮಹಾತ್ಮಾಜಿ ವಾಹನದಿಂದ ಇಳಿದು ನನ್ನನ್ನು ಬಿಗಿಯಾಗಿ ಆಲಿಂಗಿಸಿಕೊಂಡರು. 'ಇತ್ತ ಬನ್ನಿ' ಎಂದು ನಾನು ಹೆಜ್ಜೆ ಮುಂದಿಟ್ಟೆ. ನನ್ನ ಹೆಗಲ ಮೇಲೆ ತಮ್ಮ ಕೈ ಊರಿಕೊಂಡು ನಡೆಯುತ್ತಾ ಅವರು ನಕ್ಕು ಹೇಳಿದರು : 'ಸಾವರಕರ್‌ಜೀ, ಈಗ ನೀವೇ ನನಗೆ ದಾರಿ ತೋರಿಸಬೇಕು.' ಅವರ ಮಾತಿನ ಮೋಡಿಗೆ ನಾನೂ ನಕ್ಕೆ. ನಮ್ಮ ಹಿಂದೆಯೇ ಶ್ರೀಮತಿ ಕಸ್ತೂರಿ ಬಾ ಬರುತ್ತಿದ್ದರು. ಅವರು ಮನೆಯೊಳಗೆ ಕಾಲಿಡುತ್ತಲೇ ನೇರವಾಗಿ ಅಡಿಗೆಮನೆಯಲ್ಲಿದ್ದ ಯಮುನಾಳ ಬಳಿಗೆ ಹೋದರು. ಗಾಂಧೀಜಿ ಮಂಚದ ಮೇಲೆ ಕುಳಿತ ನಂತರ ನಾನೂ ಒಂದು ಕುರ್ಚಿ ಎಳೆದುಕೊಂಡು ಅವರ ಹತ್ತಿರವೇ ಕುಳಿತೆ. ಮಾತುಕತೆ ಆರಂಭವಾಯಿತು.

ರಾಜಕೀಯವಾಗಿ ನಮ್ಮಿಬ್ಬರಲ್ಲೂ ಸಹಮತವಿರಲಿಲ್ಲ. ಚರಕ ತಿರುಗಿಸಿ ಖಾದಿ ತೊಟ್ಟುಕೊಳ್ಳುವುದರಿಂದ ಸ್ವಾತಂತ್ರ್ಯ ಬರುವುದಿಲ್ಲವೆಂದು ನಾನು ನೇರವಾಗಿ ತಿಳಿಸಿಬಿಟ್ಟೆ.

'ಆದರೆ, ಪ್ರಯೋಗ ನಡೆಸಲು ನಿಮ್ಮ ಆಕ್ಷೇಪವೇನೂ ಇಲ್ಲವಷ್ಟೆ ?' ಎಂದರು ಗಾಂಧೀಜಿ.



'ಹುಡುಗರು ಮತ್ತು ಕಪ್ಪೆಗಳ ಕಥೆ ನಿಮಗೆ ಗೊತ್ತಿದೆ. ನಿಮ್ಮ ಪ್ರಯೋಗದಿಂದ ಇಡೀ ರಾಷ್ಟ್ರ ಹಾನಿಗೊಳಗಾಗುತ್ತದೆಂಬುದನ್ನು ಮರೆಯಬಾರದು' ಎಂದೆ.

ಕೊನೆಯಲ್ಲಿ ಗಾಂಧೀಜಿ, 'ನಮ್ಮಿಬ್ಬರದೂ ಅಂತಿಮವಾಗಿ ಒಂದೇ ಗುರಿ. ಇಬ್ಬರೂ ಹಿಂದುತ್ವ ಹಾಗೂ ಹಿಂದುಸ್ಥಾನದ ಉನ್ನತಿಗಾಗಿ ಶ್ರಮಿಸುತ್ತಿದ್ದೇವೆ' ಎಂದು ಹೇಳಿ, 'ಈಗ ಸಮಯವಿಲ್ಲ. ಪತ್ರಮುಖೇನ ಮಾತುಕತೆ ಮುಂದುವರಿಸೋಣ' ಎಂದರು.

ರತ್ನಾಗಿರಿಯಲ್ಲಿ ನಾನು ವಾಸಿಸುತ್ತಿದ್ದ ಮನೆಯ ಗುರುತೆಂದರೆ ಅದರ ಮೇಲೆ ಸದಾ ಹಾರಾಡುತ್ತಿದ್ದ ಭಗವಾಧ್ವಜ. ಅದನ್ನು ನೋಡಿಕೊಂಡು 1930ರ ಜೂನ್ ತಿಂಗಳಲ್ಲಿ ಒಂದು ಸಂಜೆ ಒಬ್ಬ ನವಯುವಕ ಒಳಗೆ ಕಾಲಿಟ್ಟ. ಪುಣೆಯ ಫರ್ಗುಸನ್ ಕಾಲೇಜಿನ ವಿದ್ಯಾರ್ಥಿ ಅವನು.

'ಹೆಸರೇನು ?' ಎಂದೆ.

'ವಾಸುದೇವ ಬಲವಂತ ಗೋಗಟೆ.'

'ಇಲ್ಲಿ ಯಾರ ಮನೆಯಲ್ಲಿ ಉಳಿದುಕೊಂಡಿದ್ದೀ ?'

'ನನಗೆ ಈ ಊರಲ್ಲಿ ಯಾರ ಪರಿಚಯವೂ ಇಲ್ಲ. ನಿಮ್ಮ ಮನೆಯಲ್ಲೇ ಇಳಿದುಕೊಳ್ಳುತ್ತೇನೆ.'

'ಸಾಮಾನು ಎಲ್ಲಿಟ್ಟಿದ್ದೀ ?'

'ಇದಿಷ್ಟೆ ನನ್ನ ಸಾಮಾನು ; ಒಂದು ಪಂಚೆ ಮತ್ತು ಲಂಗೋಟಿ' ಎಂದು ಕೈಲಿದ್ದ ಸಣ್ಣ ಚೀಲ ತೋರಿಸಿದ.

ರಾತ್ರಿ ನನ್ನ ಜತೆಗೇ ಊಟಕ್ಕೆ ಕೂರಿಸಿಕೊಂಡೆ. ಬೆಳಿಗ್ಗೆ ಅವನನ್ನು ಒಳಗಿನ ಕೋಣೆಗೆ ಕರೆದು ಪ್ರಶ್ನಿಸಿದೆ:

'ನೀನು ಇಲ್ಲಿಗೆ ಬಂದ ಕಾರಣ ?'

'ತರುಣ ವಿದ್ಯಾರ್ಥಿಗಳಾದ ನಾವು ದೇಶದ ಸ್ವಾತಂತ್ರ್ಯಕ್ಕಾಗಿ ಏನು ಮಾಡಬೇಕು ?'

'ಮೊದಲು ನೀನು ಏನಾಗಬೇಕೆಂದಿರುವೆ? ಸಂಪಾದಕನೋ, ಲೇಖಕನೋ, ಭಾಷಣಕಾರನೋ? ಅಥವಾ ರಾಜಗುರು, ಭಗತಸಿಂಗರಂತೆ ಹುತಾತ್ಮನೋ? - ಅದನ್ನು ನಿರ್ಧರಿಸಿಕೋ!.... ಆದರೆ ಒಂದು ವಿಷಯ ಮರೆಯಬೇಡ; ನೂರು ಸಂಪಾದಕರಾಗಲೀ, ಭಾಷಣಕಾರರಾಗಲೀ ಅಥವಾ ಹತ್ತು ಕಾಂಗ್ರೆಸ್ ಅಧಿವೇಶನಗಳಾಗಲೀ ಮಾಡದಿರುವಷ್ಟು ರಾಜಕೀಯ ಜಾಗೃತಿಯನ್ನು ಭಗತಸಿಂಹನಂತಹ ಒಬ್ಬ ಆಕ್ರಮಕ ಹುತಾತ್ಮ ಸಾಧಿಸಬಲ್ಲ. ಹೋರಾಡುತ್ತಾ ಶತ್ರುವನ್ನು ಸದೆಬಡಿಯುತ್ತಾ ಮುನ್ನಡೆಯುವುದೇ ಮಹಾ ರಾಷ್ಟ್ರದ ಆದರ್ಶ.'

'ಯಾರೋ ಒಬ್ಬಿಬ್ಬರು ಇಂಗ್ಲಿಷ್ ಗವರ್ನರ್ ಅಥವಾ ಅಧಿಕಾರಿಗಳನ್ನು ಗುಂಡಿಟ್ಟು ಕೊಂದರೆ ಏನು ಸಾಧನೆ ಆದೀತು ?'

'ನೀನು ಯೋಗ್ಯ ಕಾರಣಕ್ಕಾಗಿ ಗುಂಡು ಹಾರಿಸಿದರೆ ಅದರಿಂದಲೂ ಉಪಯೋಗವಿದೆ. ಉದಾಹರಣೆಗೆ ಚಾಫೇಕರ ಬಂಧುಗಳು ಪ್ಲೇಗ್ ಕಮಿಶನರನನ್ನು ಕೊಂದಿದ್ದರಿಂದ ಇಡೀ ಬ್ರಿಟಿಷ್ ಆಡಳಿತ ಶಾಹಿಯೇ ನಡುಗಿಹೋಯಿತು. ಅಲ್ಲದೆ ಕ್ರಾಂತಿಕಾರಿಗಳಾದ ನಮ್ಮ ಸೂತ್ರವೆಂದರೆ - *(Every Englishman who is bad enough to rule India is bad enough to be killed !)* ಇಂಗ್ಲಿಷರ ಪೈಕಿ ಭಾರತದ ಮೇಲೆ ಅಧಿಕಾರ ಚಲಾಯಿಸುವಷ್ಟು ಪಾಪಿಗಳು ಯಾರು ಯಾರಿದ್ದಾರೋ ಅವರೆಲ್ಲರೂ ವಧಾರ್ಹರೇ!'

'ಆದಕ್ಕೆ ಶಸ್ತ್ರಗಳು ಎಲ್ಲಿ ಸಿಕ್ಕುತ್ತವೆ ?'

'ಮನಸ್ಸಿದ್ದರೆ ಮಾರ್ಗ ! ಮಣ್ಣಿನಿಂದಲೂ ಆಯುಧಗಳು ಎದ್ದು ಬರುತ್ತವೆ ! ಗೋವಾದಲ್ಲಿ ಶಸ್ತ್ರ ನಿಷೇಧವಿಲ್ಲ. ಹಿಂದುಸ್ಥಾನದಲ್ಲೂ ಪಿಸ್ತೂಲುಗಳಿಗೆ ಕೊರತೆಯಿಲ್ಲ. ಕೇವಲ ಪ್ರಯತ್ನಿಸಬೇಕು, ಅಷ್ಟೆ. ಇಂಥ ವಿಚಾರ ಒಬ್ಬರು ಇನ್ನೊಬ್ಬರಿಗೆ ಹೇಳಿ ಆಗುವಂತಹುದಲ್ಲ. ಯಾರಿಗೆ ಗುಂಡಿಗೆ ಇಲ್ಲವೋ, ಸಾವರಕರ್ ಹೋಗಿ ಅಂತಹವರ ಕಾಲು ಹಿಡಿದರೂ ಅವರ ಕೈಯಿಂದ ಕೆಲಸವಾಗುವುದಿಲ್ಲ. ಆದರೆ ಯಾರು ಕ್ರಾಂತಿಮಾರ್ಗ ಹಿಡಿದು ಮನಸ್ಸು ಗಟ್ಟಿ ಮಾಡಿಕೊಂಡು ಹೊರಟಿದ್ದಾರೋ ಅಂತಹವರು, ಸಾವರಕರ್ 'ಬೇಡ ಬೇಡ' ಅಂದರೂ ಕೆಲಸ ಪೂರೈಸದೆ ಇರುವುದಿಲ್ಲ. ಅಷ್ಟರಮಟ್ಟಿಗೆ ರಕ್ತ ಕುದಿಯಬೇಕಾದರೆ ಸ್ವಯಂ ಸ್ಫೂರ್ತಿಯಿಂದಲೇ ಸಾಧ್ಯ. ಅಂಥದೆಲ್ಲ ಉಪದೇಶದಿಂದ ಆಗುವ ಕಾರ್ಯವಲ್ಲ.'

ಮಧ್ಯಾಹ್ನ ಆ ತರುಣ ಊಟ ಮುಗಿಸಿಕೊಂಡು ಪುಣೆಗೆ ಹೊರಟುಬಿಟ್ಟ. ಒಂದು ವರ್ಷದ ನಂತರ ಸುದ್ದಿ ಬಂತು – 1931 ಜುಲೈ 22ರಂದು ಗೋಗಟೆ ಎಂಬ ಯುವಕನು ಫರ್ಗುಸನ್ ಕಾಲೇಜಿನಲ್ಲಿ ಮುಂಬೈನ ಹಂಗಾಮಿ ಗವರ್ನರ್ ಆದ ಜೆ. ಯಿ. ಬಿ. ಹಾಟ್ಸನ್ ಮೇಲೆ ಗುಂಡು ಹಾರಿಸಿದ; ಆದರೆ ಅಂದು ಹಾಟ್ಸನ್ನನು ಲೋಹದ ಕವಚ ತೊಟ್ಟಿದ್ದುದರಿಂದ ಉಳಿದುಕೊಂಡ ! ಇದೇ ಗೋಗಟೆಯೇ ಮುಂದೆ ಮಹಾರಾಷ್ಟ್ರ ವಿಧಾನ ಪರಿಷತ್ತಿನಲ್ಲಿ ವಿರೋಧ ಪಕ್ಷದ ನಾಯಕನಾದ.

ನನ್ನ ಸಲಹೆ ಕೇಳಲು ಬರುತ್ತಿದ್ದ ಅನೇಕ ತರುಣರಿಗೆ, ಅವರವರ ಮನಸ್ಸಿನ ಸಿದ್ಧತೆ ನೋಡಿಕೊಂಡು, ನಾನು ಉತ್ತರ ಕೊಡುತ್ತಿದ್ದೆ. ಆತ್ಮಾರಾಮ ನಾನಾ ಪಾಟೀಲ್ ಎಂಬ ಯುವಕನು ಕ್ರಾಂತಿಕಾರಿಯಾಗ ಬಯಸಿ, ಕೊಲ್ಲಾಪುರದಿಂದ ರತ್ನಾಗಿರಿಗೆ ಸೈಕಲ್ ಮೇಲೆ ಬಂದ. ನಾನು ಅವನಿಗೆ 'ಮಹಾರಾಷ್ಟ್ರದಲ್ಲಿ ಇನ್ನೂ ಕ್ರಾಂತಿಕಾರಿಗಳು ಅನೇಕರಿದ್ದಾರೆ. ಅವರ ಗುಂಪಿಗೆ ಹೋಗಿ ಸೇರಿಕೋ' – ಎಂದು ಕೆಲವರ ಪರಿಚಯ ತಿಳಿಸಿಕೊಟ್ಟೆ.

1931ರ ಕೊನೆಯ ಭಾಗದಲ್ಲಿ ಸೇನಾಪತಿ ಬಾಪಟ್ ರತ್ನಾಗಿರಿಗೆ ಬಂದು ದರ್ಶನ ಕೊಟ್ಟರು. ಅನಂತರ ಅವರು ಹೋದಹೋದೆಡೆಯಲ್ಲಿ, 'ದೇಶಭಕ್ತ ಹುತಾತ್ಮರ ನೆತ್ತರಿನ ಗಂಗೆಯ ಜತೆಗೆ, ಶತ್ರುರಕ್ತದ ಯಮುನೆಯೂ ಸೇರಿ ಹರಿದಾಗಲೇ ರಾಷ್ಟ್ರಕ್ಕೆ ಮುಕ್ತಿ' ಎಂದು ಸಾರತೊಡಗಿದುದರಿಂದ ಏಳು ವರ್ಷಗಳ ಕಠಿನ ಶಿಕ್ಷೆಗೊಳಗಾದರು.

ಅದೇ ವರ್ಷ ನವೆಂಬರಿನಲ್ಲಿ 'ಅಖಿಲ ಭಾರತ ಗೂರ್ಖಾ ಲೀಗ್'ನ ಅಧ್ಯಕ್ಷ ಠಾಕೂರ್ ಚಂದನಸಿಂಗ್ ನನ್ನ ಭೇಟಿಗೆ ಬಂದರು. ತಮ್ಮ ಜತೆಗೆ ನೇಪಾಳ ರಾಜಮನೆತನದ ಓರ್ವ ಪ್ರತಿನಿಧಿ ಹೇಮಚಂದ್ರ ಸಂಶೇರ ಜಂಗರನ್ನೂ ಕರೆತಂದಿದ್ದರು. ಶ್ರೀಯುತ ಚಂದನಸಿಂಗ್‌ಗೆ ನನ್ನ ಲೇಖನಗಳ ಬಗ್ಗೆ ಅಪಾರ ಮೆಚ್ಚುಗೆ. ಅವುಗಳನ್ನು ಭಾಷಾಂತರಿಸಿ 'ತರುಣ ಗೂರ್ಖಾ' ಮತ್ತು 'ಹಿಮಾಲಯನ್ ಟೈಮ್ಸ್' ಪತ್ರಿಕೆಗಳಲ್ಲಿ ಪ್ರಕಟಿಸಿಯೂ ಇದ್ದರು. ನವೆಂಬರ್ 2ರಂದು ಅವರಿಬ್ಬರ ಗೌರವಾರ್ಥವಾಗಿ ಪತಿತಪಾವನ ಮಂದಿರದಲ್ಲಿ ಭವ್ಯ ಸಮಾರಂಭ ನೆರವೇರಿತು. ಅಂದಿನ ನನ್ನ ಭಾಷಣದ ಬಗ್ಗೆ ಎರಡು ದಿನದ ನಂತರ ಸರಕಾರ ಆಕ್ಷೇಪ ಎತ್ತಿತು. ನಾನು ಭಾಷಣದ ವರದಿ ಒಪ್ಪಿಸಿದರೂ, ಅಧಿಕಾರಿಗಳಿಗೆ ಸಮಾಧಾನವಾಗಲಿಲ್ಲ. ಇನ್ನು ಮುಂದೆ ಅಷ್ಟು ಬಿರುಸಾಗಿ ಮಾತನಾಡಿದ್ದೇ ಆದರೆ, ಎರಡು ಜೀವಾವಧಿ ಶಿಕ್ಷೆಗಳಲ್ಲಿ ಇನ್ನೂ 37 ವರ್ಷಗಳು ಉಳಿದುಕೊಂಡಿವೆ, ಹುಷಾರ್ ! – ಎಂದು ಬೆದರಿಕೆ ಹಾಕತೊಡಗಿದರು.

ರತ್ನಾಗಿರಿಗೆ ಭಾಯಿ ಪರಮಾನಂದರು, ಗ್ಯಾನಚಂದವರ್ಮ, ಶಚೀಂದ್ರನಾಥ ಸನ್ಯಾಲ್,

ನಾನಿಗೋಪಾಲ ಮುಂತಾದ ಹಳೆಯ ಗೆಳೆಯರೂ, ಡಾ. ಮಾಧವರಾವ್ ಪಟವರ್ಧನ್, ಡಾ. ಎಸ್.ವಿ. ಕೇತ್ಕರ್ ಮುಂತಾದ ವಿದ್ವಾಂಸರೂ ನನ್ನ ಭೇಟಿಯ ಸಲುವಾಗಿ ಆಗಮಿಸಿದ್ದರು.

ದೇವನಾಗರಿಯ ಲಿಪಿಶುದ್ಧಿ, ಮರಾಠಿ ಮತ್ತು ಹಿಂದು ಭಾಷೆಗಳ ಭಾಷಾ ಸುದ್ಧಿ ಇತ್ಯಾದಿ ಕ್ಷೇತ್ರಗಳಲ್ಲೂ ನನ್ನ ಸಲಹೆ ಸೂಚನೆಗಳಿಗೆ ನಾಡಿನಾದ್ಯಂತ ಸ್ವಾಗತ ದೊರೆಯಿತು.

ಮರಾಠಿ ಭಾಷೆಯಲ್ಲಿ ನೂರಾರು ಉರ್ದು ಮತ್ತು ಪಾರಸಿ ಶಬ್ದಗಳು ಸೇರಿಹೋಗಿದ್ದವು. ಹಿಂದೆ ಶಿವಾಜಿಯ ಕಾಲದಲ್ಲಿ ಭಾಷಾಶುದ್ಧಿಗಾಗಿ ರಘುನಾಥ ಪಂಡಿತನ ನೇತೃತ್ವದಲ್ಲಿ ಒಂದು ಸಮಿತಿ ನೇಮಕವಾಗಿತ್ತು; ಆ ಸಮಿತಿಯು ಶುದ್ಧ ಪದಪ್ರಯೋಗಗಳನ್ನು ಒಳಗೊಂಡ 'ರಾಜವ್ಯವಹಾರ ಕೋಶ' ವನ್ನು ತಯಾರಿಸಿತ್ತು. ಆದರೆ ಅಲ್ಲಿಂದೀಚೆಗೆ ಅಂಥ ಪ್ರಯತ್ನಗಳು ನಡೆಯದಿದ್ದುದರಿಂದ, ಮರಾಠಿ ಭಾಷೆ ಕಲಬೆರಕೆಯಾಗಿತ್ತು. ಅನೇಕರ ಮನಸ್ಸಿನಲ್ಲಿ ಆ ವಿಚಾರ ಹೊಳೆದಿದ್ದರೂ, ಭಾಷೆಯ ಶುದ್ಧೀಕರಣವನ್ನು ಕಾರ್ಯರೂಪಕ್ಕೆ ತರಲು ಧೈರ್ಯವಾಗದೆ ಸುಮ್ಮನಿದ್ದರು. ನಾನು 1925ರ ಏಪ್ರಿಲ್ ವೇಳೆಗೆ 'ಕೇಸರಿ' ಪತ್ರಿಕೆಗೆ ಲೇಖನಗಳನ್ನು ಬರೆದು ಆ ವಿಷಯವನ್ನು ಮಂಡಿಸಿದೆ. ಸಾಹಿತ್ಯಕ್ಷೇತ್ರದಲ್ಲಿ ಅದರಿಂದ ದೊಡ್ಡ ಗೊಂದಲವೇ ಎದ್ದಿತು. ಅನೇಕರು ಭಾಷಾ ಶುದ್ಧಿಯನ್ನು ವಿರೋಧಿಸಿದರು. ಅಂಥವರ ಆಕ್ಷೇಪಗಳಿಗೆ ಉತ್ತರಿಸಲು ಪುನಃ ಲೇಖನಮಾಲೆ ಆರಂಭಿಸಿದೆ. ಅದರ ಪರಿಣಾಮವಾಗಿ ಜಲಗಾವಿಯಲ್ಲಿ ನಡೆದ ಮರಾಠಿ ಸಾಹಿತ್ಯ ಸಮ್ಮೇಳನವು ಭಾಷಾಶುದ್ಧಿಯ ತತ್ವವನ್ನು ಸ್ವೀಕರಿಸಿತು.

ಡಾ. ಮಾಧವರಾವ್ ಪಟವರ್ಧನ್ ಮರಾಠಿಯ ಹೆಸರಾಂತ ಕವಿ. ಅವರು ಹೆಚ್ಚಾಗಿ ಪರ್ಶಿಯನ್ ಪದಗಳನ್ನೇ ಬಳಸುತ್ತಿದ್ದುದರಿಂದ, ನನ್ನ ಅಭಿಪ್ರಾಯವನ್ನು ವಿರೋಧಿಸಿದರು. ಆದರೆ ಕ್ರಮೇಣ ಅವರ ಮನಸ್ಸು ಬದಲಾಗಿ, ಭಾಷಾ ಶುದ್ಧಿಯ ಚಳವಳಿಗೂ ಅವರೇ ಮುಂದಾದರು! ತಮ್ಮ ಪದ್ಯಗಳೆಲ್ಲವನ್ನೂ ಶುದ್ಧ ಮರಾಠಿಯಲ್ಲಿ ಪುನರ್ರಚಿಸಿದರು! ಪರಭಾಷಾ ಶಬ್ದಗಳಿಗೆ ಸಮಾನವಾದ ಮರಾಠಿ ಪದಗಳನ್ನೊಳಗೊಂಡ ಶಬ್ದಕೋಶವನ್ನೂ ರಚಿಸಿದರು. ಭಾಷಾಶುದ್ಧಿಯ ಚಳವಳಿ ಹಿಂದಿ ಮತ್ತು ಇನ್ನಿತರ ಭಾರತೀಯ ಭಾಷೆಗಳ ಕ್ಷೇತ್ರಕ್ಕೂ ಹರಡಿತು. ಅಲ್ಲದೆ ದೇವನಾಗರಿ ಲಿಪಿಯಲ್ಲಿ ಮುದ್ರಣಕ್ಕೆ ಹೆಚ್ಚು ಅನುಕೂಲವಾಗುವಂತೆ ನಾನು ಮುಂದಿರಿಸಿದ ಸುಧಾರಣೆಗಳನ್ನು ಅನೇಕ ವಿದ್ವಾಂಸರು ಅಳವಡಿಸಿಕೊಂಡರು. ನ.ಚಿ. ಕೇಳ್ಕರರು ತಮ್ಮ 'ಸಹ್ಯಾದ್ರಿ' ಮಾಸಪತ್ರಿಕೆಗೆ ಸುಧಾರಿತ ಲಿಪಿಯನ್ನೇ ಬಳಸತೊಡಗಿದರು.

1930ರಲ್ಲಿ ತರುಣ ಕಾಂಗ್ರೆಸ್ ಮುಂದಾಳು ಅಚ್ಯುತ ಪಟವರ್ಧನ್ ಮಾತುಕತೆಯಾಡಲು ಬಂದಿದ್ದರು. ಸಶಸ್ತ್ರ ಕ್ರಾಂತಿಯು ಸ್ವಾತಂತ್ರ್ಯ ದೊರಕಿಸಿಕೊಡುವ ಬಗ್ಗೆ ಅವರು ಅನುಮಾನ ವ್ಯಕ್ತಪಡಿಸಿದರು. ಆಗ ನಾನು, 'ಅಯ್ಯಾ ಮಿತ್ರ, ಚರಕದಿಂದ ನೀನು ಹೇಗೆ ಸ್ವಾತಂತ್ರ್ಯ ಗಳಿಸುತ್ತಿ ಎಂಬುದನ್ನಾದರೂ ಸ್ವಲ್ಪ ಹೇಳು, ನೋಡೋಣ?' ಎಂದೆ.

ರತ್ನಾಗಿರಿಯಲ್ಲಿದ್ದಾಗ ಎಷ್ಟೋ ಮಹತ್ವದ ಹಾಗೂ ಸ್ವಾರಸ್ಯವಾದ ಪ್ರಸಂಗಗಳು ಜರುಗಿವೆ. ನೆನಪಿಗೆ ಬಂದಂತೆ ಕೆಲವನ್ನು ಹೇಳಬೇಕೆನಿಸುತ್ತಿದೆ. ಒಮ್ಮೆ ಮರಾಠಿ ನಾಟಕಕಾರ ದೀಕ್ಷಿತ್ ಎಂಬವರು ನನ್ನ ಭೇಟಿಗೆಂದು ಪತಿತ ಪಾವನ ಮಂದಿರಕ್ಕೆ ಬಂದರು. ಅವರು ಹೊರಡುವ ಮುನ್ನ ಚಹಾ ಬಂತು; ತಯಾರಿಸಿ ತಂದಿದ್ದವನು ಮಹಾರರ ಹುಡುಗ! ಮಡಿವಂತರಾದ ದೀಕ್ಷಿತರು, 'ಚಹಾ ತೆಗೆದುಕೊಳ್ಳುವುದಿಲ್ಲ' ಎಂದು ಸುಳ್ಳು ಹೇಳಿದರು. 'ಚಹಾ ಸೇರದಿದ್ದರೆ, ಹಾಲು! ನಮ್ಮಲ್ಲಿ ಅದೂ ಇದೆ' ಎಂದೆ. ಪಾಪ, ಅವರು ಕಡೆಗೆ

ಹಾಲನ್ನೇ ವಿಷ ಕುಡಿಯುವಂತೆ ಕುಡಿದು ಹೊರನಡೆದರು !

ನಿತ್ಯವೂ ಸಮುದ್ರದ ಮರಳಿನವರೆಗೆ ಗಾಳಿಸಂಚಾರ ಹೋಗಿ ಬರುವುದು ನನ್ನ ರೂಢಿ. ಆಗ ಊರಿನ ಅನೇಕ ತರುಣರೂ ಜತೆ ಸೇರುತ್ತಿದ್ದರು. ಅವರು ಕುತೂಹಲದಿಂದ ಅನೇಕ ಪ್ರಶ್ನೆಗಳನ್ನು ಹಾಕುತ್ತಿದ್ದರು. ಆಗ ನಾನು ಎಷ್ಟೋ ಸಲ ಸಮುದ್ರದ ಮರಳಿನ ಮೇಲೆ ಛತ್ರಿಯ ತುದಿಯಿಂದ ಉತ್ತರ ಬರೆದು ತೋರಿಸುತ್ತಿದ್ದೆ. ನಾವು ಹೋಗಿ ಬರುವ ದಾರಿಯಲ್ಲೊಬ್ಬಳು ಮುದುಕಿ ವಾಸಿಸುತ್ತಿದ್ದಳು. ಆ ವೃದ್ಧೆಗೆ ನನ್ನ ಮೇಲೆ ಬೆಟ್ಟದಷ್ಟು ಸಿಟ್ಟು. ಏಕೆಂದರೆ, ನಾನು ವಿಲಾಯತಿಗೆ ಹೋಗಿಬಂದ 'ಕುಲಗೆಟ್ಟ ಮನುಷ್ಯ' ; ಹೊಲೆಯರ ಕೇರಿಗಳಲ್ಲಿ ಓಡಾಡುತ್ತಿದ್ದ 'ಮಹಾಪಾಪಿ !' ನಾನು ಆಕೆಯ ಮನೆಯ ಬಾಗಿಲು ದಾಟುವಾಗ ನಿತ್ಯವೂ ನನಗೆ ನನ್ನ 'ಸಹಸ್ರನಾಮಾವಳಿ' ಕೇಳಿಸುತ್ತಿತ್ತು ! ನಾನು ಮುಂದೆ ಹೋದ ನಂತರ ಆ ಅಜ್ಜಿ ತನ್ನ ಬಾಗಿಲಿಗೂ, ಬಾಗಿಲ ಮುಂದಿನ ರಸ್ತೆಗೂ ಸಗಣಿನೀರು, ಗಂಜಳ ಚಿಮುಕಿಸಿ ಶುದ್ಧಿ ಮಾಡುತ್ತಿದ್ದಳು. ನನ್ನ ಜತೆಯಲ್ಲಿದ್ದ ತರುಣರು ಒಂದು ದಿನ ಕೆರಳಿ, 'ಅವಳಿಗೆ ಬುದ್ಧಿ ಕಲಿಸಿ ಬರುತ್ತೇವೆ' ಎಂದು ಹೊರಟರು. ನಾನು ಅವರನ್ನು ತಡೆದು, 'ಜಗಳಕ್ಕೆ ಹೋಗಬೇಡಿ. ಆ ಮುದುಕಿಯ ಬಳಿ ಒಂದು ಪ್ರಶ್ನೆ ಕೇಳಿದರೆ ಸಾಕು!' ಎಂದೆ. ನಾನು ತಿಳಿಸಿದ ಪ್ರಶ್ನೆಯನ್ನು ಅವರು ಆಕೆಗೆ ಮುಟ್ಟಿಸಿದರು : ಏನಜ್ಜಿ, ನಿಮ್ಮ ಮನೆಯಲ್ಲಿ ನಿತ್ಯವೂ ಯಾರು ಸಾಯುತ್ತಾರೆ ? ಸಂಜೆಯ ಹೊತ್ತು ಸಾರಿಸುತ್ತೀಯಲ್ಲ ?'

ಅಂದಿನಿಂದ ಅವಳ 'ಸಹಸ್ರನಾಮಾವಳಿ' ನಿಂತುಹೋಯಿತು. ಕೆಲ ದಿನಗಳ ನಂತರ, ನನ್ನ ವಿಚಾರವೆಲ್ಲ ತಿಳಿದ ನಂತರ, ಅವಳಿಗೆ ನನ್ನಲ್ಲಿ ಆದರವೂ ಹುಟ್ಟಿತು. ಆ ಅಜ್ಜಿ ನನಗೆ ನಮಸ್ಕಾರ ಮಾಡತೊಡಗಿದಳು !

ರತ್ನಾಗಿರಿಯಲ್ಲಿ ಕಲೆಕ್ಟರ್ ಆಗಿದ್ದ ಬ್ರೌನಿಂಗ್ ಸಾಹೇಬ ಸಮಾಜ ಸುಧಾರಣೆಯ ಕಾರ್ಯದಲ್ಲಿ ನನಗೆ ಬಹಳ ನೆರವಾಗುತ್ತಿದ್ದ. ಆದ್ದರಿಂದ ಅವನಿಗೆ ವರ್ಗವಾದಾಗ, ಸಣ್ಣದಾಗಿ ಸತ್ಕಾರ ಏರ್ಪಡಿಸಿದೆ. ಅದಕ್ಕೆ ಕೆಲವರು, 'ಸಾವರಕರರಂತಹ ದೇಶಭಕ್ತ ಕ್ರಾಂತಿಕಾರಿಯು ಇಂಗ್ಲಿಷ್ ಅಧಿಕಾರಿಯನ್ನು ಸತ್ಕರಿಸಬಹುದೆ ?' ಎಂದು ಕೊಂಕುನುಡಿ ಆಡಿದರು. ಅವರಿಗೆ ನನ್ನ ಉತ್ತರ ಹೋಯಿತು : 'ನನ್ನ ಚಳವಳಿಗಳಲ್ಲಿ ತಾಂಬೂಲದಿಂದ ಹಿಡಿದು ಪಿಸ್ತೂಲಿನ ವರೆಗೆ ಎಲ್ಲ ಹಂತಗಳೂ ಸೇರಿವೆ. ''ಸಾಧನಾನಾಮನೇಕತಾ'' ಎಂಬುದೇ ನನ್ನ ಸೂತ್ರ !' ಮತ್ತೆ ಅವರು ಆ ಮಾತೆತ್ತಲಿಲ್ಲ.

ಒಂದು ದಿನ ಸಮುದ್ರದ ದಡದಿಂದ ವಾಪಸು ಬರುವಾಗ ಒಂದು ಭೀಕರ ದೃಶ್ಯ ಕಂಡೆ. ನನ್ನ ಜತೆಗೆ ಕೇವಲ ಒಬ್ಬಿಬ್ಬರು ಹುಡುಗರು ಮಾತ್ರ ಇದ್ದರು. ಊರಾಚೆ ಪೊದೆಗಳ ಹತ್ತಿರ ಹೆಂಗಸೊಬ್ಬಳು ನರಳುತ್ತ ಬಿದ್ದಿದ್ದಳು. ವಯಸ್ಸು ಸುಮಾರು ಮೂವತ್ತು ; ಕುಷ್ಠರೋಗದಿಂದ ಇಡೀ ಮೈ ಕೊಳೆತು ನಾರುತ್ತಿತ್ತು ; ಒಂದು ತುಂಡು ಬಟ್ಟೆ ಸಹ ಇಲ್ಲ! ಯಾರೋ, ಎಲ್ಲಿಯವಳೋ ? ಆ ದಾರಿಯಲ್ಲಿ ಅನೇಕರು ಹೋಗಿಬರುತ್ತಿದ್ದರೂ ಅತ್ತಕಡೆ ತಿರುಗಿ ನೋಡುವವರು ಒಬ್ಬರೂ ಸಹ ಇಲ್ಲ. ನಾನು ಹೆಗಲ ಮೇಲಿದ್ದ ಧೋತರ ತೆಗೆದು ಹೊದಿಸಿದೆ. ಊರಿನಿಂದ ಅನ್ನ, ನೀರು ತರಿಸಿಕೊಟ್ಟು ಅಲ್ಲಿಂದ ನೇರವಾಗಿ ಕಲೆಕ್ಟರರ ಬಂಗಲೆಗೆ ಹೋದೆ. ಅವರಿಗೆ ವಿವರಗಳನ್ನೆಲ್ಲ ತಿಳಿಸಿ, ಔಷಧೋಪಚಾರದ ವ್ಯವಸ್ಥೆ ಮಾಡಿದ ನಂತರ ಜೀವಕ್ಕೆ ಸಮಾಧಾನವೆನಿಸಿತು.

ನಾನು ನಿತ್ಯ ಹೋಗುವ ಹಾದಿಯಲ್ಲಿ ಒಮ್ಮೆ ಒಂದು ಅಂಗಡಿಯ ಮುಂದೆ ತಟ್ಟನೆ ನಿಂತೆ - ನನ್ನದೇ ದೊಡ್ಡ ಆಕಾರದ ಚಿತ್ರವೊಂದು ಆ ಅಂಗಡಿಯ ಮುಂದೆ ಪ್ರದರ್ಶಿತವಾಗಿತ್ತು ! ವಿಚಾರಿಸಿದಾಗ ತಿಳಿದುಬಂತು - ಅದನ್ನು ಬರೆದವನೊಬ್ಬ 12 ವರ್ಷದ ಹುಡುಗ ; ಹೆಸರು ರೇಗೆ. ಆ ಪ್ರಸಂಗವನ್ನು

ರೇಗೆ ವರ್ಣಿಸಿರುವುದು ಹೀಗೆ - 'ನಿತ್ಯವೂ ದಾರಿಯ ಬದಿಯಲ್ಲಿ ನಿಂತು ಸಾವರಕರರನ್ನು ನೋಡುತ್ತಿದ್ದೆ. ಅವರ ಚಿತ್ರ ಬರೆಯಲು ತುಂಬ ಆಸೆಯಾಯಿತು. ನಾಲ್ಕೈದು ದಿನದಲ್ಲಿ ಅದನ್ನು ಬರೆದು, ಅವರ ಕಣ್ಣಿಗೆ ಬೀಳುವಂತೆ ಒಂದು ಅಂಗಡಿಯ ಮುಂದೆ ಇಟ್ಟೆ. ಅವರು ಅದನ್ನು ನೋಡಲು ನಿಲ್ಲುತ್ತಲೇ ದೂರದಲ್ಲಿದ್ದ ನಾನು ಓಡಿಬಿಟ್ಟೆ. ತಾತ್ಯಾ ತಮ್ಮ ಮನೆಗೆ ಬರುವಂತೆ ನನಗೆ ಹೇಳಿಕಳಿಸಿದರು. ಏನು ಅನ್ನುವರೋ ಎಂದು ಕೊಂಡು ಅಂಜಿಕೆಯಿಂದ ಹೋದೆ. ಅವರು, ''ಮಗು, ಮುಂದೆ ನೀನು ಉತ್ತಮ ಚಿತ್ರಕಾರನಾಗುತ್ತಿ'' ಎಂದು ಬೆನ್ನು ತಟ್ಟಿ, ಹತ್ತು ರೂ. ಬಹುಮಾನ ಕೊಟ್ಟರು. ನಾನು ಧೈರ್ಯಮಾಡಿ, ಒಂದು ಪ್ರಶಸ್ತಿ ಪತ್ರ ಕೊಡುವಂತೆ ಕೇಳಿದೆ. ''ಕುಮಾರ ರೇಗೆ ಬರೆದಿರುವ ನನ್ನ ಚಿತ್ರವನ್ನು ನಾನು ನೋಡಿದೆ. ವಿದ್ಯಾರ್ಥಿವೇತನ ಹಾಗೂ ಸಾಕಷ್ಟು ಉತ್ತೇಜನ ಅವನಿಗೆ ದೊರೆತರೆ, ಖ್ಯಾತ ಕಲಾಕಾರನಾಗುತ್ತಾನೆ'' ಎಂದು ತಾತ್ಯಾ ಬರೆದು ಸಹಿ ಹಾಕಿಕೊಟ್ಟರು.

ಕುಮಾರ ರೇಗೆ ಮುಂದೆ ಪ್ರಸಿದ್ಧ ಕಲಾವಿದನಾದ.

1927ರಲ್ಲಿ ರತ್ನಾಗಿರಿಗೆ ಶಾರದಾ ಸಂಗೀತ ನಾಟಕ ಮಂಡಲಿ ಬಂತು. ಅದರ ಮುಖ್ಯಸ್ಥ ವಿ.ದಾ. ಬೋರಕರ್‌ಗೆ ನನ್ನ ಬಗ್ಗೆ ವಿಶೇಷ ಆದರ. ನಾನು ನಿತ್ಯ ತಿರುಗಾಡಲು ಹೋಗುವ ದಾರಿಯಲ್ಲೆ ಅವರ ವಸತಿಯಿತ್ತು. ನಾನು ಎರಡು ನಿಮಿಷ ಅಲ್ಲಿ ನಿಂತು ಕಲಾವಿದರ ಯೋಗಕ್ಷೇಮ ವಿಚಾರಿಸುತ್ತಿದ್ದೆ. ಒಮ್ಮೆ ರತ್ನಾಗಿರಿಯ ಪ್ರೌಢಶಾಲೆಯಲ್ಲಿ 'ಕೀಚಕ ವಧೆ' ನಾಟಕದ ಕಾರ್ಯಕ್ರಮ. ಅಂದಿನ ಸಮಾರಂಭಕ್ಕೆ ನನ್ನ ಅಧ್ಯಕ್ಷತೆ ನಿಶ್ಚಿತವಾಗಿತ್ತು. ಆದರೆ ಹಿಂದಿನ ದಿನ ಸೈರಂಧ್ರಿ ಪಾತ್ರದ ಹುಡುಗ ಅನಾರೋಗ್ಯದಿಂದ ಮಲಗಿಬಿಟ್ಟ. ವ್ಯವಸ್ಥಾಪಕರು ನನ್ನ ಬಳಿ ಸಪ್ಪೆ ಮುಖ ಮಾಡಿಕೊಂಡು ಬಂದರು. ನಾನು ಅವರಿಗೆ ಧೈರ್ಯ ಕೊಟ್ಟೆ: 'ನೀವು ಚಿಂತಿಸಬೇಡಿ ; ನಾಟಕ ನಡೆಯುವಂತೆ ನಾನು ನೋಡಿಕೊಳ್ಳುತ್ತೇನೆ.'

ನಾನು ನೇರವಾಗಿ ನಾಟಕ ಮಂಡಲಿಯ ವಸತಿಗೆ ಹೋದೆ. 'ಬೋರಕರ್, ನಿಮ್ಮ ಮಂಡಲಿಯಲ್ಲಿ ಚೂಟಿಯಾದ ಹಾಗೂ ಒಳ್ಳೆ ಗ್ರಹಣಶಕ್ತಿಯುಳ್ಳ ಯಾರಾದರೂ ಹುಡುಗ ಇದ್ದರೆ ಕರೆಯಿರಿ, ನೋಡೋಣ' ಎಂದೆ. ಅವರು ಕೂಡಲೆ ದತ್ತಾರಾಮನನ್ನು ಕರೆದರು. ನಾನು ಅವನ ಬೆನ್ನು ಸವರಿ, 'ಮಗು ನಾನೀಗ ನಿನಗೆ ಸೈರಂಧ್ರಿ ಪಾತ್ರದ ಸಂಭಾಷಣೆ ಕೊಡುತ್ತೇನೆ. ನಾಳೆ ರಾತ್ರಿ ನೀನು ಆ ಪಾತ್ರ ಅಭಿನಯಿಸ ಬೇಕು. ಮಾಡುತ್ತೀ ತಾನೆ ?' ಎಂದೆ. ದತ್ತಾರಾಮ ಒಪ್ಪಿಕೊಂಡ. ಮರುದಿನ ಅವನು ದೃಷ್ಟಿ ಬಡಿಯುವಷ್ಟು ಚೆನ್ನಾಗಿ ಆ ಪಾತ್ರ ನಿರ್ವಹಿಸಿದ. ಸಮಾರಂಭ ಮುಗಿದ ಮೇಲೆ ನಾನು ಒಳಗೆ ಹೋಗಿ ಹೇಳಿದೆ : 'ಬೋರಕರ್, ಈ ಹುಡುಗನ ಭವಿಷ್ಯ ಉಜ್ವಲವಾಗಿದೆ.' ಆ ಬಾಲಕ ಕೆಲವೇ ವರ್ಷಗಳಲ್ಲಿ 'ಮಾಸ್ಟರ್ ದತ್ತಾರಾಮ್' ಎಂದು ಖ್ಯಾತನಾದ.

ಒಮ್ಮೆ ಓರ್ವ ಅನಾಥ ಹಿಂದು ಮಹಿಳೆ ಯಾವುದೋ ಅಪಘಾತದಿಂದ ಸತ್ತಳು. ಅವಳದೊಂದು ಮಗು ಉಳಿದಿದೆಯೆಂದು ತಿಳಿಯುತ್ತಲೇ ನಾನು ಮಗುವಿದ್ದ ಕಡೆ ಹೋದೆ. ತಾಯಿಯ ಕಷ್ಟ ಪೂರೈಸಿ ಈಗ ಮಗುವಿನ ಕಷ್ಟ ಪ್ರಾರಂಭವಾಗಿತ್ತು. ತಾಯಿ ಎಂದರೆ ಏನೆಂದು ತಿಳಿಯುವ ಮೊದಲೇ ಆ ಮಗು ತಬ್ಬಲಿಯಾಗಿತ್ತು. ಹೇಳುವವರಿಲ್ಲ, ಕೇಳುವವರಿಲ್ಲ ! ಸಹಸ್ರಾರು ಜನ ಸಮಾಜ ಬಾಂಧವರು ಜೀವಂತರಾಗಿ ಇದ್ದು ಸಹ ಆ ಹಿಂದು ಶಿಶು ಭಿಕಾರಿಯಂತೆ ಬಿದ್ದಿತ್ತು! ನಾನು ಅದನ್ನು ಎದೆಗವಚಿಕೊಂಡು ಬೋರಕರ್ ಮನೆಗೆ ಹೋದೆ.

'ಬೋರಕರ್, ನಿಮ್ಮ ನಾಟಕ ಮಂಡಲಿಯಲ್ಲಿ ಒಟ್ಟು ಎಷ್ಟು ಜನರನ್ನು ಸಾಕುತ್ತಿದ್ದೀರಿ ?'

'ನಲವತ್ತು' ಎಂದರು ಅವರು. 'ಒಳ್ಳೆಯದು ; ಈಗ ನೀವು ನಲವತ್ತು ಜನರೂ ಸೇರಿ ನಲವತ್ತೊಂದನೆ ಜೀವ ಸಲಹಬೇಕು. ಹಿಂದು ಸಮಾಜದ ಒಂದು ಅಂಗವನ್ನು ಉಳಿಸಬೇಕು ದಯವಿಟ್ಟು ಮಾಡುವಿರಲ್ಲವೆ?' ಎನ್ನುತ್ತಾ ಮಗುವನ್ನು ಅವರೆದುರಿಗೆ ಮಲಗಿಸಿದೆ. 'ನೀವು ಇಷ್ಟೊಂದು ಹೇಳಬೇಕೆ? ಅದು ನನ್ನ ಕರ್ತವ್ಯ' ಎಂದರು.

ಆ ಸಮಯದಲ್ಲಿ ರತ್ನಾಗಿರಿಯಲ್ಲಿ 'ನಾಟ್ಯಕಲಾ ಪ್ರಸಾರಕ ಮಂಡಲಿ' ಎಂಬ ಸಂಸ್ಥೆ ಸಹ ಪ್ರದರ್ಶನಗಳನ್ನು ನಡೆಸುತ್ತಿತ್ತು. ಶಂ.ವಾ. ಪರಾಂಜಪೆ ಅದರ ವ್ಯವಸ್ಥಾಪಕರು. ಹೊಸ ಹೊಸ ಪ್ರಯೋಗಗಳಲ್ಲಿ ಅವರಿಗೆ ಆಸಕ್ತಿ. ತಾವು ಅಭಿನಯಿಸಲು ಹೊಸದೊಂದು ನಾಟಕ ಬರೆದುಕೊಡುವಂತೆ ಒತ್ತಾಯಿಸಿದರು. ಆಗ ನಾನು 'ಉಃಶಾಪ' (ಶಾಪ ವಿಮೋಚನೆ) ಎಂಬ ನನ್ನ ಮೊದಲ ನಾಟಕ ಬರೆದು ಕೊಟ್ಟು, ಅಭಿನಯಕ್ಕೆ ಯೋಗ್ಯವೆನಿಸಿದ ಮಾರ್ಗದರ್ಶನ ಸಹ ನೀಡಿದೆ. ಸಿದ್ಧತೆಗಳೆಲ್ಲ ಮುಗಿದು ಉದ್ಘಾಟನೆಯ ದಿವಸ ಸಮೀಪಿಸಿತು. 'ದರ್ಶಿಕೆ' (ಟಿಕೆಟ್)ಗಳ ಮಾರಾಟವೂ ಮುಗಿಯಿತು. ಆ ನಾಟಕದ ಸಂಬಂಧವಾಗಿ ಇಂಗ್ಲಿಷ್ ಶಬ್ದಗಳನ್ನು ಬಳಸಬಾರದೆಂದು ಸೂಚನೆ ನೀಡಿ ನಾನು ಸಮಾನಾರ್ಥದ ಪದಗಳನ್ನು ಊರಿನಲ್ಲೆಲ್ಲ ಪ್ರಚಾರ ಮಾಡಿದೆ. 'ಟಿಕೆಟ್' ಬದಲು 'ದರ್ಶಿಕೆ' ; ನಾಟಕಗೃಹದಲ್ಲಿ ಪ್ರೇಕ್ಷಕರು 'ಶೇಮ್ ಶೇಮ್' ಅನ್ನುವ ಬದಲು 'ಧಿಕ್ಕಾರ, ಧಿಕ್ಕಾರ' ಮತ್ತು 'ಒನ್ಸ್‌ಮೋರ್' ಬದಲು 'ಪುನಶ್ಚ' ಅನ್ನಬೇಕು !

1927ರ ಏಪ್ರಿಲ್ 9ರಂದು ಪ್ರದರ್ಶನ ; ಕೊನೆ ಗಳಿಗೆಯಲ್ಲಿ ಅಲ್ಲಿನ ಜಿಲ್ಲಾಧಿಕಾರಿಯು ನಾಟಕ ಪ್ರದರ್ಶನಕ್ಕೆ ಅನುಮತಿ ನಿರಾಕರಿಸಿದ. ಮಂಡಲಿಯವರು ಸಿದ್ಧತೆಗಾಗಿ ಸಹಸ್ರಾರು ರೂ.ಗಳನ್ನು ಸುರಿದಿದ್ದರು. ಈಗ ಅವರ ಕಂಪನಿಯೇ ಮುಳುಗಿಹೋಗುವ ಸ್ಥಿತಿ ಬಂತು. ನಾನು ಕೂಡಲೆ ಮುಂಬೈ ಗವರ್ನರ್‌ರನ್ನು ತಂತಿಮೂಲಕ ಸಂಪರ್ಕಿಸಿ, ಅನುಮತಿ ದೊರೆಯುವಂತೆ ಏರ್ಪಡಿಸಿದೆ. ಆದರೂ ನಾಟಕಗೃಹದ ಸುತ್ತಲೂ ಪೊಲೀಸರ ಕಾವಲು ; ಪಾತ್ರಧಾರಿಗಳು ಹಸ್ತಪ್ರತಿಯಲ್ಲಿರುವಷ್ಟು ಮಾತ್ರ ಹೇಳುತ್ತಾರೋ ಅಥವಾ ತಿರುಗುಮುರುಗು ಮಾಡಿ ಹೇಳುತ್ತಾರೋ ಎಂದು ಪರೀಕ್ಷಿಸಲು ಇಬ್ಬರು ಪೊಲೀಸ್ ಅಧಿಕಾರಿಗಳು ಒಳಗೆ ಬಂದರು ; ಕೊನೆ ತನಕ ಕಣ್ಣು ಮಿಟುಕಿಸದೆ ನೋಡುತ್ತಾ, ಕಿವಿ ಅರಳಿಸಿಕೊಂಡು ಕೇಳುತ್ತಾ ಕುಳಿತಿದ್ದರು.

ನಾಟಕ ಆರಂಭವಾಯಿತು. ಮೊದಲ ದೃಶ್ಯದಲ್ಲೇ ಸರಕಾರಕ್ಕೆ ಎಂಥ ಗಸ್ತು ಎನ್ನುತ್ತೀರಿ ? ಸೂತ್ರಧಾರನು ಪ್ರವೇಶಿಸಿ ಹಾಡುತ್ತಾ, 'ಇದು ವಿನಾಯಕನ ಕೃತಿ' ಎಂದು ತಿಳಿಸುತ್ತಾನೆ. ಅಷ್ಟರಲ್ಲಿ ಒಳಭಾಗದಿಂದ 'ನಿಲ್ಲಿಸು, ನಿಲ್ಲಿಸು' ಎಂಬ ಗರ್ಜನೆ ಕೇಳುತ್ತದೆ.

ಸೂತ್ರಧಾರ : ಇನ್ನೂ ಮಂಗಳಾಚರಣವೇ ಮುಗಿದಿಲ್ಲ, ಅಷ್ಟರಲ್ಲಿ 'ನಿಲ್ಲಿಸು' ಅನ್ನುವವರಾರು ?

ನಟಿ : ಹಾ ನಾಥ ! ವಿನಾಯಕನ ಹೆಸರು ಕೇಳುತ್ತಲೇ, ಯಾರೋ ಸರಕಾರಿ ಅಧಿಕಾರಿ ನಾಟಕಕ್ಕೆ ತಡೆಹಾಕಲು ಇತ್ತ ಬರುತ್ತಿರಬಹುದೆಂದು ನನಗೆ ಭಯವಾಗುತ್ತಿದೆ. ಇದು ವಿನಾಯಕ ಬರೆದ ನಾಟಕವೆಂದು ನೀನು ಹೇಳಿದ್ದಾದರೂ ಏಕೆ ?...

(ಒಳಗಿನಿಂದ) : ನಿಲ್ಲಿಸು, ನಿಲ್ಲಿಸು !

ಪಾರಿಪಾರ್ಶ್ವಕ : ಅರೆ, ಭಾಪುರೇ ! ಸರಕಾರಿ ಅಧಿಕಾರಿಯೇ ಹೌದು. ಈಗ ನಾನೆಲ್ಲಿ ಓಡಲಿ ? ಅಯ್ಯಾ ಸೂತ್ರಧಾರ! ಅಪಾರ ಅನುಭವಿಗಳೂ, ಸುಪ್ರತಿಷ್ಠರೂ ಆದ ಇತರ ನಾಟ್ಯಾಚಾರ್ಯರನ್ನು ಬಿಟ್ಟು ಇದು ಯಾವನೋ ಅನುಭವಹೀನ ಎಳೆಯನ ನಾಟಕಕ್ಕೆ ಗಂಟುಬೀಳುವ ದುರ್ಬುದ್ಧಿ ನಿನಗೆ ಎಂದಿ

ನಿಂದಾಯಿತು ? ಇಲ್ಲಿ ನೋಡು ! ನಿನ್ನ ಕೈಲಿರುವ ನಾಟಕ ಸೂತ್ರದ ಜತೆಗೆ ನಿನ್ನ ಅರ್ಧಾಂಗಿಯಾದ ಈ ನಟಿಯ ಕುತ್ತಿಗೆಯಲ್ಲಿ ಇರುವ ಮಂಗಳಸೂತ್ರವೂ ಇಂದು ಸರಕಾರದ ಕೋಪದ ಕತ್ತರಿಯಲ್ಲಿ ಸಿಕ್ಕಿಬಿದ್ದಿದೆಯಲ್ಲಯ್ಯ!

ಸೂತ್ರಧಾರ: ಹೆದರಬೇಡ! ನನ್ನ ಮಂಗಳಾಚರಣವೆಂದರೆ ಎಲ್ಲ ಶಾಪಗಳಿಗೂ ವಿಮೋಚನೆ ಇದ್ದಂತೆ ಅದನ್ನು ಕೇಳಿ ದಯಾಮಯನಾದ ಭಗವಂತನು - ಹಿಂದೊಮ್ಮೆ ವಿನಾಯಕನ ಲೇಖನಿಗೆ ಅಂಟಿದ್ದ ಶಾಪವನ್ನು ನಿರುಪದ್ರವಿಯಾಗಿ ಮಾಡಿದಂತೆ, ಈಗಲೂ ಮಾಡಿಯೇ ಮಾಡುತ್ತಾನೆ.. .

ನಾಟಕ ನಿರೀಕ್ಷೆಗೂ ಮೀರಿ ಯಶಸ್ವಿಯಾಯಿತು. ಅಸ್ಪೃಶ್ಯತೆಯ ನಿವಾರಣೆ ಅದರ ವಿಷಯ. ವ್ಯವಸ್ಥಾಪಕರು ನನಗೆ ತಮ್ಮ ಕೃತಜ್ಞತೆಯ ಕುರುಹಾಗಿ ಬೆಳ್ಳಿಯ ಮಸಿಕುಡಿಕೆ ಮತ್ತು ಬೆಳ್ಳಿಯ ಹಿಡಿ ಹಾಗೂ ಚಿನ್ನದ ಮುಳ್ಳಿನ ಲೇಖನಿ ಅರ್ಪಿಸಿದರು. 'ಈ ಸಾಮಗ್ರಿಗಳಿಂದ ನೀವು ನಮ್ಮ ಮಂಡಲಿಗೆ ಇನ್ನೊಂದು ನಾಟಕ ಬರೆದುಕೊಡಿ' ಎಂದು ಪ್ರಾರ್ಥಿಸಿದರು. ನಾನು ನಕ್ಕು ಹೇಳಿದೆ: 'ಮರದ ಕಡ್ಡಿಗೆ ಕಬ್ಬಿಣದ ಮುಳ್ಳು ಸೇರಿಕೊಂಡು ನಾನು ಬರೆದ ನಾಟಕದ ವಿಷಯದಲ್ಲೇ ನೀವು ಅನುಭವಿಸಬೇಕಾಗಿ ಬಂದ ತೊಂದರೆ ಜ್ಞಾಪಿಸಿಕೊಳ್ಳಿ; ಇನ್ನು ಬೆಳ್ಳಿಯ ಕಡ್ಡಿಗೆ ಚಿನ್ನದ ಮುಳ್ಳು ಹಾಕಿಕೊಂಡು ಬರೆಯುವ ನಾಟಕಕ್ಕೆ ಇನ್ನೆಷ್ಟು ಕಷ್ಟನಷ್ಟಗಳನ್ನು ಅನುಭವಿಸಬೇಕಾಗುವುದೆಂಬುದನ್ನು ಆಲೋಚಿಸಿಕೊಂಡು, ಆಮೇಲೆ ಬರೆಯಲು ಹೇಳುವುದು ಒಳ್ಳೆಯದು!'

ರತ್ನಾಗಿರಿಗೆ ಯಾವುದೇ ನಾಟಕ ಮಂಡಲಿ ಬರಲಿ, ಅವರಿಂದ ನಾನು ಸಾರ್ವಜನಿಕ ಸೇವಾ ಚಟುವಟಿಕೆಗಳಿಗಾಗಿ 'ಸಹಾಯಾರ್ಥ ಪ್ರದರ್ಶನ' ಏರ್ಪಡಿಸದೆ ಇರುತ್ತಿರಲಿಲ್ಲ.

  

ಸರಕಾರಿ ಗುಪ್ತಚರರಿಗೂ ನನಗೂ ಆಜನ್ಮ ಸ್ನೇಹ! 1925ರಲ್ಲಿ ಒಂದು ತಿಂಗಳು, ಮುಂಬೈನಲ್ಲಿದ್ದ ಬಾಳನ ಮನೆಯಲ್ಲಿ ವಾಸಿಸಲು ನನಗೆ ಸರಕಾರದಿಂದ ಅನುಮತಿ ಸಿಕ್ಕಿತ್ತು. ಮುಂಬೈನಲ್ಲಿ ಇಳಿಯುತ್ತಲೇ ಹಳೆಯ ಗೆಳೆಯರಾದ ಶಂಕರ ಮೋಘೆ ಮತ್ತು ಬರ್ವೆ ಎದುರುಗೊಂಡರು. ಮೂವರೂ ಖಾರ್‌ಗೆ ಟ್ಯಾಕ್ಸಿ ಗೊತ್ತುಮಾಡಿದೆವು. ರತ್ನಾಗಿರಿಯಿಂದ ನನ್ನನ್ನು ಹಿಂಬಾಲಿಸಿ ಬಂದಿದ್ದ ಗುಪ್ತಚರನನ್ನು ನಾನೇ ಕರೆದು ಹೇಳಿದೆ : 'ಪಾಪ, ನೀನೇಕೆ ಕಾಸು ಖರ್ಚು ಮಾಡಬೇಕು ? ಇಲ್ಲೆ ಡ್ರೈವರನ ಪಕ್ಕದಲ್ಲಿ ಕುಳಿತುಕೊ!' ಅವನು ಭಯಭಕ್ತಿಗಳಿಂದ ಮುದುಡಿಕೊಂಡು ಕುಳಿತ!

ಅಂದು ಮಧ್ಯಾಹ್ನ ದಾದರಿನಲ್ಲಿದ್ದ ಶಂಕರ ಮೋಘೆಯ ಮನೆಗೆ ಹೋದೆ. ಅವನು ಒಳಗೆ ಮಲಗಿದ್ದ. ಅವನ ಹೆಂಡತಿಗೆ ನನ್ನ ಪರಿಚಯವಿಲ್ಲ. ಆದ್ದರಿಂದ 'ನಿನ್ನೆ ರಾತ್ರಿ ನಿದ್ದೆಗೆಟ್ಟಿದ್ದಾರೆ. ಈಗ ಎಬ್ಬಿಸಿದರೆ ಸಿಟ್ಟಾಗುತ್ತಾರೆ' ಎಂದಳು. 'ಎಲ್ಲಿ, ನೋಡೋಣ' ಎನ್ನುತ್ತಾ ನಾನು ನೇರವಾಗಿ ಒಳಗೆ ಹೋದೆ. ಯಾರೋ, ಏನೋ, ಎಂಬ ಗಾಬರಿ ಆಕೆಗೆ! 'ಬೇಡಿ, ಬೇಡಿ' ಎಂದು ಹೇಳುತ್ತಲೇ ಇದ್ದಳು. ನಾನು ಹಾಸಿಗೆಯ ಹತ್ತಿರ ಹೋಗಿ 'ಲೋ, ಎಷ್ಟು ನಿದ್ದೆ ಹೊಡೆಯುತ್ತೀಯೋ! ಏಳು, ಮೇಲೆ' ಎಂದೆ. ತನ್ನ ಗಂಡನನ್ನು ಯಾರೋ ಅಪರಿಚಿತ ವ್ಯಕ್ತಿ ಈ ರೀತಿ ಮಾತನಾಡಿಸುವುದನ್ನು ಕಂಡು ಹೆಂಡತಿಯ ಜೀವ ಹಾರುತ್ತಿತ್ತು!

'ಯಾರು ? ಅರೇ, ತಾತ್ಯಾ!' ಎನ್ನುತ್ತಾ ಶಂಕರ ಕಣ್ಣುಬಿಟ್ಟ. 'ಮೂರನೆಯ ಕಣ್ಣು' ತೆರೆಯಬಹುದೆಂಬುದು ಅವನ ಪತ್ನಿಯ ನಿರೀಕ್ಷೆ. ಸದ್ಯ, ಹಾಗಾಗಲಿಲ್ಲ! ಇಬ್ಬರೂ ಚಹಾ ಕುಡಿದೆವು. ನಾನೆಂದೆ

'ನೋಡು, ನನ್ನ ''ಸರಕಾರಿ ರಕ್ಷಕ'' ಮುಂದಿನ ಬಾಗಿಲಲ್ಲಿ ಕಾದಿದ್ದಾನೆ. ಅವನಿಗೆ ಸ್ವಲ್ಪ ಚುರುಕು ಮುಟ್ಟಿಸಬೇಕು ಅನ್ನಿಸುತ್ತದೆ. ಹೊರಗೆ ಹೋಗಲು ಬೇರೆ ದಾರಿ ಉಂಟೆ ?'

'ವರಾರದ ಹಿಂದಿನ ಗಟಾರ ದಾಟಿ, ಪೌಳಿಗೋಡೆ ಧುಮುಕಿ ಹೋಗೋಣ ; ಆದೀತೆ ?' ಎಂದು ಅವನು ನನ್ನ ಮುಖ ನೋಡಿದ.

'ಅರೇ, ಹೀಗೇಕೆ ಕೇಳುತ್ತೀ ? ನಾನಿನ್ನೂ ಹಾರುವುದನ್ನು ಮರೆತಿಲ್ಲ. ಹೊರಡೋಣ ಈಗಲೇ' ಎಂದೆ. ಇಬ್ಬರೂ ಸಮುದ್ರದ ದಂಡೆಗೆ ತಿರುಗಾಡಲು ಹೋದೆವು.

ಇತ್ತ ನಮ್ಮ ಪತ್ತೇದಾರನಿಗೆ ರಾತ್ರಿ ಹತ್ತು ಗಂಟೆಯವರೆಗೂ ನನ್ನ ಪತ್ತೆ ಹತ್ತದೆ, ಎದೆಯೊಡೆಯಿತು ! ಗಾಬರಿಯಿಂದ ಖಾರ್‌ಗೆ ಓಡಿಬಂದ ಮನೆಯಲ್ಲಿ ನನ್ನನ್ನು ಕಂಡಾಗಲೇ ಅವನ ಜೀವಕ್ಕೆ ಸಮಾಧಾನ. 'ಸಾಹೇಬ್ ! ದಯೆಯಿರಲಿ. ದಯವಿಟ್ಟು ಬಡವನ ಹೊಟ್ಟೆಯ ಮೇಲೆ ಕಾಲಿಡಬೇಡಿ ! ನಿಮ್ಮ ಚಲನವಲನಗಳನ್ನೆಲ್ಲ ನಾನು ಕಮಿಶನರ್‌ಗೆ ಕಳಿಸಬೇಕಾಗುತ್ತದೆ - ಹೊಟ್ಟೆಪಾಡಿಗಾಗಿ. ನನಗೂ ಹೆಂಡತಿ ಮಕ್ಕಳಿದ್ದಾರೆ' ಎಂದು ಕಾಲಿಗೆ ಬಿದ್ದ.

'ಅರೇ, ನಾನು ಎಲ್ಲಿಗೂ ತಪ್ಪಿಸಿಕೊಂಡು ಹೋಗುವುದಿಲ್ಲ. ಆದರೆ, ಮನಸ್ಸು ಮಾಡಿದರೆ ನಿನ್ನ ಕಣ್ಣಿಗೆ ಮಣ್ಣೆರಚಬಲ್ಲೆ ಎಂಬುದರ ರುಚಿ ತೋರಿಸಿದೆ, ಅಷ್ಟೆ! ನಿನಗೊಂದು ಸುಲಭ ಮಾರ್ಗ ತೋರಿಸುತ್ತೇನೆ, ಕೇಳು. ನಿನ್ನ ಮನೆ ಇರುವುದು ದಾದರ್‌ನಲ್ಲಿ ; ನಮ್ಮ ಶಂಕರ ಮೋಘೆ ಸಹ ಅಲ್ಲೇ ಇದ್ದಾರೆ. ಅವರನ್ನು ಬಿಟ್ಟು ನಾನು ಎಲ್ಲಿಯೂ ಹೋಗುವುದಿಲ್ಲ. ನೀನು ದಿನವೂ ಬೆಳಿಗ್ಗೆ ಅವರ ಹತ್ತಿರ ಹೋಗಿ ನನ್ನ ಓಡಾಟದ ವರದಿ ಕೇಳಿದರಾಯಿತು. ಪಾಪ, ನಿನಗೂ ಓಡಾಟ ತಪ್ಪುತ್ತದೆ. ನಾಲ್ಕು ದಿನ ನೀನೂ ಹೆಂಡತಿ ಮಕ್ಕಳೊಡನೆ ಹಾಯಾಗಿ ಇದ್ದಂತಾಗುತ್ತದೆ '

ಅವನು ಅದಕ್ಕೆ ಒಪ್ಪಿದ. ನನ್ನ ಓಡಾಟ ಹೆಚ್ಚು ಸುಗಮವಾಯಿತು !

ಒಂದು ದಿನ ನಾನು ಮತ್ತು ಶಂಕರ ಮೋಘೆ ಶೀವ್ ನಿಲ್ದಾಣದಲ್ಲಿ ನಿಂತಿದ್ದೆವು. ಶಂಕರನ ಎರಡನೆಯ ಮಗ ವಿನಾಯಕ ನನ್ನ ಪಕ್ಕದಲ್ಲೆ ಸೈನಿಕ ವೇಷದಲ್ಲಿ ಬಂದೂಕು ಹಿಡಿದುಕೊಂಡು ನಿಂತಿದ್ದ. ಆಗೊಬ್ಬ ಬಂಗಾಲಿ ವ್ಯಕ್ತಿ ಹತ್ತಿರ ಬಂದು, ನನ್ನ ಕಡೆ ತೋರಿಸುತ್ತಾ, 'ಇವರು ಯಾರು ?' ಎಂದು ವಿಚಾರಿಸಿದ. ಶಂಕರ ನನ್ನ ಹೆಸರು ಹೇಳುತ್ತಲೇ, ನಮಸ್ಕಾರ ಮಾಡಿ ಕೇಳಿದ : 'ಇವರು ನಿಮ್ಮ ಮಗನೇ ?'

'ನನ್ನ ಸ್ನೇಹಿತನ ಮಗ' ಎಂದೆ.

'ನಾನು ಅಮೆರಿಕದ ಪತ್ರಿಕೆಯೊಂದರ ವರದಿಗಾರ. ನೀವು ಅನುಮತಿ ಕೊಟ್ಟರೆ, ನಿಮ್ಮಿಬ್ಬರ ಭಾವಚಿತ್ರ ತೆಗೆದುಕೊಳ್ಳುವೆ' ಎಂದ.

ಅವನು ಚಿತ್ರ ತೆಗೆದ ನಂತರ ನಾನು ವಿನಾಯಕನ ಸೈನಿಕ ವೇಷದ ಕಡೆಗೆ ಕೈತೋರಿಸಿ, 'ನೋಡಿ, ಭಾವೀ ಭಾರತದ ಪೀಳಿಗೆ ಇದು' ಎಂದೆ.

'ಹಾಗಾದರೆ ಅದೇ ಶೀರ್ಷಿಕೆ ಕೊಟ್ಟು ಈ ಚಿತ್ರವನ್ನು ಅಮೆರಿಕಕ್ಕೆ ಕಳಿಸುತ್ತೇನೆ' ಎಂದು ಧನ್ಯವಾದ ಅರ್ಪಿಸಿ ಹೊರಟುಹೋದ.

ರತ್ನಾಗಿರಿಗೆ ಹಿಂದಿರುಗಿದ ಮೇಲಿನ ಮಾತು. ಒಮ್ಮೆ ಯಾರದೋ ಮನೆಯಲ್ಲಿ ವಿವಾಹ ಸಮಾರಂಭವಿತ್ತು. ಊಟಕ್ಕೆ ಕೂರುವ ಮುನ್ನ ಒಬ್ಬ ತರುಣನಿಗೆ ಹೇಳಿದೆ : 'ದೇವಧರ್, ಹೊರಗೆ ಬಿಸಿಲಿನಲ್ಲಿ ಒಬ್ಬರು ಕುಳಿತಿದ್ದಾರೆ. ಅವರನ್ನೂ ಊಟಕ್ಕೆ ಕರೆದು ತಾ. ನನ್ನ ಹೆಸರು ಹೇಳಿದರೆ ಬರುತ್ತಾರೆ '

ಅದರಂತೆ ಅವರು ಬಂದರು. ನಾನು ಆತ್ಮೀಯತೆಯಿಂದ ಅವರನ್ನು ನನ್ನ ಪಕ್ಕದಲ್ಲೆ ಕೂರಿಸಿಕೊಂಡೆ. ನನಗೆ ಅಷ್ಟೊಂದು ಪ್ರೀತಿಪಾತ್ರರಾದ ಆ ಅಪರಿಚಿತ ವ್ಯಕ್ತಿ ಯಾರೆಂದು ಎಲ್ಲರಿಗೂ ಕುತೂಹಲ. ಭಟ್ಟರು ಕೇಳಿಯೇಬಿಟ್ಟರು : ಸಾವರಕರ್, ಈ ಅಪರಿಚಿತ ಅಳಿಯಂದಿರು ಯಾರು ?' 'ಸರಕಾರದವರು ನನ್ನ ಯೋಗಕ್ಷೇಮಕ್ಕಾಗಿ ನೇಮಿಸಿರುವ ಅಂಗರಕ್ಷಕರು' ಎಂದೆ !

ಹಿಂದುಸ್ಥಾನದ ಯಾವುದೇ ಮೂಲೆಯಲ್ಲಿ ಕ್ರಾಂತಿಯ ಸ್ವರ, ಕ್ರಾಂತಿಕಾರಿಗಳ ಗುಂಡಿನ ಅಥವಾ ಬಾಂಬಿನ ಸದ್ದು ಕೇಳಿಬರಲಿ, ಸರಕಾರವು ಕೂಡಲೆ ರತ್ನಾಗಿರಿಯ ನನ್ನ ವಸತಿಯನ್ನು ಝಡತಿ ಮಾಡುತ್ತಿತ್ತು. ಒಂದು ದಿನ ಇದ್ದಕ್ಕಿದ್ದಂತೆ ಬೆಳಗಿನ ಜಾವ ಪೊಲೀಸರು ಮನೆಯನ್ನು ಸುತ್ತುಗಟ್ಟಿ ನಿಂತರು. ಪೊಲೀಸ್ ಅಧಿಕಾರಿ ಒಳಗೆ ಬಂದು ಝಡತಿಯ ಆಜ್ಞೆ ತೋರಿಸಿದರು. ನಾನು ಮನೆಯವರೊಡನೆ ಹೊರಗೆ ಬಂದು, ನಕ್ಕು ಹೇಳಿದೆ: 'ಆಗಬಹುದು, ನಾವು ಹೊರಗೆ ಬಂದಿದ್ದೇವೆ. ನೀವು ಒಳಗೆ ಹೋಗಿ ಶೋಧಿಸಬಹುದು. ಆದರೆ ನೆನಪಿರಲಿ, ''ಸ್ಕಾಟ್‌ಲೆಂಡ್ ಯಾರ್ಡ್'' ನವರಿಗೆ ನಾಲ್ಕು ವರ್ಷ ಚಳ್ಳೆಹಣ್ಣು ತಿನ್ನಿಸಿರುವ ಆಸಾಮಿ ನಾನು !' ಮನೆಯೊಳಗೆ ಅವರಿಗೆ ಬೇಕಾದುದು ಸಿಕ್ಕಲಿಲ್ಲ. ಅವರು ಏತಕ್ಕೆ ಬಂದಿದ್ದರೆಂಬುದನ್ನು ನಾನು ಬಲ್ಲೆ. ಸರದಾರ ಭಗತಸಿಂಗ್ ತನ್ನ ಕ್ರಾಂತಿಸಂಘಕ್ಕೆ ನಿಧಿ ಸಂಗ್ರಹಿಸಲು '1857ರ ಸ್ವಾತಂತ್ರ್ಯ ಸಂಗ್ರಾಮ' ದ ಎರಡು ಸಾವಿರ ಪ್ರತಿಗಳನ್ನು ಪುನರ್ಮುದ್ರಿಸಿದ್ದ ; ಅದರ ಎರಡು ಪ್ರತಿಗಳನ್ನು ಗೌರವದ ಕಾಣಿಕೆಯಾಗಿ ನನಗೆ ಗುಪ್ತರೀತಿಯಲ್ಲಿ ಕಳುಹಿಸಿಕೊಟ್ಟಿದ್ದ. ಅದಕ್ಕಾಗಿ ಪೊಲೀಸರ ಆಗಮನವಾಗಿತ್ತು ! ಆದರೆ ಅವರು ಬಂದ ದಾರಿಗೆ ಸುಂಕವಿಲ್ಲದೆ ಬರಿಗೈಲಿ ತೆರಳಬೇಕಾಯಿತು.

  

1931ರ ಮಾರ್ಚ್ 23ರಂದು ಸರದಾರ ಭಗತಸಿಂಗ್ ಫಾಸಿಗೇರಿದ. ಆ ಸುದ್ದಿ ನನಗೆ ಮರುದಿನ ತಿಳಿದಾಗ ಹೃದಯ ವಿದೀರ್ಣವಾಯಿತು. ಕರುಳು ಕಿವಿಚಿದಂತಾಗಿ ಒಂದೆಡೆ ಕುಳಿತೆ. ಒಂದು ತುಂಡು ಕಾಗದದ ಮೇಲೆ ಮನಸ್ಸಿಗೆ ತೋಚಿದಂತೆ ಗೀಚತೊಡಗಿದೆ. ಅಷ್ಟರಲ್ಲಿ ತೀರ ಅನಿರೀಕ್ಷಿತವಾಗಿ ಪೊಲೀಸ್ ಅಧಿಕಾರಿಗಳು ಬಂದರು ; ಮನೆ ಶೋಧಿಸತೊಡಗಿದರು. ಭಗತಸಿಂಗನಿಗೂ ನನಗೂ ನಡುವೆ ಸಂಬಂಧ ಕಲ್ಪಿಸುವ ಪುರಾವೆ ಅವರಿಗೆ ಬೇಕಾಗಿತ್ತು ! ಕೊನೆಗೆ ವರದಿ ಬರೆಯಲು ಅಧಿಕಾರಿಗೆ ನನ್ನ ಬರವಣಿಗೆಯ ಪುಸ್ತಕವನ್ನೇ ಕೊಟ್ಟೆ. ಆ ಸಮಯದಲ್ಲಿ ನಾನು ಪತ್ರಿಕೆಗಳಿಗಾಗಿ ಸಿದ್ಧಪಡಿಸಿದ ಲೇಖನವೊಂದರ ಹಾಳೆಗಳು ಆ ಪುಸ್ತಕದ ನಡುವೆಯೇ ಇದ್ದವು ! ಮತ್ತು ಭಗತಸಿಂಗನ ಬಗ್ಗೆ ನಾನು ಕೆಲವೇ ನಿಮಿಷಗಳ ಹಿಂದೆ ಗೀಚಿದ ಕಾವ್ಯವಿದ್ದ ಕಾಗದದ ಚೂರನ್ನು ನನ್ನ ಕೈಯೊಳಗೇ ಮುದುರಿ ಹಿಡಿದುಕೊಂಡಿದ್ದೆ. ಆದರೆ ಅಧಿಕಾರಿಗಳ ಗಮನಕ್ಕೆ ಇವರೆಡೂ ಬೀಳಲೇ ಇಲ್ಲ ! ಅವರು ಬರಿಗೈಲಿ ಹೊರಬಿದ್ದರು.

ರತ್ನಾಗಿರಿಯ 'ಹಿಂದು ತರುಣ ಮಂಡಲಿ'ಯ ಯುವಕರು, ನಾನು ಭಗತಸಿಂಗನನ್ನು ಕುರಿತು ಮನಃಕ್ಷೋಭೆಯಿಂದ ಬರೆದ 16 ಸಾಲುಗಳ ಪದ್ಯವನ್ನು ರಹಸ್ಯವಾಗಿ ಕಂಠಪಾಠ ಮಾಡಿದರು. ಮರುದಿನ ಬೆಳಿಗ್ಗೆ ಊರಿನ ರಸ್ತೆಗಳಲ್ಲಿ, ಪೊಲೀಸರು ಕಣ್ಣುಬಿಡುವಷ್ಟರಲ್ಲೆ ಮೆರವಣಿಗೆ ನಡೆಸಿ 'ಸ್ವಾತಂತ್ರ್ಯ ಲಕ್ಷ್ಮೀ ಕೀ ಜಯ್' ಘೋಷಣೆ ಮೊಳಗಿಸಿದರು ; ಪ್ರಭಾತಫೇರಿಯುದ್ದಕ್ಕೂ ಆ ನೂತನ ಗೀತೆ ಹಾಡಿದರು :

**ಹಾ ಭಗತಸಿಂಗ, ಹಾಯ್ ಹಾ**

**ಜಾಶಿ ಆಜೀ, ಫಾಶಿ ಅಮ್ಹಾ ಸ್ತವಚಿ ವೀರಾ, ಹಾಯ್ ಹಾ !**



ಜಾ ಹುತಾತ್ಮಾನೋ, ಆಹಾ !
ಸಾಕ್ಷ ಠೇವುನಿ ಶಪಥ ಘೇತೋ ಆಮ್ಹಿ ಊರಲೋ ತೇ ಪಹಾ
ಶಸ್ತ್ರಸಂಗರ ಚಂಡ ಹಾ
ಝುಂಜವುನಿ ಕೀ, ಜಿಂಕುಚೀ ಸ್ವಾತಂತ್ರ್ಯ ವಿಜಯಾಸೀ ಪಹಾ !
ಹಾ ಭಗತಸಿಂಗ, ಹಾಯ್ ಹಾ !

*(ಹಾ ಭಗತಸಿಂಹ ! ನಮ್ಮ ನಲುವಾಗಿ ನೀನಿಂದು ಫಾಸಿಗೆ ಹೋದೆ, ಹಾಯ್.... ಹುತಾತ್ಮರೇ, ಹೋಗಿ; ಉಳಿದಿರುವ ಈ ನಾವು ನಿಮ್ಮನ್ನು ಸಾಕ್ಷಿಯಾಗಿಟ್ಟುಕೊಂಡು ಶಪಥ ತೊಡುತ್ತೇವೆ, ಅದನ್ನೂ (ಅಲ್ಲಿಂದ) ನೋಡಿ ! ಉಗ್ರವಾದ ಈ ಸಶಸ್ತ್ರ ಹೋರಾಟದಲ್ಲಿ ಕಾದಾಡುತ್ತಾ ನಾವು ಸ್ವಾತಂತ್ರ್ಯವನ್ನು ಗೆಲ್ಲುವುದನ್ನೂ ನೋಡಿ !)*

ನೆರೆಹೊರೆಯ ಹೆಣ್ಣುಮಕ್ಕಳು ನನ್ನ ಹೆಂಡತಿ ಯಮುನಾಳ ಕೈಯಲ್ಲಿ ಜಡೆ ಹಾಕಿಸಿಕೊಳ್ಳಲು ಬರುತ್ತಿದ್ದರು. ಒಂದು ದಿನ ಒಬ್ಬ ಹುಡುಗಿ ನನಗೊಂದು ಪ್ರಶ್ನೆ ಹಾಕಿದಳು : 'ತಾತ್ಯಾ, ಭಾರತಕ್ಕೆ ಸ್ವಾತಂತ್ರ್ಯ ಯಾವಾಗ ಸಿಕ್ಕುತ್ತದೆ ?' ನನಗೆ ಬಂಗಾಲದ ಕ್ರಾಂತಿಕಾರಿ ಬಾಲಕಿಯರ ನೆನಪಾಯಿತು. 1931ರಲ್ಲಿ ಶಾಂತಾ ಘೋಷ್ ಎಂಬ ಹೈಸ್ಕೂಲ್ ವಿದ್ಯಾರ್ಥಿನಿಯು ಜಿಲ್ಲಾ ನ್ಯಾಯಾಧೀಶನನ್ನು ಗುಂಡು ಹಾರಿಸಿ ಸಂಹರಿಸಿದ್ದಳು. 1935ರಲ್ಲಿ ಕುಮಾರಿ ವೀಣಾದಾಸ್ ಎಂಬ ಪದವೀಧರೆ ಬಂಗಾಲದ ಗವರ್ನರ್ ಸ್ಟಾನ್ಲೆ ಜಾಕ್ಸನ್ ಮೇಲೆ ಗುಂಡು ಹಾರಿಸಿದ್ದಳು. ನಾನು ಈ ಹುಡುಗಿಗೆ ಹೇಳಿದೆ : 'ಬಂಗಾಲದ ವೀಣಾದಾಸ್ ಮತ್ತು ಶಾಂತಾ ಘೋಷ್ ಈ ಪ್ರಶ್ನೆ ಕೇಳಿದ್ದರೆ ಉತ್ತರ ಹೇಳಬಹುದಾಗಿತ್ತು. ನಿನ್ನ ಹಾಗೆ ಲಕ್ಷಣವಾಗಿ ತಲೆ ಬಾಚಿ

ಕೊಂಡು ಮನೆಯಲ್ಲಿ ಕುಳಿತುಕೊಳ್ಳುವ ಹುಡುಗಿಗೆ ಏನು ತಾನೆ ಹೇಳಲಿ? ಮೊದಲು ವೀಣಾದಾಸಳಂಥ ಕ್ರಾಂತಿಕನ್ಯೆಯವರ ಜೀವನ ಓದಿಕೊಂಡರೆ ನಿನಗೆ ತಾನೇ ತಾನಾಗಿ ಉತ್ತರ ಹೊಳೆದೀತು!'

ಆ ಹುಡುಗಿಯೇ ಮುಂದೆ ಶಿಕ್ಷಕಿಯಾಗಿ 'ಸ್ವದೇಶಿ ಭಂಡಾರ', 'ಬಾಲಕಿಯರ ವ್ಯಾಯಾಮ ಶಾಲೆ' ಮುಂತಾದವನ್ನು ಆರಂಭಿಸಿದಳು.

1926ರ ಡಿಸೆಂಬರಿನಲ್ಲಿ ಅಬ್ದುಲ್ ರಶೀದನೆಂಬ ಮತಾಂಧ ಮುಸಲ್ಮಾನನು ಸ್ವಾಮಿ ಶ್ರದ್ಧಾನಂದರನ್ನು ಗುಂಡಿಟ್ಟು ಕೊಂದ. ಆ ವಾರ್ತೆ ತಿಳಿಯುತ್ತಲೇ ಇಡೀ ರಾಷ್ಟ್ರ ಶೋಕ - ಉದ್ವೇಗಗಳಿಂದ ಉರಿದೆದ್ದಿತು. ರತ್ನಾಗಿರಿಯ ವಿಠ್ಠಲ ಮಂದಿರದಲ್ಲಿ ನೇರಿದ್ದ ಪ್ರಚಂಡ ಸಾರ್ವಜನಿಕ ಸಂತಾಪಸೂಚಕ ಸಭೆಯಲ್ಲಿ ಮಾತನಾಡುತ್ತಾ ನಾನೆಂದೆ: 'ಇಂದು ಸ್ವಾಮೀಜಿಯವರಿಗೆ ಒದಗಿದ ದುರಂತವೇ ನಾಳೆ ನನಗೂ ಒದಗದೆಂದು ಹೇಗೆ ತಾನೆ ಹೇಳಬಹುದು? ಹಾಗಾದಲ್ಲಿ ಏನೂ ಆಶ್ಚರ್ಯವಿಲ್ಲ. ಆದರೆ ಅದಕ್ಕಾಗಿ ನಾನೇನೂ ಹೆದರುವುದಿಲ್ಲ. ಸ್ವಾಮೀಜಿಯವರ ಹತ್ಯೆ ಬಹು ದೊಡ್ಡ ಹಾನಿಯೇನೋ ನಿಜ; ಆದರೆ 60 ಸಹಸ್ರ ಮಲ್ಕಾನಾ ರಜಪೂತರನ್ನು ಹಿಂದು ಧರ್ಮಕ್ಕೆ ಸೇರಿಸಿದ ಅವರ ಸಾಧನೆಯೇನೂ ಕಡಿಮೆಯದಲ್ಲ. ಅವರ ಸಾವು ವ್ಯರ್ಥವಾಗಿಲ್ಲ.

'ಔರಂಗಜೇಬನ ಲಕ್ಷೋಪಲಕ್ಷ ಖಡ್ಗಗಳು, ತೋಪುಗಳು ಯಾವ ನೆಲದಿಂದ ಹಿಂದು ಧರ್ಮವನ್ನು ಉಚ್ಚಾಟಿಸಲಾಗಲಿಲ್ಲವೋ ಅಲ್ಲಿ ಒಬ್ಬ ಸ್ವಾಮೀಜಿಯವರನ್ನು ಹತ್ಯೆ ಮಾಡಿದ್ದರಿಂದ ಹಿಂದುತ್ವ ಅಳಿಸಿ ಹೋಗಲು ಸಾಧ್ಯವಿಲ್ಲ; ಬದಲಾಗಿ, ಅದು ಹೆಚ್ಚೆಚ್ಚು ಬೆಳೆಯುತ್ತಾ ಹೋಗುತ್ತದೆ. ಯಾವ ಭಾರತ ಮಾತೆಯು ಒಬ್ಬ ಶ್ರದ್ಧಾನಂದರಿಗೆ ಜನ್ಮ ಕೊಟ್ಟಳೋ ಆ ಭಾರತ ಮಾತೆಯ ರಕ್ತದ ಒಂದೊಂದು ಕಣದಲ್ಲೂ ಲಕ್ಷಾಂತರ ಶ್ರದ್ಧಾನಂದರಿಗೆ ಜನ್ಮ ಕೊಡುವ ಅಪೂರ್ವ ಸಾಮರ್ಥ್ಯವುಂಟು!'

ಹುತಾತ್ಮ ಸ್ವಾಮೀಜಿಯವರ ಸ್ಮರಣಾರ್ಥವಾಗಿ ಜನತೆಯಲ್ಲಿ ರಾಜಕೀಯ ಜಾಗೃತಿಗಾಗಿ 'ಶ್ರದ್ಧಾನಂದ' ಎಂಬ ಹೆಸರಿನ ವಾರಪತ್ರಿಕೆ ಪ್ರಕಟಿಸಲು ನಿರ್ಧರಿಸಿದೆ. ನನ್ನ ತಮ್ಮ ಬಾಳನ ಹೆಸರಿನಲ್ಲಿ ಮುಂಬೈನಿಂದ ಅದರ ಪ್ರಕಾಶನ ಆರಂಭವಾಯಿತು. ರಾಜಕಾರಣದ ಬಗ್ಗೆ ನನ್ನ ಲೇಖನಗಳು 'ಗುಪ್ತನಾಮ' ದಡಿಯಲ್ಲಿ ಅಚ್ಚಾಗತೊಡಗಿದವು.

ರತ್ನಾಗಿರಿಗೆ ಬಂದ ನಂತರ ನಮ್ಮ ಸಂಸಾರದ ಸಂಖ್ಯೆಯಲ್ಲಿ ಪ್ರಗತಿಯಾಯಿತು. 1925ರಲ್ಲಿ ಪ್ರಭಾತ್ ಹುಟ್ಟಿದಳು. ಚೂಟಿ ಹುಡುಗಿಯಾಗಿದ್ದ ಅವಳು ನೆರೆಹೊರೆಯವರಿಗೆಲ್ಲ ಪ್ರೀತಿಯ 'ಪ್ರಭಾತಾಯಿ' ಆಗಿದ್ದಳು. 1928ರಲ್ಲಿ ವಿಶ್ವಾಸನ ಜನ್ಮವಾಯಿತು. ನಾಚಿಕೆಯ ಸ್ವಭಾವದ ಸಾಧು ಹುಡುಗ ಅವನು. ಏನಾದರೊಂದು ಕಾಹಿಲೆಯ ಮಡಿಲಲ್ಲೇ ಅವನು ಬೆಳೆಯುತ್ತಿದ್ದ.

ರತ್ನಾಗಿರಿಗೆ ನಾನು ಬಂದದ್ದು ಐದು ವರ್ಷಗಳ ಸ್ಥಾನಬದ್ಧತೆಗೆ ಒಳಪಟ್ಟು. ಆ ಅವಧಿಯಲ್ಲಿ ನಾನು ನಡೆಸಿದ ನಾನಾ ಚಟುವಟಿಕೆಗಳಿಂದಾಗಿ ಸರಕಾರಕ್ಕೆ 'ವಿಶೇಷ ಪ್ರೀತಿ' ಯುಂಟಾಯಿತು; ಬಹುಶಃ ನನ್ನ ವಿರಹ ಬ್ರಿಟಿಷ್ ಸರಕಾರಕ್ಕೆ ಬೇಕಿರಲಿಲ್ಲ! 1929ರಿಂದ ಇನ್ನಷ್ಟು ಸಮಯ ನನ್ನ ಸ್ಥಾನಬದ್ಧತೆಯ ಅವಧಿ ಮುಂದುವರಿಯಿತು. ನನ್ನ ಬಿಡುಗಡೆಗಾಗಿ ಸಾರ್ವಜನಿಕರೂ ದೇಶದ ಅನೇಕ ನಾಯಕರೂ ಭಾಷಣ, ಹಸ್ತಾಕ್ಷರ ಸಂಗ್ರಹ, ಮನವಿ ಇತ್ಯಾದಿಗಳ ಮೂಲಕ ಪ್ರಯತ್ನಿಸುತ್ತಲೇ ಇದ್ದರು. ಮಹಾತ್ಮಾ ಗಾಂಧಿಯವರಿಗೆ ಆ ವೇಳೆಗೆ ನನ್ನ ಪರಿಚಯ ಮರೆತುಹೋಗಿತ್ತು! ನನ್ನ ಬಿಡುಗಡೆಗೆ ಅವರ ಹಸ್ತಾಕ್ಷರ ಹಾಕಿಸಲು ಹೋದಾಗ ಅವರು, 'ಯಾರಿವರು? ಹಿಂದೆ ಯಾರೋ ಒಬ್ಬ ಸಾವರಕರರೆಂಬವರು ''1857ರ

ಭಾರತೀಯ ಸ್ವಾತಂತ್ರ್ಯ ಸಂಗ್ರಾಮ'' ಎಂಬ ಪುಸ್ತಕ ಬರೆದಿದ್ದರು. ಅವರೇ ಇವರೇನು ?' ಎಂದು ಪ್ರಶ್ನಿಸಿದರಂತೆ. ಅವರು ಕೊನೆಗೆ ಸಹಿ ಹಾಕಲು ನಿರಾಕರಿಸಿದರು. ಪಂ. ನೆಹರೂರವರು 'ಸಾವರಕರ್ ಬಿಡುಗಡೆಯ ಮನವಿ ಪತ್ರ'ವನ್ನು 'ಅಹಿಂಸಾತ್ಮಕ ರೀತಿ'ಯಲ್ಲಿ ಹರಿದು ಚಿಂದಿ ಮಾಡಿ ಎಸೆದುಬಿಟ್ಟರಂತೆ!

1937ರ ಚುನಾವಣೆಗಳ ನಂತರ ತಿಲಕ್ ವಾದಿಯಾದ ಜಮನಾ ದಾಸ ಮೆಹತಾ ಮುಂಬೈ ಪ್ರಾಂತದ ಮುಖ್ಯಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದರು. ಕೊನೆಯದಾಗಿ ಅವರ ಪ್ರಯತ್ನವೂ ನೇರಿ ನಾನು ಪೂರ್ಣ ಮುಕ್ತನಾದೆ ; 1937, ಮೇ 10ರಂದು ಹೊರಬಂದೆ. ರಾಷ್ಟ್ರಕ್ಕೆ ರಾಷ್ಟ್ರವೇ ಅಭಿನಂದನೆಯ ಸುರಿಮಳೆ ಕರೆಯಿತು. ರತ್ನಾಗಿರಿಯ ನಾಗರಿಕರು ಸಾರ್ವಜನಿಕ ಸನ್ಮಾನ ನೀಡಿದರು ; ನಿಧಿಯನ್ನೂ ಅರ್ಪಿಸಿದರು. ಇಪ್ಪತ್ತೇಳು ವರ್ಷಗಳ ಸುದೀರ್ಘ ಬಂಧನಗಳ ನಂತರ ಭಾರತದ ಸ್ವತಂತ್ರ ನಾಗರಿಕನಾದ ಆನಂದದ ಜತೆಗೆ 'ಸ್ವತಂತ್ರ ಭಾರತ' ನಾಗರಿಕನಾಗದಿದ್ದ ದುಃಖ, ಭಾರತವು ಸ್ವತಂತ್ರವಾಗಬೇಕೆಂಬ ಹಂಬಲ ಹಿಂಬಾಲಿಸಿತು. ಮಾತೃಭೂಮಿಯ ಸ್ವಾತಂತ್ರ್ಯದೆಡೆಗೆ ನಡುದಾರಿಯಲ್ಲಿ ನಿಂತುಹೋಗಿದ್ದ ಪ್ರಯಾಣವನ್ನು ಉಚಿತ ಸಾಧನಗಳ ಮೂಲಕ ಮುಂದುವರಿಸುವ ನಿರ್ಧಾರ ತುಂಬಿಕೊಂಡು ಪುನಃ ಹೆಜ್ಜೆ ಹಾಕಿದೆ.





# ಹವಿಸ್ಸು ಇಪ್ಪತ್ತಮೂರು

ಛತ್ರಪತಿ ಶ್ರೀ ಶಿವಾಜಿ ಮಹಾರಾಜರು ಕುಳಿತು ಆಳಿದ ಸಿಂಹಾಸನ ಕೊಲ್ಲಾಪುರದಲ್ಲಿದೆ ರತ್ನಾಗಿರಿಯಿಂದ ಮೊದಲು ಅಲ್ಲಿಗೆ ಹೋದೆ. ಹಿಂದುತ್ವದ ಐಸಿರಿಯನ್ನು ಸ್ಮರಣೆಗೆ ತರುವ ಆ ಉಜ್ವಲ ಐತಿಹಾಸಿಕ ಪ್ರತೀಕಕ್ಕೆ ತಲೆಬಾಗಿದೆ. ಅನಂತರ, ಮಹಾರಾಷ್ಟ್ರದ ಶ್ರೇಷ್ಠ ಸಾಧುಸಂತರೆಲ್ಲರ ಪಾದಧೂಳಿಯಿಂದ ಪಾವನಗೊಂಡ ಪಂಢರಪುರಕ್ಕೆ ತೆರಳಿ, ನನ್ನ ಗೌರವವಂದನೆ ಸಲ್ಲಿಸಿದೆ. ಅಲ್ಲಿಂದ ಮುಂದಿನ ಸ್ಥಾನ ಮಿರಜ್.

ವಾಯುವ್ಯ ಸರಹದ್ದಿನಲ್ಲಿ ಮುಸ್ಲಿಮರು ಹಿಂದು ಹೆಣ್ಣುಮಕ್ಕಳನ್ನು ಅಪಹರಿಸುತ್ತಿದ್ದ ಕಾಲ ಅದು. ಕೆಲವೇ ದಿನಗಳ ಮೊದಲು ಆ ವಿಷಯ ಕೇಂದ್ರ ವಿಧಾನ ಮಂಡಲದಲ್ಲಿ ಚರ್ಚೆಗೆ ಬಂದಿತ್ತು. ಆಗ ಕೆಲವು ಕಾಂಗ್ರೆಸ್ ಸದಸ್ಯರು ಮುಸ್ಲಿಮರ ಕೃತ್ಯವನ್ನು ಸಮರ್ಥಿಸುತ್ತಾ, 'ಕೇವಲ ತಮ್ಮ ಲೈಂಗಿಕ ಹಸಿವನ್ನು ತೀರಿಸಿಕೊಳ್ಳುವುದಕ್ಕಾಗಿ ಅವರು ಹಾಗೆ ಮಾಡುತ್ತಾರೆಯೇ ಹೊರತು, ಇನ್ನಾವುದೇ ದುರುದ್ದೇಶವೂ ಅವರಿಗಿಲ್ಲ, ಇದೇನೂ ಅಂಥ ಮಹತ್ವದ ವಿಚಾರವಲ್ಲ' ಎಂಬ ಅರ್ಥ ಬರುವಂತೆ ವಾದಿಸಿದ್ದರು. ಆ ವಾದವನ್ನು ಮಿರಜ್‌ನಲ್ಲಿ ನಾನು ಬಹಿರಂಗವಾಗಿ ಖಂಡಿಸಿದೆ. ಅದರ ಪರಿಣಾಮವನ್ನೂ ನಾನು ಅನುಭವಿಸಬೇಕಾಯಿತು ; ಹಲವಾರು ರಾಜಕೀಯ ಮುಖಂಡರ ಕೋಪತಾಪಗಳಿಗೆ ಗುರಿಯಾಗಬೇಕಾಯಿತು !

ಮಹಾರಾಷ್ಟ್ರದ ಐತಿಹಾಸಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಕೇಂದ್ರ, ಪುಣೆ. ಅಲ್ಲಿಗೆ ನನ್ನನ್ನು ಬರಮಾಡಿಕೊಂಡಾಗ, ಇಡೀ ನಗರ ಸಮೋತ್ಸಾಹದಿಂದ ದುಮದುಮಿಸಿತು. ಮುಂದಿನ ನಗರ ಮುಂಬೈ. ದಾದರ್ ರೈಲು ನಿಲ್ದಾಣದಲ್ಲಿ ಇಳಿಯುತ್ತಿದ್ದಂತೆಯೇ ಬಾಬಾ ಮತ್ತು ಬಾಳನ ಭೇಟಿ! ನಾಲ್ಕು ವರ್ಷಗಳಿಂದ ನಾಸಿಕದಲ್ಲಿ ಸ್ಥಾನಬದ್ಧತೆಗೊಳಗಾಗಿದ್ದ ಬಾಬಾ ಅದೇ ತಾನೆ ಬಿಡುಗಡೆ ಹೊಂದಿ ಬಂದಿದ್ದ. ನಾವು ಮೂವರೂ ಸ್ವತಂತ್ರ ವ್ಯಕ್ತಿಗಳಂತೆ ಒಂದೆಡೆ ಹೀಗೆ ಸೇರಿ ಮೂವತ್ತು ವರ್ಷಗಳ ಮೇಲಾಗಿತ್ತು ! ಬೋರಿಬಂದರಿನಿಂದ ಗಿರಗಾವಿಯವರೆಗೆ ಪ್ರಚಂಡ ಮೆರವಣಿಗೆ ; ಕೃಷ್ಣಾ ಚಿತ್ರಮಂದಿರದಲ್ಲಿ ಸ್ವಾಗತ ಸಮಾರಂಭ. ಅಂದು ಎಂ.ಎನ್ ರಾಯ್ ಅವರು ಭಾವನಾಪರವಶರಾಗಿ ನುಡಿದರು. 'ಸಾವರಕರ್ ಒಂದು ಕ್ರಾಂತಿವೃಕ್ಷವಿದ್ದಂತೆ. ಅದರ ರೆಂಬೆಕೊಂಬೆಗಳಂತಿರುವ ಅನೇಕರ ಪೈಕಿ ನಾನೂ ಒಬ್ಬ. ವಿದ್ಯಾರ್ಥಿ

ದೆಸೆಯಲ್ಲಿ ಅವರಿಂದ ಪಡೆದ ಸ್ಫೂರ್ತಿಯಿಂದಾಗಿಯೇ ಜಗತ್ತಿನಾದ್ಯಂತ ಅನ್ಯಾಯ, ಶೋಷಣೆ ಮತ್ತು ದಾಸ್ಯದ ಶಕ್ತಿಗಳ ವಿರುದ್ಧ ಹೋರಾಡಲು ನನಗೆ ಬಲ ಸಿಕ್ಕಿತು.'

ನಾನು ಕಾಂಗ್ರೆಸ್ಸಿಗೆ ಸೇರಿ, ಸುಲಭವಾಗಿ ಮಹತ್ವದ ಸ್ಥಾನಮಾನಗಳನ್ನು ಗಳಿಸುವೆನೆಂದು ಅನೇಕರು ಭಾವಿಸಿದ್ದರು. ಆದರೆ ಕೀರ್ತಿ ಹಾಗೂ ಸ್ಥಾನಮಾನಗಳಿಗೂ ನನಗೂ ಬಲು ದೂರ ; ಮೇಲಾಗಿ ನನಗೆ ಸತ್ಯವೆಂದು ಗೋಚರಿಸಿದ್ದ ಮೂಲಭೂತ ತತ್ವಗಳನ್ನು ಬಲಿಗೊಡಲು ನಾನು ಸಿದ್ಧನಾಗಲಿಲ್ಲ.

ನಾಸಿಕದಲ್ಲಿ ವಾಮನ, ಶ್ರೀಧರ ಮುಂತಾದ ಹಳೆಯ ಗೆಳೆಯರೆಲ್ಲ ಸಿಕ್ಕಿದರು. ಹುತಾತ್ಮ ಕಾನ್ಹೇರೆಯು ಜಾಕ್ಸನ್ ಸಾಹೇಬನನ್ನು ವಧಿಸಿದ್ದ ಪ್ರಸಿದ್ಧ 'ವಿಜಯಾನಂದ ರಂಗಮಂದಿರ'ದಲ್ಲೇ ಸಾರ್ವಜನಿಕ ಸಭೆ. ಸರ್ವ ಪಕ್ಷಗಳಿಂದ ನನಗೆ ಬಿನ್ನವತ್ತಳೆಯ ಅರ್ಪಣೆ. ನಾಸಿಕದ 'ಜಾಕ್ಸನ್ ಗಾರ್ಡನ್' ಹೆಸರನ್ನು 'ಕಾನ್ಹೇರೆ ಉದ್ಯಾನ'ವೆಂದು ಬದಲಿಸಲು ನಾನು ಅಂದು ವಿನಂತಿಸಿದೆ. ಅಂದಿನಿಂದಲೇ ಆ ಹೊಸ ಹೆಸರು ಬಳಕೆಗೆ ಬಂದಿತು. ಸೋಲಾಪುರದಲ್ಲಿ ಸಮಾರಂಭಕ್ಕೆ ಹಲವರು ಮೊದಮೊದಲು ವಿರೋಧ ಸೂಚಿಸಿದರು. ಜಾಜು ಎಂಬ ಕಾಂಗ್ರೆಸ್ ಮುಖಂಡರಂತೂ, 'ಇಲ್ಲಿಗೆ ಬಂದರೆ, ಸಾವರಕರರನ್ನು ಕತ್ತೆಯ ಮೇಲೆ ಕೂರಿಸಿ ಮೆರವಣಿಗೆ ಮಾಡುತ್ತೇವೆ' ಎಂದು ಘೋಷಿಸಿದರು. ಅದಕ್ಕೆ ಮಹಾರಾಷ್ಟ್ರದ ಸರಸ ವಾಗ್ಮಿ ಆಚಾರ್ಯ ಅತ್ರೆಯವರು, 'ಹಾಗಿದ್ದರೆ, ಸಾವರಕರರನ್ನು ಜಾಜು ಅವರ ಹೆಗಲ ಮೇಲೆಯೇ ಕೂರಿಸಬೇಕು ; ಏಕೆಂದರೆ ಅವರಿಗಿಂತ ಉತ್ತಮವಾದ ಕತ್ತೆ ಇಡೀ ಸೋಲಾಪುರದಲ್ಲಿ ಬೇರೆ ಯಾವುದೂ ಇಲ್ಲ' ಎಂದು ಉತ್ತರ ಕೊಟ್ಟರು. ಇಡೀ ದೇಶವೇ ನಗೆಗಡಲಿನಲ್ಲಿ ಮುಳುಗಿ ತೇಲಿತು !

ಯುರೋಪಿನಲ್ಲಿದ್ದಾಗ ನಾವೊಂದು ತ್ರಿವರ್ಣ ಧ್ವಜವನ್ನು ರೂಪಿಸಿದ್ದೆವಷ್ಟೆ. ಸ್ಟಟಗಾರ್ಟ್ ಸಮ್ಮೇಳನದಲ್ಲಿ ಶ್ರೀಮತಿ ಕಾಮಾ ಹಾರಿಸಿದ್ದ ಹಾಗೂ 1857ರ ನಂತರ ರಚಿತವಾದ ಭಾರತದ ಮೊಟ್ಟಮೊದಲ ರಾಷ್ಟ್ರೀಯ ಧ್ವಜ ; ಅದು. ಗಜಾನನ ರಾವ್ ಕೇತ್ಕರ್ ಅವರ ವಿಶೇಷ ಪರಿಶ್ರಮದಿಂದಾಗಿ ಅದು 1937ರ ಅಕ್ಟೋಬರ್ ಹೊತ್ತಿಗೆ ಭಾರತವನ್ನು ತಲುಪಿತು. ಅದನ್ನು ಪುಣೆಯಲ್ಲಿ ಸಮಾರಂಭಪೂರ್ವಕವಾಗಿ ಹಾರಿಸಿ ವಂದಿಸಿದೆವು.

ಆ ವರ್ಷ ಡಿಸೆಂಬರಿನಲ್ಲಿ ವಿದರ್ಭ ಪ್ರದೇಶದಲ್ಲಿ ನನ್ನ ಸಂಚಾರವಿತ್ತು. ಆಗ ನಾಗಪುರ, ಚಾಂದಾ, ವರ್ಧಾ, ಅಕೋಲಾ, ಉಮರೇಡ್ ಮುಂತಾದ ಸ್ಥಳಗಳಲ್ಲಿ ರಾಷ್ಟ್ರೀಯ ಸ್ವಯಂಸೇವಕ ಸಂಘದ ಸಂಸ್ಥಾಪಕ ಡಾಕ್ಟರ್ ಹೆಡಗೇವಾರರ ಸಹವಾಸ ಲಭಿಸಿತು. ಡಿಸೆಂಬರ್ 12ರಂದು ಅವರು ನಾಗಪುರದಲ್ಲಿ ನನ್ನನ್ನು ಮೊದಲ ಬಾರಿಗೆ ತಮ್ಮ ಸಂಘದ ಶಾಖೆಗೆ ಕರೆದೊಯ್ದರು. ಘೋಷ ವಾದ್ಯಗಳು ಭೋರ್ಗರೆದು ಸ್ವಾಗತ ಬಯಸಿದವು. ಸಾಲುಸಾಲಾಗಿ ಶಿಸ್ತಿನಿಂದ ನಿಂತ ಸಹಸ್ರಾರು ಸಮವಸ್ತ್ರಧಾರಿ ಸ್ವಯಂಸೇವಕರನ್ನು ಕಂಡು ಮನಸ್ಸು ಆನಂದಪುಲಕಿತವಾಯಿತು. ಹಿಂದುಸ್ಥಾನದಲ್ಲಿ ಅಂಥ ದೃಶ್ಯ ರೂಪುಗೊಂಡುದು ದೇಶದ ಭಾಗ್ಯವೇ ಸರಿ. ಸ್ವಯಂಸೇವಕರ ಸಂಕಲ್ಪಶಕ್ತಿ, ಧ್ಯೇಯದ ಬಗ್ಗೆ ಅವರಿಗಿದ್ದ ಶ್ರದ್ಧಾಭಕ್ತಿ ಅವರ್ಣನೀಯ. ನಿಜಕ್ಕೂ ಡಾಕ್ಟರ್ ಹೆಡಗೇವಾರರು ಅದ್ಭುತ ಪವಾಡವನ್ನೇ ಸಾಧಿಸಿದ್ದರು. ಮೃತ್ಯುಮುಖದಲ್ಲಿ ಮಲಗಿದ್ದ ಹಿಂದು ಸಮಾಜಕ್ಕೆ ಸಂಘಟನೆಯ ಅಮೃತ ಕುಡಿಸಿ, ಸಚೇತನಗೊಳಿಸುತ್ತಿದ್ದರು. ಆ ದೃಶ್ಯ ಕಂಡು ಹಿಂದು ರಾಷ್ಟ್ರದ ಭವಿಷ್ಯ ಉಜ್ವಲಗೊಳ್ಳುವುದರಲ್ಲಿ ಸಂಶಯವಿಲ್ಲ ಅನ್ನಿಸಿತು.

1938ರ ಮೇ ತಿಂಗಳಲ್ಲಿ ಪುಣೆಯಲ್ಲಿ 'ಅಖಿಲ ಮಹಾರಾಷ್ಟ್ರ ಹಿಂದು ಯುವಕ ಪರಿಷತ್ತು' ಜರುಗಿತು. ಆ ಪರಿಷತ್ತಿನ ಅಧ್ಯಕ್ಷತೆ ವಹಿಸುವಂತೆ ನಾನು ಹೆಡಗೇವಾರರನ್ನು ತಂತಿ ಮೂಲಕ ವಿನಂತಿಸಿಕೊಂಡೆ. ಅವರು

ಅಧ್ಯಕ್ಷರಾಗಿ ಆಗಮಿಸಿದಾಗ ಪುನಃ ಅವರೊಡನೆ ಒಂದೆರಡು ದಿನಗಳಿರುವ ಸದವಕಾಶ ದೊರೆಯಿತು. ಸಮಾರಂಭದಲ್ಲಿ ಅಧ್ಯಕ್ಷರ ಪರಿಚಯ ಮಾಡಿಕೊಡುತ್ತಾ, ಭಾಷಣಕಾರರೊಬ್ಬರು, 'ಇಂದಿನ ಅಧ್ಯಕ್ಷರು ''ಮಾತಿನ ಶಾಸ್ತ್ರ''ಕ್ಕಿಂತ ಹೆಚ್ಚಾಗಿ ''ಕೃತಿಶಾಸ್ತ್ರ''ದಲ್ಲಿ ನಿಪುಣರು' ಎಂದು ಹೇಳಿದ್ದು ನಿಜಕ್ಕೂ ಅವರಿಗೆ ಒಪ್ಪುವ ಮಾತೇ ಸರಿ. ನಾನು ಮಾತನಾಡುತ್ತಾ, 'ಹಿಂದು ರಾಷ್ಟ್ರದ ಆಶಾಕೇಂದ್ರ ಹಾಗೂ ಭಾವೀ ಪೀಳಿಗೆಯನ್ನು ರೂಪಿಸುವ ಏಕಮಾತ್ರ ಸಂಸ್ಥೆಯೆಂದರೆ ಸಂಘ' ಎಂದು ಒತ್ತಿ ನುಡಿದೆ ಪರಿಷತ್ತಿನ ಕಾರ್ಯಕಲಾಪಗಳು ಮುಗಿದ ನಂತರ 'ಕೇಸರಿ' ಪತ್ರಿಕೆಯ ಕಾರ್ಯಾಲಯದಲ್ಲೊಂದು ಸತ್ಕಾರಕೂಟ; ನಾನು ಮತ್ತು ಹೆಡಗೆವಾರ್ ಮುಖ್ಯ ಅತಿಥಿಗಳಾಗಿ ಹೋಗಿದ್ದೆವು. ಆಗ ನಮ್ಮನ್ನು ತಿಲಕರ ಪ್ರತಿಮೆಯ ಕೆಳಗೆ ಕೂರಿಸಿ ಭಾವಚಿತ್ರವನ್ನೂ ತೆಗೆಯಲಾಯಿತು.

ಆ ವರ್ಷ ಡಿಸೆಂಬರಿನಲ್ಲಿ ನಡೆಯಲಿದ್ದ ಸಂಘದ ನಾಗಪುರ ಶಾಖೆಯ ಹೇಮಂತ ಶಿಬಿರವನ್ನು ಉದ್ಘಾಟಿಸಲು ಹೆಡಗೆವಾರ್ ನನಗೆ ಆಮಂತ್ರಣವಿತ್ತರು. ಅವರ ಆತ್ಮೀಯತೆಯಿಂದಾಗಿ ನಾನು ಒಪ್ಪಲೇ ಬೇಕಾಯಿತು. ಸಂಘದ ಆ ಶಿಬಿರಜೀವನ ವೈಶಿಷ್ಟ್ಯಪೂರ್ಣ; ಆನಂದೋತ್ಸಾಹದಾಯಕ. ಅನಂತರನಾನು ಡಾಕ್ಟರ್‌ಜೀಯವರನ್ನು ಭೇಟಿಯಾದದ್ದು ಬಹು ದಿನಗಳಾದ ಮೇಲೆ; 1940ರ ಮೇ 11ರಂದು. ಆಗ ಪುಣೆಯಲ್ಲಿ ಸಂಘದ ಮಹಾರಾಷ್ಟ್ರ ಪ್ರಾಂತದ ಕಾರ್ಯಕರ್ತರ ಬೈಠಕ್ ನಡೆಯುತ್ತಿತ್ತು. ನಾನು ಅನಿರೀಕ್ಷಿತವಾಗಿ ಒಳಗೆ ಹೋದೆ. ಸಂಘದ ಆಗಿನ ಸರಕಾರ್ಯವಾಹರಾದ ಮತ್ತು ಮುಂದೆ ಸಂಘದ ಸರಸಂಘ ಚಾಲಕರಾದ ಗೋಳವಲಕರ್ (ಗುರೂಜಿ) ಸಹ ಅಲ್ಲಿದ್ದರು. ಡಾಕ್ಟರ್ ಹೆಡಗೆವಾರರ ಒತ್ತಾಯದ ಮೇರೆಗೆ ನಾನು ಐದು ನಿಮಿಷಗಳು ಕಾರ್ಯಕರ್ತರನ್ನು ಉದ್ದೇಶಿಸಿ ಮಾತನಾಡಿದೆ: '. ... ಇಂದು ಹಿಂದು ರಾಷ್ಟ್ರದ ಸ್ಥಿತಿ ಬಹಳ ಶೋಚನೀಯವಾಗಿದೆ. ಈಗ ರಾ. ಸ್ವ. ಸಂಘವೊಂದೇ ಆಶಾಕೇಂದ್ರ. ಇಂದು ಸಂಘ ಮಾಡುತ್ತಿರುವ ಕೆಲಸವನ್ನೇ ಹಿಂದೆ ದೊಡ್ಡ ದೊಡ್ಡ ರಾಷ್ಟ್ರಗಳೆಲ್ಲವೂ ಅನಿವಾರ್ಯವಾಗಿ ಮಾಡಬೇಕಾಯಿತು.... ನಿರ್ಬಲತೆಯನ್ನು ವರ್ಜಿಸಿ ಸಾಮರ್ಥ್ಯ ಸಂಪನ್ನವಾಗಲು ಸಂಘಟನೆಯನ್ನು ಬಿಟ್ಟು ಬೇರೆ ಮಾರ್ಗವಿಲ್ಲ. ಆದ್ದರಿಂದ ನೀವು ನಿಮ್ಮ ನಾಯಕರಲ್ಲಿ ಪೂರ್ಣ ಶ್ರದ್ಧೆ ಇಡಿ. ನಾನು ಇನ್ನೊಮ್ಮೆ ಒತ್ತಿ ಹೇಳಬಯಸುತ್ತೇನೆ – ಈ ಸಂಘಟನೆ ಮಾತ್ರ ಹಿಂದು ರಾಷ್ಟ್ರದ ಉದ್ಧಾರ ಮಾಡಬಲ್ಲದು.' ಡಾಕ್ಟರ್‌ಜೀಯವರೊಂದಿಗೆ ಅದೇ ನನ್ನ ಕೊನೆಯ ಭೇಟಿ. ಅನಂತರ ಅವರು ಹೆಚ್ಚು ದಿನಗಳು ಬದುಕಲಿಲ್ಲ.

ನಾನು ಹೋದೆಡೆಯಲ್ಲೆಲ್ಲ, ಬಂದೂಕು ಶಿಕ್ಷಣ ಶಾಲೆಗಳನ್ನು ಆರಂಭಿಸುವಂತೆ ಹಿಂದು ತರುಣರಿಗೆ ಕರೆಯಿತ್ತೆ. 'ಕೊನೆಯ ಪಕ್ಷ ''ಏರ್‌ಗನ್''ಗಳನ್ನಾದರೂ ಹಿಡಿದುಕೊಂಡು ಅಭ್ಯಾಸ ಮಾಡಿರಿ. ಜೀವನದಲ್ಲಿ ಸಾಹಿತ್ಯ, ಕಾವ್ಯ, ನಾಟಕ ಎಲ್ಲಕ್ಕೂ ಸ್ಥಾನವುಂಟು ; ಆದರೆ ತಾಯಿ ಮರಣಶಯ್ಯೆಯ ಮೇಲಿರುವಾಗ, ಕಾಲಹರಣವಾಗಲೀ, ಸುಖಭೋಗವಾಗಲೀ ಪಾಪಕರ' ಎಂದು ಎಚ್ಚರಿಸಿದೆ.

ಕಾಂಗ್ರೆಸಿಗೆ ಸೇರದೆ ದೇಶಸೇವೆ ಮಾಡಲು ಸಾಧ್ಯವೇ ಇಲ್ಲ ಎಂಬ ಮಾತು ಪ್ರಚಾರವಾಗಿದ್ದ ಕಾಲ ಅದು. ಆದರೆ ನನ್ನದು ಅದಕ್ಕಿಂತ ಭಿನ್ನವಾದ ನಂಬಿಕೆ. ನಮ್ಮೆಲ್ಲರ ಪೂಜಾದೇವಿ ಒಬ್ಬಳೇ – ಸ್ವಾತಂತ್ರ್ಯ ಲಕ್ಷ್ಮೀ. ಪೂಜಾ ಸ್ಥಳವೂ ಒಂದೇ – ಆ ದೇವಿಯ ದೇಗುಲ. ಅದಕ್ಕೆ ದಾರಿಗಳು ಹಾಗೂ ಸಾಧನಗಳು ಬೇರೆಬೇರೆಯಾಗಿ ಇದ್ದರೇನಂತೆ ? ಪೂಜಾಪದ್ಧತಿಗಳ ಬಗ್ಗೆ ಭಕ್ತರು ಪರಸ್ಪರ ಕಚ್ಚಾಡಬಾರದು. ಅಭಿಪ್ರಾಯಭೇದಗಳು ಯಾವಾಗಲೂ ಇರುವಂಥವೇ, ಆದರೆ ಆ ಕಾರಣಕ್ಕಾಗಿ ಹೊಡೆದಾಡುವುದು ಸರಿಯಲ್ಲ.

ಆದರೂ, ಅಂದಿನ ಸನ್ನಿವೇಶ ವಿಚಿತ್ರವಾಗಿತ್ತು. ಜೈಲಿಗೆ ಹೋಗುವುದೇ ಅಂದು ಪರಮೋಚ್ಚ ತ್ಯಾಗವೆನಿಸಿತ್ತು. ದಿಟ್ಟ ಯೋಧರು ಪಾಪಿಗಳು ; ಆರಾಮ ಕುರ್ಚಿಯ ರಾಜಕಾರಣಿಗಳು ಮಹಾಪುರುಷರು ಎಂಬುದು ಆಗಿನ ಕಲ್ಪನೆ ! 'ಕಮ್ಯುನಲ್ ಅವಾರ್ಡ್' ರೂಪದಲ್ಲಿ ಮೂವರು ಹಿಂದುಗಳಿಗೆ ಒಂದು ಮತ ಹಾಗೂ ಒಬ್ಬ ಮುಸ್ಲಿಮನಿಗೆ ಮೂರು ಮತಗಳ ಹಕ್ಕನ್ನು ತಾತ್ವಿಕವಾಗಿ ಒಪ್ಪಿದ್ದುದು 'ನ್ಯಾಯ', 'ಪ್ರಜಾತಂತ್ರೀಯ' ! ಶೇ. 100ರಷ್ಟು ರಾಷ್ಟ್ರೀಯ! ಮುಸ್ಲಿಮರ ಹಿತಚಿಂತನೆ ಹಾಗೂ ಸೇವೆಗಳೇ ಧಾರ್ಮಿಕ ಕರ್ತವ್ಯ ; ಆದರೆ ಹಿಂದುಗಳನ್ನು ಜನಗಣತಿಯಲ್ಲಿ ಸೇರಿಸುವುದು ಸಹ ಭಯಂಕರ ಜಾತೀಯ ಕೃತ್ಯ ! ಇಸ್ಲಾಮಿನ ಕೆಲಸ, ದೇವರ ಕೆಲಸ ; ಪ್ರಗತಿಗಾಮಿ ಮತ್ತು ರಾಷ್ಟ್ರೀಯ ; ಹಿಂದು ಸಮಾಜದ ಕೆಲಸವಾದರೆ ಶುದ್ಧ ಪ್ರತಿಗಾಮಿ ! ಡಾಕ್ಟರ್ ಅಂಬೇಡಕರರ ಮಾತಿನಲ್ಲಿ ಹೇಳುವುದಾದರೆ, 'ಆಧುನಿಕ ಕಾಲದ ಭಾರತೀಯ ರಾಜಕಾರಣದಲ್ಲಿನ ಅತ್ಯಂತ ಕರಾಳ ಯುಗ' ಅದು. ಅಂತಹ ಸನ್ನಿವೇಶದಲ್ಲಿ ನಾನು ರಾಜಕೀಯ ರಂಗ ಪ್ರವೇಶಿಸಿದೆ; 1937ರ ಕೊನೆಗೆ ಕರ್ಣಾವತಿ (ಅಹಮದಾಬಾದ್) ಯಲ್ಲಿ ನಡೆದ ಹಿಂದು ಮಹಾ ಸಭೆಯ ಅಧಿವೇಶನದ ಅಧ್ಯಕ್ಷ ಸ್ಥಾನಕ್ಕೆ ಚುನಾಯಿತನಾದೆ.

ಸ್ವಾತಂತ್ರ್ಯ ಹೋರಾಟದಲ್ಲಿ ಸಹಕರಿಸದೆ, ಹೆಜ್ಜೆಹೆಜ್ಜೆಗೂ ಹಿಂದುಗಳನ್ನು ಪೀಡಿಸುತ್ತಾ ಬ್ರಿಟಿಷ್ ಸರಕಾರದೊಂದಿಗೆ ಒಳಸಂಚು ಹೂಡುತ್ತಾ, ವಿಶೇಷ ಹಕ್ಕುಬಾಧ್ಯತೆಗಳಿಗಾಗಿ ಒತ್ತಾಯಿಸುತ್ತಿದ್ದ ಮುಸ್ಲಿಂ ನಾಯಕರಿಗೆ ಉತ್ತರಿಸುವುದು ನನ್ನ ಕರ್ತವ್ಯವಾಗಿತ್ತು. 'ನೀವು ಬಂದರೆ ನಿಮ್ಮ ಜತೆಗೆ; ನೀವು ಬಾರದಿದ್ದರೆ ನಿಮ್ಮನ್ನು ಬಿಟ್ಟು ; ನೀವು ವಿರೋಧಿಸಿದರೆ, ಆ ವಿರೋಧವನ್ನೂ ಲೆಕ್ಕಿಸದೆ - ಹಿಂದುಗಳು ತಮ್ಮ ಸರ್ವಶಕ್ತಿಯಿಂದ ತಮ್ಮ ರಾಷ್ಟ್ರೀಯ ಸ್ವಾತಂತ್ರ್ಯಕ್ಕಾಗಿ ಹೋರಾಟ ಮುಂದುವರಿಸುತ್ತಾರೆ' ಎಂದು ಸಾರಿ ಹೇಳಿದೆ.

ದಿಲ್ಲಿಗೆ ನನ್ನ ಮೊದಲ ಭೇಟಿ 1938ರ ಫೆಬ್ರವರಿ 6ರಂದು. ಅಲ್ಲಿ ಪ್ರಚಂಡ ಜನಸಮೂಹ ನನ್ನ ಸ್ವಾಗತಕ್ಕೆ ಕಾದಿತ್ತು. ಡಾ. ಮೂಂಜೆ, ಭಾಯಿ ಪರಮಾನಂದ್, ಪ್ರೊಫೆಸರ್ ರಾಮಸಿಂಗ್, ಡಾ. ಜಯಕರ್, ಎಂ.ಎಸ್. ಆಣೆ ಮುಂತಾದ ವಿಖ್ಯಾತ ನಾಯಕರೆಲ್ಲರೂ ಉತ್ಸಾಹದಿಂದ ಮೆರವಣಿಗೆಯಲ್ಲಿ ಪಾಲುಗೊಂಡಿದ್ದರು. ತಳಿರು ತೋರಣಗಳಿಂದ ಶೋಭಿಸುತ್ತಿದ್ದ ಮಾರ್ಗ ಹಾಗೂ ಚೌಕಗಳ ಮೂಲಕ ಮೆರವಣಿಗೆ ಐದು ಮೈಲಿ ಸಾಗಿತು. 'ಅಖಂಡ ಭಾರತ್ ಜಿಂದಾಬಾದ್' 'ಇಂಕಿಲಾಬ್ ಜಿಂದಾಬಾದ್' ಎಂಬ ಘೋಷಣೆಗಳು ಕೇಳಿಬರುತ್ತಿದ್ದವು. ಆದರೆ ಜಿಂದಾಬಾದ್ ಎಂಬುದು ಭಾರತೀಯ ಶಬ್ದವಲ್ಲ. ಅದಕ್ಕಾಗಿ ನಾನು ವಾಹನದಿಂದಲೇ ಘೋಷಿಸಿದೆ : 'ಅಖಂಡ ಭಾರತ್ ಅಮರ ರಹೇ !', 'ಸ್ವಾತಂತ್ರ್ಯ ಲಕ್ಷ್ಮೀ ಕೀ ಜಯ್ !' ಸಹಸ್ರ ಸಹಸ್ರ ಕಂಠಗಳಿಂದ ಆ ಘೋಷಣೆಗಳು ಗಗನಭೇದಿಯಾಗಿ ಮಾರ್ಮೊಳಗಿದವು

ನಾನು ಹೋದಹೋದಲ್ಲೆಲ್ಲ ಜನತೆ ನೀಡುತ್ತಿದ್ದ ವೈಭವದ ಸ್ವಾಗತ ಕಂಡು, ಅದೊಂದು ವಿಜಯಯಾತ್ರೆಯಂತೆ ಭಾಸವಾಗುತ್ತಿತ್ತು. ಜನರ ಪ್ರೀತಿ ಗೌರವಗಳನ್ನೂ ಅವರ ಸ್ಫೂರ್ತಿ ಸಂಭ್ರಮಗಳನ್ನೂ ನೋಡಿ ನನ್ನ ಮನದಾಳದಿಂದ ಕೃತಜ್ಞತೆಯ ಭಾವ ಹೊಮ್ಮಿ ಬರುತ್ತಿತ್ತು ; ಜೀವನ ಸಾರ್ಥಕತೆಯ ಅನುಭವವಾಗುತ್ತಿತ್ತು. ನನಗೆ ಗೊತ್ತು - ಅವರ ಇಷ್ಟೆಲ್ಲ ಉತ್ಸಾಹಕ್ಕೆ ಯಾರೋ ಒಬ್ಬ ವ್ಯಕ್ತಿ ಕಾರಣವಲ್ಲ, ಅವರಲ್ಲಿದ್ದ ಅದಮ್ಯ ಸ್ವಾತಂತ್ರ್ಯ ಪ್ರೇಮವೇ ಕಾರಣ ; ಅದಕ್ಕೆ ನಾನೊಂದು ಸಂಕೇತ ಮಾತ್ರ ! ಸೇವೆ ಮಾಡುವುದಾದರೆ ನಿಜಕ್ಕೂ ಇಂಥ ಜನರ ಸೇವೆ ಮಾಡಬೇಕು, ಇದರ ಆಶೋತ್ತರಗಳ ಪೂರೈಕೆಗಾಗಿ

ಜೀವನ ಅರ್ಪಿಸಬೇಕು ಎಂದುಕೊಂಡೆ

ಉತ್ತರ ಪ್ರದೇಶದಲ್ಲಿ (ಅಂದಿನ ಸಂಯುಕ್ತ ಪ್ರಾಂತಗಳ) ಪ್ರವಾಸ ಹೊರಟಾಗ ನನ್ನ ಮನಸ್ಸಿನಲ್ಲಿ ಅಸಾಧ್ಯ ಉತ್ಸುಕತೆ; ಒಂದು ರೀತಿಯಲ್ಲಿ ಹೃದಯ ಸ್ಫುರಣ ಎನ್ನಬಹುದು. ಏಕೆಂದರೆ ಆ ಕ್ಷೇತ್ರ 1857ರ ರೋಮಾಂಚಕಾರಿ ಸ್ವಾತಂತ್ರ್ಯ ಸಮರದ ಕೇಂದ್ರ ರಂಗಸ್ಥಳ. ಒಮ್ಮೆ ಸಹ ಕಣ್ಣಲ್ಲಿ ನೋಡದಿದ್ದರೂ, ಅಲ್ಲಿನ ನೂರಾರು ಸ್ಥಳಗಳ ಮಹಿಮೆಯನ್ನು ನಾನು ನನ್ನ ಗ್ರಂಥದಲ್ಲಿ ಹಾಡಿದ್ದೆ. ಕಾನಪುರ, ಫೈಜಾಬಾದ್, ಲಖನೋ, ಬಾರಾಬಂಕಿ, ಆಗ್ರಾ, ಊರೂರಿನಲ್ಲೂ ನನಗೆ ಸಭೆ, ಮೆರವಣಿಗೆ, ಪೌರ ಸನ್ಮಾನಗಳಾಗುತ್ತಿದ್ದವು. ಆದರೆ ನನಗೋ, ಅಡಿಗಡಿಗೂ 1857ರ ದೃಶ್ಯಗಳೇ ಕಣ್ಣಿಗೆ ಕಟ್ಟುತ್ತಿದ್ದವು. ಏಪ್ರಿಲ್ 3ರಂದು ಕಾನಪುರದಲ್ಲಿ ಭಾಷಣ ಮಾಡುತ್ತಾ, ಅದನ್ನು ಹೇಳಿಯೂ ಬಿಟ್ಟೆ: 'ವೀರವರ ತಾತ್ಯಾಟೋಪೆ ಬ್ರಿಟಿಷರ ಸೇನೆಗೆ ಮಣ್ಣುಮುಕ್ಕಿಸಿದುದಕ್ಕೆ ಸಾಕ್ಷಿಯಾಗಿ ನಿಂತಿರುವ ಊರಿದು. ಕ್ರಾಂತಿಕೇಂದ್ರವಾದ ಈ ನಗರವನ್ನೂ, ಅಂತೆಯೇ ಹಿಂದುಸ್ಥಾನದ ಯಾತ್ರಾಕೇಂದ್ರವಾದ ಕಾಶಿಯನ್ನೂ ನೋಡಬೇಕೆಂಬ ಆಸೆ ಬಾಲ್ಯದಿಂದಲೂ ನನ್ನ ಮನಸ್ಸಿನಲ್ಲಿ ಅಪ್ರತಿಹತವಾಗಿ ಬೆಳೆದುಬಂದಿತ್ತು. ಇಲ್ಲಿಗೆ ಬಂದಾಗಿನಿಂದ ನನ್ನ ಮೈಯಲ್ಲಿ ನಾನಾಸಾಹೇಬ ಹಾಗೂ ತಾತ್ಯಾಟೋಪೆಯ ಆತ್ಮಸಂಚಾರವಾಗುತ್ತಿದೆ; ಕಿವಿಗಳಲ್ಲಿ ಅವರ ಸೈನಿಕರ ರಣಘೋಷಗಳು, ಅವರ ಫಿರಂಗಿಗಳ ಭೀಕರ ಗರ್ಜನೆ ಮೊರೆಯುತ್ತಿದೆ!'

ಆ ತಾತ್ಯಾಟೋಪೆಯು ಮೊದಲು ರಣಕಹಳೆ ಮೊಳಗಿಸಿ ತನ್ನ ಸೇನೆಗೆ ಹೋರಾಟದ ಕರೆ ನೀಡಿದ ಸ್ಥಾನ, ಶಿವದೇವಸ್ಥಾನವನ್ನು 'ಈ ತಾತ್ಯಾ' ಸಂದರ್ಶಿಸಿದ! 1857ರ ಇನ್ನೂ ಅನೇಕ ಐತಿಹಾಸಿಕ ಸ್ಥಳಗಳನ್ನು - ಕೇವಲ ಪುಸ್ತಕಗಳಲ್ಲಿ ಮಾತ್ರ ಓದಿದ್ದ ಅವುಗಳ ವರ್ಣನೆಯ ನೆನಪಿನಿಂದಲೇ - ನಾನು ಪತ್ತೆಹಚ್ಚಿ ತೋರಿದಾಗ, ಅಲ್ಲಿನ ಜನರ ಅಚ್ಚರಿಗೆ ಪಾರವಿಲ್ಲ.

ಲಖನೋದಲ್ಲಿ ನನಗೆ ಖ್ಯಾತ ಕ್ರಾಂತಿಕಾರಿ ಹಾಗೂ ಅಂದಮಾನಿನ ಗೆಳೆಯ ಶಚೀಂದ್ರನಾಥ ಸನ್ಯಾಲರ ಭೇಟಿಯಾಯಿತು. ಅವರ ಮನೆಯಲ್ಲಿ ನಡೆದ ಭೋಜನ ಕೂಟಕ್ಕೆ ಪ್ರಸಿದ್ಧ ಕಾಂಗ್ರೆಸ್ ನಾಯಕ, ಆಚಾರ್ಯ ನರೇಂದ್ರ ದೇವ್ ಬಂದಿದ್ದರು. ಅವರು ಮಾತುಕತೆಯ ನಡುವೆ, ಮುಸ್ಲಿಮರು ಅಲ್ಪಸಂಖ್ಯಾತರಾದುದರಿಂದ ಅವರಿಗೆ ಕೆಲವು ರಿಯಾಯಿತಿಗಳನ್ನು ಕೊಡಬೇಕೆಂದು ವಾದ ಹೂಡಿದರು. 'ಮುಸ್ಲಿಮರು ಹಿಂದುಗಳ ಉಪಕಾರಕ್ಕಾಗಿ ಅಲ್ಪಸಂಖ್ಯಾತರಾಗಿ ಉಳಿದಿಲ್ಲ; ವಾಸ್ತವವಾಗಿ, ಬಹುಸಂಖ್ಯಾತ ಹಿಂದುಗಳನ್ನು ಅಲ್ಪಸಂಖ್ಯಾತರನ್ನಾಗಿ ಮಾಡುವುದಕ್ಕೆ ಪ್ರಯತ್ನಿಸಿ, ಅದರಲ್ಲಿ ವಿಫಲರಾದುದರಿಂದ ಹಾಗಿದ್ದಾರೆ, ಅಷ್ಟೆ' ಎಂದು ನಾನು ಹೇಳುತ್ತಲೇ ಅವರು ಸುಮ್ಮನಾದರು.

ಆಗ್ರಾದಲ್ಲಿ ಶಿವಛತ್ರಪತಿಯು ತನ್ನ ಸ್ವಾಭಿಮಾನ ಪ್ರದರ್ಶನದಿಂದ ಔರಂಗಜೇಬನಿಗೆ ಮೈ ನಡುಕ ಹುಟ್ಟಿಸಿದ ಮೊಗಲ ಆಸ್ಥಾನದ ನಿವೇಶನವನ್ನು ನಾನು ಸಂದರ್ಶಿಸಿದೆ. ಅಂದಿನ ಭಾಷಣದಲ್ಲಿ ಸೈನ್ಯಕ್ಕೆ ಸೇರುವಂತೆ ಹಾಗೂ ಬಂದೂಕು ಶಿಕ್ಷಣ ಪಡೆಯುವಂತೆ ಹಿಂದು ಯುವಕರಿಗೆ ಕರೆಯಿತ್ತೆ.

1938ರ ಏಪ್ರಿಲ್ 15ರಂದು ಮುಂಬೈಯಲ್ಲಿ ನಡೆದ ಮರಾಠಿ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ನನ್ನ ಪಾಲಿಗೆ ಬಂತು. ಅಲ್ಲಿ ಸೇರಿದ್ದ ಸಾಹಿತಿಗಳು ಹಾಗೂ ಘನ ವಿದ್ವಾಂಸರ ಸಮೂಹದೆದುರಿಗೆ ನಾನು ಕೆಲವೊಂದು ವ್ಯಾವಹಾರಿಕ ಸತ್ಯಗಳನ್ನು ನಿಸ್ಸಂಕೋಚನಾಗಿ ಹೇಳಬೇಕೆನಿಸಿತು: 'ಪೆನ್' (ಲೇಖನಿ) ಗಳನ್ನು ಬದಿಗಿಟ್ಟು 'ಗನ್' (ಬಂದೂಕು) ಗಳನ್ನು ಧರಿಸುವಂತೆ ಕರೆ ಕೊಟ್ಟೆ.

'ಮುಂಬರುವ ಹತ್ತು ವರ್ಷಗಳಲ್ಲಿ ಕವನಗಳು ಹಾಗೂ ಕವಿಗಳು, ಕಾದಂಬರಿಗಳು ಹಾಗೂ

ಕಾದಂಬರಿಕಾರರು ಇಲ್ಲವಾದಲ್ಲಿ ಏನೂ ನಷ್ಟವಾಗದು ಆಸ್ಟ್ರಿಯ ಹಾಗೂ ಚೀನಾಗಳು ದಾಸ್ಯರೂಪದಲ್ಲಿ ಕೊರಗಬೇಕಾಗಿ ಬಂದುದು ಸಾಹಿತ್ಯದ ಕೊರತೆಯಿಂದಲ್ಲ, ಸೈನಿಕ ಶಕ್ತಿಯ ಕೊರತೆಯಿಂದ ! ಓ ವಿದ್ವಾಂಸರೇ, ಲೇಖಕರೇ ! ಆಸ್ಟ್ರಿಯದ ಅಧ್ಯಕ್ಷರ ದಯನೀಯ ಅಂತಿಮ ಚೀತ್ಕಾರ ನೀವು ಕೇಳಿಲ್ಲವೆ ? ಅವರು - ''ಜರ್ಮನಿಯ ಬಾಯೊನೆಟ್ (ಸನೀನು) ಗಳಡಿಯಲ್ಲಿ ನಾವು ನೆಲ ಕಚ್ಚಿದೆವು'' ಎಂದರೇ ಹೊರತು, ಜರ್ಮನಿಯ ಸಾನೆಟ್ (ಅಷ್ಟಷಟ್ಪದಿ) ಗಳಿಂದ ಸೋತೆವು ಎನ್ನಲಿಲ್ಲ !

'ಸಾಹಿತ್ಯವು ರಾಷ್ಟ್ರಜೀವನದ ಒಂದು ಅಂಗ ಎಂಬುದು ನಿಜವಾದಲ್ಲಿ, ಆ ರಾಷ್ಟ್ರಜೀವನವನ್ನು ಕಾಯ್ದುಕೊಳ್ಳುವುದೇ ಸಾಹಿತ್ಯದ ಮೊಟ್ಟಮೊದಲ ಗುರಿಯಾಗಬೇಕು. 'ಕಲೆಗಾಗಿ ಕಲೆ' ಎಂಬ ತತ್ವವನ್ನು ನಾನು ನಿರ್ವಿವಾದವಾಗಿ ಒಪ್ಪುತ್ತೇನೆ. ಆದರೆ, ರಂಗಮಂದಿರಕ್ಕೇ ಬೆಂಕಿ ಹೊತ್ತಿದಾಗ, ಧಾವಿಸಿಹೋಗಿ ಉರಿಯನ್ನಾರಿಸುವುದೂ ಕಲೋಪಾಸಕನ ಕರ್ತವ್ಯ. ಆಕ್ರಮಣಕಾರಿಯ ಕಾಲಡಿಗೆ ಸಿಲುಕಿ ಇಡೀ ರಾಷ್ಟ್ರವೇ ನರಳುತ್ತಿರುವಾಗ, ಸಾಹಿತ್ಯಕ್ಕಾದರೂ ಏನು ಬೆಲೆ ಉಳಿದೀತು ? ಶ್ರೇಷ್ಠ ವಿದ್ಯಾಪೀಠಗಳಾಗಿದ್ದು ಸಹ, ನಾಮಾವಶೇಷ ಹೊಂದಿದ ನಲಂದ ಮತ್ತು ತಕ್ಷಶಿಲೆಗಳಿಗೂ, ಇತರ ಅನೇಕ ಬೃಹತ್ ಗ್ರಂಥ ಭಂಡಾರಗಳಿಗೂ ಒದಗಿದ ದುರ್ಗತಿಯನ್ನು ಮರೆತಿರೇನು ?... . ಮಹಾರಾಷ್ಟ್ರವನ್ನೇ ತೆಗೆದುಕೊಳ್ಳಿ. ಇಲ್ಲಿ ಕವಿಗಳಿಗೂ ದಾರ್ಶನಿಕರಿಗೂ ಸುರಕ್ಷಿತ ವಾತಾವರಣ ಕಲ್ಪಿಸಿಕೊಟ್ಟುದು ಶಿವಾಜಿಯ ಅಜೇಯ ಖಡ್ಗವೇ ಅಲ್ಲವೆ ?

'ಆದ್ದರಿಂದ, ಇಂದಿನ ಪರಿಸ್ಥಿತಿಯ ತುರ್ತು ಅವಶ್ಯಕತೆ ಎಂದರೆ ಲೇಖಕರಲ್ಲ, ಸೈನಿಕರು. ಸಾಹಿತ್ಯದ ದೃಷ್ಟಿಯಿಂದ ಇಡೀ ದಶಕವೇ ಬಂಜೆಯಾದರೂ ಚಿಂತೆಯಿಲ್ಲ; ಕಾವ್ಯರಚನೆಯಾಗಲಿ ಕಾವ್ಯವಾಚನವಾಗಲಿ ಇಂದು ಅಗತ್ಯವಿಲ್ಲ. ಹೆಗಲ ಮೇಲೆ ಆಧುನಿಕ ಶಸ್ತ್ರಗಳನ್ನು ಹೊತ್ತು ನಡೆಯುವ ಸಹಸ್ರಾರು ಯೋಧರ ಪದಾಘಾತದಿಂದ ನಮ್ಮ ಹಾದಿಬೀದಿಗಳು ಪ್ರತಿಧ್ವನಿಸಲಿ. ಆಗೊಮ್ಮೆ, ಈಗೊಮ್ಮೆ ಇಂಪಾದ ಹಾಡು, ಸುರಸ ಕಥೆ ಬರೆದರೆ ತಪ್ಪಲ್ಲ ; ನೆಪೋಲಿಯನ್ ಸಹ ಯಾವಾಗಲಾದರೊಮ್ಮೆ ಮನೋರಂಜನೆ ಪಡೆಯುತ್ತಿದ್ದ. ಶತ್ರುಗಳನ್ನು ಬಗ್ಗುಬಡಿದ ನಂತರ ಒಂದನೆ ಬಾಜಿರಾಯ ಸಹ ಪ್ರೇಮಾಲಾಪಗಳಲ್ಲಿ ತೊಡಗುತ್ತಿದ್ದ. ಆದರೆ ಇಂದು ನಮ್ಮ ದೇಶ ಎರಡನೆ ಬಾಜೀರಾಯನ ಬ್ರಹ್ಮಾವರ್ತದಂತೆ ಪರಿವರ್ತನೆ ಹೊಂದಿರುವುದನ್ನು ನೋಡಿ ನನ್ನ ಹೃದಯ ತತ್ತರಿಸಿ ಹೋಗುತ್ತಿದೆ. ಅಸಹ್ಯ ಚೇಷ್ಟೆಗಳಲ್ಲಿ ತೊಡಗಿರುವ ಇಂದಿನ ಯುವಕರ ನಿರ್ಜೀವ, ನಿಸ್ಸತ್ವ ಮುಖಗಳನ್ನು ಕಂಡಾಗ ನನ್ನ ಕರುಳು ಕಿವುಚಿದಂತಾಗುತ್ತದೆ. ಆದ್ದರಿಂದ, ಸನ್ಮಾನ್ಯ ಸಾಹಿತಿಗಳೇ, ನೀವಿಂದು ಲೇಖನಿಗೆ ಬದಲು ಕತ್ತಿ ಹಿರಿಯಬೇಕು. ಗುಲಾಮ ದೇಶದಲ್ಲಿ ಎಂದಿಗೂ ಸಾಹಿತ್ಯಕ್ಕೆ ಏಳಿಗೆಯಿಲ್ಲ.'

ನಾನು ಪನವೇಲಕ್ಕೆ ಹೋದುದು ಅದೇ ವರ್ಷದಲ್ಲೇ. ಅಲ್ಲಿ ಮೆರವಣಿಗೆಯಲ್ಲಿ ಹೆಜ್ಜೆ ಹೆಜ್ಜೆಗೂ ಪುಷ್ಪಹಾರಗಳು ಬೀಳುತ್ತಿದ್ದವು. ಒಂದೆಡೆ, ಹಾರ ಅರ್ಪಿಸಿದ ವ್ಯಕ್ತಿಯನ್ನು, ಪಕ್ಕದಲ್ಲಿದ್ದವರು 'ಇವರು ವಾಸುದೇವ ಬಲವಂತ ಫಡಕೆಯವರ ಸೋದರಳಿಯ' ಎಂದು ಪರಿಚಯ ಮಾಡಿಕೊಟ್ಟರು. ಹುತಾತ್ಮ ಫಡಕೆಯ ಪತ್ನಿ ತಮ್ಮ ಮನೆಯಲ್ಲೇ ಇರುವರೆಂದು ಅವರು ತಿಳಿಸಿದರು. ಆ ವೀರಪತ್ನಿಯ ದರ್ಶನ ಪಡೆಯುವ ಹಂಬಲ ಉಕ್ಕಿಬಂತು ಕೂಡಲೆ ವಾಹನದಿಂದ ಕೆಳಗಿಳಿದು, 'ಅವರನ್ನು ತೋರಿಸಿ, ನಡೆಯಿರಿ' ಎನ್ನುತ್ತಾ ಹೆಜ್ಜೆಹಾಕಿದೆ. ಆದರೆ, ಸಭೆಗೆ ಸಮಯ ಮೀರಿದ್ದುದರಿಂದ, ವ್ಯವಸ್ಥಾಪಕರು ಅನಂತರ ಹೋಗೋಣ ಎಂದರು. ಕಾರ್ಯಕ್ರಮ ಮುಗಿದ ಬಳಿಕ, ಅವರ ಮನೆಗೆ ನಡೆದುಕೊಂಡು ಹೋದೆ. ಆ

ವೃದ್ಧ ಮಾತೆಯ ಕಾಲ ಬಳಿ ಪುಷ್ಪಹಾರವಿಟ್ಟು ನಮಸ್ಕರಿಸಿದೆ. ಆಕೆಯ ಪರಾಕ್ರಮಿ ಪತಿಯ ಧೀರೋದಾತ್ತ ಗುಣಗಳನ್ನು ಸ್ತುತಿಸಿ ಶ್ರದ್ಧಾಂಜಲಿ ಅರ್ಪಿಸಿದೆ. ಆಕೆಯ ದರ್ಶನಕ್ಕೆಂದು ಹೋದ ನಾಯಕರಲ್ಲಿ ನಾನೇ ಮೊದಲಿಗ ಮತ್ತು ಬಹುಶಃ ನಾನೇ ಕೊನೆಯವನು ಸಹ!

1938ರ ಮೇ ತಿಂಗಳಲ್ಲಿ ಪಂಚ ನದಿಗಳ ಪುಣ್ಯಪ್ರದೇಶದ ಪ್ರವಾಸ. ಲಾಹೋರಿನ ಸಮಾರಂಭದಲ್ಲಿ ಪಂಜಾಬಿನ ಕೇಸರಿ ಲಾಲಾ ಲಜಪತರಾಯರ ಪ್ರತಿಮೆಗೆ ಪುಷ್ಪಹಾರ ಅರ್ಪಿಸಿದೆ. ಅಮೃತಸರದಲ್ಲಿ ಊರ ಬಾಗಿಲು ತಲಪುತ್ತಲೇ ಪ್ರಚಂಡ ಸ್ವಾಗತ. ಗ್ಯಾನಿಪಿಂಡಿ ದಾಸ್, ಕ್ಯಾಪ್ಟನ್ ಕೇಶವಚಂದ್ರ ಮುಂತಾದ ಜನನಾಯಕರು ಎದುರುಗೊಂಡರು. ಮೆರವಣಿಯಲ್ಲಿ 60 ಸಹಸ್ರ ದೇಶಬಾಂಧವರು ನಡೆದುಬಂದರು. ಪರಸ್ಥಳದಲ್ಲಿದ್ದ ಮಾಸ್ಟರ್ ತಾರಾಸಿಂಗ್ ತಮ್ಮ ಮುಂದಿನ ಸಂಚಾರವನ್ನು ರದ್ದುಗೊಳಿಸಿ ಅಮೃತಸರಕ್ಕೆ ಬಂದರು. ಅಂದು ಅವರ ಅಧ್ಯಕ್ಷತೆಯಲ್ಲಿ ಸೀಖರ ಸ್ವರ್ಣಮಂದಿರದ ಸಭಾಭವನದಲ್ಲಿ ವಿಶಾಲ ಸಭೆ. ಗುರು ಗೋವಿಂದ ಸಿಂಹರ ಆದರ್ಶ ಅನುಸರಿಸುವಂತೆ ನಾನು ಸೀಖರಿಗೆ ಕರೆಯಿತ್ತೆ. ಸರಾಫ ಬಾಜಾರಿನ ಸಭೆಯಲ್ಲಿ ನನಗೊಂದು 'ಕೃಪಾಣ' ಉಡುಗೊರೆಯಾಗಿ ಬಂತು. ಸೀಖರನ್ನು ಆ ವೇಳೆಗಾಗಲೇ ಅಹಿಂಸಾ ತತ್ವದ ಮೋಹಜಾಲ ಎಳೆಯುತ್ತಿತ್ತು. ಕೃಪಾಣದ ಉಪಯೋಗವನ್ನೂ ಅದರ ಹಿಂದಿರುವ ಭಾವನೆಯನ್ನೂ ಮರೆಯುತ್ತಿದ್ದ ಜನ ನನ್ನಂಥ ಮರಾಠನಿಗೆ ಅದನ್ನು ಬಹುಮಾನಿಸಿ ಉಪಯೋಗವೇನು ? ಹಾಗೆಂದು ನಾನು ಅವರಿಗೆ ತಿಳಿಸದೆ ಬಿಡಲಿಲ್ಲ.

ಪಂಜಾಬಿನಲ್ಲಿ 'ಅಲ್ಪಸಂಖ್ಯಾತ ಸಮಸ್ಯೆ' ಹಚ್ಚಿಕೊಂಡು ಚಡಪಡಿಸುತ್ತಿದ್ದವರಿಗೆ ನಾನೊಂದು ಮಾತು ಹೇಳಲೇಬೇಕಾಯಿತು : 'ವಾಸ್ತವವಾಗಿ ಅಂಥ ಸಮಸ್ಯೆಗೆ ಕಾರಣವೇ ಇಲ್ಲ. ಈ ದೇಶದಲ್ಲಿ ವಾಸಿಸುತ್ತಿರುವ ಪಾರ್ಸಿಗಳು, ಯಹೂದಿಗಳು, ಕ್ರಿಶ್ಚನರು ಎಂದೂ ವಿಶೇಷ ಹಕ್ಕುಬಾಧ್ಯತೆಗಳಿಗಾಗಿ ಒತ್ತಾಯಿಸಿದವರಲ್ಲ; ತಮಗೆ ಪ್ರತ್ಯೇಕ ಮತದಾನದ ಅಧಿಕಾರ ಬೇಕಾಗಿಲ್ಲವೆಂದು ಅವರು ಅನೇಕ ಸಲ ಸಾರಿದ್ದಾರೆ. ಇನ್ನು ಹಿಂದು – ಮುಸ್ಲಿಂ ಏಕತೆಯ ಪ್ರಶ್ನೆ ; ನೀವು ಅದನ್ನು ಬೆನ್ನುಹತ್ತಿ ಹೋದಷ್ಟೂ ಅದು ದೂರದೂರ ಓಡಿಹೋಗುತ್ತದೆ!'

ಕ್ರಾಂತಿಕಾರಿಯಾದ ನನಗೆ, ಗ್ವಾಲಿಯರ್ ಮಹತ್ವದ ತೀರ್ಥಕ್ಷೇತ್ರ. ಅಲ್ಲಿ ಎರಡು ಮೈಲಿ ಕಾಲ್ನಡಿಗೆಯಲ್ಲೆ ಹೋಗಿ ಕ್ರಾಂತಿದೇವಿ ರಾಣಿ ಲಕ್ಷ್ಮೀಬಾಯಿಯ ಸ್ಮಾರಕಕ್ಕೆ ಗೌರವ ಸಲ್ಲಿಸಿದೆ. ಶಿವಪುರಿಯಲ್ಲಿದ್ದ ವೀರ ಸೇನಾಪತಿ ತಾತ್ಯಾ ಟೋಪೆಯ ಸಮಾಧಿಗೂ ಹೋಗಿ ತಲೆಬಾಗಿದೆ. ಅಲಕ್ಷಿಸಲ್ಪಟ್ಟು ಮೂಲೆ ಗುಂಪಾಗಿದ್ದ ಆ ಜಾಗದಲ್ಲಿ ಸುಯೋಗ್ಯ ಸ್ಮಾರಕ ನಿರ್ಮಿಸುವಂತೆ ಆಗ ನನ್ನೊಡನೆ ಇದ್ದ ಸರದಾರ ಶಿತೋಲೆಯವರನ್ನು ವಿನಂತಿಸಿಕೊಂಡೆ.

ಸಾರ್ವಜನಿಕ ಅಭಿಮಾನಿಗಳು, ಸಹಕಾರಿಗಳು ಮುಂದೆ ಬಂದು ಮುಂಬೈನಲ್ಲಿ 'ಸಾವರಕರ್ ಸದನ'ದ ನಿರ್ಮಾಣ ಪೂರೈಸಿದ್ದೂ ಇದೇ ಸಮಯದಲ್ಲೇ. ಅದರ ಗೃಹಪ್ರವೇಶ ಮುಗಿದ ಬಳಿಕ ನಾನೊಮ್ಮೆ ಮುಂಬೈ ಆಯುರ್ವೇದ ಮಹಾವಿದ್ಯಾಲಯವನ್ನು ನೋಡಲು ಹೋದೆ. ಆಗ ಅಲ್ಲಿನ ಪಠ್ಯ ವಿಷಯಗಳಲ್ಲಿ ಶಸ್ತ್ರಚಿಕಿತ್ಸೆಯನ್ನೂ ಹೊಸದಾಗಿ ಸೇರಿಸಿದ್ದಾರೆಂದು ತಿಳಿದುಬಂತು. ಅದಕ್ಕಾಗಿ ಸಂಬಂಧಪಟ್ಟವರನ್ನು ಅಭಿನಂದಿಸುತ್ತಾ ವಿನೋದವಾಗಿ ನಾನೆಂದೆ: 'ನಿಮ್ಮ ಸಂಸ್ಥೆ ಅಹಿಂಸೆಯ ತತ್ವತ್ಯಜಿಸಿದ್ದಕ್ಕಾಗಿ ನನಗೆ ನಿಜಕ್ಕೂ ಆನಂದವಾಗಿದೆ!'

ಮುಂಬೈನಿಂದ ಸಿಂಧ್ ಪ್ರಾಂತದ ಪ್ರವಾಸಕ್ಕೆ ಹೋಗುವ ದಾರಿಯಲ್ಲಿ ಜೋಧಪುರದಲ್ಲೊಂದು

ಘಟನೆ. ನಿವೃತ್ತ ಪೊಲೀಸ್ ಅಧಿಕಾರಿಯೊಬ್ಬರು ಸಿಕ್ಕಿದರು, 'ಜ್ಞಾಪಕವಿದೆಯೇ ?' ಎಂದರು ಆದರೆ ನನಗೆ ನೆನಪಾದದ್ದು ಅವರು ಹೇಳಿದ ನಂತರವೇ. ಅವರ ಹೆಸರು ಕೋಠಿವಾಲಾ, ನಾನು ಇಂಗ್ಲೆಂಡಿನಿಂದ ಕೈದಿಯಾಗಿ ಹೊರಟು ಮುಂಬೈ ತಲುಪಿದಾಗ 1911 ಜುಲೈ 22ರಂದು ನನ್ನ ತೋಳನ್ನು ಅವರ ತೋಳಿಗೆ ಸೇರಿಸಿ ಕಟ್ಟಲಾಗಿತ್ತು! 'ನೀವು ದಯವಿಟ್ಟು ಈ ದಿನ ನನ್ನ ಕಾರನ್ನು ಉಪಯೋಗಿಸಬೇಕು; ನನ್ನ ಹಿಂದಿನ ಪಾಪ ತೊಳೆದುಕೊಳ್ಳಲು ನೆರವಾಗಬೇಕು' ಎಂದು ಪ್ರಾರ್ಥಿಸಿಕೊಂಡರು!

ಸಿಂಧ್ ಪ್ರಾಂತದ ಹಿಂದುಗಳಿಗೆ ನಾನು ಮೊದಲಿನಿಂದಲೇ ಎಚ್ಚರಿಕೆ ನೀಡುತ್ತಾ ಬಂದಿದ್ದೆ - ಪ್ರತ್ಯೇಕ ಸಿಂಧ್ ಪ್ರಾಂತಕ್ಕಾಗಿ ನೀವು ಒತ್ತಾಯಿಸುವುದು ಅಪಾಯಕರ ಎಂದು. ಆದರೆ ಆಗ ಅವರು ಅದಕ್ಕೆ ಕಿವಿಗೊಡಲಿಲ್ಲ. ಮುಂಬೈ ಪ್ರಾಂತದಿಂದ ಬೇರೆಯಾದ ಪ್ರಾಂತ ಏರ್ಪಡಿಸಿಕೊಂಡರು. ಅನಂತರ ಸುಕ್ಕರ್‌ನಲ್ಲಿ ಜರುಗಿದ ಸಿಂಧಿ ಹಿಂದು ಅಧಿವೇಶನದಲ್ಲಿ ನಾನು ಅವರಿಗೆ - ಕಾಂಗ್ರೆಸ್ಸನ್ನು ನೆಚ್ಚಿ ಕೂಡ ಬಾರದೆಂದೂ, ತಮ್ಮ ಆಸ್ತಿಪಾಸ್ತಿ, ಹೆಂಗಸರು ಮಕ್ಕಳ ಮಾನ ಪ್ರಾಣಗಳನ್ನು ಉಳಿಸಿಕೊಳ್ಳಲು ಬಲವಾದ ಹಿಂದು ಸಂಘಟನೆ ಸಿದ್ಧಪಡಿಸಿಕೊಳ್ಳಬೇಕೆಂದೂ ಒತ್ತಿ ಹೇಳಿದೆ. ಆಗಲೂ ಅವರು ಅದನ್ನು ಅಲಕ್ಷಿಸಿದರು. ಅದರ ಭೀಕರ ಪರಿಣಾಮಗಳನ್ನು ಮುಂದೆ 1947ರಲ್ಲಿ ಅವರು ಅನುಭವಿಸಬೇಕಾಗಿ ಬಂತು.

ಆ ದಿನಗಳಲ್ಲಿ ಭಾಗ್ಯನಗರ (ಹೈದರಾಬಾದ್) ಸಂಸ್ಥಾನದ ಹಿಂದುಗಳ ಸ್ಥಿತಿ ಶೋಚನೀಯವಾಗಿತ್ತು. ನಿಜಾಮಶಾಹಿಯ ದಬ್ಬಾಳಿಕೆಗೆ ಸಿಕ್ಕಿ ಅವರು ನುಗ್ಗುನುರಿಯಾಗುತ್ತಿದ್ದರು. ಅಲ್ಲಿನ ಮುಸ್ಲಿಮರ ಜನಸಂಖ್ಯೆ ಶೇ. 12ರಷ್ಟು. ಆದರೆ ಶೇ. 80ರಷ್ಟು ಸರಕಾರಿ ನೌಕರಿಗಳೂ ಪ್ರಮುಖ ಹುದ್ದೆಗಳೂ ಅವರಿಗೆ ಮೀಸಲು. ಹಿಂದುಗಳು ಸಭೆ ನಡೆಸುವಂತಿಲ್ಲ; ರಾಜಕೀಯ ಅಥವಾ ಧಾರ್ಮಿಕ ಮೆರವಣಿಗೆಗಳನ್ನು ನಡೆಸುವಂತಿಲ್ಲ. ತಮ್ಮ ಮಕ್ಕಳಿಗೆ ತಾಯಿನುಡಿಯಲ್ಲಿ ಶಿಕ್ಷಣ ಕೊಡಲು ಖಾಸಗಿ ಶಾಲೆಗಳನ್ನು ನಡೆಸುವಂತಿಲ್ಲ; ತಮ್ಮ ದೇವಸ್ಥಾನಗಳ ಜೀರ್ಣೋದ್ಧಾರ ಸಹ ಮಾಡುವಂತಿಲ್ಲ! ಮುಸಲ್ಮಾನ ಗೂಂಡಾ ಜನರು ಹಿಂದು ದೇವಾಲಯ, ಮನೆ ಹಾಗೂ ವಸತಿ ಕ್ಷೇತ್ರಗಳಿಗೆ ಮನಬಂದಂತೆ ನುಗ್ಗುತ್ತಿದ್ದರು; ಹಿಂಸೆ, ಹತ್ಯೆ, ಲೂಟಿ ಗಳನ್ನು ಮನಸೋ ಇಚ್ಛೆ ನಡೆಸುತ್ತಿದ್ದರು. ಹಿಂದುಗಳನ್ನು ತಮ್ಮ ಕಾಲ ಹುಳುಗಳೋಪಾದಿಯಲ್ಲಿ ನಡೆಸಿ ಕೊಳ್ಳುತ್ತಿದ್ದರು. ಇಷ್ಟೆಲ್ಲ ಅನ್ಯಾಯ ನಡೆಯುತ್ತಿದ್ದರೂ, ನಿಜಾಮರನ್ನು ಇಕ್ಕಟ್ಟಿಗೆ ಸಿಕ್ಕಿಸಲು ತಮಗೆ ಇಷ್ಟವಿಲ್ಲವೆಂದು ಗಾಂಧೀಜಿಯವರೇ ಹೇಳಿದ್ದರು. ಕಾಂಗ್ರೆಸ್ ನಾಯಕರೆಲ್ಲ ಕೈಕಟ್ಟಿ ಕುಳಿತುಬಿಟ್ಟರು. ಆಗ ಭಾಗ್ಯನಗರದ ಹಿಂದುಗಳ ರಾಜಕೀಯ, ಆರ್ಥಿಕ, ಧಾರ್ಮಿಕ ಹಾಗೂ ಪೌರ ಹಕ್ಕುಬಾಧ್ಯತೆಗಳಿಗಾಗಿ ಹೊರ ಪ್ರಾಂತಗಳಲ್ಲಿನ ಹಿಂದುತ್ವವಾದಿಗಳಾದ ನಾವು ಉಗ್ರ ಚಳವಳಿ ಕೈಗೊಳ್ಳಬೇಕಾಯಿತು. 1938ರ ಅಕ್ಟೋಬರ್ ತಿಂಗಳಲ್ಲಿ ಹಿಂದು ಮಹಾಸಭೆ ಮತ್ತು ಆರ್ಯಸಮಾಜಗಳು ಈ ಹೋರಾಟದ ಮುಂದಾಳು ತನ ವಹಿಸಿದವು. 'ಭಾಗಾನಗರ ನಿಶ್ಯಸ್ತ್ರ ಪ್ರತೀಕಾರ ಮಂಡಲ' ಸ್ಥಾಪನೆಗೊಂಡಿತು. ಸಹಸ್ರಾರು ಚಳವಳಿ ಕಾರರು ನಿಜಾಮ ಸರಕಾರದ ಜೈಲುಗಳನ್ನು ತುಂಬತೊಡಗಿದರು ಕಡೆಗೆ 1939 ಜುಲೈ 19ರಂದು ನಿಜಾಮನು ಚಳವಳಿಕಾರರ ನಾಯಕರೊಡನೆ ಒಪ್ಪಂದಕ್ಕೆ ಬರಬೇಕಾಯಿತು.

1939 ಸೆಪ್ಟೆಂಬರ್ 1ರಂದು ಇಂಗ್ಲೆಂಡ್ ಎರಡನೆ ಮಹಾಯುದ್ಧಕ್ಕೆ ಧುಮುಕಿತು. ವೈಸ್‌ರಾಯ್ ಲಾರ್ಡ್ ಲಿನ್‌ಲಿತ್‌ಗೋ ಅವರ ಆಮಂತ್ರಣದ ಮೇರೆಗೆ 9ರಂದು ನಾನು ದಿಲ್ಲಿಗೆ ಹೋದೆ. 27 ವರ್ಷಗಳ ಕಾಲ ನನ್ನನ್ನು ಬಂಧನದಲ್ಲಿಟ್ಟಿದ್ದ ಬ್ರಿಟಿಷ್ ಸರಕಾರ, ಮಹಾಯುದ್ಧದ ಬಗ್ಗೆ ನನ್ನ ಅಭಿಪ್ರಾಯ ಕೇಳ ಬಯಸಿತು. 'ನಾನು ಇಂದಿಗೂ ಕ್ರಾಂತಿಕಾರಿಯೇ. ಆದರೆ ರಾಜಕೀಯ ಪರಿಸ್ಥಿತಿಗೆ ಹಾಗೂ ರಾಜಕಾರಣ

ತಂತ್ರಕ್ಕೆ ತಕ್ಕಂತೆ ಸೈನಿಕೀಕರಣದಲ್ಲಿ ಸಹಕರಿಸಲು ನಾನು ಸಿದ್ಧ' ಎಂದು ಹೇಳಿ, ಸೀಖ ಮತ್ತು ಗೂರ್ಖಾ ಸೈನಿಕ ಪಡೆಗಳನ್ನು ವಾಯುವ್ಯ ಸರಹದ್ದಿನ ಪ್ರದೇಶದಲ್ಲಿ ಇಡಬೇಕೆಂದು ಸಲಹೆ ನೀಡಿದೆ. ಬಹುಮಟ್ಟಿಗೆ, ಪೂರ್ವ ದಿಕ್ಕಿನಿಂದ ಭಾರತದ ಮೇಲೆ ಆಕ್ರಮಣವಾಗಬಹುದೆಂಬ ಮುನ್ನೆಚ್ಚರಿಕೆಯನ್ನೂ ಕೊಟ್ಟೆ. ಅನಂತರ ವೈಸ್‌ರಾಯ್ ತಮ್ಮ ಕಾರ್ಯಕಾರಿ ಮಂಡಲದ ಸದಸ್ಯರೊಡನೆ ಮಾತನಾಡುತ್ತಾ ಹೇಳಿದರಂತೆ: 'ಯುದ್ಧ ಪರಿಸ್ಥಿತಿಯ ಮತ್ತು ಅದರ ಮಹತ್ವದ ಸಮಸ್ಯೆಗಳ ಬಗೆಗೆ ಭಾರತದ ದೃಷ್ಟಿಕೋನದಿಂದ ಹಾಗೂ ಜಾಗತಿಕ ರಾಜಕಾರಣದ ಹಿನ್ನೆಲೆಯಲ್ಲಿ ಸಮರ್ಥ ರೀತಿಯಲ್ಲಿ ಚರ್ಚಿಸಬಲ್ಲ ರಾಜಕಾರಣಿ ಬಹುಶಃ ಅವರೊಬ್ಬರೇ. ದೀರ್ಘಕಾಲದ ಸೆರೆವಾಸವಾಗಲೀ ಯಮಯಾತನೆಗಳಾಗಲೀ ಅವರನ್ನು ಹಣ್ಣು ಮಾಡಿಲ್ಲ; ಅವರು ಇನ್ನೂ ಚುರುಕಾಗಿದ್ದಾರೆ; ಸ್ಪಷ್ಟರೀತಿಯಲ್ಲಿ ಆಲೋಚಿಸುತ್ತಾರೆ; ಅವರ ಸತ್ವ ಅದಮ್ಯ!'

ರಾಜಕೀಯ ಸ್ವಾತಂತ್ರ್ಯವಿಲ್ಲದೆ ಯಾವುದೇ ರಾಷ್ಟ್ರಕ್ಕೂ ಉಳಿವಾಗಲೀ ಏಳಿಗೆಯಾಗಲೀ ಇಲ್ಲ. ಆದರೆ ಆ ದೇಶದ ಯುವಕರು ಪಡೆಯುವ ಮಾನಸಿಕ, ಸೈನಿಕ ಶಿಕ್ಷಣವೇ ಸ್ವಾತಂತ್ರ್ಯಕ್ಕೆ ಮೂಲಾಧಾರ. ಆದ್ದರಿಂದಲೇ ಎರಡು ವಿಶ್ವಯುದ್ಧಗಳ ಸಮಯದಲ್ಲೂ ನಾನು ಹಿಂದುಗಳ ಸೈನಿಕೀಕರಣವನ್ನು ಎತ್ತಿಹಿಡಿದೆ. ನಿಶ್ಶಸ್ತ್ರೀಕರಣದ ಕಾಯಿದೆಗೆ ಧಿಕ್ಕಾರ ಹಾಕುವ ಹಾಗೂ ಬಂದೂಕು ತರಬೇತಿ ತರಗತಿಗಳನ್ನು ತೆರೆಯುವ ಚಳವಳಿ ಹೂಡಿದೆ. ಭಾರತೀಯ ಯುವಕರು ಸೈನ್ಯಕ್ಕೆ ಸೇರಿ, ಹೊರದೇಶಗಳಲ್ಲಿ ಹೋಗಿ ಯುದ್ಧದ ಅನುಭವ ಹಾಗೂ ಆಧುನಿಕ ಶಸ್ತ್ರಾಸ್ತ್ರಗಳಲ್ಲಿ ಪರಿಣತಿ ಪಡೆದರೆ, ಅದರಿಂದ ನಾಳೆ ಭಾರತಕ್ಕೆ ಲಾಭವಾಗದಿರದು. ಪ್ರಪಂಚದ ಇತಿಹಾಸದ ಆಳವಾದ ಅಧ್ಯಯನದಿಂದ ನನಗೆ ಮನದಟ್ಟಾಗಿದ್ದ ಸಂಗತಿ ಇದು.

1939 ಡಿಸೆಂಬರಿನಲ್ಲಿ ಹಿಂದು ಮಹಾಸಭೆಯ ಅಧಿವೇಶನವು ಕಲ್ಕತ್ತಾದಲ್ಲಿ ನಡೆಯಿತು. ಆ ಸಮಯದಲ್ಲಿ ಕಲ್ಕತ್ತಾದಲ್ಲಿಯೇ ಇದ್ದ ನೇಪಾಳದ ಮಹಾರಾಜರಿಗೆ ಮಹಾಸಭೆಯ ಪರವಾಗಿ ಒಂದು ಸತ್ಕಾರ ಕೂಟ ಏರ್ಪಡಿಸಿದೆವು. ಅನಾರೋಗ್ಯದ ನಿಮಿತ್ತ ನಾನು ಅದಕ್ಕೆ ಹೋಗಲಾಗಲಿಲ್ಲ. ಕೊನೆಗೆ ಮಹರಾಜರೇ ನನ್ನ ಹಾಸಿಗೆಯ ಬಳಿ ಬಂದರು. ಒಂದು ಗಂಟೆಯ ಕಾಲ ನಮ್ಮಲ್ಲಿ ಮಾತುಕತೆ ನಡೆಯಿತು.

ಅಂದಿನ ದಿನಗಳ ಪ್ರವಾಸ ಕಾಲದಲ್ಲಿ ನನ್ನ ಭಾಷಣಗಳ ಮುಖ್ಯ ಅಂಶಗಳೆಂದರೆ - ಅಹಿಂದುಗಳ ಶುದ್ಧೀಕರಣ, ಹಿಂದು ಸಂಘಟನೆ, ಹಿಂದು ಸೈನಿಕೀಕರಣ. ಆಗ ದೂರದರ್ಶಿತ್ವವಿಲ್ಲದ ರಾಜಕಾರಣಿಗಳು ಭಾರತೀಯ ಸೈನಿಕರನ್ನು 'ರೊಟ್ಟಿಯ ಗುಲಾಮರು' ಎಂದು ತಿರಸ್ಕಾರದಿಂದ ಮೂದಲಿಸುತ್ತಿದ್ದರು. ನನ್ನ ಬಗ್ಗೆ ಜನಜನಿತವಾಗಿದ್ದ 'ಸ್ವಾತಂತ್ರ್ಯ ವೀರ' ಎಂಬ ವಿಶೇಷಕ್ಕೆ ಬದಲು 'ರಿಕ್ರೂಟಿಂಗ್ ವೀರ' ಎಂದು ಅಣಕವಾಡುತ್ತಿದ್ದರು. ಆದರೆ ಮಾನವ ಜನಾಂಗದ ಇತಿಹಾಸದ ಪರಿಜ್ಞಾನವಾಗಲೀ ರಾಷ್ಟ್ರಗಳ ಏಳುಬೀಳಿನ ಮರ್ಮ ಜ್ಞಾನವಾಗಲೀ ಎಳ್ಳಷ್ಟೂ ಅವರಿಗೆ ಇರಲಿಲ್ಲವೆಂಬುದಕ್ಕೆ ಅವರ ಈ ಕೂಪಮಂಡೂಕ ವೃತ್ತಿಯೇ ಸಾಕ್ಷಿಯಾಗಿತ್ತು.

ಅದುವರೆಗೆ ಸೈನ್ಯಕ್ಕೆ ಸೇರುತ್ತಿದ್ದವರಲ್ಲಿ ಮುಕ್ಕಾಲು ಭಾಗವೆಲ್ಲ ಮುಸಲ್ಮಾನರೇ. ರಾಷ್ಟ್ರದ ಭವಿಷ್ಯ ಹಾಗೂ ಭಾರತವು 'ಭಾರತ'ವಾಗಿ ಉಳಿಯುವ ದೃಷ್ಟಿಯಿಂದ ನಿಜಕ್ಕೂ ಗಂಡಾಂತರಕಾರಿಯಾಗಿದ್ದ ಅಂಶ ಇದು. ಇದರಿಂದ, ಬ್ರಿಟಿಷರು ಬಿಟ್ಟುಹೋಗುತ್ತಲೇ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಈ ದೇಶವನ್ನು ಪಾಕಿಸ್ತಾನವನ್ನಾಗಿ ಪರಿವರ್ತಿಸಲು ಒಂದೇ ಒಂದು ದಿನ ಸಾಕಾಗಿತ್ತು! ಭಾರತೀಯ ಸೈನಿಕರಿಂದು ವಿದೇಶಿ ಸರಕಾರದ ಸಂಬಳದಾಳುಗಳಂತೆ ತೋರಬಹುದು; ಆದರೆ ಸಂದಿಗ್ಧ ಸಮಯ

ಬಂದೊಡನೆ ಅವರೇ ದಿಟ್ಟ ದೇಶ ಭಕ್ತರಂತೆ, ನೈಜ ಹಿಂದುಗಳಂತೆ ನಡೆದುಕೊಳ್ಳುತ್ತಾರೆಂಬುದರಲ್ಲಿ ನನಗೆ ಎಳ್ಳಷ್ಟೂ ಸಂದೇಹವಿರಲಿಲ್ಲ. ಅದಕ್ಕಾಗಿ, ಸದಾ ಹೇಳುತ್ತಾ ಬಂದೆ :

'1857ರಲ್ಲಿ ನಮ್ಮ ಮೊದಲ ಸ್ವಾತಂತ್ರ್ಯ ಸಂಗ್ರಾಮ ನಡೆದಾಗಿನಿಂದಲೂ ನಮ್ಮ ಸೇನೆಯನ್ನು ರಾಜಕೀಯದಿಂದ ದೂರ ಇಡುವುದೇ ಬ್ರಿಟಿಷ್ ಸರಕಾರದ ನೀತಿಯಾಗಿದೆ. ಈಗ ಸಾಧ್ಯವಿರುವ ಎಲ್ಲ ಮಾರ್ಗಗಳಿಂದಲೂ ಸೇನೆಯೊಳಗೆ ರಾಜಕಾರಣ ಹರಡುವುದೇ ನಮ್ಮ ಗುರಿಯಾಗಬೇಕು. ಇದರಲ್ಲಿ ನಾವು ಸಫಲರಾದರೆ ಸ್ವಾತಂತ್ರ್ಯ ಸಮರವನ್ನು ಗೆದ್ದಂತೆಯೇ ಲೆಕ್ಕ!

'ಸಣ್ಣ ಪಿಸ್ತೂಲು ಇಟ್ಟುಕೊಳ್ಳುವುದು ಸಹ ಅಪರಾಧವಾಗಿ, ಅದರಿಂದ ಯುವಕರು ಜೀವನಪೂರ್ತಿ ಜೈಲುಗಳಲ್ಲಿ ಕೊಳೆಯಬೇಕಾಗಿದ್ದ ಕಾಲವೊಂದಿತ್ತು. ಆದರೆ ಈಗ ಬ್ರಿಟಿಷರು ಬೇರೆ ಗತಿಯಿಲ್ಲದೆ, ಬಂದೂಕು, ಫಿರಂಗಿ ಮತ್ತು ಮದ್ದುಗುಂಡುಗಳನ್ನು ತಾವಾಗಿ ನಮ್ಮ ಕೈಲಿಡುತ್ತಿದ್ದಾರೆ! ಈ ಸದವಕಾಶವನ್ನು ಕೈಬಿಡಬಾರದು. ಹಡಗು, ವಿಮಾನ, ಶಸ್ತ್ರಾಸ್ತ್ರಗಳ ತಯಾರಿಕೆಯಲ್ಲಿ ಸಹಸ್ರಾರು ಜನ ತರಬೇತಿ ಹೊಂದಬೇಕು.

'ನಮಗೆ ಲಾಭವಾಗುವುದಿದ್ದರೆ ಸೇನೆಗೆ ಸೇರಬಾರದೇಕೆ? ನಿಮಗೆ ನಿಮ್ಮ ಶತ್ರುಗಳು ಯಾರೆಂಬುದು ಗೊತ್ತು. ನಾವು ಸೈನಿಕರಾಗಿ ಶಿಕ್ಷಣ ಪಡೆಯಬೇಕು ಮತ್ತು ಸ್ವಾತಂತ್ರ್ಯಕ್ಕಾಗಿ ಅದನ್ನು ಬೆಳೆಸಬೇಕು. ಕರಾರು ಪತ್ರಗಳ ಪ್ರಶ್ನೆ ಎತ್ತುವಿರಾ ? ಆ ಚಿಂತೆ ಹಚ್ಚಿಕೊಳ್ಳಬೇಡಿ ಆ ಕಾಗದದ ಚೂರುಗಳ ಹಿಂಭಾಗ ಖಾಲಿಯಾಗಿಯೇ ಇರುತ್ತದೆ. ಸಮಯ ಬಂದಾಗ ಅದರ ಮೇಲೆ ಹೊಸ ಒಪ್ಪಂದ ಹಾಗೂ ಕರಾರುಗಳನ್ನು ಬರೆಯಬಹುದು. ಕೇವಲ ಕಾಗದದ ಮೇಲೆ ನಿರ್ಣಯಗಳನ್ನು ಬರೆದು ಇಡೀ ಭೂಮಂಡಲವನ್ನೇ ತುಂಬಿಸಿದರೂ ನಿಮಗೆ ಸ್ವರಾಜ್ಯ ಸಿಕ್ಕುವುದಿಲ್ಲ. ಇದನ್ನು ಮರೆಯಬಾರದು. ಆದರೆ, ಹೆಗಲ ಮೇಲೆ ಬಂದೂಕು ಹೊತ್ತು ಒಂದು ಸಾಲಿನ ನಿರ್ಣಯ ಸೂಚಿಸಿದರೂ ಸಫಲವಾಗುತ್ತದೆ.'

1940 ಜೂನ್ 22 ; ಜರ್ಮನಿಯು ಫ್ರಾನ್ಸ್ ದೇಶವನ್ನು ಯುದ್ಧದಲ್ಲಿ ಸೋಲಿಸಿ ಸೂರೆಗೊಂಡ ದಿನ. ಆ ವಾರ್ತೆ ತಿಳಿಯುತ್ತಲೇ ನನಗೆ ಮಾರ್ಸೇಲ್ಸ್ ಪ್ರಕರಣ ನೆನಪಿಗೆ ಬಂದಿತು. ಆಗ ಫ್ರಾನ್ಸ್ ಸರಕಾರವು ಇಂಗ್ಲೆಂಡಿನ ಜೊತೆ ಕೈಜೋಡಿಸಿ ನನ್ನ ಕೈಬಿಟ್ಟುದಕ್ಕೆ ಇದು ಪ್ರಾಯಶ್ಚಿತ್ತ ಇರಬಹುದೇ ಎಂದು ಯೋಚಿಸುವಷ್ಟರಲ್ಲೇ ಧೀಮಂತ ವ್ಯಕ್ತಿಯೊಬ್ಬರು ಪ್ರತ್ಯಕ್ಷರಾದರು - 'ಸಾವರಕರ ಸದನ'ದ ಬಾಗಿಲಲ್ಲಿ. ನನಗಿಂತ ಕಿರಿಯ ಪೀಳಿಗೆಯ ಮಹಾ ನಾಯಕರವರು - ನೇತಾಜಿ ಸುಭಾಷಚಂದ್ರ ಬೋಸರು ! ನನ್ನೊಡನೆ ರಾಜಕಾರಣದ ಬಗ್ಗೆ ಚರ್ಚಿಸಲೆಂದೇ ಬಂಗಾಲದಿಂದ ಬಂದಿದ್ದರು ನಾನು ಅನ್ಯಾನ್ಯ ವಿಚಾರಗಳನ್ನೆಲ್ಲ ಬದಿಗಿಟ್ಟು, ನೇರವಾಗಿ ಅವರನ್ನು ಪ್ರಶ್ನಿಸಿದೆ :

'ಸುಭಾಷಬಾಬು, ಈಗ ನೀವೇನು ಯೋಜನೆ ತಯಾರಿಸುತ್ತಿದ್ದೀರಿ ?'

'ಸಾವರಕರ್‌ಜೀ, ಅಖಿಲ ಭಾರತೀಯ ಚಳವಳಿಯೊಂದನ್ನು ಕೈಗೊಳ್ಳಲು ಈಗ ಸಕಾಲವಾಗಿದೆ. ಕಲ್ಕತ್ತಾದಲ್ಲಿ ಬ್ರಿಟಿಷ್ ಸ್ಮಾರಕ ಪ್ರತಿಮೆಗಳನ್ನು ಉರುಳಿಸುವುದರ ಮೂಲಕ ನಾನೇ ಆ ಚಳವಳಿಯನ್ನು ಆರಂಭಿಸಲಿದ್ದೇನೆ' ಎಂದರು

ಅವರು 'ಸಾವರಕರ್‌ಜೀ' ಎನ್ನುತ್ತಲೇ ನನಗೆ ಧಿಂಗ್ರಾನ ವಾಣಿಯ ಸ್ಮರಣೆಯಾಯಿತು. ಆದರೆ, ಅವರ ಯೋಜನೆ ನನಗೆ ಸರಿಬೀಳಲಿಲ್ಲ.

'ಇಂಗ್ಲೆಂಡು ಮಹಾಯುದ್ಧದ ವಿಪತ್ತಿನಲ್ಲಿ ಸಿಕ್ಕಿಕೊಂಡಿರುವಾಗ, ನಿಮ್ಮಂಥ ಪ್ರತಿಭಾವಂತ, ಸಮರ್ಥ

ಮುಖಂಡರು ಭಾರತದೊಳಗೆ ಬ್ರಿಟಿಷರ ಪ್ರತಿಮೆಗಳನ್ನು ಉರುಳಿಸುವಂಥ ಕ್ಷುದ್ರ ಚಳವಳಿಗಳನ್ನು ಕೈಗೊಂಡು ಜೈಲುಗಳಲ್ಲಿ ಕೊಳೆಯುವುದರಲ್ಲಿ ಯಾವ ಪುರುಷಾರ್ಥವಿದೆ ?' ಎಂದೆ.

ಸುಭಾಷರು ಉದಾಸರಾಗಿ ಹೇಳಿದರು : 'ಬ್ರಿಟಿಷರ ವಿರುದ್ಧ ಅಶಾಂತಿಯ ಕಿಚ್ಚು ಹಬ್ಬಿಸಲು ಏನಾದರೂ ಮಾಡಲೇಬೇಕು ; ಸದ್ಯದ ಸ್ಥಿತಿಯಲ್ಲಿ ಇನ್ನೇನು ಮಾಡಲು ಸಾಧ್ಯ, ಹೇಳಿ ?'

'ನಿಮ್ಮ ತಳಮಳ ನಾನು ಬಲ್ಲೆ. ಆದರೆ, ಗವರ್ನರ್ ಜನರಲ್‌ನಿಂದ ಹಿಡಿದು ಸಹಸ್ರಾವಧಿ ಜೀವಂತ ಬ್ರಿಟಿಷರು ಎದೆಯ ಮೇಲೆ ಕುಣಿಯುತ್ತಿರುವಾಗ, ನಿರ್ಜೀವ ಪ್ರತಿಮೆಗಳನ್ನು ಕೆಡಹುವುದರಿಂದ ಏನು ಪ್ರಯೋಜನ ? ಅದರಿಂದ ಹುಟ್ಟುವ ಅಶಾಂತಿ ಸಹ ನಿರರ್ಥಕವಾಗುವುದಿಲ್ಲವೆ ? ನಿಮ್ಮಂಥ ಉನ್ನತ ಶ್ರೇಣಿಯ ನಾಯಕರು ಜೈಲು ಸೇರಿದರೆ ಶತ್ರುವಿನ ಬಲೆಗೇ ಹೋಗಿ ಬಿದ್ದಂತಾಗುವುದಿಲ್ಲವೆ? ನಿಜವಾದ ರಾಜಕಾರಣ ಎಂದರೆ ಶತ್ರುವನ್ನು ತಡೆಗಟ್ಟುವುದು ಹಾಗೂ ಬಂಧಿಸುವುದೇ ಹೊರತು ನಾವೆ ಸಿಕ್ಕಿಹಾಕಿ ಕೊಳ್ಳುವುದಲ್ಲ. ಸುಭಾಷ್‌ಬಾಬು, ಇಲ್ಲಿ ಕೇಳಿ. ನೀವು ಸ್ವತಃ ಕ್ರಾಂತಿಕಾರರಲ್ಲದಿದ್ದರೂ ಅವರ ನಿಕಟ ಸಂಪರ್ಕ ನಿಮಗಿದೆ. ನೀವು ನಂಬಿಕೆಗೆ ಪಾತ್ರರಾದ ವ್ಯಕ್ತಿ; ರಹಸ್ಯಗಳನ್ನು ಕಾಪಾಡಬಲ್ಲವರು ನೀವು! ಸಶಸ್ತ್ರ ಕ್ರಾಂತಿಗೆ ಅನುವಾಗಲಿ ಎಂಬುದೇ - ನಾನು ಹಿಂದು ಯುವಕರನ್ನು ಸೈನ್ಯಕ್ಕೆ ಸೇರುವಂತೆ ಒತ್ತಾಯಿಸುತ್ತಿರುವುದರ ರಹಸ್ಯ !'

ಸುಭಾಷಬಾಬು ಮಾತನಾಡಲಿಲ್ಲ. ಆಲೋಚನಾಮಗ್ನರಾಗಿ ಕುಳಿತಿದ್ದರು. ನನ್ನ ಮಾತಿಗೆ ಆಧಾರ ತೋರಿಸಲು, ಅವರಿಗೆ ಆತ್ಮವಿಶ್ವಾಸ ಹುಟ್ಟಿಸಲು, ಮೊದಲ ಮಹಾಯುದ್ಧದ ಸಮಯದಲ್ಲಿ ನಡೆದ ಘಟನೆಗಳನ್ನು ಹೇಳಿದೆ. ಭಾರತೀಯ ಕ್ರಾಂತಿಕಾರಿಗಳು ಜರ್ಮನಿಯೊಡನೆ ಸೇರಿಕೊಂಡುದು, ಜರ್ಮನಿಯಲ್ಲಿ ಯುದ್ಧಕೈದಿಗಳಾಗಿದ್ದ ಭಾರತೀಯ ಸೈನಿಕರನ್ನು ಒಡಂಬಡಿಸಿ ಕ್ರಾಂತಿ ಸೈನ್ಯ ಕಟ್ಟಿದುದು, ಎಲ್ಲವನ್ನೂ ವಿವರಿಸಿದೆ. ಸುದೂರ ಪೂರ್ವ ದೇಶಗಳಲ್ಲಿ 'ಭಾರತೀಯ ಸ್ವಾತಂತ್ರ್ಯ ಸಂಘ' ಸ್ಥಾಪಿಸಿದ್ದ ರಾಸಬಿಹಾರಿ ಬೋಸರು ಅದೇತಾನೆ ಒಂದು ಹೇಳಿಕೆ ನೀಡಿದ್ದರು. ಅದನ್ನು ಪ್ರಸ್ತಾವಿಸಿ ನಾನೆಂದೆ : 'ಈ ವರ್ಷದ ಕೊನೆಯೊಳಗಾಗಿ ಜಪಾನು ಯುದ್ಧದ ಕಣಕ್ಕೆ ಕಾಲಿಡುತ್ತದೆಂಬುದಕ್ಕೆ ಸ್ಪಷ್ಟ ಸಂಕೇತ ಇದು ಹಾಗೇನಾದರೂ ಆದರೆ ನಿಮಗೆ ಎಂಥ ಸುವರ್ಣಾವಕಾಶ ! ಪೂರ್ವರಂಗದಲ್ಲಿ ಚದರಿಹೋಗಿರುವ ಹಾಗೂ ಚೆನ್ನಾಗಿ ತರಬೇತಿ ಪಡೆದ ಭಾರತೀಯ ಸೈನಿಕರ ಬಲದಿಂದ, ಜರ್ಮನಿ ಹಾಗೂ ಜಪಾನುಗಳ ಬೆಂಬಲದಿಂದ ಬ್ರಿಟಿಷರ ರಕ್ಷಣಾ ವ್ಯೂಹವನ್ನು ಭೇದಿಸಿಕೊಂಡು ಒಳನುಗ್ಗಬಹುದು ; ಭಾರತವನ್ನು ಮುಕ್ತಗೊಳಿಸಬಹುದು. ಸುಭಾಷ್‌ಬಾಬು ! ಬ್ರಿಟಿಷರ ಕಣ್ಣಿಗೆ ಮಣ್ಣೆರಚಿ ಜಪಾನು, ಜರ್ಮನಿಗಳಿಗೆ ತಪ್ಪಿಸಿಕೊಂಡು ಹೋದ ರಾಸಬಿಹಾರಿ ಹಾಗೂ ಇನ್ನಿತರ ಕ್ರಾಂತಿಕಾರಿಗಳಂತೆ ನೀವೂ ಕೂಡ ಗಡಿ ದಾಟಿಕೊಂಡು ಹೊರಗೆ ಹೋಗಿ ಜರ್ಮನಿ ಹಾಗೂ ಇಟಲಿಯ ವಶದಲ್ಲಿರುವ ಭಾರತೀಯ ಯುದ್ಧಕೈದಿಗಳನ್ನು ಸಂಘಟಿಸಿ, ಅವರಿಗೆ ಮಾರ್ಗದರ್ಶಕರಾಗಿ! ಭಾರತೀಯ ಸ್ವಾತಂತ್ರ್ಯದ ಘೋಷಣೆ ಹೊರಡಿಸಿ. ಜಪಾನು ಯುದ್ಧಕ್ಕೆ ಇಳಿಯುತ್ತಲೇ, ಗಂಗಾಸಾಗರ( ಬಂಗಾಲ ಕೊಲ್ಲಿ) ಅಥವಾ ಬ್ರಹ್ಮದೇಶದ ಗಡಿಗಳ ಮೂಲಕ ನೀವು ಭಾರತವನ್ನು ಪ್ರವೇಶಿಸಿ. ಅಂಥ ಯಾವುದಾದರೊಂದು ಪ್ರಚಂಡ ಹಾಗೂ ಸಶಸ್ತ್ರ ಹೋರಾಟದ ಪ್ರಯತ್ನ ನಡೆಯದೆ, ಭಾರತ ಸ್ವತಂತ್ರಗೊಳ್ಳುವ ಆಸೆಯಿಲ್ಲ. ನನಗೆ ತಿಳಿದಮಟ್ಟಿಗೆ ಅಂಥ ಸಾಹಸಕಾರ್ಯ ಕೈಗೊಳ್ಳಲು ತಕ್ಕ ಪ್ರತಿಭೆ, ಕರ್ತೃತ್ವ ಹಾಗೂ ಎದೆಗಾರಿಕೆ ಉಳ್ಳ ಇಬ್ಬರು ಮೂವರ ಪೈಕಿ ನೀವೂ ಒಬ್ಬರು.

ದ್ವೀಪಗಳು ಭಾರತೀಯರ ದೃಷ್ಟಿಯಲ್ಲಿ ವಿಶೇಷ ಮಹತ್ವ ಗಳಿಸುತ್ತವೆ. ಇವು, ಇದುವರೆಗೆ ಭಾವನಾತ್ಮಕ ಕಲ್ಪನೆಯಾಗಿದ್ದ ನಮ್ಮ ಸ್ವತಂತ್ರ ಸರಕಾರದ ಅಸ್ತಿತ್ವಕ್ಕೆ ಸಾಕಾರರೂಪ ತಂದುಕೊಟ್ಟಿವೆ. ಅಷ್ಟು ಮಾತ್ರವಲ್ಲ, ಈ ದ್ವೀಪಗಳ ಮುಕ್ತಿಯಲ್ಲಿ ಇನ್ನೂ ಗಹನವಾದ ಅರ್ಥ ಸಹ ಅಡಗಿದೆ. ಬ್ರಿಟಿಷರು ತಮ್ಮ ಸಾಮ್ರಾಜ್ಯವನ್ನು ಉರುಳಿಸಲು ಪ್ರಯತ್ನಿಸಿದ ಬಹುಪಾಲು ರಾಜಕೀಯ ನಾಯಕರನ್ನು ಆಜೀವ ಶಿಕ್ಷೆ ವಿಧಿಸಿ ಇಲ್ಲಿಗೆ ಗಡಿಪಾರು ಮಾಡುತ್ತಿದ್ದರು. ಫ್ರೆಂಚ್ ಕ್ರಾಂತಿಕಾಲದಲ್ಲಿನ ಬಾಸ್ಟೈಲ್ ಮಾದರಿಯಲ್ಲೆ, ನಮಗಿಂತ ಮೊದಲಿನ ಸ್ವಾತಂತ್ರ್ಯಯೋಧರು ಅಸಹ್ಯ ಯಾತನೆಗಳನ್ನು ಅನುಭವಿಸಿದ ಈ ಜಾಗ ಮೊದಲು ಬಿಡುಗಡೆ ಪಡೆದಿರುವುದು ಇನ್ನಷ್ಟು ವೈಶಿಷ್ಟ್ಯಪೂರ್ಣ ಸಂಗತಿ. ಇಲ್ಲಿ ಶಿಕ್ಷೆಗೊಳಗಾದ ಹಾಗೂ ಸಾವಿಗೀಡಾದ ದೇಶಭಕ್ತರೆಲ್ಲರ ಸ್ಮರಣಾರ್ಥವಾಗಿ ಇಂದಿನಿಂದ ಅಂದಮಾನನ್ನು ''ಶಹೀದ್ ದ್ವೀಪ''ವೆಂದೂ, ನಿಕೊಬಾರ್ ಅನ್ನು ''ಸ್ವರಾಜ್ಯದ್ವೀಪ'' ಎಂದೂ ಕರೆಯೋಣ' ಎಂದು ಘೋಷಿಸಿದರು.

ಸಿಂಗಾಪುರದ ಆಕಾಶವಾಣಿ ಕೇಂದ್ರದಿಂದ ನಾನು ಅನಿರೀಕ್ಷಿತವಾಗಿ ಕೇಳಿದ ಮತ್ತೊಂದು ಪರಿಚಿತ ಸ್ವರವೂ ನೆನಪಾಗುತ್ತದೆ : 'ಸ್ವಾತಂತ್ರ್ಯವೀರ ಸಾವರಕರ್‌ಜೀ ! ಹಿರಿಯ ಯೋಧರಾದ ನಿಮಗೆ ವಂದನೆ ಸಲ್ಲಿಸುವುದು ನನ್ನ ಆನಂದದಾಯಕ ಕರ್ತವ್ಯ. ನಿಮಗೆ ನಮಸ್ಕರಿಸುವುದೆಂದರೆ ತ್ಯಾಗದ ಸಾಕಾರ ಮೂರ್ತಿಗೇ ನಮಸ್ಕರಿಸಿದಂತೆ' ಎಂಬ ವಾಕ್ಯಗಳು ಕಿವಿಗೆ ಬೀಳುತ್ತಲೇ, ತಿಳಿಯಿತು - ರಾಸಬಿಹಾರಿಯವರ ಧ್ವನಿ ಅದು ! ಮುಂದುವರಿದು ಅವರೆಂದರು :

'ನೀವು ಪೂರ್ತಿ ಬಿಡುಗಡೆ ಹೊಂದಿದಾಗಲೇ, ಅದರ ಹಿಂದೆ ಪವಿತ್ರ ದೈವೀ ಹಸ್ತ ಇದೆಯೆಂಬುದನ್ನು ನಾನು ಸ್ಪಷ್ಟವಾಗಿ ಅರಿತುಕೊಂಡೆ. ನಮ್ಮ ರಾಜಕಾರಣವು ಬೇರೆಯವರ ವಿದೇಶಾಂಗ ವ್ಯವಹಾರದ ಮೇಲೆ ಅವಲಂಬಿಸಬಾರದೆಂಬ ಮತ್ತು ಇಂಗ್ಲೆಂಡಿನ ಶತ್ರುಗಳೇ ನಮ್ಮ ಮಿತ್ರರೆಂಬ ಸಿದ್ಧಾಂತವನ್ನು ನೀವು ಪ್ರಚಾರ ಮಾಡಿರುವುದು ನಿಮ್ಮ ವ್ಯಕ್ತಿತ್ವದ ನೈಜ ಹಿರಿಮೆಯನ್ನು ಪುನಃ ಪುನಃ ಎತ್ತಿತೋರಿಸುತ್ತದೆ. ವಂದೇ ಮಾತರಂ!'



ಸುಮಾರು ಅದೇ ಸಮಯದಲ್ಲಿ ಪಂ. ನೆಹರೂ ಅವರು ಒಂದು ಹೇಳಿಕೆಯಿತ್ತು, ಸುಭಾಷಚಂದ್ರ ಬೋಸರಾಗಲೀ ಅವರ ಸೈನ್ಯವಾಗಲೀ ಭಾರತಕ್ಕೆ ಕಾಲಿಟ್ಟರೆ ಅವರೊಡನೆ ಯುದ್ಧಮಾಡಿ ಹಿಂದಕ್ಕೆ ಓಡಿಸುವೆನೆಂದು ಘೋಷಿಸಿದರು !

1944ರ ಮಾರ್ಚ್ 18ರಂದು ರಾಷ್ಟ್ರೀಯ ಸೇನೆಯು ಬರ್ಮಾ ಗಡಿಯಲ್ಲಿ ಬ್ರಿಟಿಷ್ ಸೈನ್ಯವನ್ನು ಹಿಂದಟ್ಟಿತು ; ಮಣಿಪುರವನ್ನು ವಶಪಡಿಸಿಕೊಂಡು ಸ್ವತಂತ್ರ ಭಾರತದ ಪತಾಕೆಯನ್ನು ಭಾರತದ ನೆಲದಲ್ಲಿ ನೆಟ್ಟಿತು. ಆದರೆ ಅಷ್ಟರಲ್ಲೆ ಮಳೆಗಾಲ ತಲೆಹಾಕಿ, ಅವರು ಮುಂದುವರಿಯಲು ತಡೆಹಾಕಿತು. ಆಗಸ್ಟ್ 13ರಂದು ಅಣುಬಾಂಬಿನ ಹೊಡೆತದಿಂದ ವಿಧ್ವಂಸಗೊಂಡ ಜಪಾನ್ ಸೋತು ಶರಣಾಯಿತು. ದುರ್ದೈವದಿಂದ ಆಗಸ್ಟ್ 18ರಂದು ಘಟಿಸಿದ ವಿಮಾನಾಘಾತದಲ್ಲಿ ನೇತಾಜಿ ಸುಭಾಷಚಂದ್ರ ಬೋಸರ ದೇಹಾವಸಾನವಾಯಿತು.

ಆದರೆ ಸ್ವಾತಂತ್ರ್ಯ ಸಮರ ಅಲ್ಲಿಗೇ ನಿಲ್ಲಲಿಲ್ಲ. ಐ.ಎನ್.ಎ. ಯುದ್ಧ ಕೈದಿಗಳ ವಿರುದ್ಧ ಕ್ರಮ ಕೈಗೊಳ್ಳುವುದನ್ನು ಬ್ರಿಟಿಷ್ ಸೇನೆಯಲ್ಲಿದ್ದ ಭಾರತೀಯ ಸೇನಾಧಿಕಾರಿಗಳೇ ಉಗ್ರವಾಗಿ ವಿರೋಧಿಸಿದರು.

ಬ್ರಿಟಿಷರ ಸೇವೆಯಲ್ಲಿದ್ದ ಭಾರತೀಯ ಸೈನಿಕರಲ್ಲಿ ಅಶಾಂತಿಯ ಬೇಗೆ ಹಬ್ಬಿತು ; ಸ್ವಾತಂತ್ರ್ಯದ ದಾಹ ಕೆರಳಿತು 1946ರ ಜನವರಿ 20ರಂದು ಕರಾಚಿಯಲ್ಲಿದ್ದ ವಿಮಾನ ಪಡೆಯ ಸೈನಿಕರು ಹರತಾಳ ಆಚರಿಸಿದರು; ಅಲ್ಲಿಂದ ಮುಂಬೈ, ಲಾಹೋರ್, ದಿಲ್ಲಿಗಳಿಗೂ ಅದು ಹಬ್ಬಿತು ಒಟ್ಟು 5200 ಜನ ಮುಷ್ಕರದಲ್ಲಿ ಭಾಗವಹಿಸಿದರು. ಫೆಬ್ರವರಿ 19ರಂದು ನೌಕಾದಳದ 5000 ಸೈನಿಕರು ಮುಂಬೈನಲ್ಲಿ ಬ್ರಿಟಿಷ್ ಅಧಿಕಾರಿಗಳ ಮೇಲೆ ದಾಳಿ ನಡೆಸಿದರು. ಕಲ್ಕತ್ತಾ, ದಿಲ್ಲಿ, ಕರಾಚಿ, ಮದರಾಸು, ರಂಗೂನು, ಅಂಬಾಲ ಮುಂತಾದ ಎಲ್ಲ ಸೈನಿಕ ಕೇಂದ್ರಗಳಲ್ಲೂ ಭೂಸೇನೆ, ನೌಕಾಸೇನೆ, ವಾಯುಪಡೆಗಳ ಶಸ್ತ್ರಾಸ್ತ್ರಗಳು ಬ್ರಿಟಿಷರ ವಿರುದ್ಧ ತಿರುಗಿದವು !

ಜಾಣರಾದ ಇಂಗ್ಲಿಷರಿಗೆ ಪರಿಸ್ಥಿತಿಯ ಅರಿವಾಯಿತು. ಅವರು ಇಲ್ಲಿ ರಾಜ್ಯಭಾರಕ್ಕಾಗಿ ಬಂದವರಲ್ಲ, ವ್ಯಾಪಾರಕ್ಕಾಗಿ ಬಂದವರು. ಆದರೆ ಅವರ ಸುದೈವ ; ಅವರಿಗೆ ಭಾರತೀಯರೇ - ತಮ್ಮ ದೌರ್ಬಲ್ಯ, ಸ್ವಾರ್ಥ, ಅಂತಃಕಲಹಗಳಿಂದ - ಸಾಮ್ರಾಜ್ಯ ಕಟ್ಟಿ ಆಳಲು ಅವಕಾಶ ಮಾಡಿಕೊಟ್ಟಿದ್ದರು ಈಗ ಇಂಗ್ಲಿಷರಿಗೆ ತಮ್ಮ ನಿಜವಾದ ಕುಲಕಸುಬಿನ ನೆನಪಾಯಿತು. ಇನ್ನು ಜೋರು ಮಾಡಿದರೆ ಒಂದು ನರಪಿಳ್ಳೆಯೂ ಉಳಿಯದಂತೆ ಭಾರತೀಯ ಯೋಧರು ತಮ್ಮನ್ನು ವಿಚಾರಿಸಿಕೊಳ್ಳಬಲ್ಲರೆಂದು ಜ್ಞಾನೋದಯ ಅವರಿಗಾಯಿತು. ಮುತ್ಸದ್ದಿತನದಿಂದ ರಾಜಿ ಮಾಡಿಕೊಳ್ಳಲು ಅವರು ಮುಂದಾದರು. 'ನಮಗೆ ರಾಜ್ಯ ಬೇಕಾಗಿಲ್ಲ; ನೀವು ಇರಿ ಎಂದರೂ ಇನ್ನು ಇರುವುದಿಲ್ಲ ; ಹೋಗುತ್ತೇವೆ' ಎಂದು ಪಲ್ಲವಿ ಹಾಡಿದರು. ತಾವೇ ಕಟ್ಟಿದ ಪ್ರಚಂಡ ಭಾರತೀಯ ಸೈನ್ಯದ 'ಭೂತಕಾಟ' ದಿಂದ ಪಾರಾಗಲು ಭಾರತದ ರಾಜಕೀಯ ನಾಯಕರನ್ನು ಪೌರೋಹಿತ್ಯಕ್ಕೆ ಕರೆದರು. ನಾನು ವಿರೋಧಿಗಳ ಬಾಯಿಂದ 'ರಿಕ್ರೂಟಿಂಗ್ ವೀರ' ಎಂದು ಕರೆಸಿಕೊಂಡದ್ದು ಸಾರ್ಥಕವಾಯಿತು ; ಅದೂ ಒಂದು ಪ್ರಶಸ್ತಿಯೇ ಆಯಿತು !

ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಭಾರತಕ್ಕೆ 'ಸ್ವಾತಂತ್ರ್ಯ ಕೊಡುವ' ಮಸೂದೆ ಮಂಡಿಸಲ್ಪಟ್ಟಿತು. ಏಕೆ? ವಿನ್‌ಸ್ಟನ್ ಚರ್ಚಿಲ್ ಕೇಳಿದ ಪ್ರಶ್ನೆಗೆ ಉತ್ತರಿಸುತ್ತಾ ಆಗಿನ ಬ್ರಿಟಿಷ್ ಪ್ರಧಾನಿ ಆಟ್ಲಿಯವರು ಉತ್ತರವಿತ್ತರು:

'ಬ್ರಿಟನ್ನು ಅಧಿಕಾರವನ್ನು ವರ್ಗಾಯಿಸುತ್ತಿರುವುದಕ್ಕೆ ಎರಡು ಸಂಗತಿಗಳು ಕಾರಣ : 1) ನಾವು ಸಂಬಳಕ್ಕಾಗಿ ನೇಮಿಸಿಕೊಂಡಿದ್ದ ಭಾರತೀಯ ಸೈನ್ಯಕ್ಕೆ ಬ್ರಿಟನ್ನಿನ ಮೇಲೆ ನಿಷ್ಠೆ ಉಳಿದಿಲ್ಲ. 2) ಭಾರತವನ್ನು ವಶದಲ್ಲಿಟ್ಟುಕೊಳ್ಳುವಷ್ಟು ಭಾರೀ ಪ್ರಮಾಣದಲ್ಲಿ ಬ್ರಿಟಿಷ್ ಸೈನ್ಯವನ್ನು ಸಜ್ಜುಗೊಳಿಸಲು ಬ್ರಿಟನ್ನಿಗೆ ಶಕ್ತಿಯಿಲ್ಲ.'

ಎರಡು ಶತಮಾನಗಳಿಗೂ ಹಿಂದೆ ಬಿಳಿಯ ದಳ್ಳಾಳಿಗಳನ್ನೂ, ವ್ಯಾಪಾರಿಗಳನ್ನೂ ಅವರ ಕಾವಲು ಸಿಪಾಯಿಗಳನ್ನೂ ಹೊತ್ತುತಂದಿದ್ದ ಹಡಗುಗಳು ಮತ್ತೆ ಮನೆಗೆ ಮರಳಲು ತಯಾರಾದವು. ಬಿಳಿಯ ಸೈನಿಕರೂ, ಅಧಿಕಾರಿಗಳೂ ಗಂಟುಮೂಟೆ ಕಟ್ಟಿಕೊಂಡರು. ಆಂಗ್ಲ ಸಿಂಹಾಸನದ ಪ್ರತಿನಿಧಿ ಲಾರ್ಡ್ ಮೌಂಟ್‌ಬೇಟನ್ ಬಹುಕಾಲದಿಂದ ಹಾರಾಡುತ್ತಿದ್ದ ಬ್ರಿಟಿಷ್ ಧ್ವಜವನ್ನು (ಮೌನವಾಗಿ !) ಕೈಯ್ಯಾರ ಕೆಳಗಿಳಿಸಿಕೊಂಡರು. ಅದರ ಸ್ಥಾನಕ್ಕೆ ಮೇಲೇರಿದ ಭಾರತದ ರಾಷ್ಟ್ರಧ್ವಜಕ್ಕೆ ಅವರು ವಂದನೆ ಸಲ್ಲಿಸಿದರು!

ನಾನಾಸಾಹೇಬ, ತಾತ್ಯಾಟೋಪೆ, ಲಕ್ಷ್ಮೀಬಾಯಿ, ಕುವರಸಿಂಹರಿಂದ ಹಿಡಿದು ಸುಭಾಷಚಂದ್ರ ಬೋಸರವರೆಗೆ ಅಸಂಖ್ಯ ದೇಶಭಕ್ತ ಯೋಧರು, ಕ್ರಾಂತಿವೀರರು, ಹುತಾತ್ಮರು ತೊಂಬತ್ತು ವರ್ಷಗಳ ಕಾಲ ಯಾವ ಕನಸನ್ನು ಅಖಂಡವಾಗಿ ಕಣ್ಣೆವೆಗೆ ಕಟ್ಟಿಕೊಂಡು ನೆತ್ತರ ನದಿಗಳನ್ನೇ ಹರಿಸಿದರೋ, ತಮ್ಮ ತನು

ಮನಧನ ಜೀವನಗಳನ್ನು ಸ್ವಾತಂತ್ರ್ಯಯಜ್ಞಕ್ಕೆ ಹವಿಸ್ಸಿನಂತೆ ಅರ್ಪಿಸಿದರೋ ಆ ಕನಸು ನನಸಾಯಿತು.

ಸ್ವಾತಂತ್ರ್ಯದ ಗಳಿಕೆ ಯಾವೊಂದು ಪಕ್ಷದ ಅಥವಾ ಗುಂಪಿನ ಅಥವಾ ವ್ಯಕ್ತಿಯ ಸ್ವತ್ತೂ ಅಲ್ಲ ; ಯಾರದೇ ಗುತ್ತಿಗೆಯೂ ಅಲ್ಲ. ಇಡೀ ಭಾರತೀಯ ಜನಾಂಗದ ಅನೇಕ ಪೀಳಿಗೆಗಳ ಸತತವಾದ ಪರಿಶ್ರಮದ ಫಲ ಅದು. ಶಸ್ತ್ರಧಾರಿ ಕ್ರಾಂತಿಕಾರರಿಂದ ಹಿಡಿದು ಮನೆಯಲ್ಲೆ ದೇವರೆದುರು ಕೈಮುಗಿದು ಪ್ರಾರ್ಥನೆ ಮಾಡಿದವರವರೆಗೆ ಪ್ರತಿಯೊಬ್ಬರ ಪಾಲೂ ಅದರಲ್ಲಿ ಸೇರಿದೆ. ಆದರೆ ಅದರಲ್ಲಿನ ಅಗ್ರಭಾಗ ಸಶಸ್ತ್ರ ಹೋರಾಟಗಾರರಿಗೇ ಸಲ್ಲುತ್ತದೆ ; ಇತಿಹಾಸವನ್ನು ಚೆನ್ನಾಗಿ ಅರಿತವರೆಲ್ಲರೂ ನಿರ್ವಿವಾದವಾಗಿ ಒಪ್ಪಲೇಬೇಕಾದ ಸತ್ಯಸಂಗತಿ ಇದು.

  

ಚಾಳಿಸಗಾವ್ ಎಂಬಲ್ಲಿ 'ಬಲರಾಮ ವ್ಯಾಯಾಮ ಮಂದಿರ'ದವರು ಸೈನಿಕ ಶಿಕ್ಷಣ ತರಗತಿ ನಡೆಸುತ್ತಿದ್ದರು. 1938ರಲ್ಲಿ ಅದರ ಸಮಾರೋಪ ಸಮಾರಂಭಕ್ಕೆ ಹೋಗಿದ್ದಾಗ, ಅಲ್ಲಿನ 'ಅಸ್ಪೃಶ್ಯರು' ನನಗೊಂದು ಸತ್ಕಾರ ಸಮಾರಂಭ ಏರ್ಪಡಿಸಿದರು. ಆರಂಭದಲ್ಲಿ ಮಾತನಾಡಿದ ಕಾರ್ಯದರ್ಶಿಯು, 'ಸ್ಪೃಶ್ಯ ಸಮಾಜದ ಸಹಾನುಭೂತಿರಹಿತ ವರ್ತನೆಯಿಂದ ಅಸ್ಪೃಶ್ಯತೆಯ ನಿವಾರಣೆಗೆ ಅಡ್ಡಿಯಾಗಿದೆ' ಎಂದು ಆಕ್ಷೇಪಿಸಿದ. ಅವನ ಮಾತಿನ ಧಾಟಿಯಲ್ಲಿ ಉದ್ಧಟತನ ಎದ್ದು ಕಾಣುತ್ತಿತ್ತು. ನಾನು ಭಾಷಣಕ್ಕೆ ಮೊದಲು ಒಬ್ಬ ಭಂಗಿಯಿಂದ ಒಂದು ಲೋಟ ನೀರು ತರಿಸಿ ಮೇಜಿನ ಮೇಲಿಟ್ಟೆ. 'ಹರಿಜನರ ಪೈಕಿ ಯಾರಾದರೂ ದಯಮಾಡಿ ಬಂದು ಈ ನೀರನ್ನು ಕುಡಿಯಿರಿ' ಎಂದು ಪ್ರಾರ್ಥಿಸಿಕೊಂಡೆ. ಎಷ್ಟು ಹೊತ್ತು ಕಾದರೂ ಒಬ್ಬರೂ ಏಳಲಿಲ್ಲ! ನಾನೇ ಆ ನೀರು ಕುಡಿದು ಭಾಷಣ ಪ್ರಾರಂಭಿಸಿದೆ : 'ಸ್ಪೃಶ್ಯ ಸಮಾಜದ ಮೇಲೆ ಸುಮ್ಮನೆ ಏಕೆ ಆರೋಪ ಹೊರಿಸುತ್ತೀರಿ? ನಾನು ಈ ಭಂಗಿ ಮುಟ್ಟಿದ ನೀರನ್ನು ಕುಡಿದೆ ಎಂದು ಯಾವ ಸ್ಪೃಶ್ಯರೂ ನನ್ನನ್ನು ಜಾತಿಯಿಂದ ಬಹಿಷ್ಕರಿಸುವುದಿಲ್ಲ. ನನ್ನ ಪಕ್ಕದಲ್ಲೆ ಕುಳಿತು ಊಟ ಮಾಡುತ್ತಾರೆ. ಆದರೆ ನಿಮ್ಮ ಸ್ಥಿತಿ ಹೇಗಿದೆ ನೋಡಿ! ನಿಮ್ಮಲ್ಲಿರುವ ಅಸ್ಪೃಶ್ಯತೆ ಮೊದಲು ತೊಳೆದುಕೊಳ್ಳಿ. ಆಗ ಸ್ಪೃಶ್ಯ ಸಮಾಜವೂ ಹತ್ತಿರ ಬರುತ್ತದೆ ; ನೆರವು ನೀಡುತ್ತದೆ.'

ಅಲ್ಲಲ್ಲಿ ನಾವು ಅಖಿಲ ಹಿಂದೂ ಸಹಭೋಜನ ಕಾರ್ಯಕ್ರಮ ಏರ್ಪಡಿಸುತ್ತಿದ್ದಾಗಲೂ ಇಂತಹದೇ ಸಮಸ್ಯೆ ಏಳುತ್ತಿತ್ತು. ಭಂಗಿಗಳು, ಮಹಾರರು, ಚಮ್ಮಾರರು ಬೇರೆಬೇರೆಯಾಗಿ ಗುಂಪುಗೂಡುತ್ತಿದ್ದರು. ಆಗ ನಾನು ಹೇಳುತ್ತಿದ್ದೆ : 'ನಿಮ್ಮಲ್ಲೇ ಪರಸ್ಪರ ಸೈರಣೆಯಿಲ್ಲ. ಆದರೆ, ಬ್ರಾಹ್ಮಣರು ಮಾತ್ರ ನಿಮ್ಮ ಪಕ್ಕದಲ್ಲಿ ಕುಳಿತು ಊಟ ಮಾಡಬೇಕೆನ್ನುತ್ತೀರಿ. ಇದು ಯಾವ ನ್ಯಾಯ? ನಿಮ್ಮನ್ನು ಆಲಿಂಗಿಸಲು ಎಷ್ಟೋ ವಿರೋಧಗಳನ್ನು ಎದುರಿಸಿಕೊಂಡು ಬಂದಿರುವ ಸ್ಪೃಶ್ಯರಿಗೆ ನೀವು ಮಾಡುವ ಮರ್ಯಾದೆ ಹೇಗಿದೆ ನೋಡಿ!'

ಕೇವಲ ರಾಜಕೀಯ ಹಕ್ಕುಗಳ ದೃಷ್ಟಿಯಿಂದ ನೋಡುವುದರಿಂದ ಅಥವಾ ಇತರರ ಮೇಲೆ ಆರೋಪ ಹೊರಿಸುವುದರಿಂದ ಬಗೆಹರಿಯುವ ಸಮಸ್ಯೆ ಇದಲ್ಲ ; ಇಡೀ ಸಮಾಜದ ಏಕಾತ್ಮತೆಯ ದೃಷ್ಟಿಯಿಂದ ಸಮಾಜದ ಬಗ್ಗೆ ಭಕ್ತಿ ಮತ್ತು ಆತ್ಮನಿರೀಕ್ಷಣೆಯಿಂದ ಸಾಧಿಸಬೇಕಾದ ಕಾರ್ಯ ಇದೆಂದು ತಪ್ಪದೆ ಹೇಳುತ್ತಿದ್ದೆ.

1940ರ ಮಾರ್ಚಿ 14ರಂದು ನಾನು ನಂದುರಬಾರ್ ಎಂಬಲ್ಲಿದ್ದೆ. ಅಲ್ಲಿನ ಹರಿಜನ ವಿದ್ಯಾಲಯದ ಭೇಟಿಗೆಂದು ಬೆಳಿಗ್ಗೆ 9ರ ಸುಮಾರಿಗೆ ಹೊರಟೆ. ಶಾಲೆಯ ಆವರಣದ ಬಳಿ ಯಾರೋ ಅಂದಿನ ವರ್ತಮಾನ ಪತ್ರಿಕೆಯನ್ನು ಕೈಲಿಟ್ಟರು. ಶೀರ್ಷಿಕೆಗಳ ಕಡೆ ಕಣ್ಣಾಡಿಸುತ್ತಿದ್ದಂತೆ, ಒಂದೆಡೆ ದೃಷ್ಟಿ ನಿಂತಿತು.

ನನ್ನ ಹೆಜ್ಜೆಯ ಚಲನೆಯೂ ನಿಂತಿತು. ಆ ಸುದ್ದಿಯನ್ನು ಪೂರ್ತಿಯಾಗಿ ಓದಿದೆ.

ಲಂಡನ್ನಿನಲ್ಲಿ ಸರ್ ಮೈಕೇಲ್ ಓಡ್ವೈರ್‌ನ ಕೊಲೆ; ಕೊಲೆಯಲ್ಲ - ಸಂಹಾರ! ಭಾರತೀಯ ಕ್ರಾಂತಿಕಾರಿ ಸರದಾರ ಉಧಮಸಿಂಗ್ ಅದರ ಕರ್ತೃ. ನನ್ನ ಅಂತರಂಗ ಮಿಡಿಯಿತು: 'ವ್ಹಾ ಸರದಾರ್! ಜಲಿಯನ್ ವಾಲಾಬಾಗಿನ ಸೇಡು ತೀರಿಸಿದೆ, ಬಿಡು! ಹಿಂದುಸ್ಥಾನದ ಕ್ಷಾತ್ರ ತೇಜಸ್ಸು ಸತ್ತಿಲ್ಲ; ಅದು ಸಾಯುವಂಥದೂ ಅಲ್ಲ!'

ಆಗ ತ್ರ್ಯಂಬಕ ಕುಲಕರ್ಣಿ ನನ್ನ ಪಕ್ಕದಲ್ಲಿದ್ದರು. ಅವರೂ ಸುದ್ದಿಯನ್ನು ಓದಿದರು. ನಾನು ಏನಾದರೂ ಹೇಳುವೆನೋ ಎಂದು ಪದೇ ಪದೇ ಮುಖ ನೋಡತೊಡಗಿದರು. ನಾನು ಚಕಾರ ಸಹ ಎತ್ತಲಿಲ್ಲ. ಆದರೆ ಅವರು ಬಿಡಬೇಕಲ್ಲ? ಆ ವಿಷಯ ಚರ್ಚಿಸಲು ಎರಡು ಮೂರು ಬಾರಿ ಬಾಯಿ ತೆರೆದರು. ನಾನು ತುಟಿಯ ಮೇಲೆ ಬೆರಳಿಟ್ಟುಕೊಂಡು, ಸುಮ್ಮನಿರುವಂತೆ ಸನ್ನೆ ಮಾಡಿದೆ. ಏಕೆಂದರೆ ಜತೆಯಲ್ಲಿ 10-15 ಜನರಿದ್ದರು; ಅಲ್ಲದೆ, ನನ್ನ ಪ್ರತಿಕ್ರಿಯೆಯನ್ನು ಅರಿಯಲು ಸರಕಾರಿ ಕಿವಿಗಳು ಕಾದಿದ್ದವು! ಆದರೂ ಆಗ ನನ್ನ ಮುಖದಲ್ಲಿ ಹೊರಸೂಸಿದ ತೃಪ್ತಿಯ ಭಾವನೆಯನ್ನು ಮುಚ್ಚಿಟ್ಟುಕೊಳ್ಳಲು ನನ್ನಿಂದಾಗಲಿಲ್ಲ.

ನಾನು ಭಾರತದ ಪೂರ್ವಾಂಚಲ ಪ್ರದೇಶದ ಸಂಚಾರ ಕೈಗೊಂಡುದು 1940ರ ನವೆಂಬರ್ ತಿಂಗಳಲ್ಲಿ. ಆ ವೇಳೆಗಾಗಲೇ ಆಸಾಂ ಗಡಿಯೊಳಕ್ಕೆ ಮುಸ್ಲಿಮರ ಅತಿಕ್ರಮಣ ಪ್ರಾರಂಭವಾಗಿತ್ತು. ಅಲ್ಲಿ ತಮ್ಮ ಸಂಖ್ಯೆಯನ್ನು ಹೆಚ್ಚಿಸಿಕೊಂಡು ಆಸಾಮನ್ನು ಪಾಕಿಸ್ತಾನವನ್ನಾಗಿ ಪರಿವರ್ತಿಸುವ ಯೋಜನೆ ಅವರದು. ಪಂಡಿತ ನೆಹರೂ ಅವರಿಗೆ ಈ ವಿಷಯ ತಿಳಿಸಿದಾಗ ಅವರು, 'ನಿಸರ್ಗವು ಶೂನ್ಯವನ್ನು ಸಹಿಸುವುದಿಲ್ಲ' ಎಂದರಂತೆ. ನಾನು ಶಿಲಾಂಗ್‌ನ ಸಾರ್ವಜನಿಕ ಸಭೆಯಲ್ಲಿ ಹೇಳಿದೆ: 'ಪಂಡಿತ ನೆಹರೂ ದಾರ್ಶನಿಕರಲ್ಲ, ವಿಜ್ಞಾನಿಯೂ ಅಲ್ಲ. ಆದ್ದರಿಂದ, ನಿಸರ್ಗವು ವಿಷವಾಯುವನ್ನು ಸಹಿಸುವುದಿಲ್ಲ ಎಂಬುದು ಅವರಿಗೆ ಗೊತ್ತಿಲ್ಲ!'

ಡಿಸೆಂಬರಿನಲ್ಲಿ ಬಿಹಾರದ ಭಾಗಲಪುರದಲ್ಲಿ ಹಿಂದು ಮಹಾಸಭೆಯ ವಾರ್ಷಿಕ ಅಧಿವೇಶನ. ಸರಕಾರವು 'ಶಾಂತಿರಕ್ಷಣೆ'ಯ ನೆಪದಲ್ಲಿ ಅಧಿವೇಶನವನ್ನೇ ಪ್ರತಿಬಂಧಿಸಿತು. ಸುತ್ತಲಿನ ಆರು ಜಿಲ್ಲೆಗಳಲ್ಲಿ ಸಭೆ, ಮೆರವಣಿಗೆಗಳ ಮೇಲೆ ಪ್ರತಿಬಂಧಕಾಜ್ಞೆಯನ್ನೂ ಜಾರಿಗೊಳಿಸಿತು. ಆದರೆ ಕಾಯಕರ್ತರೂ ಜನತೆಯೂ ಊರೂರಿನಲ್ಲೂ ಸರಕಾರದ ನಿಷೇಧಾಜ್ಞೆಗಳನ್ನು ಪ್ರತಿಭಟಿಸಿದರು; ಉಲ್ಲಂಘಿಸಿದರು; ಸಭೆ, ಮೆರವಣಿಗೆ ನಡೆಸಿದರು. ಲಾಠಿ ಪ್ರಹಾರ, ಅಶ್ವಾರೋಹಿ ಪೊಲೀಸರ ದಾಳಿ, ಚಾಟಿ ಹಾಗೂ ಗುಂಡಿನ ಹೊಡೆತ, ಬಂಧನ, ಶಿಕ್ಷೆ ಯಾವುದಕ್ಕೂ ಜನರು ಜಗ್ಗಲಿಲ್ಲ. ನಾಗರಿಕ ಹಕ್ಕುಗಳ ರಕ್ಷಣೆಯ ಹೋರಾಟ ಬರುಬರುತ್ತಾ ಪ್ರಚಂಡ ರೂಪ ತಾಳಿತು. ಹೊರ ಪ್ರಾಂತಗಳಿಂದಲೂ ಸಹಸ್ರಾರು ಕಾರ್ಯಕರ್ತರು ಚಳವಳಿಗೆ ಧುಮುಕಿ, ನಿಶ್ಶಸ್ತ್ರ ಪ್ರತೀಕಾರ ಕೈಗೊಂಡರು; ಜೈಲುಗಳೆಲ್ಲ ತುಂಬಿಹೋದವು. ಏನೇ ಆಗಲಿ, ಅಧಿವೇಶನವನ್ನು ನಡೆಸಲೇಬೇಕೆಂಬುದು ನನ್ನ ತೀರ್ಮಾನ. ಭಾಗಲಪುರಕ್ಕೆ ರೈಲಿನಲ್ಲಿ ಹೊರಟಿದ್ದ ನಾನು ಗಯಾ ನಿಲ್ದಾಣದಲ್ಲಿ ಬಂಧಿತನಾದೆ. ಆದರೆ, ಮುಂದಿನ ಯೋಜನೆಗಳನ್ನೆಲ್ಲ ನಾನು ಮೊದಲೇ ಸಿದ್ಧಪಡಿಸಿಕೊಂಡಿದ್ದೆ. ನಿಶ್ಚಿತ ದಿನದಂದು ಇದ್ದಕ್ಕಿದ್ದಂತೆ ಭಾಗಲಪುರದಲ್ಲಿ ಸಹಸ್ರಾರು ಪ್ರತಿನಿಧಿಗಳು ಪ್ರತ್ಯಕ್ಷರಾದರು; ಲೋಕಮಾನ್ಯ ತಿಲಕರ ಮೊಮ್ಮಗ ಜಿ.ವಿ. ಕೇತ್ಕರ್ ವೇದಿಕೆಗೆ ಹತ್ತಿ ನನ್ನ ಭಾಷಣವನ್ನು ಓದಿದರು. ಭಾಗಲಪುರದ ನಾಗರಿಕರ ಹೋರಾಟಕ್ಕೆ ವಿಜಯ ದೊರಕಿತು. ಒಂದು ವಾರದ ನಂತರ ಬಂಧಿತರೆಲ್ಲರೂ ಬಿಡುಗಡೆ ಹೊಂದಿದೆವು. ಹಿಂದುಗಳು ಪರಸ್ಪರ ಭೇದಭಾವನೆಗಳನ್ನು ಮರೆತು ಒಗ್ಗೂಡಬಲ್ಲರು ಮತ್ತು

ತಮ್ಮ ಹಕ್ಕುಬಾಧ್ಯತೆಗಳಿಗಾಗಿ ಯಶಸ್ವಿಯಾಗಿ ಹೋರಾಡಬಲ್ಲರು ಎಂಬುದನ್ನು ಈ ಚಳವಳಿ ಎತ್ತಿ ತೋರಿಸಿತು.

1943ರ ಮೇ 28ರಂದು ನನ್ನ ಷಷ್ಟ್ಯಬ್ದಿಪೂರ್ತಿ ಸಮಾರಂಭ. ದೇಶದಾದ್ಯಂತ ಅದರ ಆಚರಣೆ ನಡೆಯಿತು. ನಿಜಕ್ಕೂ ನೋಡಿದರೆ ಮನುಷ್ಯ ಜೀವನದಲ್ಲಿ 60 ವರ್ಷ ಪೂರ್ತಿಯಾಗುವುದು ಅಷ್ಟೇನೂ ಮಹತ್ವದ ಸಂಗತಿಯಲ್ಲ. ಸ್ವಾರ್ಥಿಗಳು, ಸಮಯಸಾಧಕರು, ಹಣ ಕೀರ್ತಿಗಳ ಬೆನ್ನುಹತ್ತಿದವರು ಹಾಗೂ ಸುಖಾಸೀನರಾದ ರಾಜಕಾರಣಿಗಳು ಕುಳಿತಲ್ಲೆ ಅದನ್ನು ಸಾಧಿಸಿಬಿಡುತ್ತಾರೆ. ಅವರು ಬೇಡ ಬೇಡ ಎನ್ನುತ್ತಿದ್ದರೂ ಅರವತ್ತು ತುಂಬಿಯೇ ಬಿಡುತ್ತದೆ! ಆದರೆ ಕ್ರಾಂತಿಕಾರಿಗಳ ವಿಷಯ ಹಾಗಲ್ಲ; ಒಬ್ಬ ಡಿ ವೆಲೆರಾ, ಮ್ಯಾಟ್ಸಿನಿ ಅಥವಾ ಗರಿಬಾಲ್ಡಿಗೆ 60 ತುಂಬುವುದರಲ್ಲಿ ಮಹತ್ವವಿದೆ. ಅಂಥವರು ಗುಂಡುಗಳು, ಬೇಡಿಗಳು, ಫಾಸಿಯ ಕುಣಿಕೆಗಳು, ಜೈಲುಖಾನೆಯ ನರಕಯಾತನೆಗಳ ಮೂಲಕ ಹೆಜ್ಜೆಹೆಜ್ಜೆಗೂ ಮೃತ್ಯುವನ್ನು ಎದುರಿಸಿಕೊಂಡೇ ಬದುಕಿ ಬಂದಿರುತ್ತಾರೆ.

ಪುಣೆಯ ಸಮಾರಂಭದಲ್ಲಿ ಸಾರ್ವಜನಿಕರು 1,20,000 ರೂ. ನಿಧಿ ಸಂಗ್ರಹಿಸಿ ನನಗೆ ಅರ್ಪಿಸಿದರು. ಅವರ ಪ್ರೀತಿ ಅಭಿಮಾನಗಳಿಂದ ಅಂತಃಕರಣ ಉಕ್ಕಿಬಂತು. 'ನೀವೆಲ್ಲರೂ ತೋರಿರುವ ಅಪಾರ ಪ್ರೀತ್ಯಾದರಗಳನ್ನು ಕಂಡು, ಭಾವನೆಗಳ ಒತ್ತಡದಿಂದ ನನ್ನ ಬಾಯಿ ಕಟ್ಟಿಹೋಗಿದೆ. ಆ ಭಾವನೆಗಳಾದರೋ ಶಬ್ದಗಳ ಕಟ್ಟಿಗೆ ಸಿಲುಕದಷ್ಟು ಸೂಕ್ಷ್ಮ, ಎರಡು ಜೀವಾವಧಿ ಶಿಕ್ಷೆಗಳನ್ನು ನಾನು ತಾಳಿಕೊಳ್ಳಬಲ್ಲೆನೆಂದು ಯಾರೂ ಹೇಳುವ ಸ್ಥಿತಿಯಲ್ಲಿರಲಿಲ್ಲ. ನಿಜಕ್ಕೂ ಅದೊಂದು ಸಜೀವ ಸಮಾಧಿಯೇ ಆಗಿತ್ತು. ಆದರೆ ಎಂಥ ಅಗ್ನಿಪರೀಕ್ಷೆಯಲ್ಲೂ ನನ್ನ ನಿರ್ಧಾರ ಕದಲಲಿಲ್ಲ. ನಾನು ಸಂಕಟಗ್ರಸ್ತವಾಗಿದ್ದ ಹಿಂದುತ್ವದ ಸಣ್ಣದೊಂದು ಚೀತ್ಕಾರವಾಗಿ ಹೊರಬಿದ್ದೆ!' ಎಂದೆ.

ನ್ಯಾಯವಾಗಿ ನಾನು ನನ್ನ 75ನೆಯ ವಯಸ್ಸಿನವರೆಗೂ ಅಂದಮಾನಿನಲ್ಲೆ ಕೊಳೆಯುತ್ತಿರಬೇಕಾಗಿತ್ತು! ಆದರೆ, ಬಹುಶಃ ವಿಧಿಯ ಮೈಮರೆವಿನಿಂದಾಗಿ, ಇಂದು ಲಕ್ಷಾಂತರ ದೇಶಬಾಂಧವರ ಶುಭಕಾಮನೆಗಳನ್ನು ಸ್ವೀಕರಿಸಲು ಸ್ವತಂತ್ರನಾಗಿದ್ದೆ. 'ಆದರೂ, ಇನ್ನುಮುಂದೆ ಏನು ಕಾದಿದೆಯೋ ಯಾರಿಗೆ ಗೊತ್ತು?' ಎಂದು ನಾನು ಗೆಳೆಯರ ಬಳಿ ಹೇಳುತ್ತಲೇ ಇದ್ದೆ. ಮರುದಿನ ಪುಣೆ ನಗರಸಭೆಯು ನಾನು ಶತಾಯು ಆಗಲೆಂದು ಹಾರೈಸಿ ಮಾನಪತ್ರ ಸಲ್ಲಿಸಿದಾಗ ನಾನೆಂದೆ : 'ನೂರು ವರ್ಷ ಬದುಕಬೇಕೆಂಬ ವ್ಯಾಮೋಹ ನನಗಿಲ್ಲ. ಧ್ಯೇಯಕ್ಕಾಗಿ ಶ್ರಮಿಸುವುದರಲ್ಲೆ ನಾನು ಜೀವನದ ಮಹೋನ್ನತ ಆನಂದ ಕಂಡುಕೊಂಡಿದ್ದೇನೆ. ಈಗಿನ ಸ್ವಾತಂತ್ರ್ಯ ಯೋಧರು ಇನ್ನು ಮುಂದೆ ನನ್ನ ಹಾಗೂ ನನ್ನ ಸಹಕಾರಿಗಳ ಶವಗಳ ಸೇತುವೆಯ ಮೇಲೆ ಮುನ್ನಡೆದು ಹೋಗಬೇಕು ; ಗುರಿ ಮುಟ್ಟಬೇಕು.'

ಪುಣೆಯಲ್ಲಿ ನಾನು ಉಳಿದುಕೊಂಡಿದ್ದುದು ಅಣ್ಣಾರಾವ್ ಭೋಪಟಕರರ ಮನೆಯಲ್ಲಿ. ನಾನಿದ್ದ ಕೊಠಡಿ ಸತ್ಕಾರ ಸಮಾರಂಭಗಳ ಹಾರಗಳಿಂದ ತುಂಬಿಹೋಗಿತ್ತು. ಆದರೂ, ಮರುದಿನ ಬೆಳಿಗ್ಗೆ ಎದ್ದಾಗ, ಅವರ ಮನೆಯ ಅಂಗಳದಲ್ಲಿದ್ದ ಪಾರಿಜಾತದ ಮರ ನನ್ನ ಮನಸೆಳೆಯಿತು. ಕೆಳಗೆ ನೆಲವೆಲ್ಲ ಮುಚ್ಚಿಹೋಗುವ ಹಾಗೆ ಉದುರಿದ್ದ ಅಚ್ಚ ಬಿಳಿಯ ಹೂಗಳನ್ನು ಕಂಡು ಮಾರುಹೋದೆ. ಭೋಪಟಕರರ ಮಗಳನ್ನು ಕರೆದು, 'ನನಗೊಂದು ಬೊಗಸೆ ಆ ಹೂ ತಂದುಕೊಡು' ಎಂದೆ. ಅದನ್ನು ಕೇಳಿಸಿಕೊಂಡ ಹುಡುಗಿಯ ತಾಯಿ ಯಶೋದಾಬಾಯಿಯವರು, 'ಆ ಭಾರಿ ಭಾರಿ ಹಾರಗಳ ರಾಶಿ ಸಾಲದೆ? ಇನ್ನೂ ತೃಪ್ತಿಯಾಗಲಿಲ್ಲವೇನೊ!' ಎಂದು ನಸುನಕ್ಕರು. 'ಶ್ರೀಕೃಷ್ಣನು ಸ್ವರ್ಗದಿಂದ ಭೂಮಿಗೆ ತಂದ ಹೂವಲ್ಲವೆ

ಇದು ? ಸಾಕ್ಷಾತ್ ಭಗವಂತನಿಗೆ ಪ್ರಿಯವಾದ ಹೂವಿದು ; ಎಂದಮೇಲೆ ನಾನು ಅದಕ್ಕೆ ಮನಸೋತಿದ್ದರಲ್ಲಿ ಏನಾಶ್ಚರ್ಯ !' ಎಂದೆ ನಾನು.

ಮುಂಬೈ ಸಮಾರಂಭದಲ್ಲಿ ನಿಧಿಯ ಜೊತೆಗೆ 'ಎಸ್.ಎಸ್. ಮೊರಿಯಾ' ಹಡಗಿನ ಪುಟ್ಟದೊಂದು ಬೆಳ್ಳಿಯ ಪ್ರತಿಕೃತಿಯನ್ನು ಜನ ನನಗೆ ನೀಡಿದರು. ಆಗಸ್ಟ್ ತಿಂಗಳಲ್ಲಿ ನಾಗಪುರ ವಿಶ್ವವಿದ್ಯಾಲಯವು 'ಡಿ. ಲಿಟ್.' ಪ್ರಶಸ್ತಿಯಿತ್ತು ಗೌರವಿಸಿತು. ಆದರೆ ನನ್ನ ಬಿ.ಎ. ಪದವಿಯನ್ನು ಹಿಂತೆಗೆದುಕೊಂಡಿದ್ದ ಮುಂಬೈ ವಿಶ್ವವಿದ್ಯಾನಿಲಯ - ಬಹುಶಃ ಅಧಿಕಾರದಲ್ಲಿದ್ದ ರಾಜಕೀಯ ಪುಢಾರಿಗಳ ಪ್ರಭಾವದಿಂದ - ಅದನ್ನು ವಾಪಸು ಕೊಡುವ ಯೋಚನೆಯನ್ನೇ ಮಾಡಿರಲಿಲ್ಲ! ಕರ್ಣಾವತಿ ಮತ್ತು ಅಮರಾವತಿಗಳಲ್ಲಿ ಜರುಗಿದ ಸಮಾರಂಭಗಳಲ್ಲೂ ನಾನು ಭಾಗವಹಿಸಿದ್ದೆ.

ನನ್ನ 61ನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ, ಹೂವಿನ ಹಾರಗಳನ್ನು ನನ್ನ ಕೊರಳಿಗೆ ಪೇರಿಸಿ ಜಯಕಾರ ಹಾಕುವ ಪ್ರಚಂಡ ಜನಸಮೂಹಗಳ ನಡುವೆ ನಡೆದು ಹೋಗುವಾಗಲೂ ನನ್ನ ಒಳ ಮನಸ್ಸಿನಲ್ಲಿ ನಾನು ಒಬ್ಬೊಂಟಿಗ ಎಂಬಂತೆಯೇ ಭಾಸವಾಗುತ್ತಿತ್ತು. ಬಾಳಹಾದಿಯಲ್ಲಿ ಇದಾವುದೋ ಒಂದು ಆಕಸ್ಮಿಕ ಸುಂದರ ಸ್ವಪ್ನ; ಯಾವುದೇ ಕ್ಷಣದಲ್ಲಾದರೂ ಈ ಎಲ್ಲ ದೃಶ್ಯಗಳೂ ಬದಲಾಗಬಹುದು; ಈ ಸಂಭ್ರಮ, ಈ ಪುಷ್ಪಹಾರಗಳು, ಈ ಸ್ವರ್ಣ ರಜತಗಳ ವೈಭವವೆಲ್ಲ ಇದ್ದಕ್ಕಿದ್ದಂತೆ ಕಠಿನ ಶಿಕ್ಷೆ, ಕಬ್ಬಿಣದ ಸರಪಳಿ, ಉಕ್ಕಿನ ಬೇಡಿಗಳಾಗಿ ಮಾರ್ಪಡಬಹುದು, ಅನ್ನಿಸುತ್ತಿತ್ತು !

ಆ ವರ್ಷ ಬಂಗಾಲಕ್ಕೆ ಭೀಕರ ಕ್ಷಾಮ ಎರಗಿತು. ಬಂಗಾಲದ ಮುಸ್ಲಿಂ ಲೀಗ್ ಮಂತ್ರಿಮಂಡಲ ಹಾಗೂ ಕ್ರಿಶ್ಚನ್ ಸಂಸ್ಥೆಗಳು ಈ 'ಸುಸಂದರ್ಭ'ವನ್ನು ಹಿಂದುಗಳ ಮತಾಂತರಕ್ಕಾಗಿ ಬಳಸಿಕೊಳ್ಳತೊಡಗಿದವು. ವ್ಯಾಟಿಕನ್ ಮುಖಪತ್ರಿಕೆ 'ಆಬ್ಸರ್‌ವೇಟರ್ಸ್ ರೋಮನೋ' ಮೂಲಕ ಪೋಪರು, 'ಭಾರತದ ಉಪಖಂಡದಲ್ಲಿ ಈಗಾಗಲೇ ಕ್ರಿಶ್ಚನ್ ಬೆಳಕು ಪ್ರಕಾಶಿಸುತ್ತಿದೆ. ಅದು ಪೂರ್ಣವಾಗಿ ಪ್ರಜ್ವಲಿಸುವ ದಿನವನ್ನು ನಾವು ಎದುರು ನೋಡುತ್ತಿದ್ದೇವೆ' ಎಂದು ಹೇಳಿಕೆ ಕೊಟ್ಟರು. ಅದಕ್ಕೆ ಭಾರತದ ಪ್ರತಿಕ್ರಿಯೆ ಏನೆಂಬುದನ್ನು ಇಡೀ ಜಗತ್ತೇ ಎದುರು ನೋಡುತ್ತಿತ್ತು. ನಾನು ಅಮೆರಿಕದ 'ಯುನೈಟೆಡ್ ಪ್ರೆಸ್' ವಾರ್ತಾ ಸಂಸ್ಥೆಗೆ ಹೇಳಿಕೆ ಕಳುಹಿಸಿದೆ : 'ಇಂದು ಹಿಟ್ಲರ್, ಮುಸೋಲಿನಿ, ಚರ್ಚಿಲ್, ರೂಸ್‌ವೆಲ್ಟ್ ಪ್ರಭೃತಿ ಬಹುಪಾಲು ಕ್ರಿಶ್ಚನ್ ದೇಶಗಳ ನಾಯಕರೆಲ್ಲರೂ ಪರಸ್ಪರ ಕತ್ತಿ ಮಸೆಯುತ್ತಾ, ಕ್ರಿಸ್ತನಿಗೆ ಮೀಸಲಾದ ಚರ್ಚುಗಳಲ್ಲಿ ಯುದ್ಧದೇವತೆಗೆ ಧೂಪದೀಪ ಹಚ್ಚುತ್ತಿದ್ದಾರೆ; ನಿನ್ನೆ ಮೊನ್ನೆಯ ವರೆಗೂ ಮುಸೋಲಿನಿಯ ಗುಣಗಾನ ಮಾಡುತ್ತಿದ್ದ ಹಾಗೂ ಶಾಂತಿದೇವತೆಯ ಪಟ್ಟದ ಪೂಜಾರಿಯ ರಾಜಧಾನಿ ಎನಿಸಿಕೊಂಡ ವ್ಯಾಟಿಕನ್ ಈಗಾಗಲೇ ಬಾಂಬುದಾಳಿಗಳಿಂದ ಪೂರ್ಣವಾಗಿ ಪ್ರಜ್ವಲಿಸುತ್ತಾ, ತನ್ನ ರಕ್ಷಣೆಗಾಗಿ ಫಿರಂಗಿಯ ಬಾಯಿಗಳ ಮೂಲಕ ಪ್ರಾರ್ಥನೆ ಸಲ್ಲಿಸುತ್ತಿದೆ ! ಹೀಗಿರುವಾಗ, ಭಾರತವು ಕ್ರಿಶ್ಚನ್ ಮತಪ್ರಸಾರದಿಂದ ಪ್ರಜ್ವಲಿಸಬೇಕೆಂದು ಹೇಳಲು ಇಂದಿಗಿಂತ ಹೆಚ್ಚು ಹಾಸ್ಯಾಸ್ಪದವಾದ ವಿಷಗಳಿಗೆ ಇನ್ನೊಂದಿರಲಾರದು.... ವೈದ್ಯರೇ, ನಿಮ್ಮ ವ್ಯಾಧಿ ಗುಣಪಡಿಸಿಕೊಳ್ಳಿ! ಇಲ್ಲಿ ಶುದ್ಧಿ ಮತ್ತು ಹಿಂದು ಸಂಘಟನೆಯ ಚಳವಳಿ ಆರಂಭವಾದಾಗಿನಿಂದ, ಪೋಪರ ಕ್ರಿಶ್ಚನ್ ಬೆಳಕು ಮಂಕಾಗತೊಡಗಿದೆ; ಹಿಂದುಸ್ಥಾನವು ಕ್ರಿಶ್ಚನ್‌ಮಯವಾಗಬೇಕೆಂದು ಬಯಸಿದ ಮಕಾಲೆಯ ಆಸೆಯನ್ನು ಅದು ಮಣ್ಣುಗೂಡಿಸಿದೆ. ಕ್ರಿಶ್ಚನರಾಗಿದ್ದ ಸಹಸ್ರಾರು ಹಿಂದುಗಳು ಪುನಃ ಹಿಂದುತ್ವದ ತಾಯಿಮಡಿಲಿಗೆ ಬಂದು ಸೇರುತ್ತಿದ್ದಾರೆ ; ಕೇವಲ ಧಾರ್ಮಿಕವಾಗಿ ಮಾತ್ರವಲ್ಲ, ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಸಹ ಹಿಂದು ರಾಷ್ಟ್ರದೊಡನೆ ಒಂದಾಗು

ತ್ತಿದ್ದಾರೆ.'

1943ರ ನವೆಂಬರ್ ಮೊದಲನೆ ವಾರ ಸಾಂಗ್ಲಿಯಲ್ಲಿ ವಿಕ್ರಮಾದಿತ್ಯನ ದ್ವಿತೀಯ ಸಹಸ್ರಮಾನೋತ್ಸವ ಚಿರಸ್ಮರಣೀಯವಾಗಿ ಜರುಗಿತು. ಆ ಸಮಾರಂಭದ ಸಂದರ್ಭದಲ್ಲಿ ಕೃಷ್ಣಾನದಿಯ ದಡದಲ್ಲಿ ನಡೆದ ವಿಶಾಲ ಸಭೆಯನ್ನು ಉದ್ದೇಶಿಸಿ ನಾನು ಹೇಳಿದೆ: 'ವಿಕ್ರಮಾದಿತ್ಯನು ಎರಡು ಸಹಸ್ರ ವರ್ಷಗಳ ಕಾಲ ತನ್ನ ಜನಾಂಗದ ನೆನಪಿನಲ್ಲಿ ಉಳಿದು ಬಂದಿರುವುದಕ್ಕೆ ಕಾರಣವೇನು ? ಸುಖ ಶಾಂತಿಗಳಿಂದ ಕೂಡಿದ್ದ ಆ ಮಹಾರಾಜನ ರಾಜ್ಯಭಾರದಲ್ಲಿ ಸಾಹಿತ್ಯ, ವಿದ್ವತ್ತು, ಕಲೆ ಹಾಗೂ ಜೀವನ ವಿಕಾಸಗೊಂಡವು ಎಂಬುದಕ್ಕಾಗಿ ಮಾತ್ರವಲ್ಲ ; ಆದರೆ ಪರಕೀಯ ಹಾಗೂ ಅಹಿಂದು ಆಕ್ರಮಣಕಾರಿಗಳಾದ ಶಕರನ್ನೂ ಹೂಣರನ್ನೂ ಅವನು ಸೋಲಿಸಿ ಓಡಿಸಿ, ಭಾರತವರ್ಷವನ್ನು ಸ್ವತಂತ್ರಗೊಳಿಸಿದ ಎಂಬುದಕ್ಕಾಗಿ; 'ಶಕಾರಿ', 'ಹೂಣಾರಿ' ಎಂಬ ಸಾರ್ಥಕ ಬಿರುದುಗಳನ್ನು ಧರಿಸಿದ ಎಂಬುದಕ್ಕಾಗಿ ! ಆ ಬಿರುದಾವಳಿ ಕೇಳುತ್ತಲೇ ಇಡೀ ಹಿಂದು



ಸ್ಥಾನ ಸ್ಫೂರ್ತಿ, ಉತ್ಸಾಹ, ಸಂಭ್ರಮಗಳಿಂದ ಅರಳುವುದೂ ಅದಕ್ಕಾಗಿಯೇ !'

★ ★ ★

1947 ಆಗಸ್ಟ್ 15ರಂದು 'ಸಾವರಕರ್ ಸದನ'ದ ಮೇಲೆ ಭಗವಾಧ್ವಜದ ಜತೆಗೆ ತ್ರಿವರ್ಣ ಧ್ವಜವೂ ಹಾರಾಡಿತು. ಒಂದು ಅಖಂಡ ಹಿಂದುಸ್ಥಾನದ ಪ್ರತೀಕ ; ಮತ್ತೊಂದು ಮುಕ್ತಿಗೊಂಡ ಭಾಗದ ಪ್ರತೀಕ. ನಾನೇ ಸ್ವತಃ ಮನೆಯ ಮೇಲೆ ಹತ್ತಿಹೋಗಿ ಹಾರಿಸಿದೆ. ಸಹಸ್ರ ವರ್ಷಗಳ ದಾಸ್ಯದ ನಂತರ ಇಷ್ಟು ದೊಡ್ಡ ಭೂಭಾಗ ಸ್ವತಂತ್ರಗೊಂಡುದನ್ನು ಕಂಡು ಯಾರಿಗೆ ತಾನೆ ಆನಂದವಾಗದು ?

ಕೆಲವರು ಹೇಳುತ್ತಾರೆ - 'ನಾವು ರಕ್ತದ ಒಂದು ಹನಿಯನ್ನೂ ಚೆಲ್ಲದೆ ಕೇವಲ ಅಹಿಂಸಾ ಮಾರ್ಗದಿಂದಲೇ ಸ್ವಾತಂತ್ರ್ಯ ಗಳಿಸಿದೆವು' ಎಂದು. ನಿಜ, ನಿಜ! ಹಾಗೆ ಹೇಳುವವರ ಮೈಮೇಲಿನ ಬಟ್ಟೆಗೆ ಸಹ ಒಂದು ತೊಟ್ಟು ರಕ್ತ ತಾಗಿಲ್ಲ! ಆದರೆ ಯಾರು ಸ್ವಾತಂತ್ರ್ಯ ಸಂಗ್ರಾಮಕ್ಕೆ ಮುನ್ನುಗ್ಗಿಹೋಗಿ ತಮ್ಮ ರಕ್ತದಲ್ಲೆ ಓಕುಳಿಯಾಡಿದರೋ, ಯಾರ ದೇಹ ನೆಲಕ್ಕೆ ಬಿದ್ದರೂ ನಿರ್ಧಾರ ಮಾತ್ರ ಅಚಲವಾಗಿದ್ದಿತೋ ಅಂಥ ಸಹಸ್ರಾರು ಎಳೆಯ ಬಾಲಕರನ್ನು, ನವಯುವಕರನ್ನು ಮರೆತುಬಿಡೋಣವೆ ? ಮುಂಬರುವ ಪೀಳಿಗೆಗಳು ನಮ್ಮನ್ನು ಸಹ ಮರೆಯಲು ಬಿಡೋಣವೆ ? ಅದಾಗದು.

ಆದರೆ.... ? ಆದರೆ, ಇನ್ನೂ ಒಂದು ಪ್ರಶ್ನೆ ಉಳಿದೇ ಉಳಿಯುತ್ತದೆ. ಏನದು ?

ಅದೇ, ಆ ಸಿಂಧು ! ಎಲ್ಲಿದೆ ಅದು ?

ಆ ಎಲ್ಲ ದೇಶಭಕ್ತರು, ತ್ಯಾಗಿಗಳು, ಸ್ವಾತಂತ್ರ್ಯ ಯೋಧರು ಯಾವುದರ ಭವ್ಯ ಚಿತ್ರವನ್ನು ಹೃದಯದಲ್ಲಿ ಪ್ರತಿಷ್ಠಾಪಿಸಿಕೊಂಡು, ಯಾವುದರ ಸಲುವಾಗಿ ತಮ್ಮ ಜೀವನ ಸರ್ವಸ್ವವನ್ನೂ ಹೋಮಗೊಳಿಸಿ ಕೊಂಡರೋ ಆ ಅಖಂಡ ಹಿಂದುಸ್ಥಾನ ತಾನೆ ಎಲ್ಲಿದೆ ?

1925ರಲ್ಲೆ ಲಾಲಾ ಹರದಯಾಳ್ ಹೇಳಿದ್ದರು : ಲಾಹೋರಿನ 'ಪ್ರತಾಪ್' ಪತ್ರಿಕೆಯಲ್ಲಿ ಬರೆದೂ ಇದ್ದರು: 'ನಾನು ಘಂಟಾಘೋಷವಾಗಿ ಹೇಳುತ್ತೇನೆ - ಹಿಂದು ಜನಾಂಗದ, ಹಿಂದುಸ್ಥಾನದ, ಅದರಲ್ಲೂ ಪಂಜಾಬಿನ ಭವಿಷ್ಯ ನಿಂತಿರುವುದು ಈ ನಾಲ್ಕು ಆಧಾರಸ್ತಂಭಗಳ ಮೇಲೆ : 1) ಹಿಂದು ಸಂಘಟನೆ. 2) ಹಿಂದು ಆಡಳಿತ. 3) ಮುಸ್ಲಿಮರ ರಾಷ್ಟ್ರೀಕರಣ. 4) ಅಫಘಾನಿಸ್ಥಾನ ಮತ್ತು ಸರಹದ್ದು ಪ್ರಾಂತಗಳ ವಿಲೀನೀಕರಣ ಮತ್ತು ಅಲ್ಲಿನ ಜನರ ರಾಷ್ಟ್ರೀಕರಣ. ಈ ನಾಲ್ಕು ಅಂಶಗಳನ್ನು ಸಾಧಿಸುವವರೆಗೆ, ನಮ್ಮ ಮಕ್ಕಳು ಮೊಮ್ಮಕ್ಕಳೆಲ್ಲರೂ ಸದಾ ವಿಪದ್ಗ್ರಸ್ತರಾಗಿಯೇ ಉಳಿಯುತ್ತಾರೆ ಮತ್ತು ಹಿಂದು ಜನಾಂಗದ ಸಂರಕ್ಷಣೆ ಸಾಧ್ಯವಿಲ್ಲ.'

ಮುಸಲ್ಮಾನರು, ಅದರಲ್ಲೂ ಭಾರತದ ಮುಸಲ್ಮಾನರು ಮತಾಂಧರಾಗಿಯೇ ಉಳಿದುಕೊಂಡು ಬಂದಿದ್ದಾರೆ. ಮಾನವ ಜಗತ್ತಿನಲ್ಲಿ ಅವರಿಗೆ ಗೊತ್ತಿರುವ ಗುಂಪುಗಳು ಎರಡೇ ಎರಡು - ಮುಸ್ಲಿಮರು ಮತ್ತು ಶತ್ರುಗಳು ; ಯಾರು ಮುಸ್ಲಿಮರಲ್ಲವೋ ಅವರೆಲ್ಲರೂ ಶತ್ರುಗಳೇ ! ಮುಸ್ಲಿಮರಾದವರು ಮುಸ್ಲಿಮರ ರಾಜ್ಯ ಇರುವ ಭೂಮಿಯನ್ನು ಬಿಟ್ಟು ಇನ್ನಾವುದೇ ದೇಶಕ್ಕೂ ನಿಷ್ಠೆಯಿಂದ ನಡೆದುಕೊಳ್ಳು ವಂತಿಲ್ಲ. ಭಾರತದಲ್ಲಿ ಅವರ ಪ್ರತಿಯೊಂದು ಆಚಾರ ವಿಚಾರಗಳೂ ಪರಕೀಯತೆಯಿಂದ ತುಂಬಿ ತುಳುಕುತ್ತಿದೆ. ಅವರ ನಿಷ್ಠೆಯೆಲ್ಲ ಅರೇಬಿಯಾಕ್ಕೆ ಮೀಸಲು. ಅವರು ಮೊದಲಿಂದ ಕೊನೆಯವರೆಗೆ ಮುಸ್ಲಿಮರಾಗಿಯೇ ಉಳಿದಿದ್ದಾರೆಯೇ ಹೊರತು ಎಂದೂ ಭಾರತೀಯರಾಗಿಲ್ಲ.

'ಏಳು ಕೋಟಿ ಮುಸಲ್ಮಾನರ ಆಸೆ ಆಕಾಂಕ್ಷೆಗಳು ರಾಷ್ಟ್ರೀಯ ಆಸೆ ಆಕಾಂಕ್ಷೆಗಳಿಗೆ ವಿರುದ್ಧವಾಗಿವೆ' ಎಂದು ಗೋಖಲೆಯವರು ಹೇಳಿ, ಹಿಂದು - ಮುಸ್ಲಿಂ ಐಕ್ಯತೆ ಇಡೀ ಜೀವಮಾನದಲ್ಲೆ ಸಾಧ್ಯವಿಲ್ಲ ಎಂದು ಎಚ್ಚರಿಸಿದ್ದರು. ಡಾ. ಅಂಬೇಡಕರ್ ಸಹ, 'ಒಬ್ಬ ನಿಜವಾದ ಮುಸಲ್ಮಾನನು ಭಾರತವನ್ನು ಮಾತೃಭೂಮಿ ಯೆಂದೂ ಹಿಂದುಗಳನ್ನು ಬಂಧುಗಳೆಂದೂ ಪರಿಗಣಿಸಲು ಇಸ್ಲಾಂ ಅವಕಾಶ ಕೊಡುವುದಿಲ್ಲ' ಎಂದಿದ್ದರು. ಈ ನಿಜಸಂಗತಿಯನ್ನು ಅರಿವು ಮಾಡಿಕೊಳ್ಳದೆ ಕೆಲವು ವಿವೇಕಹೀನ ನಾಯಕರು, ಹಿಂದು-ಮುಸ್ಲಿಂ ಏಕತೆಗೆ ಬ್ರಿಟಿಷರ ಆಡಳಿತ ಅಡ್ಡಿಯಾಗಿದೆ ಎನ್ನತೊಡಗಿದರು. ಆದರೆ ಹಿಂದುಸ್ಥಾನವನ್ನು ಮತಾಂಧತೆಯ ಹುಚ್ಚಿ ನಿಂದ ವಿಧ್ವಂಸಗೊಳಿಸಿ, ಇಲ್ಲಿ ಪವಿತ್ರವೆನಿಸಿದುದೆಲ್ಲವನ್ನೂ ಹಾಳುಗೆಡಹಲು ಮಹಮದ್ ಬಿನ್

ಕಾಸಿಮನಿಗಾಗಲೀ, ಘಸ್ನಿ ಮಹಮದನಿಗಾಗಲೀ ಬ್ರಿಟಿಷರು ಹೇಳಿಕೊಟ್ಟಿದ್ದರೇನು ? ಮುಸ್ಲಿಮನ ಅತೃಪ್ತಿಗೆ, ವಿರೋಧಕ್ಕೆ ಸಣ್ಣಪುಟ್ಟ ಸಂಗತಿಗಳು ಕಾರಣವಲ್ಲ. ಇಲ್ಲಿನ ರಾಷ್ಟ್ರೀಯತೆಯನ್ನು ಪೂರ್ತಿಯಾಗಿ ಮಣ್ಣುಗೂಡಿಸಿ ಇಸ್ಲಾಮಿನ ರಾಜ್ಯ ತರುವವರೆಗೆ ಅವರಿಗೆ ಸಮಾಧಾನವಿಲ್ಲ.

1941ರ ಮುಸ್ಲಿಂ ಲೀಗ್ ಸಮ್ಮೇಳನದಲ್ಲಿ ಜಿನ್ನಾ ಸಾಹೇಬರು, 'ಬ್ರಿಟಿಷ್ ಸರಕಾರವು ಸ್ವತಂತ್ರ ಪಾಕಿಸ್ತಾನವನ್ನು ನಿರ್ಮಿಸಿಕೊಡದಿದ್ದರೆ, ಬೇರೆಯವರು ಆ ಕೆಲಸ ಮಾಡುತ್ತಾರೆ' ಎಂದರು. ಆಗಲೇ ನಾನು ಕಾಂಗ್ರೆಸಿಗೆ ಎಚ್ಚರಿಕೆಯಿತ್ತೆ : ಪಾಕಿಸ್ತಾನದ ಘೋಷಣೆ ಕೇಳಿದಿರಾ ? ಭವಿಷ್ಯವನ್ನು ಕಣ್ಣುತೆರೆದು ನೋಡಿ; ಮುಸ್ಲಿಂ ಲೀಗ್‌ನ ಬೇಡಿಕೆಗಳನ್ನು ತಪ್ಪು ಅರ್ಥ ಮಾಡಿಕೊಂಡು ಆತ್ಮವಂಚನೆ ಮಾಡಿಕೊಳ್ಳಬೇಡಿ; ಕೊನೆಗೆ ಜನರನ್ನೂ ಮೋಸಗೊಳಿಸಬೇಡಿ !

ಜಿನ್ನಾ ಅವರಿಗೂ ನಾನು ಉತ್ತರಿಸಿದೆ : '...... ಹಿಂದುಸ್ಥಾನಕ್ಕೆ ಪಾಕಿಸ್ತಾನಗಳ ಅನುಭವ ಹೊಸದೇನಲ್ಲ. ಕಳೆದ ಐದು ಸಹಸ್ರ ವರ್ಷಗಳಲ್ಲಿ ಹಿಂದುತ್ವದ ಈ 'ಆಕ್ಟೋಪಸ್' ಅದೆಷ್ಟೋ ಶಕಸ್ಥಾನ, ಹೂಣಸ್ಥಾನಗಳನ್ನು ಜೀರ್ಣಿಸಿಕೊಂಡಿದೆ; ಮೊಗಲರಿಗೆ ತಮ್ಮ ಸ್ಥಿತಿ ಅರಿವಾಗುವ ಮೊದಲೇ ಮರಾಠರು ಅವರ ಸಾಮ್ರಾಜ್ಯವನ್ನು ನುಂಗಿ ನೀರುಕುಡಿದಿದ್ದಾರೆ. ಅಕಸ್ಮಾತ್ ಪಾಕಿಸ್ತಾನವೇನಾದರೂ ಹುಟ್ಟಿಕೊಂಡರೂ, ಕೆಲ ವರ್ಷಗಳ ಕಾಲ ಅಸಹ್ಯ ಜೀವನ ನಡೆಸಿದ ನಂತರ, ಅದಕ್ಕೂ ಅದೇ ಗತಿ ಕಾದಿದೆ. ಹಿಂದುಸ್ಥಾನದ ಇತಿಹಾಸ ಸಾರಿಹೇಳುತ್ತದೆ - ಪಾಕಿಸ್ತಾನಗಳು ಬರಬಹುದು, ಹೋಗಬಹುದು; ಆದರೆ ಹಿಂದುಸ್ಥಾನ ಎಂದೆಂದೂ ಇರುವಂಥದು !'

ಈ ದೇಶದಲ್ಲಿ ಸುಖ ಶಾಂತಿ ಸುರಕ್ಷತೆಗಳು ಉಳಿಯಬೇಕಾದರೆ ಮುಸ್ಲಿಮರು ಅನನ್ಯ ನಿಷ್ಠೆಯಿಂದ ಒಪ್ಪಬೇಕಾದ ನಾಲ್ಕು ತತ್ವಗಳನ್ನು ನಾನು ಮುಂದಿಟ್ಟೆ: 1) ಭಾರತದ ಅವಿಭಾಜ್ಯತೆ ಹಾಗೂ ಸ್ವಾತಂತ್ರ್ಯದಲ್ಲಿ ನಂಬಿಕೆ. 2) ಜನಸಂಖ್ಯೆಯ ಪ್ರಮಾಣಕ್ಕೆ ಅನುಗುಣವಾಗಿ ಪ್ರಾತಿನಿಧ್ಯ. 3) ಸರಕಾರಿ ಹುದ್ದೆಗಳಿಗೆ ಅರ್ಹತೆಯೇ ಅಳತೆಗೋಲು. 4) ಎಲ್ಲ ನಾಗರಿಕರಿಗೂ ಸಮಾನವಾಗಿ ಉಪಾಸನೆ, ಭಾಷೆ, ಲಿಪಿ ಸ್ವಾತಂತ್ರ್ಯದ ಮೂಲಭೂತ ಹಕ್ಕುಗಳ ಭರವಸೆ.

ಆದರೆ ಮುಸ್ಲಿಮರಲ್ಲಿ ದೇಶನಿಷ್ಠೆ ಹಾಗೂ ಸಹಕಾರದ ಮನೋಭಾವನೆ ಬೆಳೆದರೆ ಅವರು ಮುಸ್ಲಿಮರಾಗಿ ಎಲ್ಲಿ ಉಳಿದಾರು ? ಕಾಂಗ್ರೆಸು ಮುಸ್ಲಿಂ ತುಷ್ಟೀಕರಣದ ನೀರೆರೆದು, ಅವರ ಪ್ರತ್ಯೇಕತೆಯ ಭಾವನೆಯನ್ನೂ, ದೇಶ ವಿಭಜನೆಯ ತಂತ್ರವನ್ನೂ ಚಿಗುರಿಸುತ್ತಲೇ ಹೋಯಿತು. ಭಾರತದ ಏಕತೆಯ ಭವಿತವ್ಯಕ್ಕೆ ಕವಿಯುತ್ತಿದ್ದ ಕಾರ್ಮುಗಿಲನ್ನು ಗುರುತಿಸಿ, ದೇಶ ಒಂದಾಗಿ ಉಳಿಯಬೇಕಾದರೆ, 'ರಾಜಕಾರಣದ ಹಿಂದುಕರಣ ಮತ್ತು ಹಿಂದುಗಳ ಸೈನಿಕೀಕರಣ' ಆಗಲೇಬೇಕೆಂದು ನಾನು ಕರೆಯಿತ್ತೆ.

ಎರಡನೆ ಮಹಾಯುದ್ಧದಲ್ಲಿ ಜಪಾನಿನ ದಾಳಿ ಆರಂಭವಾಗುತ್ತಿದ್ದಂತೆ ಪೂರ್ವ ಏಷ್ಯದಲ್ಲಿ ಬ್ರಿಟಿಷರ ಸಾಮರ್ಥ್ಯದ ರೆಕ್ಕೆ ಕಡಿದುಬಿತ್ತು. ಶತ್ರುವಿನ ಆಪತ್ಕಾಲವೇ ನಮಗೆ ಸುವರ್ಣಸಂಧಿ ! ಇದೊಂದು ಶತಸ್ಸಿದ್ಧ ಸಿದ್ಧಾಂತ. ನಾನು ಕೂಡಲೆ, 1942 ಮಾರ್ಚಿ 7ರಂದು ಬ್ರಿಟಿಷ್ ಪ್ರಧಾನಿ ಚರ್ಚಿಲ್ ಅವರಿಗೆ ತಂತಿ ಕಳುಹಿಸಿ ಒತ್ತಾಯಿಸಿದೆ : 'ಭಾರತ- ಬ್ರಿಟನ್ ರಾಷ್ಟ್ರಕೂಟದ ಚೌಕಟ್ಟಿನಲ್ಲಿ ಎರಡು ರಾಷ್ಟ್ರಗಳಿಗೂ ಸಮಾನ ಪಾಲುದಾರಿಕೆ ಇರುವಂತೆ, ಭಾರತೀಯ ಸ್ವಾತಂತ್ರ್ಯ ಘೋಷಣೆ ಹೊರಡಿಸಿ... ಕೂಡಲೆ ಭಾರತ ಸರಕಾರದ ಭಾರತೀಕರಣವಾಗಲಿ !'

ಮಾರ್ಚಿ 23ರಂದು ಸರ್ ಸ್ಟಾಫರ್ಡ್ ಕ್ರಿಪ್ಸ್ ಭಾರತಕ್ಕೆ ಬಂದಿಳಿದರು. ಬ್ರಿಟಿಷ್ ಮಂತ್ರಿಮಂಡಲದ

ಸಲಹೆಗಳಿಗೆ ಭಾರತೀಯ ನಾಯಕರನ್ನು ಒಪ್ಪಿಸುವುದು ಅವರ ಉದ್ದೇಶ. ಹಿಂದು ಮಹಾಸಭೆಯ ಅಧ್ಯಕ್ಷನಾದ ಕಾರಣ ನಾನೂ ಅವರ ಭೇಟಿಗೆ ಆಹ್ವಾನಿತನಾದೆ; ದಿಲ್ಲಿಗೆ ಹೋದೆ. ಕ್ರಿಪ್ಸ್ ಎರಡು ಅಂಶಗಳ ಯೋಜನೆ ಮುಂದಿಟ್ಟರು - 1) ಭಾರತೀಯ ಸಂಘರಾಜ್ಯ ಸ್ಥಾಪನೆ ಮತ್ತು 2) ಈ ಸಂಘರಾಜ್ಯದಲ್ಲಿ ಸೇರಲು ಇಚ್ಛಿಸದಿರುವ ರಾಜ್ಯಗಳಿಗೆ ಸ್ವಯಂನಿರ್ಣಯದ ಹಕ್ಕು.

ಆ ಪೈಕಿ ಮೊದಲನೆಯದನ್ನು ನಾನು ಒಪ್ಪಿದೆ. ಆದರೆ ಎರಡನೆಯದು ? ದೇಶವನ್ನು ಒಡೆಯುವ ಧೂರ್ತ ಸನ್ನಾಹದ ದುರ್ನಾತ ಅದರಿಂದ ಹೊರಡುತ್ತಿತ್ತು; 'ಸ್ವಯಂ ನಿರ್ಣಯ'ದ ಮೋಹಕ ಹೆಸರಿನಿಂದ ಪಾಕಿಸ್ತಾನದ ನಿರ್ಮಿತಿಗೆ ಎಡೆಕೊಡುವ ವಿಷಬೀಜ ಅದರಲ್ಲಡಗಿತ್ತು. ಎರಡನೆಯ ಅಂಶದ ಮೇಲೆ ಬೆರಳಿಟ್ಟು, 'ಇದರಲ್ಲಿ ಬದಲಾವಣೆ ಮಾಡಲು ಸಾಧ್ಯವಿಲ್ಲವೆ ?' ಎಂದೆ. 'ಸಾಧ್ಯವೇ ಇಲ್ಲ' ಎಂದರು ಅವರು. ಕೆಲಕಾಲ ಬ್ರಿಟನ್ನಿನ ಅಡ್ವೋಕೇಟ್ ಜನರಲ್ ಆಗಿದ್ದ ಕ್ರಿಪ್ಸ್, ತಮ್ಮ ಹೇಳಿಕೆ ಸಮರ್ಥಿಸಲು, 'ರಾಜಕಾರಣ ಕ್ಷೇತ್ರದಲ್ಲಿ ''ಸ್ವಯಂ ನಿರ್ಣಯ''ವೇನೂ ಹೊಸದಲ್ಲ. ಕೆನಡಾ ಒಕ್ಕೂಟ ರೂಪುಗೊಳ್ಳುವ ಮುನ್ನ ಅದರ ಪ್ರತಿಯೊಂದು ಭಾಗಕ್ಕೂ ಸ್ವಯಂ ನಿರ್ಣಯದ ಹಕ್ಕು ನೀಡಲಾಗಿತ್ತು' ಎಂದು ಹೇಳಿ, ದಕ್ಷಿಣ ಆಫ್ರಿಕಾ ಹಾಗೂ ಮತ್ತಿತರ ದೇಶಗಳ ನಿದರ್ಶನಗಳನ್ನೂ ಮುಂದಿಟ್ಟರು. ಅದಕ್ಕೆ ನಾನೆಂದೆ:

'ಕೆನಡಾ ಒಕ್ಕೂಟದ ರಚನೆಗೆ ಮುನ್ನ, ಮೊದಲಿನಿಂದಲೂ ಅಲ್ಲಿನ ಭಾಗಗಳು ಪ್ರತ್ಯೇಕವಾಗಿಯೇ ಇದ್ದವು. ಆದರೆ ಭಾರತದಲ್ಲಿನ ಪ್ರಾಂತಗಳು ಎಂದಿನಿಂದಲೂ ಒಂದುಗೂಡಿಯೇ ಇದ್ದು, ಕೇಂದ್ರಶಾಸನ ಹೊಂದಿವೆ. ಆದ್ದರಿಂದ ನೀವು ಹೇಳುವುದಕ್ಕೂ ಇದಕ್ಕೂ ಏನೂ ಸಂಬಂಧವಿಲ್ಲ. ಬಿಡಿಬಿಡಿಯಾದ ಭಾಗ ಗಳಿಂದ ಅಥವಾ ಪ್ರತ್ಯೇಕ ಪ್ರಾಂತಗಳಿಂದ ಹೊಸ ರಾಷ್ಟ್ರ ಅಥವಾ ಒಕ್ಕೂಟ ರಚಿಸುವ ಪ್ರಶ್ನೆ ಇಂದು ನಮ್ಮ ಮುಂದೆ ಏಳುವುದಿಲ್ಲ.'

'ಭಾರತವು ಎಂದೂ ಏಕಾತ್ಮಕ ರಾಷ್ಟ್ರವಾಗಿರಲಿಲ್ಲ' ಎಂದರು ಕ್ರಿಪ್ಸ್.

'ನಿಮ್ಮ ಅಭಿಪ್ರಾಯ ತಪ್ಪು. ಹಿಂದುಗಳ ಮನಸ್ಸಿನಲ್ಲಂತೂ, ತಮ್ಮ ಮಾತೃಭೂಮಿ ಹಾಗೂ ಪಿತೃಭೂಮಿಯಾದ ಭಾರತದಲ್ಲಿ ತಾವೊಂದು ಸಾಂಸ್ಕೃತಿಕವಾಗಿ ಅಖಂಡವಾದ ಅವಿಭಾಜ್ಯ ರಾಷ್ಟ್ರ ಎಂಬ ಶ್ರದ್ಧೆ ದೃಢವಾಗಿ ನೆಲೆಗೊಂಡಿದೆ. ಈ ಸಾಂಸ್ಕೃತಿಕ ದೃಷ್ಟಿಯನ್ನು ಬದಿಗಿಟ್ಟರೂ, ಇದುವರೆಗೆ ಬ್ರಿಟಿಷ್ ಸರಕಾರ ಸಹ ರಾಜಕಾರಣ ಹಾಗೂ ರಾಜ್ಯಾಡಳಿತದ ದೃಷ್ಟಿಯಿಂದ ಹಿಂದುಸ್ಥಾನದ ಅಖಂಡತೆಯನ್ನು ಒಪ್ಪಿ ಕೊಂಡಿದೆ. ಏಕೆಂದರೆ ಇಡೀ ಹಿಂದುಸ್ಥಾನಕ್ಕಿರುವುದು ಒಂದೇ ''ಇಂಡಿಯನ್ ಆರ್ಮಿ'', ಒಂದೇ ''ಇಂಡಿಯನ್ ನೇವಿ'', ಹಾಗೂ ಒಂದೇ ''ಇಂಡಿಯನ್ ಗವರ್ನ್‌ಮೆಂಟ್.'' ಇವೆಲ್ಲ ಸಂಗತಿಗಳೂ ಹಿಂದುಸ್ಥಾನವು ಏಕಕೇಂದ್ರಿತವಾದ ರಾಷ್ಟ್ರ ಹಾಗೂ ರಾಜ್ಯ ಎಂಬುದನ್ನು ಸಿದ್ಧಪಡಿಸುತ್ತವೆ. ಮುಂಬೈ, ಬಂಗಾಲ ಮುಂತಾದವು ಅದರೊಳಗಿನ ಪ್ರಾಂತಗಳು, ಅಷ್ಟೆ. ಇನ್ನು ಸ್ವಯಂ ನಿರ್ಣಯದ ಸಿದ್ಧಾಂತದ ಬಗ್ಗೆ ಹೇಳುವುದಾದರೆ, ಆ ಅಧಿಕಾರವನ್ನು ಸಮಗ್ರ ರಾಷ್ಟ್ರಕ್ಕೆ ಅನ್ವಯಿಸಬೇಕೇ ಹೊರತು, ಅದರೊಳಗಿನ ಭಾಗಗಳಿಗಲ್ಲ. ನೀವು ಆ ಸಿದ್ಧಾಂತವನ್ನು ಒಪ್ಪಿರುವುದರಿಂದ, ಬ್ರಿಟಿಷ್ ಸಾಮ್ರಾಜ್ಯದಿಂದ ಸ್ವತಂತ್ರಗೊಳ್ಳುವ ಸ್ವಯಂ ನಿರ್ಣಯಾಧಿಕಾರ ಭಾರತಕ್ಕೆ ಉಂಟೆಂಬುದನ್ನೂ ನೀವು ಒಪ್ಪಿಕೊಂಡಂತಾಗಿದೆ.'

ಕ್ರಿಪ್ಸ್ ಸಾಹೇಬರು ತಮ್ಮ ಜೀವನದಲ್ಲೆ ಮೊದಲ ಬಾರಿಗೆ ತಾವು ನೇಯ್ದ ಬಲೆಯಲ್ಲಿ ತಾವೇ ಸಿಕ್ಕಿಬಿದ್ದರು! ಅನೇಕ ರಾಜಕೀಯ ಸಂಧಾನಗಳಲ್ಲಿ ಯಶಸ್ಸು ಗಳಿಸಿದ್ದ ಅವರ ಮುತ್ಸದ್ದಿತನ ಮಂಕಾಯಿತು. ರಶ್ಯವನ್ನು ಜರ್ಮನಿಯ ವಿರುದ್ಧ ಎತ್ತಿಕಟ್ಟಿದ್ದ ಹಾಗೂ ಪಂ. ನೆಹರೂರವರಂಥ ಅನೇಕ ಭಾರತೀಯ



ನಾಯಕರನ್ನು ಬುಟ್ಟಿಗೆ ಹಾಕಿಕೊಂಡಿದ್ದ ಅವರ ಮಧುರ ಮಾತು ಕತೆ, ಮನಸೆಳೆಯುವ ವ್ಯವಹಾರ ಚತುರತೆ ಎಲ್ಲವೂ ನಿಂತು ಹೋದವು. ಅವರು ಕೊಟ್ಟಿದ್ದ ಯೋಜನೆಯ ಪ್ರತಿಯನ್ನು ಎಸೆದು ನಾನು ಹೊರಗೆ ಬಂದೆ. ಅದನ್ನು ಪೂರ್ತಿಯಾಗಿ ಸ್ವೀಕರಿಸಬೇಕು ಅಥವಾ ಪೂರ್ತಿಯಾಗಿ ತಿರಸ್ಕರಿಸಬೇಕು ಎಂಬುದು ಅವರ ಷರತ್ತು. ಪೂರ್ತಿಯಾಗಿಯೇ ನಾನು ತಿರಸ್ಕರಿಸಿದ್ದೆ!

ಅನಂತರ ಇನ್ನೊಮ್ಮೆ ಮಾತುಕತೆಯಾಡಲು ಕ್ರಿಪ್ಸ್ ಹೇಳಿಕಳುಹಿಸಿದರು. ಆದರೆ, ದೇಶವಿಭಜನೆಗೆ ದಾರಿಯಾಗಲಿದ್ದ ಆ ವಾಕ್ಯ ಇರುವವರೆಗೆ ಮಾತನಾಡಿ ಉಪಯೋಗವಿಲ್ಲವೆಂದು ನಾನು ಉತ್ತರ ಕಳುಹಿಸಿದೆ. ಬ್ರಿಟಿಷ್ ಸರಕಾರದ ಧೂರ್ತ ಯೋಜನೆ ಹಾಗೂ ವಂಚನೆಯ ಬಗ್ಗೆ ಜನತೆಯನ್ನೂ, ನಾಯಕರನ್ನೂ ನಾನು ಜಾಗೃತಗೊಳಿಸತೊಡಗಿದೆ.

ಆದರೆ ದುರ್ದೈವವಶಾತ್ ಕ್ರಿಪ್ಸ್ ಮಹಾಶಯರ ಕೃತ್ರಿಮತೆಗೆ ಹಾಗೂ ತಂತ್ರಗಾರಿಕೆಗೆ ಕಾಂಗ್ರೆಸ್ ನಾಯಕರು ಮರುಳಾದರು. ಅದಾದ ಒಂದು ತಿಂಗಳೊಳಗೆ ಏಪ್ರಿಲ್‌ನಲ್ಲಿ ಕಾಂಗ್ರೆಸ್ ಕಾರ್ಯಕಾರಿ ಮಂಡಲಿಯು ಕ್ರಿಪ್ಸ್‌ರ 'ಕ್ಯಾಬಿನೆಟ್ ಸಲಹೆ'ಗಳನ್ನು ಬೆಂಬಲಿಸುವ ನಿರ್ಣಯ ಸ್ವೀಕರಿಸಿತು. ನಾಲ್ಕು ವರ್ಷಗಳ ನಂತರ ಆ ನಿರ್ಣಯದ ಬಗ್ಗೆ ಬರೆಯುತ್ತಾ ಡಾ. ಪಟ್ಟಾಭಿ ಸೀತಾರಾಮಯ್ಯನವರು, 'ಆ ಸಾಲುಗಳು ಭಾರತದ ವಿಭಜನೆಗೆ ಒಪ್ಪಿಗೆ ನೀಡಿ, ಭಾರತದ ಏಕತೆ ಹಾಗೂ ಸಮಗ್ರತೆಗೆ ಎಳ್ಳುನೀರು ಬಿಟ್ಟಿರುವುದು ಸ್ವಯಂ ವಿದಿತ' ಎಂದು ಒಪ್ಪಿಕೊಂಡರು!

1942ರ ಜೂನ್ ಎರಡನೆ ವಾರದಲ್ಲಿ ಪ್ರಸಿದ್ಧ ಪತ್ರಿಕೋದ್ಯಮಿ ಹಾಗೂ ಗ್ರಂಥಕರ್ತರಾದ ಲೂಯಿ ಫಿಶರ್ ನನ್ನ ಭೇಟಿಗೆ ಬಂದರು. ಮಾತುಕತೆ ಪ್ರಾರಂಭವಾಗುತ್ತಲೇ ಅವರು 'ಮಿಸ್ಟರ್ ಸಾವರಕರ್! ನೀವೇಕೆ ಪಾಕಿಸ್ತಾನದ ರಚನೆಗೆ ಒಪ್ಪಿಕೊಳ್ಳುವುದಿಲ್ಲ?' ಎಂದು ಬಿರುಸಾಗಿ ಪ್ರಶ್ನಿಸಿದರು. ನಾನು ಅವರನ್ನು ಶಾಂತವಾಗಿ ಕೇಳಿದೆ: 'ನೀವು ಅಮೆರಿಕದಲ್ಲಿ ನೀಗ್ರೊಸ್ಥಾನ ಕೊಡುವುದಿಲ್ಲವೇಕೆ?' ನಾನು ಮೊದಲೇ ನಿರೀಕ್ಷಿಸಿದ್ದ ಉತ್ತರವೇ ಅವರ ಬಾಯಿಂದ ಬಂತು. 'ಅದು ರಾಷ್ಟ್ರವಿರೋಧಿ ಕೃತ್ಯ!' ಎಂದರು.

'ಸರಿಯಾಗಿ ಹೇಳಿದಿರಿ. ಅದೇ ರೀತಿ ಭಾರತದಲ್ಲೂ ಪಾಕಿಸ್ತಾನ ಕೊಡುವುದು ರಾಷ್ಟ್ರವಿರೋಧಿ ಹಾಗೂ ಪ್ರಜಾತಂತ್ರ ವಿರೋಧಿ ಆಗುತ್ತದೆ!' ಎಂದೆ.

ಅದುವರೆಗೆ ಕೇವಲ ಅಳ್ಳೆದೆಯ ಪುಢಾರಿಗಳನ್ನು ಮಾತ್ರ ಭೇಟಿ ಮಾಡಿ ಹೊಗಳಿಸಿಕೊಂಡು ಬಂದಿದ್ದ ಅವರಿಗೆ ಹರಳೆಣ್ಣೆ ಕುಡಿದಂತಾಯಿತು.

ಆ ವರ್ಷ ಆಗಸ್ಟ್‌ನಲ್ಲಿ ಕಾಂಗ್ರೆಸು 'ಕ್ವಿಟ್ ಇಂಡಿಯಾ' ಘೋಷಣೆ ಹಾಕಿ ಚಳವಳಿ ಹೂಡಿತು. ಆದರೆ ಕಾಂಗ್ರೆಸ್ಸಿನ ಮುಸ್ಲಿಂ ತುಷ್ಟೀಕರಣ ನೀತಿಯಿಂದಾಗಿ, 'ಕ್ವಿಟ್ ಇಂಡಿಯಾ' ಕಡೆಗೆ 'ಸ್ಪ್ಲಿಟ್ ಇಂಡಿಯ'ದಲ್ಲಿ ಪರ್ಯವಸಾನಗೊಳ್ಳುವ ಲಕ್ಷಣಗಳೇ ಕಂಡುಬರುತ್ತಿದ್ದವು! ಹಾಗಾಗದಂತೆ, ಅಖಂಡ ಹಿಂದುಸ್ಥಾನ ಚಳವಳಿ ಬಲಗೊಳ್ಳಬೇಕೆಂಬ ಎಚ್ಚರಿಕೆಯ ಮಾತನ್ನು ನಾನು ಸರ್ವತ್ರ ಪ್ರಚುರಗೊಳಿಸತೊಡಗಿದೆ. 1944ರ ಅಕ್ಟೋಬರ್ 7 ಮತ್ತು 8ರಂದು ದಿಲ್ಲಿಯಲ್ಲಿ 'ಅಖಂಡ ಹಿಂದುಸ್ಥಾನ ನಾಯಕರ ಸಮ್ಮೇಳನ' ನಡೆಸಿದೆವು.

ಆದರೆ ಅದರಲ್ಲಿ ಯಾವ ಕಾಂಗ್ರೆಸ್ ನಾಯಕರೂ ಆಸಕ್ತಿ ವಹಿಸಲಿಲ್ಲ. ಆ ವರ್ಷ ನವೆಂಬರ್ ತಿಂಗಳಲ್ಲಿ ಅನಾರೋಗ್ಯದ ನಿಮಿತ್ತ ನಾನು ಹಿಂದು ಮಹಾಸಭೆಯ ಅಧ್ಯಕ್ಷ ಸ್ಥಾನಕ್ಕೆ - ಏಳು ವರ್ಷಗಳು ಸತತವಾಗಿ, ಅವಿರೋಧವಾಗಿ ಆ ಸ್ಥಾನದಲ್ಲಿದ್ದ ನಂತರ - ರಾಜೀನಾಮೆಯಿತ್ತೆ. ಮುಂದೆ ಡಾ. ಶ್ಯಾಮಪ್ರಸಾದ ಮುಖರ್ಜಿಯವರನ್ನು ಅಧ್ಯಕ್ಷ ಸ್ಥಾನಕ್ಕೆ ಆರಿಸಬೇಕೆಂಬ ಇಚ್ಛೆಯನ್ನೂ ತಿಳಿಸಿದೆ.

1946ರ ಆಗಸ್ಟ್ 16ರಿಂದ ಮುಸ್ಲಿಂ ಲೀಗ್ ತನ್ನ 'ನೇರ ಕಾರ್ಯಾಚರಣೆ' ಕೈಗೊಂಡಿತು. ಪೂರ್ವ ಬಂಗಾಲದಾದ್ಯಂತ, ವಿಶೇಷವಾಗಿ ನೌಖಾಲಿ ಜಿಲ್ಲೆಯಲ್ಲಿ, ಹಿಂದುಗಳ ಕಗ್ಗೊಲೆ, ಸುಲಿಗೆ, ಹಿಂದು ಸ್ತ್ರೀಯರ ಅಪಹರಣ, ಸಾಮೂಹಿಕ ಮತಾಂತರ, ಅಗ್ನಿಕಾಂಡ, ಮುಂತಾದ ಭೀಷಣ ಅನಾಚಾರ - ಅತ್ಯಾಚಾರಗಳು ನಡೆದವು. ಯಾವ ಕಾಂಗ್ರೆಸ್ ನಾಯಕರೂ ಅದನ್ನು ತಡೆಗಟ್ಟಲು ಹೋಗಲಿಲ್ಲ ; ಖಂಡಿಸಲೂ ಇಲ್ಲ. ಆದರೆ ಬಿಹಾರದ ಹಿಂದುಗಳು ಅದಕ್ಕೆ ಪ್ರತಿಕ್ರಿಯೆ ಆರಂಭಿಸುತ್ತಿದ್ದಂತೆಯೇ ಅವರನ್ನು ಹತ್ತಿಕ್ಕಲು ಕಾಂಗ್ರೆಸ್ ನಾಯಕರು ಆಡಳಿತ ಯಂತ್ರದ ಸರ್ವಶಕ್ತಿಯನ್ನೂ ಬಳಸಿದರು. 'ಗುಂಡು ಹೊಡೆಯುತ್ತೇವೆ, ಬಾಂಬು ಹಾಕುತ್ತೇವೆ' ಎಂದು ನೆಹರೂ ಹಿಂದುಗಳಿಗೆ ಬೆದರಿಕೆ ಹಾಕಿದರು. ಅಷ್ಟು ಮಾತ್ರವಲ್ಲ, 'ಬಿಹಾರದ ಹಿಂದುಗಳು ಮುಸ್ಲಿಮರನ್ನು ಕೊಲ್ಲಬೇಕೆಂದಿದ್ದರೆ, ಮೊದಲು ನನ್ನನ್ನು ಕೊಲ್ಲಬೇಕು' ಎಂದರು. ಮಹಾತ್ಮಾ ಗಾಂಧಿಯವರು ಉಪವಾಸ ಕೈಗೊಳ್ಳುವುದಾಗಿ ಎಚ್ಚರಿಕೆ ಕೊಟ್ಟರು. 'ಒಂದು ಕಣ್ಣಿಗೆ ಬೆಣ್ಣೆ, ಒಂದು ಕಣ್ಣಿಗೆ ಸುಣ್ಣ' ಹಚ್ಚುವ ಹಿರಿಯ ನಾಯಕರ ಈ ನೀತಿಯಿಂದ ಕಾಂಗ್ರೆಸ್‌ವಾದಿ ಪತ್ರಿಕೆಗಳೂ ರೋಸಿಹೋದವು. 'ಯಶೋದಾ' ವಾರಪತ್ರಿಕೆಯು (ಸಂಪುಟ 6, ಸಂಚಿಕೆ 4, ಗಾಂಧಿ ಶಕೆ 78) 'ನೆಹರೂ ಅವರ ದೇಹ ಉರುಳಲೇಬೇಕಾದರೆ, ನೌಖಾಲಿಯಲ್ಲಿ ಉರುಳಬೇಕು. ಗಾಂಧೀಜಿಯವರು ಉಪವಾಸ ಮಾಡಬೇಕೆಂದಿದ್ದರೆ ನೌಖಾಲಿಯಲ್ಲಿ ಮಾಡಬೇಕು' ಎಂದು ಬರೆಯಿತು!

1947ರ ಫೆಬ್ರವರಿ 10ರಂದು ಶ್ಯಾಮಪ್ರಸಾದ ಮುಖರ್ಜಿಯವರು ನನಗೊಂದು ಪತ್ರ ಬರೆದರು. ಅದರಲ್ಲಿ ಅವರು ದುಃಖದಿಂದ ಉದ್ಗರಿಸಿದ್ದರು : 'ಹಿಂದುಗಳು ಮೊದಲೇ ನಿಮ್ಮ ಕರೆಗೆ ಓಗೊಟ್ಟಿದ್ದಲ್ಲಿ, ಅವರು ತಮ್ಮ ಜನ್ಮ ಭೂಮಿಯಲ್ಲೇ ಗುಲಾಮರಾಗಿ ಬಾಳುವ ಸ್ಥಿತಿ ಬರುತ್ತಿರಲಿಲ್ಲ!'

ಆಗಸ್ಟ್ 8ರಂದು ನಾನು ಮುಂಬೈನಿಂದ ದಿಲ್ಲಿಗೆ ಹೋದೆ. ಅಂದು ನನ್ನ ಜೀವಮಾನದಲ್ಲಿ ಮೊದಲ ಬಾರಿಗೆ ವಿಮಾನ ಪ್ರಯಾಣ ಮಾಡಿದೆ. ಹಿಂದುಸ್ಥಾನದ ವಿಭಜನೆಯನ್ನು ವಿರೋಧಿಸುವ, ಸಾಧ್ಯವಾದರೆ ತಪ್ಪಿಸುವ ಕೊನೆಯ ಪ್ರಯತ್ನ ಅದು. ಅಲ್ಲಿ ಸೇರಿದ ಹಿಂದು ಸಮ್ಮೇಳನವನ್ನು, ಉದ್ದೇಶಿಸಿ ಮಾತನಾಡುತ್ತಾ, ಪಾಕಿಸ್ತಾನವನ್ನು ಎಂದಿಗೂ ಒಪ್ಪಿಕೊಳ್ಳಬಾರದೆಂದು ಕರೆಯಿತ್ತೆ. ಮುಂಬರುವ ಇನ್ನಷ್ಟು ಭೀಷಣ ಅಪಾಯಗಳ ಬಗ್ಗೆ ಈಗಲೇ ಎಚ್ಚೆತ್ತುಕೊಳ್ಳದಿದ್ದರೆ, ಇನ್ನೂ ಅನೇಕ ಪಾಕಿಸ್ತಾನಗಳಾಗಬಹುದು ಎಂಬ ಮುನ್ನೆಚ್ಚರಿಕೆಯನ್ನೂ ನೀಡಿದೆ. ಪಾಕಿಸ್ತಾನದ ನಿರ್ಮಾಣಕ್ಕಾಗಿ ಚಳವಳಿ ಹೂಡಿದ ಹಾಗೂ ಗಲಭೆ ಮಾಡಿದ ಇನ್ನೂ ನಾಲ್ಕು ಕೋಟಿ ಮುಸಲ್ಮಾನರು, ಉಳಿದ ಭಾರತದಲ್ಲಿಯೇ ಉಳಿಯುವರೆಂಬುದನ್ನು ಅಲಕ್ಷಿಸಲಾಗದು, ಎಂದೆ.

ಅಲ್ಲಿಗೆ ಭಾರತದ ವಿಭಜನೆಯನ್ನು ತಪ್ಪಿಸುವ ಎಲ್ಲ ಪ್ರಯತ್ನಗಳ ಅಧ್ಯಾಯ ಮುಗಿಯಿತು. ಹಿಂದುಸ್ಥಾನದ ಅಖಂಡತೆ ಅಂತ್ಯಗೊಂಡಿತು. ಪಂಜಾಬು, ಬಂಗಾಲಗಳಲ್ಲಿ ಲಕ್ಷಾಂತರ ಹಿಂದುಗಳ ಕಗ್ಗೊಲೆ ನಡೆಯಿತು. ಅಬಲೆಯರ ಹಾಗೂ ಅಸಹಾಯ ಹಸುಳೆಗಳ ಚೀತ್ಕಾರ ಮುಗಿಲುಮುಟ್ಟಿತು. ರಕ್ತದ ಕೋಡಿ ಹರಿಯಿತು. ನಿರಾಶ್ರಿತರ ನಿರಂತರ ಪ್ರವಾಹ ಪ್ರಾರಂಭವಾಯಿತು.

ಆದರೂ, ಭಾರತಕ್ಕೆ ಸ್ವಾತಂತ್ರ್ಯ ಬಂತು ಎಂಬುದನ್ನು ನಾವು ಮರೆಯಬಾರದು. ಅಂದು ಬಹುಪಾಲು ಪುಣ್ಯಕ್ಷೇತ್ರಗಳೂ ತೀರ್ಥಕ್ಷೇತ್ರಗಳೂ ಮುಕ್ತವಾದವು.

**ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ**

**ನರ್ಮದೇ ಸಿಂಧು....**

ಸಿಂಧು !

ಎಂಥ ಸುಂದರ ಮಂಗಳಕರ ಹೆಸರು !

ಎಲ್ಲಿದೆ ಅದು ?

ಕೊನೆಯ ಕ್ಷಣದಲ್ಲಿ ಭಾರತದ ಆಡಳಿತಸೂತ್ರ ವಹಿಸಿದವರು ಕರ್ತವ್ಯ ಭ್ರಷ್ಟರಾಗಿ ಮಾತೃಭೂಮಿಯನ್ನು ತುಂಡರಿಸಿದರು ಎಂಬುದನ್ನು ಹೇಗೆ ಮರೆಯುವುದು ?

ಗಂಗೆ, ಯಮುನೆ, ಗೋದಾವರಿ, ಸರಸ್ವತಿ, ನರ್ಮದೆ, ಕಾವೇರಿಗಳ ಭೂಮಿ ಮುಕ್ತಾಯವಾಯಿತು. ಆದರೆ ಸಿಂಧು ?

ಎಲ್ಲಿದೆ ಆ ಸಿಂಧು ? ಅಂಬೀತಮೆ, ನದೀತಮೆ, ದೇವೀತಮೆ ಸಿಂಧು ?

ಈಗ ಕಳೆದುಹೋದುದನ್ನು ಮರೆತುಬಿಡೋಣ ಎಂದು ಕೆಲವರು ಉಪದೇಶಿಸುತ್ತಾರೆ. ಅವರಿಗೆ ನನ್ನ ಮನಸ್ಸು ಗೊತ್ತಿಲ್ಲ. ಅದಕ್ಕಾಗಿ ಅವರನ್ನೊಮ್ಮೆ ಕೇಳುತ್ತೇನೆ :

ಏನೆಂದಿರಿ ? ನಾವು ಸಿಂಧುವನ್ನು ಮರೆಯಬೇಕೆ ? ಯಾರು ಯಾರೋ ಅನಾಮಧೇಯರು, ಟಾಂ-ಡಿಕ್‌ಗಳು, ಅಹಮದ್ - ಮೊಹಮದ್‌ಗಳು ಕೋಪಿಸಿಕೊಳ್ಳುತ್ತಾರೆ ಎಂಬುದಕ್ಕಾಗಿ ನಾವು ಸಿಂಧುವನ್ನು ಮರೆಯಬೇಕೆ ? ಇಲ್ಲ, ಸಾಧ್ಯವಿಲ್ಲ ! ಇಡೀ ಜಗತ್ತೇ ನಮ್ಮನ್ನು ದ್ವೇಷಿಸಿದರೂ, ಇಡೀ ಜಗತ್ತನ್ನೇ ನಾವು ದ್ವೇಷಿಸಬೇಕಾಗಿ ಬಂದರೂ ಸಿಂಧುವನ್ನು ನಾವು ಮರೆತುಬಿಡಲು ಸಾಧ್ಯವಿಲ್ಲ. ಮರೆತರೆ, ಹಾಯ್, ನಮ್ಮನ್ನು ನಾವೇ ಮರೆತಂತೆ ! ಸಿಂಧುವಿರದೆ ಹಿಂದು ? ಅಸಾಧ್ಯ, ಅಕಲ್ಪನೀಯ ! ಅದು ಅರ್ಥವಿಲ್ಲದ ಶಬ್ದದಂತೆ, ಪ್ರಾಣವಿಲ್ಲದ ದೇಹದಂತೆ ! ಒಬ್ಬನೇ ಒಬ್ಬ ಹಿಂದು ಬದುಕಿರುವವರೆಗೂ ಸಿಂಧುವನ್ನು ಮರೆಯಲಾರ.

ಯಾವ ಅಕ್ಷಯಧಾರೆಯ ಪುಣ್ಯಪ್ರಶಸ್ತ ತೀರದಲ್ಲಿ ನಮ್ಮ ವೇದಕಾಲೀನ ದ್ರಷ್ಟಾರರು ಸತ್ಯದ ಸಾಕ್ಷಾತಾರ ಪಡೆದರೋ, ಅಪೌರುಷೇಯ ವಾಙ್ಮಯಗಳನ್ನು ಹಾಡಿದರೋ, ಸೂರ್ಯೋಪಾಸನೆ, ಜಲೋಪಾಸನೆ, ಸಮಸ್ತ ಸೃಷ್ಟಿಯ ಉಪಾಸನೆ ಮಾಡಿದರೋ, ಯಾವ ನದಿಗೆ ದೇವಾಧಿದೇವತೆಗಳ ಸಾಲಿನಲ್ಲಿ ಉನ್ನತ ಸ್ಥಾನ ಕಲ್ಪಿಸಿಕೊಟ್ಟರೋ, ಯಾವ ಜಲಪ್ರವಾಹದ ಪ್ರೀತಿಭಕ್ತಿಗಳ, ಗೌರವ ಪ್ರಶಸ್ತಿಗಳ ಪ್ರತೀಕವಾಗಿ ವೈದಿಕ ವಾಙ್ಮಯದ ಸಾಲು ಸಾಲುಗಳೂ ಚಿರ ಸೌಂದರ್ಯದಿಂದಲೂ ಸ್ವರಮಾಧುರ್ಯದಿಂದಲೂ ಅನುರಣಿಸುತ್ತಿವೆಯೋ..... ಓ ಸುರಭಿಸದೃಶ ಪರಮಪಾವನೆ ಸಿಂಧು ! ನಿನ್ನನ್ನು ಹೇಗೆ ಮರೆಯಬಲ್ಲೆವು? ನೀನಿಲ್ಲದೆ ನಾವು ಹಿಂದುಗಳೇ ಅಲ್ಲ. ಓ ಸುರಸರಿತೆ, ಸುರಸೇವಿತೆ, ಶ್ರುತಿಸ್ಮೃತಿ ನಿನಾದಿತೆ; ಸ್ರೋತಸ್ವಿನಿ, ಪಯಸ್ವಿನಿ, ಶಕ್ತಿದಾಯಿನಿ, ಚೈತನ್ಯವಾಹಿನಿ ಸಿಂಧು ! ಎಂದೆಂದಿಗೂ ನಾವು ನಿನ್ನನ್ನು ಮರೆಯಲಾರೆವು.







## ಹವಿಸ್ಸು ಇಪ್ಪತ್ತನಾಲ್ಕು

' . . 1906ರಲ್ಲಿ ನನ್ನ ತಮ್ಮ ಸ್ವಾತಂತ್ರ್ಯವೀರ ತಾತ್ಯಾರಾವ್ ಸಾವರಕರ್ ವಿಲಾಯಿತಿಗೆ ಹೊರಟಾಗಿನಿಂದ ಅಭಿನವಭಾರತದ ಕಾರ್ಯದ ಭಾರವನ್ನು ನಾನೇ ಹೊರಬೇಕೆಂದು ಮನಸ್ಸಿಗೆ ಬಲವಾಗಿ ಅನ್ನಿಸಿತು ಆಗಿನಿಂದ ನನ್ನ ಅತ್ಯಲ್ಪ ಬುದ್ಧಿಗೂ ಶಕ್ತಿಗೂ ತೋಚಿದಂತೆ ಸಾಧ್ಯವಾದುದೆಲ್ಲವನ್ನೂ ನನ್ನೆಲ್ಲ ಶಕ್ತಿ ಸುರಿದು ಮಾಡತೊಡಗಿದೆ . . ನನ್ನ ವೈಯಕ್ತಿಕ ಮತ್ತು ಸಾರ್ವಜನಿಕ ಜೀವನದಲ್ಲಿ ಅನೇಕ ಕೊರತೆಗಳು ಕಂಡಿರಬಹುದು, ತಪ್ಪುಗಳೂ ಆಗಿರಬಹುದು , ಅನೇಕರ ಮನಸ್ಸು ಅದರಿಂದ ದುಃಖಕ್ಕೆ ಈಡಾಗಿರಬಹುದು ; ನಾನು ಅನೇಕರನ್ನು ವಿರೋಧಿಸಿರಲೂ ಸಾಕು, ಅಂಥವರೆಲ್ಲರೂ ಅದನ್ನು ನನ್ನ ಜನ್ಮಕ್ಕಂಟಿದ ದೋಷಗಳೆಂದು ತಿಳಿದು ನನ್ನನ್ನು ಕ್ಷಮಿಸಬೇಕು. ಕರ್ತವ್ಯ ಪಾಲನೆಯ ಕಠಿನ ಕಾರ್ಯವನ್ನು ನಾನು ಕೈಗೊಂಡಂದಿನಿಂದಲೂ ಇಂದಿನವರೆಗೆ ಮಾಡಿದ ರಾಷ್ಟ್ರದೇವತೆಯ ಸೇವೆಯ ಲೆಕ್ಕವನ್ನು ಆತನ ಚರಣಗಳಿಗೆ ಇಂದು ಒಪ್ಪಿಸುತ್ತಿದ್ದೇನೆ. ಯಾವ ರಾಷ್ಟ್ರದೇವತೆಯ ಚರಣಗಳನ್ನು ಸ್ಪರ್ಶಿಸಿ ನಾನು ಪ್ರತಿಜ್ಞೆ ಕೈಗೊಂಡೆನೋ, ಆ ಚರಣಗಳೇ ನನ್ನ ಪ್ರತಿಜ್ಞಾಪಾಲನೆಗೂ ಕಾರಣ ಆ ಚರಣಗಳಿಗೆ ನನ್ನ ಅನಂತಾನಂತ ನಮಸ್ಕಾರಗಳು '

ಸಾಂಗಲಿಯ ಮರಾಠಿ ಪತ್ರಿಕೆ 'ವಿಕ್ರಮ'ದ 6- 1- 1945ರ ಸಂಚಿಕೆಯಲ್ಲಿ ಮೇಲ್ಕಂಡ ಪತ್ರ ಓದಿದೆ ನಮ್ಮ ಅಣ್ಣ ಬಾಬಾ ಬರೆದಿದ್ದ ಪತ್ರ ಅದು ಆಗ ಅವನು ರೋಗಪೀಡಿತನಾಗಿ ಸಾಂಗಲಿಯ ಪರಾಂಜಪೆಯವರ ಮನೆಯಲ್ಲಿ ಹಾಸಿಗೆ ಹಿಡಿದು ಮಲಗಿದ್ದ ಅವನಿನ್ನು ಹೆಚ್ಚು ಕಾಲ ಬದುಕುವ ಆಸೆಯಿಲ್ಲ ಎಂದು ನಿಶ್ಚಿತವಾಯಿತು ಜೀವನಪೂರ್ತಿ ಸ್ವಾತಂತ್ರ್ಯದೇವಿಯ ಸೇವೆಯಲ್ಲೆ ತಲ್ಲೀನವಾಗಿದ್ದ ಬಾಳು ಅವನದು. ಕಲ್ಪನೆಗೆ ಎಟುಕದಂಥ ಕಷ್ಟ, ಯಾತನೆ, ಪರಿಶ್ರಮಗಳಿಂದ ಅವನ ಭೀಮಕಾಯವೂ ಜರ್ಝರಿತವಾಗಿತ್ತು. ಆ ಅನುಪಮ ದೇಶಭಕ್ತನ ಕೊನೆಗಾಲ ಸಮೀಪಿಸಿತ್ತು ಅವನ ಸ್ಥಿತಿಗತಿಗಳು ಆಪ್ತೇಷ್ಟರ ಮೂಲಕ ನನಗೆ ವರದಿಯಾಗತೊಡಗಿದವು

ಬಾಬಾ ತನ್ನ ದೇಶಸೇವಾವ್ರತದಲ್ಲಿ ಅನೇಕರಿಂದ ಸಹಾಯ ಸಹಕಾರಗಳನ್ನು ಪಡೆದಿದ್ದ. ಅದನ್ನೇ ಮನಸ್ಸಿಗೆ ಹಚ್ಚಿಕೊಂಡು, 'ನನ್ನ ಸಹಕಾರಿಗಳ ಋಣ ತೀರಿಸದೆ ನಾನು ಸಾಯುತ್ತಿದ್ದೇನೆ!' ಎಂದು ಚಡಪಡಿಸುತ್ತಿದ್ದ 'ಸಹಕಾರಿಗಳು ಸಹಾಯ ನೀಡಿದ್ದರೇನಾಯಿತು, ಅವರ ಕರ್ತವ್ಯ ಅವರು ಮಾಡಿದರು, ನಿಮ್ಮ

ಕರ್ತವ್ಯ ನೀವು ಮಾಡಿದಿರಿ' ಎಂದು ಪಕ್ಕದಲ್ಲಿದ್ದವರು ಸಮಾಧಾನ ಹೇಳಿದರೂ ಅವನ ಮನಸ್ಸಿಗೆ ಶಾಂತಿಯಿಲ್ಲ. 'ರಾಷ್ಟ್ರದ ಕೆಲಸ ಎಂದರೆ ನನ್ನ ಮನೆಯ ಕೆಲಸವಿದ್ದಂತೆ. ಅದಕ್ಕೆ ಜನ ನೀಡಿದ ಸಹಾಯ ನಿಜಕ್ಕೂ ಉಪಕಾರ. ಅದನ್ನು ಹೇಗೆ ತೀರಿಸಲಿ ?' ಎಂದು ಕೊರಗುತ್ತಿದ್ದ. ಪಕ್ಕದಲ್ಲಿ ತನ್ನ ಸೇವೆಗೆ ಕುಳಿತ ದತ್ತಾತ್ರೇಯ ಗೋಖಲೆಯೊಡನೆ, 'ದತ್ತಾ, ಅನೇಕರು ನೆರವಾದುದರಿಂದ ನಾನು ಬದುಕಿದ್ದೇನೆ! ನಾನು ಮಾಡಿದ ದೇಶ ಸೇವೆ ನಿಜಕ್ಕೂ ಅವರು ಮಾಡಿದ್ದೇ ಆಗಿದೆ. ಅವರ ಸಲುವಾಗಿ ಈಗ ಕಣ್ಣೀರು ಸುರಿಸುತ್ತಿದ್ದೇನೆ. ಈಗ ನೀನೇ ಅದಕ್ಕೆ ಸಾಕ್ಷಿ. ದತ್ತಾ, ಜನರ ಉಪಕಾರವನ್ನು ನಾನು ಮರೆತಿಲ್ಲ' ಎಂದು ಹಲುಬುತ್ತಿದ್ದ. ಅವನ ಕಣ್ಣಿನಿಂದ ಧಾರಾಕಾರವಾಗಿ ನೀರು ಹರಿದು ತಲೆದಿಂಬು ತೊಯ್ದುಹೋಗುತ್ತಿತ್ತು.

ನಾನು ಫೆಬ್ರವರಿ 8ರಂದು ಸಾಂಗಲಿಗೆ ಹೋದೆ. ಬಾಬಾನ ಜೀರ್ಣ ಶರೀರದ ಮೇಲೆ ಸೂಕ್ಷ್ಮವಾಗಿ ದೃಷ್ಟಿ ಹಾಯಿಸಿದೆ. ಪಕ್ಕದಲ್ಲಿ ಕುಳಿತು, ಕೈಹಿಡಿದು ನಾಡಿಯ ಮೇಲೆ ಬೆರಳಿಟ್ಟೆ; ಕ್ಷೀಣವಾಗಿ ಆಡುತ್ತಿತ್ತು. 'ಬಾಬಾ, ಈಗ ಮಾತನಾಡಬೇಡ' ಎಂದು ಹೇಳಿ, ಬಹಳ ಹೊತ್ತು ನೀರವವಾಗಿ ಕುಳಿತಿದ್ದೆ. 'ತಾತ್ಯಾ, ಇನ್ನು ಊಟಮಾಡು ಬಾ' ಎಂದು ಬಾಬಾ ಹೇಳಿದಾಗಲೇ ನನಗೆ ಎಚ್ಚರ! ಬಾಬಾ ನನ್ನನ್ನು ನೋಡಿ, ತೃಪ್ತಿಯ ನಗೆ ಸೂಸಿದ. ಮರುದಿನ ಬೆಳಿಗ್ಗೆ ನಾನು ಮುಂಬೈಗೆ ಹಿಂದಿರುಗಿದೆ. ಕೆಲ ದಿನಗಳ ನಂತರ ಸಾಂಗಲಿಗೆ ಒಂದು ಪತ್ರ ಬರೆದೆ :

'ಬಾಬಾ, ನಾವು ಮೂವರು ಅಣ್ಣತಮ್ಮಂದಿರ ಜೀವನಕಾರ್ಯವೂ ಏಕರೂಪ, ಏಕಪ್ರಾಣ ಎಂಬಂತಿದೆ. ನಾವು ನಮ್ಮ ತಲೆಮಾರಿನಲ್ಲಿ ನಮ್ಮ ವಂಶದ ಋಣ ತೀರಿಸಿದ್ದೇವೆ. ಭಾರತದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರದಿಡಬೇಕಾದ ಅಧ್ಯಾಯ ಇದು. ಇದಕ್ಕೆ ''ಸಾವರಕರ ಯುಗ'' ಎಂಬ ಹೆಸರನ್ನು ಈಗಾಗಲೇ ನಮ್ಮ ಶತ್ರುಗಳು ಬಳಕೆಗೆ ತಂದಿದ್ದಾರೆ!

'ಕರ್ತವ್ಯದ ಬಗ್ಗೆ ಹಿಂದಿನ ಕಾಗದದಲ್ಲಿ ನಾನು ಬರೆದಿದ್ದೆ. ಆದರೆ ಫಲದ ವಿಷಯ ಹೇಳಿರಲಿಲ್ಲ. ಏಕೆಂದರೆ, ''ಮಾ ಫಲೇಷು ಕದಾಚನ.'' ಆದರೆ, ಸಾಪೇಕ್ಷಿಕವಾಗಿ ಹೇಳಬೇಕಾದರೆ ನಾವು ನಮ್ಮ ಸಹಕಾರಿಗಳೊಡನೆ ಎರಡು ಬಾರಿ ಇಡೀ ರಾಷ್ಟ್ರದ ಜೀವನಪ್ರವಾಹವನ್ನು ಪ್ರತಿಕೂಲತೆಯಿಂದ ಅನುಕೂಲತೆಯ ಕಡೆಗೆ ತಿರುಗಿಸಿದ್ದೇವೆ. ''ಸ್ವಾತಂತ್ರ್ಯ ಲಕ್ಷ್ಮೀ ಕೀ ಜಯ್'' ಎನ್ನುವ ಮೊದಲ ಕ್ರಾಂತಿಘೋಷಣೆ ನಮ್ಮದು; ಮತ್ತು ಅದನ್ನು ಪರಿಪೂರ್ಣಗೊಳಿಸುವ, ''ಹಿಂದುಸ್ಥಾನ ಹಿಂದುವೋಂಕಾ, ನಹೀ ಕಿಸೀಕೇ ಬಾಪಕಾ'' ಎನ್ನುವ ಎರಡನೆಯ ಕ್ರಾಂತಿಘೋಷಣೆಯೂ ನಮ್ಮದೇ! ನಾವು ಎರಡು ಬಾರಿ ರಾಷ್ಟ್ರದಲ್ಲಿ ವಿಚಾರ ಕ್ರಾಂತಿ ಮತ್ತು ಆಚಾರಕ್ರಾಂತಿಗಳನ್ನು ಕಾರ್ಯರೂಪಕ್ಕೆ ತಂದಿದ್ದೇವೆ.....

'ಈಗ ನಾನು ಹೇಳಬೇಕಾದ ಮೊದಲ ಸಂಗತಿ ಎಂದರೆ – ಈಗ ಪಕ್ಕದಲ್ಲೆ ಕೈಹಿಡಿದು ನಿಂತಿರುವ ಮೃತ್ಯು ಶತ್ರುವಾಗಿರದೆ, ಮಿತ್ರನಂತೆ ಭೇಟಿಗೆ ಬಂದಿದೆ. ಜನ್ಮ ಸಾರ್ಥಕವಾಯಿತು ; ಬಾಲ್ಯದಲ್ಲಿ ತೊಟ್ಟ ಸ್ವಾತಂತ್ರ್ಯಯಜ್ಞದ ಕಂಕಣವನ್ನು ನಾವು ಜೀವನಪೂರ್ತಿ ಬಿಡಲಿಲ್ಲ. ಒಂದು ಕಡೆ ಅಂದಮಾನ್ ; ಇನ್ನೊಂದು ಕಡೆ ಲಕ್ಷಾಂತರ ಸ್ವದೇಶ ಬಾಂಧವರ ಜಯಘೋಷದೊಂದಿಗೆ ಹಿಮಾಲಯದ ಶಿಖರಗಳಿಂದ ಹಿಡಿದು ಕಾಶ್ಮೀರ, ಹರಿದ್ವಾರ, ಆಸಾಂವರೆಗೆ ಹಾರಾಡುವ ಕೀರ್ತಿಧ್ವಜ! ಆದರೆ ಘನಘೋರ ದುಃಖದಲ್ಲಾಗಲೀ, ಅತ್ಯಂತ ಸುಖದಲ್ಲಾಗಲೀ ನಾವು ಕೈಗೊಂಡ ಕಾರ್ಯವನ್ನು, ಹಿಂದು ಸ್ವಾತಂತ್ರ್ಯದ ಕ್ರಾಂತಿಧ್ವಜವನ್ನು ಕೈಬಿಡಲಿಲ್ಲ. ಜೀವನವಿಡೀ ಮನುಷ್ಯಮಾತ್ರರಿಗೆ ಸಾಧ್ಯವಿದ್ದಷ್ಟೂ ಹೋರಾಟ ನಡೆಸಿದ್ದೇವೆ. ಮೂವತ್ತು ವರ್ಷ ವಯಸ್ಸಿನೊಳಗೇ ಫಾಸಿಗೆ ಕುತ್ತಿಗೆ ಕೊಡಬೇಕಾದ ಸಂದರ್ಭ ಬಂದರೂ ಹೋರಾಡುತ್ತಲೇ ಇದ್ದೆವು.

ಅದೆಷ್ಟು ಸಮಾಧಾನದ ಸಂಗತಿ! ''ಕರ್ಮಣ್ಯೇವಾಧಿಕಾರಸ್ತೇ'' - ಆದ್ದರಿಂದ ಫಲದ ವಿಷಯ ನಾನು ಹೇಳುವುದಿಲ್ಲ.

'ನಾವು ಮೊದಲು ಹೊತ್ತಿಸಿದ ಸ್ವಾತಂತ್ರ್ಯ ಯಜ್ಞದ ಅಗ್ನಿ ಇಂದು ದೇಶದಾದ್ಯಂತ ಧಗಧಗಿಸುತ್ತಿದೆ. ನಮ್ಮಂತೆ ನಿರಂತರ ಅರವತ್ತು ವರ್ಷಗಳ ಕಾಲ ಹೋರಾಡುತ್ತಾ ಮಡಿಯುವವರ ದೇಹವೆಂದರೆ ಕೇವಲ ಮಾನವೀಯವಲ್ಲ, ದೇವರ ಕೈಯೊಳಗಿನ ದಿವ್ಯ ವಜ್ರದ ಅಂಶವೇ ಸರಿ!'

'ಆದ್ದರಿಂದ ಪರಮ ಸಾರ್ಥಕತೆ ಸಾಧಿಸಿದ ದೇಹದ ದಿವ್ಯ ಸಮಿಧೆ ಇಂದು ಅದೇ ಮಹಾ ಯಜ್ಞದೊಳಗೆ ಪೂರ್ಣಾಹುತಿಯ ರೂಪದಲ್ಲಿ ಬೀಳುತ್ತಿರುವುದು ಅದೆಷ್ಟು ಸಮಾಧಾನದ ಸಂಗತಿ! ಮಿತ್ರನಂತೆ ಭೇಟಿಯ ಸಲುವಾಗಿ ಬಂದಿರುವ ಮೃತ್ಯುವನ್ನು ಸ್ವಾಗತಿಸೋಣ. ''ಯೋಗಶ್ಚಿತ್ತವೃತ್ತಿ ನಿರೋಧಃ'' ಎಂಬ ಸೂತ್ರವಿದೆಯಷ್ಟೆ. ಚಿತ್ತವೃತ್ತಿನಿರೋಧದಿಂದ ಸಾಧಿಸಿದ ಸಮಾಧಿಯಲ್ಲಿ - ತನ್ನ ಮರಣವನ್ನು ತನ್ನ ಕಣ್ಣಿಂದಲೇ ಕಾಣುವುದಕ್ಕಿಂತ ದೊಡ್ಡ ಹಬ್ಬ ಯಾವುದು ? ಕೀರ್ತಿಯ ಆಸೆಯಿಲ್ಲದೆ ಕರ್ತವ್ಯದಲ್ಲಿ ಮನಸ್ಸು ನೆಟ್ಟು ಇಡೀ ಜೀವನವನ್ನು ಭಗವಂತನ ಸೇವೆಯಲ್ಲಿ ಸವೆಸಿದ ವೀರನಿಗೆ ಯೋಗ ನಿದ್ರೆಯ ಸುಖಸಮಾಧಿಯಲ್ಲಿ ವಿಲೀನಗೊಳ್ಳುವ ಅಧಿಕಾರವಿದೆ.

'ಹಿಂದೆ ಅನೇಕ ಬಾರಿ ಮೃತ್ಯುವಿನ ಛಾಯೆ ಕವಿದಿತ್ತು. ಆಗ ಸಹ ನೀನು ಅದಕ್ಕೆ ಸ್ವಾಗತ ಬಯಸಿದೆ. ಆದರೆ ಆಗಿನ ಸ್ವಾಗತ ಸವಾಲಿನ ಧಾಟಿಯದು - ''ಬರುವುದಾದರೆ ಬಾ ನೋಡುತ್ತೇನೆ, ನಿನಗೆ ಯಾರು ಹೆದರುತ್ತಾರೆ!'' ಎಂಬ ಧ್ವನಿಯದು. ಇಂದು ಐಹಿಕ ಜಗತ್ತಿನ ಸುಖ, ಸಾರ್ಥಕತೆಗಳು ನಿನಗೆ ಲಭಿಸಿವೆ. ಸ್ವಜನರ, ಆಪ್ತೇಷ್ಟರ ಭೇಟಿ ಆಗಿದೆ. ಕಾರಾಗೃಹದಲ್ಲಿ ಅತೃಪ್ತವಾಗಿದ್ದ ಕಾರ್ಯದಾಹವು, ಇಂದು ಭಾರತದ ಉದ್ದಗಲಕ್ಕೂ ವ್ಯಾಪಿಸಿರುವ ಯುಗಪ್ರವರ್ತಕ ಕಾರ್ಯದ ರೂಪದಲ್ಲಿ ಸಿಂಧು - ಗಂಗೆ - ಯಮುನೆಯ ರಿಂದ ಹಿಡಿದು ದಕ್ಷಿಣ ಸಮುದ್ರದವರೆಗಿನ ಎಲ್ಲ ನದಿಗಳ ಪುಣ್ಯೋದಕವನ್ನೂ ಕುಡಿದು, ತಣಿಯತೊಡ ಗಿದೆ. ಈಗ ಮೃತ್ಯು ತಾನಾಗಿ ಬರದಿದ್ದರೂ, ನೀನಾಗಿಯೇ ಮಹಾಪ್ರಸ್ಥಾನ ಹೊಂದುವ ಗಳಿಗೆ ಬಂದಿದೆ. ಆದ್ದರಿಂದ ಪೂರ್ಣ ಸಮಾಧಾನದಿಂದ ಸ್ನೇಹಿತನ ಕೈಹಿಡಿಯುವಂತೆ - ಸವಾಲಿನ ಭಾವನೆಯಿಂದಲ್ಲ, ಸಂತೋಷದಿಂದ - ಮೃತ್ಯುವಿನ ಕೈಹಿಡಿ. ಹೇ, ಕರ್ಮವೀರ! ಯಾವುದರಲ್ಲಿ ಹಿಂದಾಗಲೀ ಮುಂದಾಗಲೀ ಉಳಿಯದೋ, ತೃಷೆಗಳೆಲ್ಲವೂ ತೃಪ್ತಿಗೊಳ್ಳುವುವೋ, ಕ್ಷಣಾರ್ಧದಲ್ಲಿ ಜಗತ್ತಿನ ಜಂಜಡಗಳು, ಲೋಭ ಕ್ಷೋಭೆಗಳು ಅಳಿದುಹೋಗಿ ಕೇವಲ ಶಾಂತತೆಯೊಂದೇ ಉಳಿಯುತ್ತದೋ, 'ನಾನು' ಎನ್ನುವುದು ಸಹ ಮರೆಯಾಗುತ್ತದೋ, ಆ ಅನಂತಾನಂತದಲ್ಲಿ ಈಗ ಪೂರ್ಣ ಸಮಾಧಾನದಿಂದ ವಿಲೀನನಾಗು!

'ಓಂ ಶಾಂತಿಃ ಶಾಂತಿಃ ಶಾಂತಿಃ!'

1945 ಮಾರ್ಚಿ 16, ಮಧ್ಯಾಹ್ನ 2-15ಕ್ಕೆ ಕ್ರಾಂತಿವೀರ ಬಾಬಾ ವ್ಯೋಮಗಾಮಿಯಾದ ; ಅನಂತಾ ನಂತದಲ್ಲಿ ವಿಲೀನನಾದ. ಅವನ ಬಾಯಿಂದ ಹೊರಟ ಕೊನೆಯ ವಾಕ್ಯದಲ್ಲೂ ರಾಷ್ಟ್ರದ ಚಿಂತೆಯೇ ತುಂಬಿತ್ತು. ನೇಪಾಳಕ್ಕೆ ಕಮ್ಯುನಿಸ್ಟ್ ಆಕ್ರಮಣದ ಭೀತಿ ಕವಿಯುತ್ತಿದ್ದ ಬಗ್ಗೆ ಬಾಬಾ ಆತಂಕ ವ್ಯಕ್ತಪಡಿಸಿದ್ದ! ಆ ಅಪ್ರತಿಮ ಸ್ವಾತಂತ್ರ್ಯಯೋಧ ಕಣ್ಮರೆಯಾದ.

ನಾಡಿನ ಎಲ್ಲೆಡೆಗಳಿಂದ ಸಂತಾಪಸೂಚನೆಯ ತಂತಿಗಳು ಬಂದವು. ಮಹಾತ್ಮಾ ಗಾಂಧಿಯವರು ಸಹ ಒಂದು ಪತ್ರ ಬರೆದಿದ್ದರು. ಆದರೆ, ಅದು ನನ್ನ ಕೈಗೆ ತಡವಾಗಿ ಸೇರಿತು ; ಏಕೆಂದರೆ ಅವರು ಬರೆದಿದ್ದುದು ರತ್ನಾಗಿರಿಯ ಹಳೆಯ ವಿಳಾಸಕ್ಕೆ! ನಾನು ಬಿಡುಗಡೆ ಹೊಂದಿ 8 ವರ್ಷಗಳಾಗಿತ್ತು ; ಆಗಿನಿಂದ ಮುಂಬೈನ

'ಸಾವರಕರ್ ಸದನ'ದಲ್ಲಿ ವಾಸಿಸುತ್ತಿದ್ದೆ. ಜಗತ್ತಿನಾದ್ಯಂತ ನಾನಾ ದೇಶಗಳ ನಾಯಕರಿಗೆ, ರಾಜಕಾರಣಿಗಳಿಗೆ ಆ ಸಂಗತಿ ಗೊತ್ತಿತ್ತು. ದಿನಬೆಳಗಾದರೆ ಅಮೆರಿಕ, ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ, ಜಪಾನುಗಳ ಪತ್ರಕರ್ತರು ಮನೆಯ ಬಾಗಿಲಲ್ಲಿ ಹಾಜರಾಗುತ್ತಿದ್ದರು. ಅಂದಮೇಲೆ, ನಮ್ಮ ದೇಶದಲ್ಲಿಯೇ ಇದ್ದ ಗಾಂಧಿಯವರಿಗೆ ನನ್ನ ವಿಳಾಸ ತಿಳಿಯದಿದ್ದುದು ಆಶ್ಚರ್ಯಕರ. ನಾನು ಅವರಿಗೆ ಧನ್ಯವಾದ ಅರ್ಪಿಸಿ ಹಿಂದಿಯಲ್ಲಿ ಉತ್ತರ ಬರೆದೆ.

★ ★ ★

1948 ಜನವರಿ 31ರಂದು ಒಂದು ಗುಂಪು ಬಾಳನ ಮನೆಯನ್ನು ಸುತ್ತುಗಟ್ಟಿತು. ಬಾಗಿಲುಗಳನ್ನೂ ಕಿಟಕಿಗಳನ್ನೂ ಒಡೆಯಲಾರಂಭಿಸಿತು. ಬಾಳಾ ಅವರಿಗೆ ಸಮಾಧಾನ ಹೇಳಲು ಹೊರಗೆ ಬಂದು ಕೈಜೋಡಿಸಿದ. ಅದಕ್ಕೆ ಉತ್ತರವಾಗಿ ಕಲ್ಲುಗಳಿಂದ ಹೊಡೆದು ಅವನನ್ನು ನೆಲಕ್ಕೆ ಕೆಡವಿದರು. ಅವನ ತಲೆ ತೂತಾಗಿತ್ತು. ಬಾಳ ರಕ್ತದ ಮಡುವಿನಲ್ಲಿ ಪ್ರಜ್ಞಾಶೂನ್ಯನಾಗಿ ಬಿದ್ದ.

ಆ ಜನ ಯಾರು? ಅಹಿಂಸಾವಾದಿಗಳಾದ ಕಾಂಗ್ರೆಸಿಗರು! ಬ್ರಿಟಿಷರ ವಿರುದ್ಧ ಹುಲ್ಲುಕಡ್ಡಿ ಎತ್ತಿದರೆ, ಎಲ್ಲಿ ಅವರಿಗೆ ನೋವಾದೀತೋ ಎಂದು, ತಮ್ಮ 'ಅಹಿಂಸಾ ವ್ರತ'ಕ್ಕೆ ಎಲ್ಲಿ ಭಂಗ ಬಂದೀತೋ ಎಂದು ಸಂಕೋಚ ಪಡುತ್ತಿದ್ದ ಕಾಂಗ್ರೆಸ್ ಪಕ್ಷದವರು!

ಕಾರಣವೇನು? ಹಿಂದಿನ ದಿನ ಮಹಾತ್ಮಾ ಗಾಂಧಿಯವರ ಹತ್ಯೆಯಾಗಿತ್ತು. ಅದನ್ನು ಮಾಡಿದವನು ನಥುರಾಮ ಗೋಡ್ಸೆ. ಅವನು,ಹಿಂದು ಮಹಾಸಭೆಯ ಕಾರ್ಯಕರ್ತ ಆಗಿದ್ದ; ಅದಕ್ಕಾಗಿ ಹಿಂದು ಮಹಾಸಭೆಯವರನ್ನೆಲ್ಲ ಕೊಲ್ಲಬೇಕು, ಹೊಡೆಯಬೇಕು! ಅವನು ಮಹಾರಾಷ್ಟ್ರೀಯ ಬ್ರಾಹ್ಮಣ ಆಗಿದ್ದ; ಆದ್ದರಿಂದ ಮಹಾರಾಷ್ಟ್ರದ ಬ್ರಾಹ್ಮಣರಿಗೆಲ್ಲ ಬೆಂಕಿ ಹಚ್ಚಬೇಕು; ಅವರ ಆಸ್ತಿಪಾಸ್ತಿ, ಮನೆಮಠ, ಅಂಗಡಿ ಮುಂಗಟ್ಟು ಎಲ್ಲವನ್ನೂ ಸೂರೆಗೊಳ್ಳಬೇಕು ; ಅವರ ಹೆಂಗಸರು ಮಕ್ಕಳನ್ನು ಹೊರಗೆಳೆದುಕೊಂಡು ಅತ್ಯಾಚಾರ ನಡೆಸಬೇಕು ; ಅವರೆಲ್ಲರ ವಂಶಕ್ಕೆ ವಂಶವನ್ನೇ ಧ್ವಂಸಗೊಳಿಸಬೇಕು. ಇದು ಅಂದಿನ 'ಅಹಿಂಸಾವಾದಿ'ಗಳು ಆಡುತ್ತಿದ್ದ ಮಾತು; ಮಾಡುತ್ತಿದ್ದ ಕೃತಿ! ತಮ್ಮ ರಾಜಕೀಯ ದ್ವೇಷಾಸೂಯೆಗಳ ಸೇಡನ್ನೆಲ್ಲ ಒಮ್ಮೆಗೇ ತೀರಿಸಿಕೊಳ್ಳಲು ಅವರು ಹೊರಟಿದ್ದರು. 'ಗಾಂಧಿ ಹತ್ಯೆ'ಯ 'ಸದವಕಾಶ'ವನ್ನು ಬಳಸಿಕೊಂಡು ಕಾಂಗ್ರೆಸ್ ಪಕ್ಷವೂ, ಕಾಂಗ್ರೆಸ್ ಸರಕಾರವೂ ಕಾಂಗ್ರೆಸಿನವರಲ್ಲದವರೆಲ್ಲರನ್ನೂ ತುಳಿದು ಹಾಕಲು, ತೊಡೆದುಹಾಕಲು ಹೊರಟಿತ್ತು, ಗಾಂಧೀಜಿಯವರ ಹೆಸರಿನಲ್ಲಿ!

ಯಾವ ಬಾಳ ತನ್ನ ಹತ್ತನೆಯ ವಯಸ್ಸಿನಿಂದಲೇ ಸ್ವಾತಂತ್ರ್ಯ ದೇವಿಯ ಭಕ್ತನಾಗಿ ದುಡಿಯಲಾರಂಭಿಸಿದನೋ, ಇಬ್ಬರು ಅಣ್ಣಂದಿರು ಅಂದಮಾನಿಗೆ ಸಾಗಿಸಲ್ಪಟ್ಟ ನಂತರವೂ ತನ್ನ ರಾಷ್ಟ್ರಸೇವಾವ್ರತವನ್ನು ಏಕನಿಷ್ಠೆಯಿಂದ ಮುಂದುವರಿಸಿದನೋ, ವಿದ್ಯಾರ್ಥಿ ದೆಸೆಯಲ್ಲಿ ಬಾರಿಬಾರಿ ಸೆರೆಮನೆಯ ವಾಸ ಹಾಗೂ ಪೊಲೀಸರ ಚಿತ್ರಹಿಂಸೆಗಳನ್ನು ಗಂಡೆದೆಯಿಂದ ಸಹಿಸಿದನೋ, ಖಾದಿ ತೊಟ್ಟುಕೊಂಡೇ ಸರಕಾರಿ ಕಟ್ಟಡಗಳನ್ನು ಪ್ರವೇಶಿಸುತ್ತೇನೆ ಎಂದು ಹಟತೊಟ್ಟು ಅದನ್ನು ಸಾಧಿಸಿದನೋ, ಸ್ವಾರ್ಥತ್ಯಾಗ ದೇಶಸೇವೆ, ಬುದ್ಧಿಶಕ್ತಿ ಪರಾಕ್ರಮಗಳಲ್ಲಿ ಅದ್ವಿತೀಯನಾಗಿ ಮಹಾರಾಷ್ಟ್ರದ ಅಪ್ರತಿಮ ವಾಗ್ಮಿ ಎನಿಸಿಕೊಂಡಿದ್ದನೋ ಅಂಥ ಬಾಳ, ತಾನು ಯಾರ ಸಲುವಾಗಿ ದುಡಿದನೋ ಅಂಥ ಸ್ವದೇಶ ಬಾಂಧವರ ಕಲ್ಲಿನೇಟುಗಳಿಂದಲೇ ಕೆಳಗೆ ಬಿದ್ದ! ಯಾವ ಪಾಪಕ್ಕೆ ಈ ಪ್ರಾಯಶ್ಚಿತ್ತ? ಬ್ರಿಟಿಷರ ದಾಸ್ಯದ ಹೊಡೆತಕ್ಕೆ ಜಗ್ಗದೆ ತಲೆ ಎತ್ತಿಕೊಂಡು ತಿರುಗುತ್ತಿದ್ದ ಆ ಸ್ವಾಭಿಮಾನಿ ಪುರುಷನು ಇಂದು ಸ್ವತಂತ್ರ ಭಾರತದಲ್ಲಿ ಸ್ವಜನರಿಂದಲೇ ಹುಚ್ಚುನಾಯಿ

ಯಂತೆ ಹೊಡೆಸಿಕೊಂಡು ಅಸಹಾಯಕನಾಗಿ ಕುಸಿದುಬಿದ್ದ !

ಬಾಳನನ್ನು ಯಾರೋ 'ಅಹಿಂಸಾವಾದಿ'ಗಳಲ್ಲದವರು ಆಸ್ಪತ್ರೆಗೆ ಸಾಗಿಸಿದರು. ಅವನ ಮನಸ್ಸಿನ ಮೇಲಾದ ಆಘಾತ ಮಾಯಲಿಲ್ಲ. ಒಂದುವರೆ ವರ್ಷ ನರಳಿ ಪಾರ್ಶ್ವವಾಯು ಪೀಡಿತನಾದ. ಹದಿನೈದು ದಿನ ಮೂರ್ಛಾವಸ್ಥೆಯಲ್ಲಿದ್ದು, ಕೊನೆಗೆ 1949ರ ಅಕ್ಟೋಬರ್ 19ರಂದು ಕೊನೆಯುಸಿರೆಳೆದ. ಅವನ ದೇಶಸೇವೆಗೆ ಎಂಥ ಪ್ರಶಸ್ತಿ !

★ ★ ★

ಗಾಂಧಿ ಹತ್ಯೆಯ ಸುದ್ದಿಯನ್ನು 1948ರ ಜನವರಿ 30ರಂದು ಸಂಜೆ ಆಕಾಶವಾಣಿ ಬಿತ್ತರಿಸಿತು. ಎರಡು ವರ್ಷದ ಹಿಂದೆ ಮದುವೆಯಾಗಿ ಗಂಡನ ಮನೆ ಸೇರಿದ್ದ ಮಗಳು ಪ್ರಭಾತ್ ಆಗ ತೌರಿಗೆ ಬಂದಿದ್ದಳು. ಅದೇತಾನೆ ಅವಳು ತನ್ನ ತಮ್ಮ ವಿಶ್ವಾಸನೊಡನೆ ವೈದ್ಯರ ಬಳಿ ಹೋಗಿದ್ದಳು. ಮುಂದಿನದನ್ನು ಅವಳೇ ಹೇಳಲಿ :

'ನನ್ನ ಮನಸ್ಸಿನಲ್ಲಿ ವಿಚಾರದ ಗೊಂದಲ ಎದ್ದಿತು. ಆಗ ತುಂತುರು ಮಳೆ ಆರಂಭವಾಗಿತ್ತು. ''ಸೀದಾ ಮನೆಗೆ ಹೋಗೋಣ ನಡಿ'' ಎಂದು ನನ್ನ ತಮ್ಮನಿಗೆ ಹೇಳಿದೆ. ಆಗ ಡಾಕ್ಟರ್ ಅಂದರು - ''ಹೆಚ್ಚೆಂದರೆ ಈಗ ಹರತಾಳ ನಡೆಯಬಹುದು. ಏನಾದರೂ ಗಲಾಟೆ ಆದರೆ, ನಾನೇ ಬಂದು ಮನೆಗೆ ತಲುಪಿಸುತ್ತೇನೆ. ಹೆದರಿಕೆಯೇಕೆ ? ತಾತ್ಯಾನ ಮಗಳಾಗಿ ನೀನು ಹೀಗೆ ಗಾಬರಿಗೊಳ್ಳುವುದೆ ?'' ಆದರೆ ನನಗೆ ಜೀವ ನಿಲ್ಲಲಿಲ್ಲ. ಬೇಗ ಬೇಗ ಮನೆ ಸೇರಿಕೊಂಡೆ. ತಾತ್ಯಾ ಯಾವುದೋ ಪುಸ್ತಕ ತಿರುವಿಹಾಕುತ್ತಾ ಗಂಭೀರವಾಗಿ ಕುಳಿತಿದ್ದರು. ನಾನು ಗಾಬರಿಯಿಂದ - ಮನೆಯ ರೇಡಿಯೋನಲ್ಲೂ ಆ ಸುದ್ದಿ ಬಂದಿದೆ ಎಂಬುದನ್ನು ಮರೆತು - ವಿಚಾರ ತಿಳಿಸಿದೆ. ''ಸರಿ, ಈಗ ನಿನ್ನ ಕೆಲಸಕ್ಕೆ ಹೋಗು'' ಎಂದರು. ಹಂತಕನು ಹಿಂದು ಮಹಾಸಭೆಯ ವ್ಯಕ್ತಿ ಎಂದು ತಿಳಿಯುತ್ತಲೇ, ನಮ್ಮ ಮನೆಗೂ ಕೇಡು ತಪ್ಪಿದ್ದಲ್ಲ ಎಂದುಕೊಂಡೆವು. ಏಕೆಂದರೆ ನಮ್ಮ ತಾತ್ಯಾ ಮೊದಲೇ ಕಾಂಗ್ರೆಸಿನ ಹಾಗೂ ಕಾಂಗ್ರೆಸ್ ಸರಕಾರದ ಅವಕೃಪೆಗೆ ಪಾತ್ರರಾಗಿದ್ದರು. ಕಾಂಗ್ರೆಸಿನ ತಪ್ಪು ನೀತಿಗಳನ್ನು ಉಗ್ರವಾಗಿ ಖಂಡಿಸುತ್ತಿದ್ದರು. ಅವರ ಮೇಲೆ ಸೇಡು ತೀರಿಸಿಕೊಳ್ಳಲು ಅನೇಕ ಅದೃಶ್ಯ ಹಸ್ತಗಳು ಸಮಯ ಕಾಯುತ್ತಿದ್ದವು. ಆಳುವ ಪಕ್ಷ ತನ್ನ ಈ ರಾಜಕೀಯ ಪ್ರತಿಸ್ಪರ್ಧಿಯ ಹೆಸರಿಗೆ ಕಲಂಕ ಹಚ್ಚಿ, ತನ್ನ ಪ್ರಭಾವ ಹೆಚ್ಚಿಸಿಕೊಳ್ಳಲು ಬಹುದಿನಗಳಿಂದ ಹಂಚಿಕೆ ಹಾಕುತ್ತಿತ್ತು.

ರಾತ್ರಿ ತಾತ್ಯಾ ಕೋಟು, ಟೋಪಿ, ಕನ್ನಡಕ, ಹಲ್ಲಿನ ಕವಳಿ ಎಲ್ಲವನ್ನೂ ಹಾಸಿಗೆಯ ಪಕ್ಕದಲ್ಲೇ ಇಟ್ಟು ಕೊಂಡು ಮಲಗಿದರು. ಬೆಳಗಿನ ಜಾವ ಮೂರು ಗಂಟೆಗೆ ಪೋಲೀಸರು ಬಂದರು. ತಾತ್ಯಾ ಎದ್ದು, ಹೊರ ಡುವ ಸಿದ್ಧತೆ ಮಾಡಿಕೊಂಡರು. ಆದರೆ ಆಗ ಕೆಳಗಿನ ಮನೆಯಲ್ಲಿದ್ದ ನಮ್ಮ ನೌಕರರಾದ ಗಜಾನನ ದಾಮಲೆ ಮತ್ತು ಅಪ್ಪಾಕಾಸಾರ್, ಇವರಿಬ್ಬರನ್ನು ಮಾತ್ರ ಪೊಲೀಸರು ಕರೆದೊಯ್ದರು.

'ಬೆಳಿಗ್ಗೆ ಊರಿನ ತುಂಬ ಗಲಭೆ ; ಪೊಲೀಸರಿಂದ ಬಂಧನಗಳು ; ಪುಂಡರಿಂದ ಲೂಟಿ, ಅಗ್ನಿಕಾಂಡ ಗಳು. ನಾವು ವಾಸಿಸುತ್ತಿದ್ದುದು ಮಹಡಿಯಲ್ಲಿ. ಕೆಳಗೆ ಭಾಸ್ಕರ ಶಿಂಧೆ, ಶಾಂತಾರಾಮ ಸಾವರಕರ್, ತೇಂಡ್ಲೋಲಕರ್ ಮುಂತಾದವರಿದ್ದರು. ಮಹಡಿಯ ಬಾಗಿಲನ್ನು ಭದ್ರವಾಗಿ ಹಾಕಿದೆವು. ತಾತ್ಯಾ ಓದಿನಲ್ಲೆ ಮಗ್ನರಾಗಿದ್ದರು. ಅಷ್ಟರಲ್ಲಿ ಹೊರಗೆ ಒಂದುವರೆ ಎರಡು ಸಹಸ್ರ ಗುಂಪು ಸೇರಿತು. ಕಲ್ಲು, ಇಟ್ಟಿಗೆಗಳು ಬೀಳಲಾರಂಭಿಸಿದವು. ಮನೆಗೆ ಬೆಂಕಿ ಹಚ್ಚಿದರೆ ಏನು ಮಾಡಬೇಕೆಂಬುದನ್ನು ತಾತ್ಯಾ ಮೊದಲೇ ಹೇಳಿದ್ದರು. ಇಡೀ ಗುಂಪಿನ ಕಣ್ಣೆಲ್ಲ ತಾತ್ಯಾ ಅವರ ಕೊಠಡಿಯ ಮೇಲೆಯೇ. ದಪ್ಪ ದಪ್ಪ ಇಟ್ಟಿಗೆ ಚೂರು,

ಕಲ್ಲು ಪಟಪಟನೆ ಹಾರಿಬರುತ್ತಿದ್ದವು. ಮೇಲಿನ ಕಿಟಕಿಯ ಗಾಜು ಸೀಳಿಕೊಂಡು ಕಲ್ಲುಗಳು ಒಳಗೆ ಬಿದ್ದವು. ಗಡಿಬಿಡಿಯಲ್ಲಿ ಅದರ ಬಾಗಿಲು ಮುಚ್ಚುವುದು ಮರೆತುಹೋಗಿತ್ತು. ತಾತ್ಯಾ ಮಂಚದ ಮೇಲೆ ಹತ್ತಿ ಬಾಗಿಲು ಹಾಕತೊಡಗಿದರು. ಕಲ್ಲಿನ ಮಳೆ ಇನ್ನಷ್ಟು ಜೋರಾಯಿತು. ಒಂದು ದೊಡ್ಡ ಕಲ್ಲು ಅವರ ಕಣ್ಣಿಗೆ ಬೀಳಬೇಕು ಅನ್ನುವಷ್ಟರಲ್ಲಿ ನಾನು ಕೈ ಅಡ್ಡ ಹಿಡಿದು ತಡೆದೆ. ಕೈಗೆ ಸ್ವಲ್ಪ ಪೆಟ್ಟಾಯಿತು.

'ಪೊಲೀಸರು ಮನೆ ಝಡತಿಗಾಗಿ ಬಂದರು. ಅವರನ್ನು ತಾತ್ಯಾ ''ಆಜ್ಞಾಪತ್ರ ತೋರಿಸಿ'' ಎಂದರು. ''ಇದು ಸ್ಪೆಶಲ್ ಕೇಸ್ ಆದ್ದರಿಂದ ವಾರಂಟ್ ತಂದಿಲ್ಲ'' ಎಂದರು ಅವರು. ಆಗ ತಾತ್ಯಾ, ''ಹಾಗಾದರೆ ನಿಮ್ಮನ್ನು ಝಡತಿ ಮಾಡುವ ಹಕ್ಕು ನನಗಿದೆ'' ಎಂದರು. ಅವರು ಪೆಚ್ಚಾಗಿ ''ಆಗಲಿ'' ಎಂದರು. ತಾತ್ಯಾ ನಕ್ಕು ಸುಮ್ಮನಾದರು, ಅಷ್ಟೆ. ಪೊಲೀಸ್ ಅಧಿಕಾರಿಗಳು ಮನೆಯ ಅಂಗುಲ ಅಂಗುಲವನ್ನೂ ಶೋಧಿಸಿ, ಕಾಗದ ಪತ್ರಗಳನ್ನು ವಶಪಡಿಸಿಕೊಂಡರು.... ''ನೀವು ಪೊಲೀಸ್ ರಕ್ಷಣೆಯಲ್ಲಿ ಶಾಂತವಾದ ಸ್ಥಳಕ್ಕೆ ಹೋಗಿ'' ಎಂದರು. ಅದಕ್ಕೆ ತಾತ್ಯಾ, ''ನಾನು ಎಲ್ಲೇ ಹೋಗಲಿ, ಅಶಾಂತಿ ಹಾಗೂ ಗಲಭೆ ಜತೆಗೆ ಬಂದೇ ಬರುತ್ತದೆ. ನಾನು ಇಲ್ಲಿಂದ ಒಂದು ಅಂಗುಲವೂ ಕದಲುವುದಿಲ್ಲ. ಜನರ ಗುಂಪನ್ನು ಚದುರಿಸಲು ಇಬ್ಬರು ಸಶಸ್ತ್ರ ಪೊಲೀಸರು ಸಾಕು. ಪೊಲೀಸರಿಗೆ ಇದು ಇಷ್ಟವಿಲ್ಲದಿದ್ದರೆ, ಏನಾಗುತ್ತದೋ ಆಗಲಿ ; ನಾನು ಧೈರ್ಯವಾಗಿ ಪ್ರಾಣ ಒಪ್ಪಿಸಲು ತಯಾರಿದ್ದೇನೆ'' ಎಂದರು. ಅದೇ ದಿನ ತಾತ್ಯಾ ಹೇಳಿಕೆ ನೀಡಿದರು : ''ಮಹಾತ್ಮಾ ಗಾಂಧಿಯವರ ಹತ್ಯೆಯ ಸುದ್ದಿ ತೀರ ಅನಿರೀಕ್ಷಿತ ಹಾಗೂ ಹೃದಯಕ್ಕೆ ಧಕ್ಕೆ ತರುವಂಥದು. ಈ ಸಮಯದಲ್ಲಿ ಜನತೆ ಸ್ವತಂತ್ರ ಭಾರತದ ಕೇಂದ್ರ ಸರಕಾರಕ್ಕೆ ಬೆಂಬಲವಾಗಿ ನಿಂತು, ದೇಶದಲ್ಲಿನ ವ್ಯವಸ್ಥೆ ಕಾಪಾಡಬೇಕು.'' **11** ಗಂಟೆಯ ಹೊತ್ತಿಗೆ ನಮ್ಮ ಚಿಕ್ಕಪ್ಪ ಗಾಯಗೊಂಡು ಕೆ.ಇ.ಎಂ. ಆಸ್ಪತ್ರೆಗೆ ಸಾಗಿಸಲ್ಪಟ್ಟ ಸುದ್ದಿ ತಿಳಿಯಿತು.

'ಮಧ್ಯಾಹ್ನದ ವೇಳೆಗೆ ಗುಂಪಿನ ದಾಳಿ ಕಡಿಮೆಯಾಯಿತು. ರಾತ್ರಿ ಊಟದ ನಂತರ ತಾತ್ಯಾ ನನಗೆ ಹೇಳಿದರು : ''ಮೊದಲು ನಿನ್ನನ್ನು ಬೇರೆ ಎಲ್ಲಿಗಾದರೂ ಕಳಿಸುತ್ತೇನೆ. ಅನಂತರ ವಿಶ್ವಾಸ ಮತ್ತು ಮಾಯಿ (ನಮ್ಮ ತಾಯಿ)ಯ ಆಲೋಚನೆ ಮಾಡುತ್ತೇನೆ.'' ಇವರೆಲ್ಲರನ್ನೂ ವಿಪತ್ತಿನಲ್ಲಿ ಬಿಟ್ಟು ನಾನು ಹೇಗೆ ಹೋಗಲಿ ಎಂದು ಮನಸ್ಸು ಹೊಯ್ದಾಡಿತು. ''ನೀನು ಹೋದರೆ ನನಗೆ ಅರ್ಧ ಚಿಂತೆ ತಪ್ಪುತ್ತದೆ'' ಎಂದರು ತಾತ್ಯಾ.... ಮರುದಿನ ಗುಪ್ತ ಪೊಲೀಸ್ ಅಧಿಕಾರಿಯೊಬ್ಬ ಬಂದು ನಮ್ಮ ದೂರವಾಣಿಯ ಬಳಿ ಕುಳಿತು, ಎಲ್ಲ ದೂರಧ್ವನಿಗಳನ್ನೂ ಬರೆದುಕೊಳ್ಳತೊಡಗಿದ. ಅಂದೇ ನನ್ನ ನಾದಿನಿಯ ಯಜಮಾನರಾದ ಗೋಖಲೆಯವರು ಬಂದರು. ತಾತ್ಯಾ ಅವರೊಡನೆ, ''ನೀವು ಪ್ರಭಾಳನ್ನು ಕ್ಷೇಮವಾಗಿ ಎಲ್ಲಿಗಾದರೂ ತಲುಪಿಸಬಲ್ಲಿರಾ ?'' ಎಂದರು. ''ಅಗತ್ಯವಾಗಿ ಆಗಲಿ ; ಅವಳ ಜವಾಬ್ದಾರಿ ನನಗಿರಲಿ. ಬೇಕಾದರೆ, ಜಮಖಂಡಿಯಲ್ಲಿ ನಮ್ಮ ಮನೆಗೆ ಕರೆದುಕೊಂಡು ಹೋಗುತ್ತೇನೆ'' ಎಂದರವರು. ಕೊನೆಗೆ, ನನ್ನ ಹಿರಿಯ ಮೈದುನ ಇದ್ದ ವೀಸನಗರಕ್ಕೆ ಕಳಿಸಲು ನಿರ್ಧರಿಸಿದರು. ಇಡೀ ರಾತ್ರಿ ನನಗೆ, ಅವರನ್ನೆಲ್ಲ ಈ ಸ್ಥಿತಿಯಲ್ಲಿ ಬಿಟ್ಟು ಹೇಗೆ ಹೋಗಲಿ ಎಂಬುದೊಂದೇ ಚಿಂತೆ. ಎಷ್ಟೇ ವಿಪತ್ತು ಬರಲಿ, ಮನಸ್ಸು ಗಟ್ಟಿ ಮಾಡಿಕೊಂಡು ಧೈರ್ಯದಿಂದ ಅದನ್ನೆದುರಿಸುವುದು ತಾತ್ಯಾನ ಸ್ವಭಾವ. ನಮ್ಮ ತಾಯಿಗೆ ಹೇಳಿದರು : ''ನೋಡೇ ! ಪ್ರಭಾ, ವಿಶ್ವಾಸ ಹುಟ್ಟಿದರು ; ನಮಗೆ ಬೇಕಾದಷ್ಟು ಮಾನಸ್ಥಾನಗಳು ದೊರೆತವು. ದೇವರು ಇದಕ್ಕಿಂತ ಇನ್ನೇನು ಮಾಡಬೇಕು ? ರೋಗಗ್ರಸ್ತರಾಗಿ ಅಥವಾ ವೃದ್ಧಾಪ್ಯದಿಂದ ನರಳುತ್ತಾ ಸಾಯುವುದಕ್ಕಿಂತ, ನಮ್ಮ ಧ್ಯೇಯಕ್ಕೂ ಪರಾಕ್ರಮಕ್ಕೂ ತಕ್ಕಂತೆ ಸಾಯುವುದೇ ನಿಜಕ್ಕೂ ಶೋಭಿಸುತ್ತದೆ. ಕೊನೆತನಕ ಧ್ಯೇಯಕ್ಕೆ

ಅಂಟಿಕೊಂಡು ಸೆರೆಮನೆ ಸೇರಿದರೂ, ಅದು ಮೋಕ್ಷಕ್ಕೆ ಸಮಾನ ಅಲ್ಲವೆ?''

'ಮಲಗುವ ಮೊದಲು ತಾತ್ಯಾನ ಕೊಠಡಿಗೆ ಹೋಗಿ ಕೇಳಿದೆ: ''ನಾನು ಹೊರಡುವುದಂತೂ ನಿಶ್ಚಿತ ವಾಯಿತು. ಇನ್ನು ನಿಮ್ಮನ್ನು ನೋಡುವುದು ಪುನಃ ಯಾವಾಗ?'' ಮಮತೆಯಿಂದ ತಲೆ ಸವರುತ್ತಾ, ಪ್ರಯತ್ನಪೂರ್ವಕವಾಗಿ ಅವರೆಂದರು : ''ದೇವರ ದಯೆದಿಂದ ಬಿಡುಗಡೆಯಾದರೆ, ಅನಂತರ ನೋಡಿಯೇ ನೋಡುತ್ತೇವೆ. ಹಾಗಿಲ್ಲವಾದರೆ, ಇದೇ ಕೊನೆಯ ಭೇಟಿ. ಎಂದಾದರೂ ಒಂದು ದಿನ ಕೊನೆಯ ಭೇಟಿ ಆಗಲೇಬೇಕಷ್ಟೆ; ಇದನ್ನೇ ಅದೆಂದು ತಿಳಿದುಕೊಂಡರೆ ಆಯಿತು. ಹಾಗೆಂದುಕೊಂಡು ಹೊರಡುವುದೇ ಒಳ್ಳೆಯದು.'' ಕಣ್ಣೀರು ತುಂಬಿಕೊಂಡು ನಾನು ಕೋಣೆಯಿಂದ ಹೊರಬಂದೆ. ನನಗೆ ನಿದ್ರೆ ಹತ್ತಲಿಲ್ಲ. ಬೆಳಿಗ್ಗೆ ತಾತ್ಯಾ ನಿಶ್ಚಿತ ಸ್ವರದಲ್ಲಿ ಹೇಳಿದರು : ''ಏನೂ ಯೋಚನೆ ಮಾಡಬೇಡ. ಹೆಚ್ಚೆಂದರೆ, ವಿಚಾರಣೆಯೆಲ್ಲ ಮುಗಿಯುವವರೆಗೆ ನನ್ನನ್ನು ಏಳೆಂಟು ತಿಂಗಳು ಸೆರೆಮನೆಗೆ ಸೇರಿಸುತ್ತಾರೆ. ಆಮೇಲೆ ನಿನ್ನನ್ನು ಕರೆಸಿಕೊಳ್ಳುತ್ತೇನೆ. ನೀನು ಸಂತೋಷವಾಗಿದ್ದರೆ, ನನಗೆ ಆತಂಕವಿರುವುದಿಲ್ಲ. ನಿನ್ನ ಗಂಡನಿಗೂ ನಿಶ್ಚಿಂತೆಯಿಂದ ಇರುವಂತೆ ಕಾಗದ ಬರೆದು ತಿಳಿಸು.'' ಖರ್ಚುವೆಚ್ಚಕ್ಕಾಗಿ ತಾತ್ಯಾ ದುಡ್ಡು ತೆಗೆದುಕೊಟ್ಟರು. ಸುಮ್ಮನೆ ಮಾವನ ಮನೆಗೆ ಹೋಗುವುದಕ್ಕೂ, ಈಗ ವಿಪತ್ತಿನಲ್ಲಿ ಹೋಗುವುದಕ್ಕೂ ವ್ಯತ್ಯಾಸವಿದೆ. ಯಾರ ಮನಸ್ಸಿಗೂ ಸಮಾಧಾನವಿಲ್ಲ. ಆರೋಗ್ಯ ಚೆನ್ನಾಗಿ ನೋಡಿಕೊಳ್ಳಿ ಎಂದು ಹೇಳಿ ತಾತ್ಯನಿಗೂ, ಮಾಯಿಗೂ ನಮಸ್ಕಾರ ಮಾಡಿದೆ. ನನ್ನ ಬೆನ್ನಿನ ಮೇಲೆ ಕೈ ಆಡಿಸುತ್ತಿದ್ದಂತೆ ತಾತ್ಯಾ ಗದ್ಗದಿತರಾದರು; ಅವರ ಕಣ್ಣು ತೇವಗೊಂಡಿತು. ಇದೇ ಕೊನೆಯ ಭೇಟಿ ಇರಬಹುದೇ ಎಂದು ಶಂಕಿಸಿದೆ. ಏಕೆಂದರೆ, ಅವರನ್ನು ಹೇಗಾದರೂ ಹಿಡಿದುಹಾಕುವ ಸಂಚು ನಡೆಯುತ್ತಿದೆಯೆಂದು ನಮಗೆ ತಿಳಿದಿತ್ತು. ನಾನು, ಎಷ್ಟೇ ಆಗಲಿ ತಾತ್ಯಾನ ಮಗಳಲ್ಲವೆ? ಮನಸ್ಸು ಗಟ್ಟಿಮಾಡಿಕೊಂಡೆ; ಸಾಮಾನು ತೆಗೆದುಕೊಂಡು ''ಸಾವರಕರ ಸದನ''ದ ಮೆಟ್ಟಿಲಿಳಿದೆ.'

ಪ್ರಭಾತ್ ಸುರಕ್ಷಿತ ಸ್ಥಾನಕ್ಕೆ ಹೊರಟಳು. ನನ್ನ ಮನಸ್ಸಿನ ಹೊರೆ ಅರ್ಧ ಇಳಿಯಿತು. ಆದರೆ ಇನ್ನರ್ಧ ಹೊರೆ? ಯಾವುದದು? ಯಮುನಾ ಮತ್ತು ವಿಶ್ವಾಸನ ಚಿಂತೆಯೆ? ಅದಲ್ಲ. ವಿಶ್ವಾಸ ಗಂಡುಹುಡುಗ. ಅವನು ತನ್ನ ರಕ್ಷಣೆ ತಾನು ಮಾಡಿಕೊಳ್ಳಬಲ್ಲ. ಅದು ಸಾಧ್ಯವಿಲ್ಲದಿದ್ದರೆ ಆತ್ಮರಕ್ಷಣೆಯ ಪ್ರಯತ್ನದಲ್ಲಿ ಗೌರವದಿಂದ ಮಡಿದರೂ ಚಿಂತೆಯಿಲ್ಲ. ಅದಕ್ಕಾಗಿ ದುಃಖಿಸುವ ವ್ಯಕ್ತಿ ನಾನಲ್ಲ. ಇನ್ನು ಯಮುನಾ, ಆದರ್ಶ ಸತಿಯಂತೆ ನನ್ನ ಮಗ್ಗುಲಲ್ಲಿ ನಿಂತು ನನ್ನೊಡನೆಯೇ ಚಿತೆಯೇರಲು ಸಿದ್ಧಳಿದ್ದಳು. ಆ ಮಟ್ಟದ ಶ್ರದ್ಧೆ ಅವಳಲ್ಲಿತ್ತು. ಪ್ರಾಣಾರ್ಪಣೆಗೆ ಅಂಜುವ ವಂಶ ನಮ್ಮದಲ್ಲ.

ನನಗಿದ್ದುದು ಮಾನದ ಭಯ! ಸ್ವದೇಶ ಬಾಂಧವರಿಂದಲೇ ಒದಗಬಹುದಾದ ಅಪಮಾನದ ಭಯ! ಬ್ರಿಟಿಷರಿಗಿಂತಲೂ ಕ್ರೂರ ರೀತಿಯಲ್ಲಿ ಸೇಡು ತೀರಿಸಿಕೊಳ್ಳುವ ಪ್ರವೃತ್ತಿಯಿದ್ದ ಕೆಲವರು ಅಧಿಕಾರ ಪೀಠದಲ್ಲಿದ್ದರು. ತಮ್ಮ ರಾಜಕೀಯ ಪ್ರತಿಸ್ಪರ್ಧಿಗಳನ್ನು ಮೆಟ್ಟಿಹಾಕಲು ಎಂಥ ಕೀಳುಮಟ್ಟಕ್ಕಾದರೂ ಇಳಿಯಬಲ್ಲ ಪ್ರವೃತ್ತಿ ಅವರ ಮನದಲ್ಲಿ ಮನೆಮಾಡಿಕೊಂಡಿತ್ತು. ಅಧಿಕಾರದ ಆಸೆಗಾಗಿ ಮಾತೃಭೂಮಿಯನ್ನೇ ತುಂಡರಿಸಲು ಹೇಸದ ಜನರಿಗೆ ನಾನು ಯಾವ ಲೆಕ್ಕ? ವಿದೇಶಿಯರ ವಿರುದ್ಧವಾದರೆ ಕತ್ತಿ ಎತ್ತಬಹುದಿತ್ತು; ಒಂದು ಕೈತೋರಿಸಬಹುದಿತ್ತು. ಆದರೆ ಯಾವ ಜನಾಂಗದ ಸ್ವಾತಂತ್ರ್ಯದ ಸಲುವಾಗಿ ಇಡೀ ಬದುಕಿಗೇ ಬೆಂಕಿ ಹಚ್ಚಿಕೊಂಡೆನೋ ಅಂಥ ಜನಾಂಗಕ್ಕೆ ಸೇರಿದವರ ಮೇಲೆ ಪ್ರೀತಿ ಅಥವಾ ಮರುಕವನ್ನಲ್ಲದೆ ಮತ್ತಾವ ಶಸ್ತ್ರ ಎತ್ತಲಿ? ಗಾಂಧಿ ಹತ್ಯೆಯ 'ಸುವರ್ಣಸಂಧಿ' ಸಾಧಿಸಿ ಅವರು ತಮಗಾಗ

ದವರೆಲ್ಲರನ್ನೂ ಬಗ್ಗು ಬಡಿಯುವರೆಂಬ ಸಂದೇಹ ನನಗೆ ಬಲವಾಗಿತ್ತು. ಅದಕ್ಕಾಗಿ ದುಃಖ!



ಪ್ರಭಾತಾಯಿ

ಕಳೆದ ಒಂದು ವರ್ಷದಿಂದಲೂ ನನ್ನ ಸ್ವಾಸ್ಥ್ಯ ಅಷ್ಟಕ್ಕಷ್ಟೇ ಇದ್ದಿತು. ಸಣ್ಣಗೆ ಜ್ವರ, ಹೃದಯಶೂಲೆ ಬರುತ್ತಿತ್ತು. ಫೆಬ್ರವರಿ 4ರಂದು ಸಹ ಮೈಯಲ್ಲಿ ಜ್ವರವಿತ್ತು. ಅಂದು ಕೆಲವು ಪೊಲೀಸ್ ಅಧಿಕಾರಿಗಳು ಮನೆಗೆ ಬಂದರು. ನನ್ನ ವೈದ್ಯಕೀಯ ಪರೀಕ್ಷೆ ಮಾಡಿಸಿ ನಾನು ಆರೋಗ್ಯವಾಗಿರುವೆನೆಂದು ಘೋಷಿಸಿದರು. ಆದರೂ ಅಂದಮಾನಿಗಿಂತ ಎಷ್ಟೋ ವಾಸಿ! ಮರುದಿನ ಬೆಳಗಿನ ಜಾವ ಪೊಲೀಸ್ ವಾಹನ ಮನೆಯ ಮುಂದೆ ಬಂದು ನಿಂತಿತು. ಮುಂಬೈ ಸಾರ್ವಜನಿಕ ಸುರಕ್ಷತಾ ಕಾಯಿದೆಯಂತೆ ನನ್ನನ್ನು ಬಂಧಿಸಲಾಗಿದೆ ಎಂದು ಅಧಿಕಾರಿಗಳು ತಿಳಿಸಿದರು. 'ಸರಿ, ನಾನು ಸಿದ್ಧವಾಗಿಯೇ ಇದ್ದೇನೆ' ಎಂದೆ. ವಾಹನ ಹತ್ತುವ ಮೊದಲು ಕಕ್ಕಸಿನ ಕಡೆ ಹೋಗಬೇಕಾಯಿತು. ಅಧಿಕಾರಿಗಳು ಸಂದೇಹಗ್ರಸ್ತರಾಗಿ ಹಿಂದೆಮುಂದೆ ನೋಡತೊಡಗಿದರು. ನಾನು ನಕ್ಕು ಹೇಳಿದೆ: 'ಭಯಪಡಬೇಡಿ, ನನಗೀಗ 65 ವರ್ಷ ವಯಸ್ಸಾಗಿದೆ; ಮಾರ್ಸೇಲ್ಸ್‌ನಲ್ಲಿ ಆದಂತೆ ಪುನಃ ಆಗಬಹುದೆಂದು ನೀವು ಹೆದರಲು ಕಾರಣವಿಲ್ಲ. ಮತ್ತು ಈಗ ಅದರ ಅಗತ್ಯವೂ ಇಲ್ಲ.' ನಾನು ಹೋಗಿಬಂದ ನಂತರ ಓರ್ವ ಅಧಿಕಾರಿ ಕಕ್ಕಸಿನ ಒಳಗೆ ಹೋಗಿ ಶೋಧನೆ ನಡೆಸಿದರು ; ಆದರೆ ಆಕ್ಷೇಪಾರ್ಹವಾದುದು ಏನೂ ಸಿಕ್ಕಲಿಲ್ಲ.

ಬಂಧನಕ್ಕೆ ಹಿಂದಿನ ದಿನ ನಾನೊಂದು ಹೇಳಿಕೆ ಕೊಟ್ಟಿದ್ದೆ : 'ಯಶಸ್ವಿಯಾದ ರಾಷ್ಟ್ರೀಯ ಕ್ರಾಂತಿಗೆ ಮತ್ತು ನವಜಾತ ರಾಷ್ಟ್ರೀಯ ಸರಕಾರಕ್ಕೆ - ಅದರಲ್ಲೂ ಪರಕೀಯ ಶತ್ರುಗಳು ಸುತ್ತಲೂ ಬಳಸಿಕೊಂಡಿರುವಾಗ - ಅಂತರ್ಯುದ್ಧಕ್ಕಿಂತ ದೊಡ್ಡ ವೈರಿ ಇನ್ನೊಂದಿಲ್ಲ. ಯಾವ ದೇಶಭಕ್ತ ನಾಗರಿಕನೂ ನಹ ಇತಿಹಾಸದ ಈ ಗಂಭೀರ ಎಚ್ಚರಿಕೆಯನ್ನು ಮರೆಯದಿರಲಿ. ಮಹಾತ್ಮಾ ಗಾಂಧಿಯವರ ಭೀಷಣ ಕೊಲೆಯಂತಹ ನರಹತ್ಯೆಯ ಘಟನೆಯು ಒಬ್ಬ ವ್ಯಕ್ತಿಯ ಮತಿಭ್ರಮಣೆಯಿಂದಲೋ ಅಥವಾ ಸಾಮೂಹಿಕ ಕ್ರೋಧದಿಂದಲೋ, ಹೇಗೇ ನಡೆದರೂ ನಿಸ್ಸಂದಿಗ್ಧವಾಗಿ ಖಂಡನೀಯವೇ ಸರಿ.'

ಮಾರ್ಚ್ 11ರ ವರೆಗೂ ಯಾವುದೇ ನಿರ್ದಿಷ್ಟ ಆರೋಪವೂ ಇಲ್ಲದೆ ನಾನು ಬಂಧನದಲ್ಲಿದ್ದೆ. ಪೊಲೀಸ್ ಅಧಿಕಾರಿಗಳ ಎಡೆಬಿಡದ ಪ್ರಶ್ನೆಗಳಿಗೆ - ಎಷ್ಟೇ ಅಯೋಗ್ಯ ಪ್ರಶ್ನೆಗಳಾಗಿದ್ದರೂ - ಉತ್ತರ ಕೊಡಬೇಕಾಗುತ್ತಿತ್ತು. ಹಿಂದೆ, ದಾಸ್ಯಯುಗದಲ್ಲಿ, ಅಂಥ ಪ್ರಶ್ನೆಗಳಿಗೆ ಮತ್ತೆ ಉಸಿರೆತ್ತದಂತಹ ಉತ್ತರಗಳನ್ನು ಕೊಡುತ್ತಿದ್ದೆ. ಆಗ ಹೆಮ್ಮೆಯಿಂದ, ಛಲದಿಂದ ಸರಕಾರಿ ಅಧಿಕಾರಿಗಳ ಮುಖ ಮುರಿಯುತ್ತಿದ್ದೆ. ಆದರೆ ಈಗ ನನ್ನ ಮನಸ್ಸಿಗೆ ಸ್ವಲ್ಪವೂ ಆನಂದವಿರಲಿಲ್ಲ. ಆದರೂ ಶಾಂತವಾಗಿ ಉತ್ತರ ಹೇಳುತ್ತಿದ್ದೆ. ತನ್ನ ದೇಶದ ಸ್ವಾತಂತ್ರ್ಯಕ್ಕಾಗಿ 50 ವರ್ಷಗಳು ಹೋರಾಡಿದ ಐರ್ಲೆಂಡಿನ ಡಿ ವೆಲೆರಾ, ಸ್ವಾತಂತ್ರ್ಯ ಬಂದನಂತರ ಅದೇ ದೇಶದಲ್ಲಿ ಕೈದಿಯಾಗಿರಲಿಲ್ಲವೆ? ಅದು ನೆನಪಾದಾಗಲೆಲ್ಲ ಒಂದು ರೀತಿಯಲ್ಲಿ ಮನಸ್ಸಿಗೆ ಸಮಾಧಾನ!

ಮಾರ್ಚ್ 23ರ ವರೆಗೂ ಮನೆಯವರ ಭೇಟಿಗೆ ಅವಕಾಶವಿರಲಿಲ್ಲ. ಹೊರಜಗತ್ತಿಗೆ ನಾನು ಎಲ್ಲಿರುವೆ ಎಂಬುದರ ಸುಳಿವು ಸಹ ತಿಳಿದಿರಲಿಲ್ಲ. ಕಾಂಗ್ರೆಸ್ ಪಕ್ಷ ಹಾಗೂ ಪತ್ರಿಕೆಗಳು ನನ್ನ ವಿರುದ್ಧ ದೇಶದಾದ್ಯಂತ

ಅಪಪ್ರಚಾರದ ಡಂಗುರ ಬಾರಿಸುತ್ತಿದ್ದವು ; ನನ್ನ ತೇಜೋವಧೆ ಮಾಡತೊಡಗಿದ್ದವು ಕಾಂಗ್ರೆಸ್ ಪಕ್ಷಕ್ಕೆ ನಾನು ಸೇರದಿದ್ದುದಕ್ಕಾಗಿ ಪ್ರಾಯಶ್ಚಿತ್ತ ಅನುಭವಿಸುತ್ತಿದ್ದೆ !

ಏಪ್ರಿಲ್ 3ರಂದು ಮುಂಬೈ ವಿಧಾನ ಪರಿಷತ್ತಿನಲ್ಲಿ ಆರ್.ಎಸ್. ಮಾಂಡಲಿಕರು, 'ಕಾಂಗ್ರೆಸ್ ರಾಜಕೀಯ ಸಂತ್ರಸ್ತರಿಗೆ, ಬ್ರಿಟಿಷ್ ಸರಕಾರ ವಶಪಡಿಸಿಕೊಂಡಿದ್ದ ಅವರ ಆಸ್ತಿಪಾಸ್ತಿಗಳನ್ನು ಹಿಂದಿರುಗಿಸಿದಂತೆಯೇ ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಸಾವರಕರರಿಗೂ ಏಕೆ ಅವರ ಆಸ್ತಿಪಾಸ್ತಿಗಳನ್ನು ಹಿಂದಿರುಗಿಸಬಾರದು ?' ಎಂದು ಪ್ರಶ್ನಿಸಿದರು. ಆಗಿನ ಮಾನ್ಯ ಗೃಹಸಚಿವ ಮೊರಾರ್ಜಿ ದೇಸಾಯಿಯವರು ಅದಕ್ಕೆ ಉತ್ತರಿಸುತ್ತಾ, 'ಸರಕಾರಕ್ಕೆ ಆ ಯೋಚನೆ ಇಲ್ಲ' ಎಂದರು ! ಅನಂತರ ಮಾರ್ಮಿಕ ಸ್ವರದಲ್ಲಿ, 'ಸಾವರಕರರ ಆಗಿನ ದೇಶಸೇವೆಗಿಂತಲೂ ಅವರು ಈಗ ಮಾಡಿರುವ ಹಾನಿಯೇ ಹೆಚ್ಚು' ಎಂದರು ! ಕೂಡಲೆ ಮಾಂಡಲಿಕ್ ಎದ್ದುನಿಂತು, 'ಅವರು ಏನು ಹಾನಿ ಮಾಡಿದ್ದಾರೆ ?' ಎಂದು ಪ್ರಶ್ನಿಸಿದರು. ಅದಕ್ಕೆ ಮಾನ್ಯ ಮಂತ್ರಿಗಳು ನಿರುತ್ತರರಾದರು !

ಗಾಂಧಿ ಹತ್ಯೆಯ ಆರೋಪ ನನ್ನ ಮೇಲೆ ಹೊರಿಸಲ್ಪಟ್ಟಿತು ! 1948ರ ಮೇ 24ರಂದು ನಾನು ದಿಲ್ಲಿಗೆ ಸಾಗಿಸಲ್ಪಟ್ಟೆ. ಮೇ 27ರಂದು, ನನ್ನ 66ನೆಯ ಜನ್ಮದಿನದಂದು ವಿಚಾರಣೆ ಆರಂಭವಾಯಿತು. ಎಲ್.ಬಿ. ಭೋಪಟಕರ್ ನನ್ನ ಪರವಾಗಿ ವಾದಿಸಲು ನಿಂತರು. ನ್ಯಾಯಶಾಸ್ತ್ರದ ಬಗ್ಗೆ ಅನೇಕ ಗ್ರಂಥಗಳನ್ನು ರಚಿಸಿದ್ದ ಪುಣೆಯ ವಿಖ್ಯಾತ ವಕೀಲರವರು. ಆಗ ಅ.ಭಾ. ಹಿಂದು ಮಹಾಸಭೆಯ ಅಧ್ಯಕ್ಷರಾಗಿದ್ದರು. ನನಗಿಂತಲೂ ಐದು ವರ್ಷ ಹಿರಿಯರು ; ಮಾಜಿ ಅಧ್ಯಕ್ಷನ ರಕ್ಷಣೆಗೆ ಹಾಲಿ ಅಧ್ಯಕ್ಷರ ವಕಾಲತ್ತು ! ಅಣ್ಣಾರಾವ್ ಭೋಪಟಕರ್ ನನ್ನ ಪರ ವಾದಿಸಲು ಪುಣೆಯಲ್ಲಿನ ತಮ್ಮ ಕೈತುಂಬ ಸಂಪಾದನೆಯನ್ನು ಕೈಬಿಟ್ಟು ಬಂದು, ತಿಂಗಳುಗಟ್ಟಲೆ ದಿಲ್ಲಿಯಲ್ಲೆ ವಸತಿ ಹೂಡಿದರು ಸ್ವಂತದ ಖರ್ಚುವೆಚ್ಚದ ಸಲುವಾಗಿಯೂ ಎಷ್ಟೋ ಹಣ ಅವರ ಕೈಬಿಟ್ಟಿತು. 'ಗಾಂಧಿ ಹತ್ಯೆಯ ಆರೋಪಿ'ಯೊಬ್ಬನ ಪರವಾಗಿ ವಾದಿಸಲು ನಿಂತುದಕ್ಕಾಗಿ ಇಡೀ ದೇಶದ ಶಾಪ, ಕಾಂಗ್ರೆಸ್ ನಾಯಕರ ಕೋಪತಾಪ, ರಾಜಕೀಯ ಪ್ರತಿಕ್ರಿಯೆ ಎಲ್ಲವನ್ನೂ ಅವರು ಸಹಿಸಬೇಕಾಯಿತು. ಆದರೆ ಆ ವೃದ್ಧಾಪ್ಯದಲ್ಲೂ ಅವರು ಯಾವ ವಿರೋಧಕ್ಕೂ ಜಗ್ಗಲಿಲ್ಲ.

ಅವರ ಪತ್ನಿ ಯಶೋದಾಬಾಯಿಯವರಿಗಂತೂ ನನ್ನ ಬಗ್ಗೆ ಇನ್ನಿಲ್ಲದಷ್ಟು ಕಾಳಜಿ. ತಮ್ಮ ಗಂಡನೊಡನೆ ಅವರೂ ದಿಲ್ಲಿಗೆ ಬಂದಿದ್ದರು. ಆಗಿಂದಾಗ್ಗೆ ಸೆರೆಮನೆಗೆ ಬಂದು ನನ್ನ ಯೋಗಕ್ಷೇಮ ವಿಚಾರಿಸುತ್ತಿದ್ದರು. ಹಾಗೆ ಬರುವಾಗ ನನಗೆ ಇಷ್ಟವಾದ ತಿಂಡಿತೀರ್ಥಗಳನ್ನು ಸ್ವತಃ ತಯಾರಿಸಿಕೊಂಡು ತಾರದಿದ್ದರೆ ಅವರ ಮನಸ್ಸಿಗೆ ಸಮಾಧಾನವಿಲ್ಲ. ಒಮ್ಮೆ 'ಖಾರಸೇವಿ'ನ ಡಬ್ಬ ಅವರು ನನ್ನ ಕೈಗಿಡುತ್ತಲೇ, ಅವರ ವಾತ್ಸಲ್ಯ ಕಂಡು ಮನಸ್ಸು ತಡೆಯಲಾರದೆ ಕೇಳಿಬಿಟ್ಟೆ : 'ಇನ್ನುಮುಂದೆ ನಾನು ನಿಮ್ಮನ್ನು ''ಅಮ್ಮಾ'' ಅನ್ನಲೆ ? ಅಂದರೆ ಏನು ತಪ್ಪು ? ನನ್ನ ಬೇಕು ಬೇಡಗಳೆಲ್ಲವನ್ನೂ ನೀವು ಅರ್ಥ ಮಾಡಿಕೊಂಡುಬಿಟ್ಟಿರುವಿರಿ.'

'ಅದೇನು ಮಹಾ ? ಅಂಥ ವಿಶೇಷವೇನಿಲ್ಲ' ಎಂದರು ಅವರು.

'ನೀವು ಇಲ್ಲ ಎಂದರೆ ಆಯಿತೆ ? ಅಣ್ಣಾರಾವ್ ಅವರಂತಹ ಪ್ರಸಿದ್ಧ ವ್ಯಕ್ತಿಯ ಪತ್ನಿ ಈ ಇಳಿವಯಸ್ಸಿನಲ್ಲೂ ದಿಲ್ಲಿಯ ಉರಿ ಸೆಕೆಯಲ್ಲಿ ಗಂಟೆಗಟ್ಟಲೆ ಬೆಂಕಿಯ ಮುಂದೆ ಕುಳಿತು ನನಗೋಸ್ಕರ ತಿಂಡಿ ತಯಾರಿಸುವುದೆಂದರೆ, ಸುಮ್ಮನಾಯಿತೆ ? ನಿಮ್ಮಂಥ ತಾಯಂದಿರು ಹುಟ್ಟಿರಬೇಕಾದರೆ ನಾನು ತಾನೆ ಏಕೆ ವಿಪತ್ತುಗಳಿಗೆ ಬೆನ್ನು ತಿರುಗಿಸಲಿ ?' ಎಂದೆ. ಅವರು ನಸುನಕ್ಕು, ಬೇರೆ ವಿಷಯ ತೆಗೆದರು.

ನವೆಂಬರ್ 20ರಂದು ನ್ಯಾಯಾಲಯದಲ್ಲಿ ನನ್ನ ಹೇಳಿಕೆಯ ಸರದಿ ಈ ಕೆಳಗಿನದು (ಅನ್ಯಾನ್ಯ ಗ್ರಂಥಗಳಲ್ಲಿ, ಪತ್ರಿಕೆಗಳಲ್ಲಿ ಬಂದಂತೆ) ಅದರ ವರದಿ:

'..... ಮುಂದುವರಿದು 1947ರ ದುರ್ದೈವದ ಘಟನೆಗಳನ್ನು ಉಲ್ಲೇಖಿಸುತ್ತಾ ಸಾವರಕರರೆಂದರು - ''ಭಾರತದ ವಿಭಜನೆಯ ವಿರುದ್ಧವಾಗಿ ನಡೆದ ಚಳವಳಿಯ ಅಗ್ರ ನಾಯಕ ನಾನೇ. ಆದರೆ 1947ರಲ್ಲಿ ನಮ್ಮ ಮಾತೃಭೂಮಿ ವಿಭಜಿತವಾಗಿ ಹೋಯಿತು. ಇಷ್ಟಾದರೂ, ಪಾಕಿಸ್ತಾನ ಅಸ್ತಿತ್ವಕ್ಕೆ ಬಂದಿದ್ದರೂ, ಆ ನಷ್ಟವನ್ನು ಸರಿತೂಗಿಸಲೆಂಬಂತೆ, ಹಿಂದುಸ್ಥಾನದ ಇನ್ನೂ ವಿಶಾಲವಾದ ಭೂ ಪ್ರದೇಶ ಪರಕೀಯ ಪ್ರಭುತ್ವ ದಿಂದ ಸ್ವಾತಂತ್ರ್ಯ ಗಳಿಸಿದೆ ಎಂಬುದೂ ನಿಜ.'' ತಾಯ್ನೆಲದ ವಿಭಜನೆಯ ವಿಷಯ ಪ್ರಸ್ತಾಪಿಸುತ್ತಿದ್ದಂತೆಯೇ ಸಾವರಕರರ ಕೆನ್ನೆಗಳ ಮೇಲೆ ಕಣ್ಣೀರು ಹರಿಯಲಾರಂಭಿಸಿತು. ಗದ್ಗದಿತರಾಗಿ ಅವರೆಂದರು: ''ರಾಜಕೀಯ ಸ್ವಾತಂತ್ರ್ಯದ ಹೋರಾಟ ಕೊನೆಗೂ ಯಶಸ್ವಿಯಾಗಿದೆ. ನಮ್ಮದೊಂದು ಸ್ವತಂತ್ರ ರಾಜ್ಯ ಮೈತಾಳಿದೆ. ಆ ಹೋರಾಟದಲ್ಲಿ ನಾನೂ ಒಬ್ಬ ಯೋಧನಾಗಿ, ನನ್ನ ಪೀಳಿಗೆಯ ಇನ್ನಾವ ದೇಶಭಕ್ತ ನಾಯಕನಿಗೂ ಕಡಿಮೆಯಿಲ್ಲದಂತೆ ಕಳೆದ ಐವತ್ತು ವರ್ಷಗಳ ಕಾಲ ಹೋರಾಡಿದ್ದೇನೆ, ಕಷ್ಟನಷ್ಟಗಳನ್ನು ಅನುಭವಿಸಿದ್ದೇನೆ, ತ್ಯಾಗ ಮಾಡಿದ್ದೇನೆ. ನನ್ನ ದೇಶ ಸ್ವತಂತ್ರಗೊಂಡುದನ್ನು ಕಾಣುವಷ್ಟು ದಿನ ಬದುಕಿದುದಕ್ಕಾಗಿ ಆಗ ನಾನೇ ಧನ್ಯ ಎಂದುಕೊಂಡೆ!'' ಸಾವರಕರ್ ತಮ್ಮ ಕರವಸ್ತ್ರ ತೆಗೆದು ಕಣ್ಣೀರು ಒರಸಿಕೊಂಡು, ಮೆಲ್ಲಗೆ ಹೇಳತೊಡಗಿದರು: ''ನಮ್ಮ ಗುರಿಯಲ್ಲಿ ಒಂದು ಅಂಶ ಅಪೂರ್ಣವಾಗಿಯೇ ಉಳಿದಿದೆಯೆಂಬುದರಲ್ಲಿ ಸಂದೇಹವಿಲ್ಲ. ಆದರೆ, ಆಸಿಂಧುಸಿಂಧುಪರ್ಯಂತ ನಮ್ಮ ಸ್ವದೇಶದ ಸಮಗ್ರತೆಯನ್ನು ಸಾಧಿಸುವ ಆಕಾಂಕ್ಷೆಯನ್ನೇನೂ ನಾವು ಕೈಬಿಟ್ಟಿರಲಿಲ್ಲ. ಅದನ್ನು ಸಾಧಿಸುವುದಕ್ಕೂ, ನಾವು ಗಳಿಸಿದುದನ್ನು ಮೊದಲು ಬಲಗೊಳಿಸುವುದು ಅತ್ಯಗತ್ಯವಾಗಿತ್ತು. ಆ ದೃಷ್ಟಿಯಿಂದ, ಯಾವುದೇ ಪಕ್ಷ ಅಧಿಕಾರದಲ್ಲಿದ್ದರೂ ಮೊಟ್ಟ ಮೊದಲು ಕೇಂದ್ರ ಸರ್ಕಾರವನ್ನು ಸಮರ್ಥಗೊಳಿಸಬೇಕು ; ಆ ದಿಕ್ಕಿನಲ್ಲಿ ಯಾವುದೇ ಅಗತ್ಯವೆನಿಸಿದ ಬದಲಾವಣೆಗಳನ್ನಾದರೂ ರಾಜ್ಯಾಂಗಬದ್ಧವಾಗಿಯೇ ಸಾಧಿಸಬೇಕು; ಏಕೆಂದರೆ, ಹಿಂಸಾಚಾರ ಅಥವಾ ಅಂತರ್ಯುದ್ಧಗಳಿಂದ ದೇಶ ದುರ್ಬಲವಾಗಿ ಅಪಾಯಕ್ಕೀಡಾಗುತ್ತದೆ - ಎಂದು ಜನತೆಗೆ ನಾನು ಒತ್ತಿ ಹೇಳುತ್ತಿದ್ದೆ. ಯಾವುದೇ ಪರಕೀಯ ಹಾಗೂ ಸಶಸ್ತ್ರ ದಬ್ಬಾಳಿಕೆಯ ವಿರುದ್ಧ ಹೋರಾಡುವಾಗ ಕ್ರಾಂತಿಕಾರಿ ಪ್ರವೃತ್ತಿಯು ಅನಿವಾರ್ಯ ಹಾಗೂ ಸಮರ್ಥನೀಯ. ಆದರೆ ಈಗ ನಾವು ನಮ್ಮದೇ ರಾಜ್ಯವನ್ನು ಪಕ್ಷಕಲಹ ಮತ್ತು ಅಂತರ್ಯುದ್ಧಗಳ ಅಪಾಯದಿಂದ ಉಳಿಸಿಕೊಳ್ಳಬೇಕಾದರೆ, ಆ ಪ್ರವೃತ್ತಿಯನ್ನು ಘಟನಾತ್ಮಕವಾಗಿ ಬದಲಿಸಿಕೊಳ್ಳಬೇಕೆಂಬುದು ನನ್ನ ಅಭಿಮತ. ಆ ಉದ್ದೇಶದಿಂದಲೇ, ದಿನೇ ದಿನೇ ಸಮೀಪವರ್ತಿಗಳಾಗುತ್ತಿದ್ದ ಪ್ರಮುಖ ಪಕ್ಷಗಳಾದ ಕಾಂಗ್ರೆಸ್ ಮತ್ತು ಮಹಾಸಭೆಗಳು ಒಟ್ಟುಗೂಡಿ ಸಮಾನ ರಂಗ ರಚಿಸಿಕೊಂಡು ನಮ್ಮ ರಾಜ್ಯದ ಕೇಂದ್ರ ಸರಕಾರವನ್ನು ಬಲಪಡಿಸಬೇಕೆಂದು ನಾನು ಇಚ್ಛಿಸಿದ್ದೆ. ಹೊಸ ರಾಷ್ಟ್ರಧ್ವಜವನ್ನು ನಾನು ಒಪ್ಪಿಕೊಂಡದ್ದೂ ಅದೇ ದೃಷ್ಟಿಯಿಂದಲೇ ..'' ಕೊನೆಗೆ ಸಾವರಕರರು ತಮ್ಮ ಮನೆಯಿಂದ ಸರಕಾರ ವಶಪಡಿಸಿಕೊಂಡ 10,000 ಪತ್ರಗಳಲ್ಲಿ ತಮ್ಮನ್ನು ಆಪಾದನೆಗೆ ಗುರಿಪಡಿಸುವ ಒಂದಾದರೂ ಶಬ್ದ ಇಲ್ಲದಿರುವುದರಿಂದಲೂ ಸರಕಾರಿ ಸಾಕ್ಷಿದಾರ ಬಾಡ್ಗೆಯ ಆರೋಪಗಳು ಕೇವಲ ಆಧಾರರಹಿತ ಗಾಳಿ ವರ್ತಮಾನ ಹಾಗೂ ಪೊಳ್ಳು ಗ್ರಹಿಕೆಗಳಾಗಿರುವುದರಿಂದಲೂ, ತಮ್ಮ ಚಾರಿತ್ರ್ಯಕ್ಕೆ ಯಾವುದೇ ಕಳಂಕ ಹತ್ತದಂತೆ ಬಿಡುಗಡೆ ಮಾಡಬೇಕೆಂದು ನ್ಯಾಯಾಧೀಶರನ್ನು ಪ್ರಾರ್ಥಿಸಿದರು.'

1949ರ ಫೆಬ್ರವರಿ 10ರಂದು ನ್ಯಾಯಾಧೀಶರ ತೀರ್ಪು ಹೊರಬಿತ್ತು : 'ವಿನಾಯಕ ಡಿ. ಸಾವರಕರ್

ಅವರು ತಪ್ಪಿತಸ್ಥರಲ್ಲದಿರುವುದರಿಂದ ಅವರನ್ನು ಬಿಡುಗಡೆ ಮಾಡಲಾಗಿದೆ.''

ಪಾಪ, ನನ್ನ ಕೇಡನ್ನೇ ಹಾರೈಸುತ್ತಾ ಅದಕ್ಕಾಗಿ ಸರ್ವ ಪ್ರಯತ್ನಗಳನ್ನೂ ನಡೆಸಿದ್ದವರಿಗೆ ಎಂಥ ನಿರಾಶೆ!

ಈ ಇತಿಹಾಸಾರ್ಹ ವಿಚಾರಣೆ ನಡೆದ ಸ್ಥಾನ ದಿಲ್ಲಿಯ ರಕ್ತದುರ್ಗ (ಕೆಂಪು ಕೋಟೆ). ತೀರ್ಪು ಹೊರ ಬರುತ್ತಲೇ ಕೆಂಪು ಕೋಟೆಯ ಹೊರಗೆ ಲಕ್ಷಾಂತರ ಅಭಿಮಾನಿಗಳು ಜಯಘೋಷ ಹಾಕುತ್ತಾ ನನ್ನನ್ನು ಅಭಿನಂದಿಸಲು ಸೇರಿದರು. ಬೃಹತ್ ಮೆರವಣಿಗೆ ನಡೆಸಬೇಕೆಂಬ ಆಸೆ ಅವರದು. ಆದರೆ ನನ್ನ ಜನ ಪ್ರಿಯತೆಯನ್ನು ಅಳಿಸಿಹಾಕಿ, ನನ್ನ ವ್ಯಕ್ತಿತ್ವಕ್ಕೆ ಮಸಿಹಚ್ಚಿ ನನ್ನನ್ನೊಬ್ಬ ಖೂನಿಗಾರನನ್ನಾಗಿ ಜೈಲಿನಲ್ಲಿ ಕೊಳೆ ಹಾಕಲು ಹೊರಟಿದ್ದವರು ತಮ್ಮ ಸಿಂಹಾಸನದ ಅಡಿಯಲ್ಲೇ ನನ್ನ ಅಭಿನಂದನೆ, ಮೆರವಣಿಗೆಗಳನ್ನು ಹೇಗೆ ತಾನೆ ಸಹಿಸಿಯಾರು ? ಕೆಂಪುಕೋಟೆ ಬಿಟ್ಟು ಹೊರಗೆ ಹೋಗದಿರುವಂತೆ ಸರಕಾರವು ನನಗೆ ದಿಗ್ಬಂಧನ ವಿಧಿಸಿತು. ಕೆಲಗಂಟೆಗಳಲ್ಲೇ ಪಂಜಾಬಿನ ಸಾರ್ವಜನಿಕ ಸುರಕ್ಷತಾ ಕಾನೂನಿನ ಪ್ರಕಾರ ಮತ್ತೊಂದು ಆಜ್ಞೆ: ಕೂಡಲೆ ದಿಲ್ಲಿ ಕ್ಷೇತ್ರ ಬಿಟ್ಟು ಹೊರಡಬೇಕು ! ಮೂರು ತಿಂಗಳು ದಿಲ್ಲಿ ಪ್ರವೇಶಿಸುವಂತಿಲ್ಲ ! ಪೊಲೀಸ್ ಅಧಿಕಾರಿಗಳು ನನ್ನನ್ನು ರಹಸ್ಯವಾಗಿ ರೈಲಿನ ಮೂಲಕ ಮುಂಬೈಗೆ ಸಾಗಿಸಿದರು !

ನನ್ನ ಬಿಡುಗಡೆ ಆಗುತ್ತಲೇ ಅಣ್ಣಾರಾವ್ ಭೋಪಟಕರರಿಗೆ ಆದ ಆನಂದ ಅವರ್ಣನೀಯ. ಅದರ ಜೊತೆಗೇ ನನ್ನನ್ನು ಹಿಡಿದಿಟ್ಟವರ ಬಗ್ಗೆ ಅವರ ಸಾತ್ವಿಕ ಕ್ರೋಧ ಕೆರಳಿತು. ನನ್ನ ಬಂಧನ ಹಾಗೂ ವಿಚಾರಣೆಗೆ ಕಾರಣಕರ್ತರಾದವರನ್ನು ಪತ್ತೆಹಚ್ಚಿ ಅವರ ಮೇಲೆ ಕ್ರಮ ಕೈಗೊಳ್ಳುವಂತೆ ಸರಕಾರವನ್ನು ಒತ್ತಾಯಿಸ ಬೇಕೆಂದು ಇಡೀ ದೇಶಕ್ಕೆ ಕರೆ ಕೊಟ್ಟರು. ಆದರೆ ನಮ್ಮದೇ ಆದ ಸರಕಾರವನ್ನು ಬಿಕ್ಕಟ್ಟಿಗೆ ಸಿಕ್ಕಿಸುವುದಾಗಲೀ, ಉನ್ನತ ಸ್ಥಾನಗಳನ್ನು ಅಲಂಕರಿಸಿದ್ದ ನಮ್ಮ ದೇಶದ ನಾಯಕರನ್ನು ತಪ್ಪಿತಸ್ಥರನ್ನಾಗಿ ಮಾಡುವುದಾಗಲೀ ನನಗೆ ಇಷ್ಟವಿರಲಿಲ್ಲ. ಆದ್ದರಿಂದ, ತಮ್ಮ ಕರೆಯನ್ನು ಹಿಂತೆಗೆದುಕೊಂಡು ಹಿಂದಿನ ಕಹಿಘಟನೆಗಳ ಮೇಲೆ ತೆರೆ ಎಳೆದು ಅದರ ವಿಚಾರವನ್ನು ಅಲ್ಲಿಗೆ ಮರೆಯಬೇಕೆಂದು ಅಣ್ಣಾರಾಯರನ್ನು ನಾನು ಪ್ರಾರ್ಥಿಸಿದೆ.

ನನ್ನ ಪರವಾಗಿ ಕೊನೆಯಲ್ಲಿ ವಾದಿಸಿದವರು ಪಿ. ಆರ್. ದಾಸ್. ಅವರು ಖ್ಯಾತಿವೆತ್ತ ಸಿ. ಆರ್. ದಾಸ್‌ರ ಸೋದರ ಮತ್ತು ಪಟ್ನಾ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರು. ಅವರಿಗೆ ನಾನು ಧನ್ಯವಾದ ಅರ್ಪಿಸಿ ಬರೆದ ಪತ್ರಕ್ಕೆ ಅವರಿಂದ ಬಂದ ಉತ್ತರ : 'ನನ್ನ ವಾದಕ್ಕಿಂತ ಮಿಗಿಲಾಗಿ ನಿಮ್ಮ ನಿರಪರಾಧಿತ್ವ ಮತ್ತು ಘನತೆಯಿಂದಾಗಿ ನೀವು ಗೆದ್ದಿರಿ. ನಿಮ್ಮ ಪರವಾಗಿ ಒಂದು ವೇಳೆ ಯಾರು ವಾದಿಸದಿದ್ದರೂ ನ್ಯಾಯಾ ಧೀಶರು ನಿಮ್ಮನ್ನು ಬಿಡುಗಡೆ ಮಾಡುತ್ತಿದ್ದುದು ನಿಶ್ಚಿತ '

ದಿಲ್ಲಿಯ ನ್ಯಾಯವಾದಿ ಲಾಲಾ ಗಣಪತಿರಾಯ್ ಅವರು ನೀಡಿದ ಸಹಕಾರಕ್ಕಾಗಿ ಅವರನ್ನು ಅಭಿ ನಂದಿಸಿ, ಅವರಿಗೆ ನಾನು 500 ರೂ. ಕಳುಹಿಸಿಕೊಟ್ಟೆ. ಆದರೆ ಅವರು ಹಣವನ್ನು ಹಿಂದಿರುಗಿಸುತ್ತಾ, 'ದುಡ್ಡು ಕಡಿಮೆಯಾಯಿತೆಂದು ನಾನು ಹಿಂದಕ್ಕೆ ಕಳುಹಿಸುತ್ತಿಲ್ಲ; ಆದರೆ ನಿಃಸ್ವಾರ್ಥ ಬುದ್ಧಿಯಿಂದ ನಿಮಗೆ ನೇವೆ ಸಲ್ಲಿಸಿದ ಕಾರ್ಯಗೌರವ ಹಾಗೂ ಬಾಧ್ಯತೆಯನ್ನು ನಾನು ಕಳೆದುಕೊಳ್ಳಲು ತಯಾರಿಲ್ಲ' ಎಂದು ಕಾಗದ ಬರೆದರು !

  

ಮುಂಬೈನಲ್ಲಿ ಸುಮಾರು ಒಂದು ತಿಂಗಳ ಕಾಲ ವಿಶ್ರಾಂತಿ ಪಡೆದೆ ಅನಂತರ ಹವಾ ಬದಲಾವಣೆಗಾಗಿ ಸ್ವಲ್ಪ ಸಮಯ ಬೆಂಗಳೂರಿಗೆ ಹೋಗಿದ್ದು, ವಾಪಸಾದೆ. ಬೆಂಗಳೂರಿನಲ್ಲಿ ನನ್ನ ಆರೈಕೆಯ ವ್ಯವಸ್ಥೆ ಮಾಡಿದ್ದ ಜಿ ವಿ. ರಾಮಾಚಾರ್ ಅವರಿಗೆ ಧನ್ಯವಾದ ಅರ್ಪಿಸಿ ಕಾಗದ ಬರೆದೆ.

ಗಾಂಧಿ ಹತ್ಯೆಯ ನೆಪದಲ್ಲಿ ಕಾಂಗ್ರೆಸ್ ಸರಕಾರವು ರಾಷ್ಟ್ರೀಯ ಸ್ವಯಂಸೇವಕ ಸಂಘವನ್ನೂ ತೊಡೆದು ಹಾಕಲು ಸರ್ವಶಕ್ತಿಯಿಂದ ಪ್ರಯತ್ನಿಸಿತ್ತು. ವಾಸ್ತವವಾಗಿ, ಗಾಂಧಿ ಹತ್ಯೆಗೆ ಮೊದಲೇ ಅಂದಿನ ಕೆಲವು ಕಾಂಗ್ರೆಸ್ ನಾಯಕರು, ಸಂಘವನ್ನು ಮುಳುಗಿಸಲು ಸಂಚುಹೂಡಿದ್ದರು. ತಮ್ಮ ಪಿತೂರಿ ಕೈಗೂಡಿಸಿ ಕೊಳ್ಳಲು ತಕ್ಕ ಸಮಯಕ್ಕಾಗಿ ಕಾಯುತ್ತಿದ್ದರು, ಅಷ್ಟೆ. ಅಷ್ಟರಲ್ಲಿ ಗಾಂಧೀಜಿಯವರ ಸಾವಿನಿಂದ ಸಂಚು ಗಾರರ ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತಾಯಿತು! ಸಂಘದ ಸಹಸ್ರಾವಧಿ ಕಾರ್ಯಕರ್ತರನ್ನೂ, ನಾಯಕ ರನ್ನೂ ಬಂಧಿಸಿದರು ; ಬ್ರಿಟಿಷರ ಕಾಲದಲ್ಲೂ ಜರುಗದಿದ್ದಂತಹ ಹಿಂಸಾಚಾರ ನಡೆಸಿ ಶಿಕ್ಷೆಗಳನ್ನು ಕೊಟ್ಟರು. ಸಂಘವೇ ಗಾಂಧಿ ಹತ್ಯೆಗೆ ಕಾರಣವೆಂದು ದೇಶದಾದ್ಯಂತ ಕೀಳು ಅಪಪ್ರಚಾರ ನಡೆಸಿದರು. ಆದರೆ ಕೊನೆಗೂ ಸತ್ಯವೇ ಗೆದ್ದಿತು. 1949ರ ಜುಲೈನಲ್ಲಿ ಸರಕಾರ ಸಂಘದ ಮೇಲಿನ ನಿರ್ಬಂಧವನ್ನು ಯಾವ ಷರತ್ತೂ ಇಲ್ಲದೆ ಹಿಂತೆಗೆದುಕೊಳ್ಳಬೇಕಾಯಿತು. ಸರಸಂಘಚಾಲಕರಾದ ಗುರೂಜಿಯವರು ಮೊದಲುಗೊಂಡು ಎಲ್ಲ ಕಾರ್ಯಕರ್ತರೂ ಆ ಭೀಕರ ಅಗ್ನಿಪರೀಕ್ಷೆಯಲ್ಲಿ ಪಾರಾಗಿ ಪುಟವಿಟ್ಟ ಚಿನ್ನದಂತೆ ಹೊರಗೆ ಬಂದರು. ನಾನು ಗುರೂಜಿಯವರನ್ನು ಅಭಿನಂದಿಸಿ, ತಂತಿ ಕಳಿಸಿದೆ : 'ಹಿಂದುತ್ವದ ತೇಜಸ್ವಿ ರಕ್ಷಾಶಕ್ತಿಯಾದ ಸಂಘವು ಚಿರಾಯುವಾಗಲಿ.'

ಆ ವರ್ಷ ಡಿಸೆಂಬರಿನಲ್ಲಿ ಹಿಂದು ಮಹಾಸಭೆಯ ಅಧಿವೇಶನ ಕಲ್ಕತ್ತಾದಲ್ಲಿ ಜರುಗಿತು. ಉದ್ಘಾಟನಾ ಭಾಷಣದಲ್ಲಿ, 'ಹಿಂದುಸ್ಥಾನವು ಈಗ ಹಿಂದುಗಳ ಧರ್ಮಚಕ್ರದ ಚಿಹ್ನೆಯುಳ್ಳ ಹಿಂದು ಧ್ವಜದಡಿಯಲ್ಲಿ ಸ್ಥಾಪಿತವಾಗಿರುವ ಹಿಂದುರಾಜ್ಯವಾಗಿದೆ. ಈಗ ಸಹಸ್ರಾರು ಹಿಂದು ಯುವಕರು ಭೂಸೇನೆ, ಜಲಸೇನೆ, ವಾಯುಸೇನೆಗಳಲ್ಲಿ ಸೇರಬೇಕು' ಎಂದು ಸಾರಿದೆ ಜನತೆ ತಮ್ಮ ಆಶೋತ್ತರಗಳನ್ನು ಈಡೇರಿಸಿಕೊಳ್ಳಲು ಘಟನಾತ್ಮಕ ಹಾಗೂ ಲೋಕತಂತ್ರೀಯ ಕಾನೂನುಬದ್ಧ ಸಾಧನಗಳ ಮೂಲಕ ಪ್ರಯತ್ನಿಸಬೇಕೆಂದೂ, ಪಾಕಿಸ್ತಾನದ ವಿಷಯದಲ್ಲಿ 'ಶಠಂ ಪ್ರತಿ ಶಾಠ್ಯಂ' ನೀತಿ ಅನುಸರಿಸಬೇಕೆಂದೂ ತಿಳಿಸಿ, 'ನಮ್ಮ ನೆಲೆಯನ್ನು ಮೊದಲು ಭದ್ರಪಡಿಸಿಕೊಳ್ಳುವುದು ನಮ್ಮ ಜನತೆಯ ಕರ್ತವ್ಯ; ನಾವು ನಮ್ಮ ಅಂತರಂಗಕ್ಕೂ ತಾಯ್ನೆಲಕ್ಕೂ ಪ್ರಾಮಾಣಿಕರಾಗಿ ನಡೆದುಕೊಂಡ ಪಕ್ಷದಲ್ಲಿ ಹರಿದು ಹಂಚಿಹೋದ ಭೂಭಾಗಗಳನ್ನು ಹತ್ತು ವರ್ಷ ದೊಳಗಾಗಿ ಪುನಃ ಒಂದುಗೂಡಿಸಬಲ್ಲೆವು' ಎಂಬ ಭರವಸೆಯನ್ನೂ ವ್ಯಕ್ತಪಡಿಸಿದೆ.

1950ರ ಜನವರಿ 26ರಂದು ನಮ್ಮ ರಾಷ್ಟ್ರ ಸಾರ್ವಭೌಮ ಪ್ರಜಾತಂತ್ರೀಯ ಭಾರತ ಗಣರಾಜ್ಯ ವಾಯಿತು. ರಾಷ್ಟ್ರಾಧ್ಯಕ್ಷ ಡಾ. ರಾಜೇಂದ್ರ ಪ್ರಸಾದರನ್ನು ಅಭಿನಂದಿಸುತ್ತಾ, ನಾನು ಅವರಿಗೆ ವಚನ ನೀಡಿದೆ: 'ಯಾವುದೇ ಮಟ್ಟದಲ್ಲಾದರೂ ನನ್ನ ಸರ್ವಶಕ್ತಿಯನ್ನೂ ಸುರಿದು ಗಣರಾಜ್ಯದ ಸೇವೆ ಸಲ್ಲಿಸಲು ನಾನು ಸಿದ್ಧನಿದ್ದೇನೆ. ನಮ್ಮ ನವಜಾತ ಗಣತಂತ್ರದ ರಕ್ಷಣೆಗಾಗಿ ಅತ್ಯಂತ ಬಲಿಷ್ಠವಾದ ಭೂ - ಜಲ - ವಾಯುಪಡೆಗಳನ್ನು ಕಟ್ಟುವ ಮೊಟ್ಟ ಮೊದಲ ಕಾರ್ಯಕ್ಕೆ ತಾವು ಕೂಡಲೆ ಗಮನ ಹರಿಸುತ್ತೀರೆಂದು ಆಶಿಸುತ್ತೇನೆ. ಅಖಂಡ ಭಾರತ ಚಿರಾಯುವಾಗಲಿ.'

ಅದೇ ರೀತಿ ಯುವಜನಾಂಗಕ್ಕೆ ಗಣರಾಜ್ಯೋತ್ಸವದ ಸಂದೇಶದಲ್ಲಿ 'ರಕ್ಷಣಾ ದೃಷ್ಟಿಯಿಂದ ಮಹತ್ವ ವೆನಿಸುವ ನಮ್ಮ ರಾಷ್ಟ್ರೀಯ ಗಡಿಗಳು ಇನ್ನೂ ಶತ್ರುಗಳ ವಶದಲ್ಲಿವೆ. ಕೇವಲ ಉನ್ನತ ಸಿದ್ಧಾಂತಗಳ ಜೋಗುಳ ಹಾಡಿಕೊಂಡು ನಾವು ಅವರ ಸ್ನೇಹ ಗಳಿಸಲು ಸಾಧ್ಯವಿಲ್ಲ. ಅಂಥ ಹುಸಿ ಧೋರಣೆಗಳನ್ನು ನಾವು ಅನುಸರಿಸಿದ್ದೇ ಆದರೆ, ಸುದೀರ್ಘ ರಕ್ತಮಯ ಹೋರಾಟದ ಫಲವಾಗಿ ನಾವೀಗ ಗಳಿಸಿರು ವುದನ್ನೂ ಕಳೆದುಕೊಳ್ಳಬೇಕಾದೀತು. ನಮ್ಮ ಅಸ್ತಿತ್ವ ಉಳಿಸಿಕೊಳ್ಳಲು, ಬೇರೆಯವರು ನಮ್ಮ ಬಗ್ಗೆ ಹೇಗೆ

ನಡೆದುಕೊಳ್ಳುತ್ತಾರೆಯೋ ನಾವೂ ಅವರ ಬಗ್ಗೆ ಹಾಗೆಯೇ ನಡೆದುಕೊಳ್ಳದೆ ವಿಧಿಯಿಲ್ಲ. ನಮ್ಮ ಉಳಿವಿಗೂ ಯಶಸ್ಸಿಗೂ ಭರವಸೆಯಾಗಬಲ್ಲ ಏಕಮಾತ್ರ ಮಾರ್ಗವೆಂದರೆ ಭಗವದ್ಗೀತೆಯಲ್ಲಿ ಹೇಳಿರುವಂತೆ ''ಯೇ ಯಥಾ ಮಾಂ ಪ್ರಪದ್ಯಂತೇ.....'' ಎಂಬ ನೀತಿ' ಎಂದು ತಿಳಿಸಿ, ಹಿಂದು ಯುವಕರು ಹೆಚ್ಚಿನ ಸಂಖ್ಯೆಯಲ್ಲಿ ಸೈನ್ಯಕ್ಕೆ ಸೇರಬೇಕೆಂದು ಒತ್ತಾಯಿಸಿದೆ.

ಮಾರ್ಚಿ ತಿಂಗಳಲ್ಲಿ ಪೂರ್ವ ಬಂಗಾಲದಲ್ಲಿ ಮುಸಲ್ಮಾನರಿಂದ ಹಿಂದುಗಳ ನರಮೇಧ ಆರಂಭವಾಯಿತು. ಭೀಷಣ ಹಿಂಸಾಚಾರ, ಅನಾಚಾರ, ಸಾಮೂಹಿಕ ಕೊಲೆ, ಸುಲಿಗೆ, ಮತಾಂತರ ಅಲ್ಲಿ ನಡೆಯುತ್ತಿದ್ದಂತೆ, ಪಶ್ಚಿಮ ಬಂಗಾಲದೊಳಕ್ಕೆ ಹಿಂದು ನಿರಾಶ್ರಿತರ ಪ್ರವಾಹ ಹರಿದು ಬರಲಾರಂಭಿಸಿತು. ಅಂಥ ಪರಿಸ್ಥಿತಿಯಲ್ಲಿ ಪ್ರಧಾನಿ ನೆಹರೂ ಅವರು ಪಾಕಿಸ್ತಾನದ ಪ್ರಧಾನಿ ಲಿಯಾಕತ್ ಅಲಿಖಾನರನ್ನು 'ಹಾರ್ದಿಕ ಮಾತುಕತೆ' ಗಳಿಗಾಗಿ ದಿಲ್ಲಿಗೆ ಕರೆಸಿಕೊಂಡರು ! ನಾನು ಆ ವೇಳೆಗೆ ಸಕ್ರಿಯ ರಾಜಕಾರಣದಿಂದ ದೂರವಾಗತೊಡಗಿದ್ದೆ. ಭಾರತೀಯ ಗಣತಂತ್ರದ ಸೇವೆಗೆ ನನ್ನನ್ನು ಯಾವ ರೀತಿಯಲ್ಲಾದರೂ ಉಪಯೋಗಿಸಿಕೊಳ್ಳಬಹುದೆಂದು ರಾಷ್ಟ್ರಾಧ್ಯಕ್ಷರಿಗೆ ಮನವಿ ಸಲ್ಲಿಸಿದ್ದೆ. ಆದರೂ, ಪ್ರಧಾನಿಗಳಿಬ್ಬರ ಭೇಟಿಗೆ ಶಾಂತಿಯುತ ವಾತಾವರಣ ನಿರ್ಮಿಸಲು (!) ಮತ್ತು ನನ್ನ ಬಗ್ಗೆ ಪಾಕಿಸ್ತಾನದ ಪ್ರಧಾನಿಗಳು ಮೊದಲೇ ದೂರಿಟ್ಟಿದ್ದ ಕಾರಣಕ್ಕಾಗಿ ಏಪ್ರಿಲ್ 4ರಂದು ಬೆಳಗಿನ ಜಾವ ನನ್ನನ್ನು ಮುಂಜಾಗರೂಕತೆ ಸ್ಥಾನಬದ್ಧತಾ ಶಾಸನದ ಮೇರೆಗೆ ಬಂಧಿಸಲಾಯಿತು ! ನಾನು ಬೆಳಗಾವಿಯ ಜೈಲಿಗೆ ಸಾಗಿಸಲ್ಪಟ್ಟೆ. ಅದೇ ಸುಮಾರಿನಲ್ಲಿ ದಿಲ್ಲಿಯ ನಾಗರಿಕರು ನನಗಾಗಿ ಏರ್ಪಡಿಸಿದ್ದ ಸತ್ಕಾರಕೂಟ ಮತ್ತು ರೋಟಕ್‌ನಲ್ಲಿ ನಡೆಯಲಿದ್ದ ಹಿಂದು ಸಮ್ಮೇಳನಕ್ಕೆ ನಾನು ಹೋಗದಂತೆ ಮಾಡಿದ ಶ್ರೇಯಸ್ಸು ಸರಕಾರಕ್ಕೆ ಸಿಕ್ಕಿತು !

ಸರಕಾರದ ಈ ಕ್ರಮವನ್ನು ರಾಜಕೀಯ ನಾಯಕರುಗಳು, ಮುಂಬೈನ 'ಪೌರ ಸ್ವಾತಂತ್ರ್ಯ ಸಂಘ' ಗಳಂತಹ ಸ್ವಾತಂತ್ರ್ಯ ಪ್ರೇಮಿ ಸಂಸ್ಥೆಗಳು ಮತ್ತು ಎಲ್ಲ ಪತ್ರಿಕೆಗಳೂ ಬಲವಾಗಿ ಖಂಡಿಸಿದವು. ನಿಷ್ಪಕ್ಷಪಾತ ನಿಲುವಿಗೆ ಹೆಸರಾದ 'ಫ್ರೀ ಪ್ರೆಸ್ ಜರ್ನಲ್' ಏಪ್ರಿಲ್ 5ರಂದು 'ಹಿಂದು ಮಹಾಸಭೆ ಮತ್ತು ಆರ್.ಎಸ್.ಎಸ್. ನಾಯಕರ ಹಾಗೂ ಕಾರ್ಯಕರ್ತರ ಮೇಲೆ ಸರಕಾರದ ದಾಳಿಯಿಂದ ತಿಳಿಯುವುದಿಷ್ಟು: ಮಹಾಪ್ರಧಾನಿ ಪಂಡಿತ ನೆಹರೂರವರು ಪಾಕಿಸ್ತಾನವನ್ನು ತೃಪ್ತಿಪಡಿಸಲು ಭಾರತದ ಸ್ವಾತಂತ್ರ್ಯವನ್ನೂ, ಏಕತೆಯನ್ನೂ ಗಂಡಾಂತರಕ್ಕೆ ಈಡುಮಾಡಲು ಮನಸ್ಸು ಮಾಡಿದ್ದಾರೆ. ಹಿಂದು ಮಹಾಸಭೆ ಮತ್ತು ಆರ್.ಎಸ್.ಎಸ್.ಗಳ ಮೇಲೆ ಬೀಳುತ್ತಿರುವುದಕ್ಕೆ ಎರಡು ಮುಖ್ಯವಾದ ಉದ್ದೇಶವಿದೆ. ತುಷ್ಟೀಕರಣ ನೀತಿಯಿಂದ ಭಾರತದ ಗಮನವನ್ನು ಬೇರೆ ಕಡೆಗೆ ತಿರುಗಿಸುವುದು ; ಮತ್ತು ಹಿಂದುಗಳು ಏನೋ ಒಳಸಂಚು ಮಾಡುತ್ತಿದ್ದಾರೆಂಬ ಗುಲ್ಲೆಬ್ಬಿಸಿ, ಉಳಿದ ಶಕ್ತಿಗಳನ್ನು ಪಾಕಿಸ್ತಾನದ ತುಷ್ಟೀಕರಣ ನೀತಿಯ ಬೆಂಬಲಕ್ಕೆ ಎಳೆದುಕೊಳ್ಳುವುದು.'

ನೆಹರೂರವರು ಅನಂತರ 1951ರ ಏಪ್ರಿಲ್ 8ರಂದು 'ಶುದ್ಧ ಜಾತ್ಯಾತೀತ ವಾತಾವರಣ'ದಲ್ಲಿ ನೆಹರು-ಲಿಯಾಕತ್ ಒಪ್ಪಂದಕ್ಕೆ ಸಹಿ ಹಾಕಿದರು. ಪಾಕಿಸ್ತಾನ ಅದರ ಪೂರ್ಣ ಫಲ ಪಡೆಯಿತು. ಆದರೆ, ನನ್ನ ಮೇಲೆ ಯಾವುದೇ ನಿರ್ದಿಷ್ಟ ಆಪಾದನೆ ರುಜುವಾತುಪಡಿಸಲಾಗದಿದ್ದರೂ ಸರಕಾರ ನನ್ನನ್ನು ಬಿಡುಗಡೆ ಮಾಡಲಿಲ್ಲ. 'ಅನಾರೋಗ್ಯ ಹಾಗೂ ವೃದ್ಧಾಪ್ಯದಲ್ಲಿ ಸಾವರಕರರನ್ನು ಹಿಡಿದಿಟ್ಟಿರುವುದು ತೀರ ದುಃಖಕರ. ರಾಷ್ಟ್ರದ ಮಾನ ಮರ್ಯಾದೆಗಳಿಗೇ ಅದೊಂದು ಕಲಂಕ. ಉದ್ದಾಮ ರಾಷ್ಟ್ರಯೋಧರಾದ ಅವರ ಬಂಧನದ ಬಗ್ಗೆ ವಿದೇಶಿ ಪತ್ರಿಕೆಗಳು ಸಹ ಅಚ್ಚರಿಯನ್ನು ವ್ಯಕ್ತಪಡಿಸಿವೆ' ಎಂದು ರಾ.ಸ್ವ. ಸಂಘದ

ಸರಸಂಘಚಾಲಕರಾದ ಗುರೂಜಿಯವರು ಒಂದು ಹೇಳಿಕೆ ನೀಡಿದರು ಅನೇಕ ದಿನಗಳು ನ್ಯಾಯಾಲಯ ದಲ್ಲಿ ಹೋರಾಡಿದ ನಂತರ ನನ್ನ ಬಿಡುಗಡೆಯಾಯಿತು. ಆದರೆ ಚುನಾವಣೆ ಸಮೀಪಿಸುವವರೆಗೆ ರಾಜ ಕೀಯದಲ್ಲಿ ನಾನು ಭಾಗವಹಿಸದಂತೆ ನಿರ್ಬಂಧ ಹೇರಲಾಗಿತ್ತು. ಆಡಳಿತ ಪಕ್ಷ ಹಾಗೂ ಅದರ ನಾಯಕರು ಶಾಸನಯಂತ್ರವನ್ನು ದುರುಪಯೋಗಪಡಿಸಿಕೊಂಡು ಉಳಿದೆಲ್ಲ ಪ್ರತಿಪಕ್ಷಗಳನ್ನೂ ನಿರ್ಮೂಲಗೊಳಿ ಸಲು, ಸರ್ವಾಧಿಕಾರ ಗಳಿಸಲು ಬಳಸುತ್ತಿದ್ದ ಮಹಾ ಅಸ್ತ್ರ ಇದು! ಸರಕಾರದ ಕೋಟಲೆಗಳಿಂದಾಗಿ ನಾನು ಹಿಂದು ಮಹಾಸಭೆಗೆ ರಾಜೀನಾಮೆ ಸಲ್ಲಿಸಬೇಕಾಯಿತು. ಶಾಸನಾರೂಢರಾಗಿದ್ದ ನನ್ನ ದೇಶದ ಜನರ ವಿರುದ್ಧವೇ ಹೋರಾಟಕ್ಕೆ ನಿಲ್ಲುವುದು ನನ್ನ ಮನಸ್ಸಿಗೆ ಅತೀವ ದುಃಖದ ಸಂಗತಿಯಾಗಿತ್ತು.

1950ರ ಆಗಸ್ಟ್ 15 ಸಮೀಪಿಸಿತು. ಪ್ರತಿ ಆಗಸ್ಟ್ 15ರಂದು 'ಸಾವರಕರ್ ಸದನ'ದ ಮೇಲೆ ರಾಷ್ಟ್ರಧ್ವಜ ಹಾರಿಸುತ್ತಿದ್ದೆ. ಆದರೆ ಈ ಬಾರಿ ಘನ ಸರ್ಕಾರವು ಅದನ್ನೇ ಒಂದು 'ರಾಜಕೀಯ ಕಾರ್ಯ' ಎಂದು ಪರಿ ಗಣಿಸಿ ನನಗೆ ಶಿಕ್ಷೆ ವಿಧಿಸಿದರೆ? ಆದ್ದರಿಂದ ಮೊದಲೇ ಆ ಬಗ್ಗೆ ವಿಚಾರಿಸಿದೆ ಆಗ ಗೃಹಖಾತೆಯು ಉದಾರ ಹೃದಯದಿಂದ, ಧ್ವಜ ಹಾರಿಸಲು ಅನುಮತಿಸಿತು; ಆದರೆ ಭಾಷಣ ಮಾಡಬಾರದೆಂದು ಎಚ್ಚರಿಕೆಯನ್ನೂ ನೀಡಿತು! ಬಹುಶಃ ಮಂತ್ರಿಗಳಲ್ಲದವರಿಗೆ ಸ್ವಾತಂತ್ರ್ಯದ ಬಗ್ಗೆ ಭಾಷಣ ಮಾಡುವ 'ಸ್ವಾತಂತ್ರ್ಯ' ಇಲ್ಲ ಎಂದು ಭಾವಿಸಿರಬೇಕು! ಆ ಅಪಮಾನವನ್ನೂ ನಾನು ಮೌನವಾಗಿ ನುಂಗಿಕೊಂಡೆ.

ರಾಜಕಾರಣ, ಅಧಿಕಾರ ಗಳಿಕೆ, ಸ್ವಾರ್ಥಸಾಧನೆ, ಇವು ಎಂದೂ ನನ್ನ ಜೀವನಧ್ಯೇಯ ಆಗಿರಲಿಲ್ಲ. ದೇಶಸೇವೆಯೇ ನನ್ನ ಏಕಮಾತ್ರ ಗುರಿಯಾಗಿತ್ತು. ರಾಜಕೀಯದಲ್ಲಿ ಭಾಗವಹಿಸದೆಯೂ ದೇಶಸೇವೆ ಮಾಡಬಹುದೆಂಬ ಸಂಗತಿ ನನಗೆ ತಿಳಿದಿತ್ತು. ಅದಕ್ಕೆ ತಕ್ಕ ಬುದ್ಧಿಶಕ್ತಿಗಳನ್ನೂ ನನಗೆ ದೇವರು ಕರುಣಿಸಿದ್ದ. ರಾಜಕೀಯ ಬಿಟ್ಟರೆ ಸತ್ತಂತೆ, ಎಂಬಂಥ ದುರ್ಗತಿ ನನಗೆ ಬಂದಿರಲಿಲ್ಲ! ಸಮಾಜ ಸುಧಾರಣೆ, ಲಿಪಿಶುದ್ಧಿ, ಭಾಷಾಶುದ್ಧಿ, ಪಂಚಾಂಗ ಸುಧಾರಣೆ ಮುಂತಾದ ಕಾರ್ಯಗಳಲ್ಲಿ ನಾನು ಮಗ್ನನಾದೆ.

ಆ ವರ್ಷ ನನ್ನ ಪತ್ನಿ ಯಮುನಾಗೆ ಪುಣೆ ಮಹಿಳೆಯರಿಂದ ಭಾರಿ ಸತ್ಕಾರ ಸಮಾರಂಭ. ಹತ್ತು ಸಹಸ್ರ ರೂ. ನಿಧಿಯನ್ನೂ ಅವಳಿಗೆ ಅರ್ಪಿಸಿದರು. ಯಮುನಾಗೆ ಸಾರ್ವಜನಿಕ ಭಾಷಣ ಮಾಡಿ ರೂಢಿಯಿಲ್ಲ. ಅದುವರೆಗೆ ಒಮ್ಮೆಯೂ ಸಾರ್ವಜನಿಕರಿಗೆ ಮುಖ ತೋರಿಸಿಕೊಂಡವಳಲ್ಲ ಅವಳು. ಜೀವನವಿಡೀ ಸಹನೆ ಹಾಗೂ ಶ್ರದ್ಧೆಗಳೇ ಮೂರ್ತಿವೆತ್ತಂತೆ ಇದ್ದವಳು. ಹಾಗೂ ಹೀಗೂ ಒಂದು ಭಾಷಣ ಬರೆದುಕೊಂಡು ಹೋಗಿದ್ದಳು. ಅದನ್ನು ಮತ್ತೊಬ್ಬರು ಓದಿದರು : 'ಕೇವಲ ದೇವರ ಕಾಲಡಿಯ ಒಂದು ಹೂವಿನಂತೆ ನಾನಿದ್ದೇನೆ, ಅಷ್ಟೆ. ಈ ಹೂವಿಗೆ ಏನಾದರೂ ಯೋಗ್ಯತೆ ಇದ್ದರೆ, ಅದಕ್ಕೆ ದೇವರ ಮೇಲೆ ಹೂವಿಗಿರುವ ಶ್ರದ್ಧಾಭಕ್ತಿಗಳೇ ಕಾರಣ. ಚಿಕ್ಕಂದಿನಲ್ಲಿ ನಾನೂ ''ಅಭಿನವ ಭಾರತ'' ದ ಮಹಿಳಾ ಶಾಖೆಯ ಸದಸ್ಯೆಯಾಗಿ, ಪ್ರತಿಜ್ಞೆ ಸ್ವೀಕರಿಸಿದ್ದೆ; ಅದಕ್ಕಾಗಿಯೇ, ನಾನು ಅನುಭವಿಸಬೇಕಾಗಿ ಬಂದ ಕಷ್ಟನಷ್ಟಗಳೆಲ್ಲವನ್ನೂ ದಿಟ್ಟ ವಾಗಿ, ಸ್ವಲ್ಪವೂ ಗೊಣಗಾಟವಿಲ್ಲದೆ ಸಹಿಸಿಕೊಂಡೆ. ಇಂದು ನೀವು ನೀಡುತ್ತಿರುವ ಸನ್ಮಾನವು ನಿಜಕ್ಕೂ, ನನ್ನ ಜೀವನಪುಷ್ಪವು ಯಾರ ಪಾದಾರವಿಂದಕ್ಕೆ ಅರ್ಪಿತವಾಗಿದೆಯೋ, ಆ ಭಗವಂತನಿಗೇ ಸಲ್ಲಬೇಕು.' ಅವಳ ಮನೋಭಾವನೆ ಅದೆಷ್ಟು ಸರಳಸುಂದರ; ಸ್ನಿಗ್ಧ, ವಿನಮ್ರ ಹಾಗೂ ಸುಮಧುರ!

1951ರ ಆಗಸ್ಟ್‌ನಲ್ಲಿ ಪ್ರಧಾನಿ ಪಂ. ನೆಹರೂರವರಲ್ಲಿ ನಾನು ವಿನಂತಿಸಿಕೊಂಡೆ. 'ಪಾಕಿಸ್ತಾನದ ಆಕ್ರಮಣದ ವಿರುದ್ಧ ಭಾರತವನ್ನು ರಕ್ಷಿಸಲು ಹೋರಾಡುತ್ತಾ ಮಡಿಯಬೇಕೆಂಬುದೇ ನನ್ನ ಕೊನೆಯಾಸೆ' ಎಂದು. ಅದಕ್ಕೆ ಪ್ರತ್ಯುತ್ತರವೋ ಎಂಬಂತೆ 'ಗಾಂಧಿ ಹತ್ಯೆಗೆ ಹಿಂದು ಮಹಾಸಭೆಯೇ ಕಾರಣ' ಎಂದು

ಆರಂಭವಾಯಿತು, ಅವರ ಚುನಾವಣಾ ಪ್ರಚಾರ! ಅದು - ಹಿಂದು ಮಹಾಸಭೆಯು ನಿರ್ದೋಷಿಯೆಂದು ಸಾರಿದ್ದ ನ್ಯಾಯಾಲಯದ ತೀರ್ಪಿಗೆ ಮಹಾ ಪ್ರಧಾನರು ಕೊಟ್ಟ ಪುರಸ್ಕಾರ!

1857ರಿಂದ 1947ರ ವರೆಗೆ ಸ್ವದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಹುತಾತ್ಮರು, ವೀರಾತ್ಮರು ಹಾಗೂ ಕಾರ್ಯಕರ್ತರೆಲ್ಲರಿಗೂ ರಾಷ್ಟ್ರೀಯ ಗೌರವ ಸಲ್ಲಿಸುವ ಮತ್ತು 'ಅಭಿನವ ಭಾರತ'ವನ್ನು ಮುಕ್ತಾಯಗೊಳಿಸುವ ಸಮಾರಂಭವು ಪುಣೆಯಲ್ಲಿ ಏರ್ಪಟ್ಟಿತ್ತು. 1951ರ ಮೇ ತಿಂಗಳಲ್ಲೇ ಅದನ್ನು ನಡೆಸಬೇಕೆಂದಿದ್ದೆ; ಆದರೆ ಆಗ ನನ್ನ ಮೇಲೆ ಸರಕಾರವು ಹೇರಿದ್ದ ನಿರ್ಬಂಧಗಳಿಂದಾಗಿ ಅದನ್ನು ಒಂದು ವರ್ಷ ಕಾಲ ಮುಂದೂಡಬೇಕಾಯಿತು. 1952ರ ಮೇ 10ರಿಂದ 12ರ ವರೆಗೆ ಮೂರು ದಿನಗಳು ಆ ಸಮಾರಂಭವು ವಿಜೃಂಭಣೆಯಿಂದ ಜರುಗಿತು. ಪ್ರಾರಂಭದ ಭಾಷಣದಲ್ಲೇ ನಾನೆಂದೆ: 'ಭಾರತದ ಇಷ್ಟು ವಿಶಾಲವಾದ ಭೂಭಾಗವು ಸ್ವತಂತ್ರಗೊಂಡುದನ್ನು ಕಂಡ ನಾನು ಧನ್ಯ; ಶಿವಾಜಿ ಮಹಾರಾಜರು ಮತ್ತು ಲೋಕಮಾನ್ಯ ತಿಲಕರಿಗಿಂತಲೂ ಹೆಚ್ಚು ಭಾಗ್ಯವಂತ... ಪ್ರಚಂಡ ಚಳವಳಿಗಳನ್ನು ಆರಂಭಿಸಿ, ಅವುಗಳ ನೇತೃತ್ವ ವಹಿಸಿ ಕೊನೆಮುಟ್ಟಿಸಿದ ನಂತರ ಅಧಿಕಾರದ ವ್ಯಾಮೋಹವಿಲ್ಲದೆ ಶ್ರೀಸಾಮಾನ್ಯ ಪ್ರಜೆಯಾಗಿ ಉಳಿಯುವುದರಲ್ಲಿ ತೃಪ್ತಿ ಕಾಣುವುದು, ಭಾರತದ ರಾಷ್ಟ್ರಾಧ್ಯಕ್ಷ ಸ್ಥಾನಕ್ಕೆ ಏರುವುದಕ್ಕಿಂತಲೂ ದೊಡ್ಡ ಭಾಗ್ಯದ ಸಂಗತಿ!'

ಮೇ 10ರಂದು ಸಂಜೆ ಸಮಾರಂಭದ ಸಲುವಾಗಿ ನಿರ್ಮಿಸಿದ್ದ 'ಕ್ರಾಂತಿಸ್ಮೃತಿ ನಗರ'ದಲ್ಲಿ ಸ್ಮಾರಕ ಸ್ತಂಭ ಸ್ಥಾಪಿಸಲಾಯಿತು. ನೇತಾಜಿ ಸುಭಾಷಚಂದ್ರ ಬೋಸರ ಭಾವಚಿತ್ರವನ್ನು ಆ ಸಭೆಯ ಅಧ್ಯಕ್ಷ ಸ್ಥಾನದಲ್ಲಿಟ್ಟೆವು. ಸೇನಾಪತಿ ಬಾಪಟ್ ಅಂದಿನ ಸಕ್ರಿಯ ಅಧ್ಯಕ್ಷರು. ನಾನು ಭಾಷಣದ ಕೊನೆ ತಲುಪುತ್ತಿದ್ದಂತೆ ದುಃಖ ಉಮ್ಮಳಿಸಿತು . 'ದೇಶದ ಮುಕ್ಕಾಲು ಭಾಗ ಸ್ವತಂತ್ರಗೊಂಡಿದೆ; ನಿಜಕ್ಕೂ ಇದು ಆನಂದದ ಸಂಗತಿ. ಆದರೆ ಸಿಂಧು ?... ಓ ಸುರಸರಿತೆ ಸಿಂಧು! ನಿನ್ನನ್ನು ಅದೆಂತು ಮರೆಯಬಲ್ಲೆವು ? ಒಂದಲ್ಲ ಒಂದು ದಿನ ಹಿಂದುಸ್ಥಾನವು ಎಚ್ಚೆತ್ತು ನಿನ್ನನ್ನು ಮುಕ್ತಗೊಳಿಸುತ್ತದೆ!' ಎಂದೆ.

ಅಂದಿನ ಸಮಾರಂಭಕ್ಕೆ ಆಹ್ವಾನಿತರಾಗಿ ಬಂದಿದ್ದ ರಾ.ಸ್ವ. ಸಂಘದ ಸರಸಂಘಚಾಲಕರಾದ ಗುರೂಜಿಯವರು, 'ಕ್ರಾಂತಿಕಾರಿಗಳಷ್ಟೇ ಸ್ಫೂರ್ತಿ ಹಾಗೂ ತ್ಯಾಗ ಭಾವನೆಯಿಂದ ರಾಷ್ಟ್ರಕ್ಕಾಗಿ ಪರಿಶ್ರಮಿಸಬೇಕೆಂದು' ಯುವ ಜನಾಂಗಕ್ಕೆ ಕರೆಯಿತ್ತರು.

1952ರ ನವೆಂಬರ್‌ನಿಂದ ನಾನು ಹಿಂದು ಇತಿಹಾಸದ 'ಸುವರ್ಣ ಪುಟ'ಗಳ ಬಗ್ಗೆ ಉಪನ್ಯಾಸಮಾಲೆ ಆರಂಭಿಸಿದೆ. ನಾಸಿಕದಲ್ಲಿ ನಿರ್ಮಿಸಬೇಕೆಂದಿದ್ದ ಕ್ರಾಂತಿವೀರರ ಸ್ಮಾರಕ ಭವನಕ್ಕಾಗಿ ಧನಸಂಗ್ರಹವನ್ನೂ ಮಾಡಿದೆ. ಮೇ 10ರಂದು ಆ ಸ್ಮಾರಕದ ಉದ್ಘಾಟನೆ ನೆರವೇರಿತು. ಅದನ್ನು ನಿರ್ಮಿಸಿದ್ದುದು, ಹಿಂದೆ ನಾವು 'ಮಿತ್ರ ಮೇಳ'ವನ್ನು ಸ್ಥಾಪಿಸಿ ಗುಪ್ತ ಸಭೆಗಳನ್ನು ನಡೆಸುತ್ತಿದ್ದ ಜಾಗದಲ್ಲೇ. ಒಳಗೆ ಪ್ರವೇಶಿಸುತ್ತಿದ್ದಂತೆಯೇ ಬಾಲ್ಯದ ಬೈಠಕ್‌ಗಳು, ವಾದವಿವಾದಗಳು, ಆಟಪಾಟಗಳು ನೆನಪಿಗೆ ಬಂದವು. ಮಸ್ಕರ್, ಆಬಾ, ಬಾಬಾ.... ಅಸಂಖ್ಯ ಗೆಳೆಯರು ಸ್ಮರಣೆಯ ಅಂಗಳಕ್ಕಿಳಿದು ಬಂದರು. ಕೊನೆಗೆ ಸಂತೋಷಸಮಾಧಾನಗಳಿಂದ ಹೃದಯ ಹಿಗ್ಗಿತು; ಕಣ್ಣು ಮಿಂಚಿತು. ಮರುದಿನ ಸಂಜೆ ನನ್ನ ಹುಟ್ಟೂರಾದ ಭಗೂರಿಗೆ ಹೋದೆ. ಊರ ಹೊರಗೆ ನನ್ನ ಕುಲದೇವಿಯಿದ್ದ ದೇವಾಲಯ ಸಿಕ್ಕಿತು. ನಾನು ಸಾಮಾನ್ಯವಾಗಿ ಎಂದೂ ದೇವಸ್ಥಾನಗಳಿಗೆ ಹೋಗುತ್ತಿರಲಿಲ್ಲ. ಆದರೆ ಇಂದು ವಾಹನದಿಂದ ಕೆಳಗಿಳಿದು ಪಾದರಕ್ಷೆ ಕಳಚಿದೆ; ದೇವಾಲಯದೊಳಗೆ ಭಕ್ತಿಭಾವದಿಂದ ನಡೆದುಹೋಗಿ ಗಂಟೆ ಬಾರಿಸಿದೆ. ದೇವಿಗೆ ಕೈಮುಗಿದು


ಯಮುನಾ ಬಾಯಿ

ಹೊರಗೆ ಬಂದೆ. ಅಲ್ಲಿನ ಪುರಸಭೆಯು ಸತ್ಕಾರ ಸಮಾರಂಭ ನಡೆಸಿತು. ಅನಂತರ, ಬ್ರಿಟಿಷ್ ಸರಕಾರದಿಂದ ಹರಾಜಾಗಿ ಬೇರೆಯವರ ವಶದಲ್ಲಿದ್ದ 'ನಮ್ಮ ಮನೆ'ಗೆ ಹೋದೆ. ಅಲ್ಲಿ ಕೆಲ ನಿಮಿಷಗಳು ಭಾವಪರವಶನಾಗಿ ಕುಳಿತಿದ್ದು ಮೇಲೆದ್ದೆ. ನಾನು ಐದಾರು ದಶಕಗಳ ಹಿಂದೆ ಎಲ್ಲಿ ಪ್ರತಿಜ್ಞೆ ಕೈಗೊಂಡೆನೋ ಅದೇ ದೇವರ ಕೋಣೆಗೆ ಮತ್ತೊಮ್ಮೆ ಬಂದು ಆ ಪ್ರತಿಜ್ಞೆ ಪೂರೈಸಿದ ಸಮಾರಂಭವನ್ನು ಆಚರಿಸ ಬೇಕೆಂದುಕೊಂಡೆ.

1953ರ ಜೂನ್ 23ರಂದು ಡಾ. ಶ್ಯಾಮಪ್ರಸಾದ ಮುಖರ್ಜಿಯವರ ನಿಧನದ ಸುದ್ದಿ ಕೇಳಿದೆ. ಮೂರು ಬಾರಿ ವಿಚಾರಿಸಿ ಅದನ್ನು ನಿಜವೆಂದು ಸಿದ್ಧಪಡಿಸಿಕೊಳ್ಳು ವವರೆಗೆ ನನಗೆ ನಂಬಿಕೆಯೇ ಆಗಲಿಲ್ಲ. ಕಾಶ್ಮೀರ ವಿಲೀನೀಕರಣದ ಸತ್ಯಾಗ್ರಹದ ನಾಯಕರಾಗಿ 'ಏಕ ವಿಧಾನ, ಏಕ ಪ್ರಧಾನ, ಏಕ ನಿಶಾನ'ಗಳಿಗಾಗಿ ಹೋರಾಡುತ್ತಾ, ಶೇಖ್ ಅಬ್ದುಲ್ಲನ ಜೈಲಿನಲ್ಲಿ ಅವರು ಸಂಶಯಾಸ್ಪದ ರೀತಿಯಲ್ಲಿ ತಮ್ಮ ಪ್ರಾಣ ಒಪ್ಪಿಸಿದ್ದರು. ಪಂ. ನೆಹರೂರವರು ಕಾಶ್ಮೀರವನ್ನೂ ಒಳಗೊಂಡಂತಹ ವಿಶಾಲ ದೇಶಕ್ಕೆ ಪ್ರಧಾನಿಗಳಾಗಬೇಕೆಂದು ಅವರು ಬಯಸಿದ್ದರು. ಆದರೆ, ಶೇಖ್ ಅಬ್ದುಲ್ಲನ ಪರಮ ಮಿತ್ರರಾಗಿದ್ದ ನೆಹರೂರವರು ಶ್ಯಾಮಪ್ರಸಾದ ಮುಖರ್ಜಿಯವರನ್ನು ದ್ವೇಷಬುದ್ಧಿಯಿಂದ ಕಂಡರು. ತಮ್ಮ ಮಿತ್ರನಿಗೆ ತೊಂದರೆ ತಪ್ಪಿಸಲು, ಶ್ಯಾಮಪ್ರಸಾದರ ಮರಣದ ಬಗ್ಗೆ ನ್ಯಾಯಾಂಗ ತನಿಖೆ ಏರ್ಪಡಿಸಲು ಸಹ ನಿರಾಕರಿಸಿದರು !

ಆಕ್ರಮಣಕಾರಿ ಚೀನಾದ ಬಾಯಿಗೆ ಅಸಹಾಯ ಟಿಬೆಟನ್ನು ದೂಡಿ, ಪ್ರಧಾನಿ ನೆಹರೂರವರು ಪಂಚಶೀಲ ಹಾಗೂ ಹಿಂದಿ-ಚೀನೀ ಭಾಯಿ ಭಾಯಿ ಹಾಡಿದುದೂ ಇದೇ ಸಮಯದಲ್ಲೆ. ಅದರ ಪರಿಣಾಮವಾಗಿ ಚೀನಾ ತನ್ನ ಆಕ್ರಮಕ ಹಸ್ತವನ್ನು ಭಾರತದ ಗಡಿಯೊಳಕ್ಕೂ ಚಾಚಿತು !

ಈ ಎಲ್ಲ ಅನಿಷ್ಟ ಘಟನೆಗಳ ಕಾರ್ಮೋಡದ ನಡುವೆಯೂ ಒಂದು ಆನಂದದ ಮಿಂಚು : ಭಾರತ ಸರ್ಕಾರದ ನಿಷ್ಕ್ರಿಯ ನೀತಿಯನ್ನು ಕಂಡು ನಿರಾಸೆಗೊಂಡ ಕೆಲವು ಸ್ವಾತಂತ್ರ್ಯ ಪ್ರೇಮಿ ಭಾರತೀಯ ಯುವಕರು ಪೋರ್ಚುಗೀಸರ ವಶದಲ್ಲಿದ್ದ ಮಾಹೆ, ದಾದ್ರಾ, ನಗರ ಹವೇಲಿಗಳನ್ನು ತಮ್ಮ ತೋಳ್ಬಲದಿಂದ ಮುಕ್ತಗೊಳಿಸಿದರು. ಈ ವೀರ ತರುಣರನ್ನು ಅಭಿಂದಿಸಿ ಸಂದೇಶ ಕಳುಹಿಸುವ ಸುಯೋಗ ನನಗೆ ಸಿಕ್ಕಿತು.

1954ರ ನವೆಂಬರ್ 7ರಂದು ಬೆಳಿಗ್ಗೆ ಹತ್ತು ಗಂಟೆಯಾಗಿತ್ತು. ಪುಣೆಯಿಂದ ಬಂದಿದ್ದ ಕೃಷ್ಣರಾವ್ ಗಾಂಗುರ್ಡೆಯ ಜತೆ ಮಾತನಾಡುತ್ತಿದ್ದೆ. ನನ್ನ ಹಳೆಯ ಗೆಳೆಯರೊಬ್ಬರು ಒಳಗೆ ಪ್ರವೇಶಿಸಿದರು. ಅವರನ್ನು ನೋಡಿ ನಾಲ್ಕು ದಶಮಾನಗಳ ಮೇಲೆ ನಾಲ್ಕು ವರ್ಷಗಳು ಉರುಳಿಹೋಗಿದ್ದವು. ಬಂದವರು ಲಂಡನ್ ಗೆಳೆಯ ನಿರಂಜನ ಪಾಲ್ ! ತಮ್ಮ ಮಗನನ್ನೂ ಒಡನೆಯೇ ಕರೆತಂದಿದ್ದರು. ಅರ್ಧ ಶತಮಾನದಷ್ಟು

ನಮ್ಮ ಜೀವನದ ಪುರಾಣಗಳ ಪುನಃಸ್ಮರಣೆ ಮಾಡಿಕೊಂಡೆವು ಕೊನೆಗೆ ಪಾಲ್‌ಬಾಬು ಹೇಳಿದರು ಭಾರತವನ್ನು ಪೂರ್ತಿಯಾಗಿ ಸ್ವತಂತ್ರಗೊಳಿಸಿ, ಸಾವರಕರರನ್ನು ಮೊದಲ ರಾಷ್ಟ್ರಾಧ್ಯಕ್ಷರನ್ನಾಗಿ ಮಾಡ ಬೇಕೆಂದು ಅಭಿನವಭಾರತದ ಕ್ರಾಂತಿಕಾರಿಗಳಾದ ನಾವೆಲ್ಲರೂ ನಿಶ್ಚಯಿಸಿಕೊಂಡಿದ್ದೆವು ಈಗ ಹಿಂದು ಸ್ಥಾನವೇನೋ ಸ್ವತಂತ್ರವಾಯಿತು; ಆದರೆ ವೀರ ಸಾವರಕರ್ ಸಣ್ಣದೊಂದು ಮನೆಯಲ್ಲಿ ವಾಸಿಸುತ್ತಿದ್ದಾರೆ ಮತ್ತು ನಾವು ಯಾರೂ ಕಲ್ಪಿಸದಿದ್ದಂತಹ ಹಾಗೂ ಅಂದು ನಮ್ಮ ಪೈಕಿ ಯಾರ ಗಮನಕ್ಕೂ ಬಾರದಿದ್ದಂತಹ ಅಪಾತ್ರರು ಇಂದು ಸ್ವತಂತ್ರ ಹಿಂದುಸ್ಥಾನದ ರಾಜಪಟ್ಟಕ್ಕೇರಿದ್ದಾರೆ. ದೇಶದ ದೃಷ್ಟಿಯಿಂದ ಎಂಥ ದೌರ್ಭಾಗ್ಯದ ಸಂಗತಿ!

ಅದಕ್ಕೆ ನಾನೆಂದೆ : ಪಾಲಜೀ, ನೀವು ನನ್ನನ್ನು ಬಲ್ಲಿರಿ ; ಅಧ್ಯಕ್ಷನಾಗುವ ಬಯಕೆ ನನಗಿಲ್ಲ. ಇಂದು ಅಧಿಕಾರದಲ್ಲಿರುವ ಜನರು ಯಾರೆಂದುಕೊಂಡಿದ್ದೀರಿ ? ನಮ್ಮವರೇ! ಅವರು ಇಂಗ್ಲಿಷರಾಗಲೀ ಅಥವಾ ಇನ್ನಿತರ ಪಾಶ್ಚಾತ್ಯರಾಗಲೀ ಅಲ್ಲ. ಅವರು ಸ್ವಾತಂತ್ರ್ಯ ಉಳಿಸಲಾರರು ಅಥವಾ ದೇಶಹಿತ ಸಾಧಿಸಲಾರರು ಎಂದು ಅನಿಸಿದರೆ, ಅವರನ್ನು ಬದಲಾಯಿಸುವುದು ಬಹು ಸುಲಭ. ಚುನಾವಣೆಯಲ್ಲಿ ಅವರಿಗೆ ಮತ ನೀಡದಿದ್ದರಾಯಿತು ! ನಾನು ಇದೇ ದೇಹದಲ್ಲಿ ಇದೇ ಕಣ್ಣುಗಳಿಂದ ಸ್ವಾತಂತ್ರ್ಯವನ್ನು ಕಾಣುವಂತಾದುದು ನಿಜಕ್ಕೂ ಆನಂದದ ಸಂಗತಿ. ಈಗ ಅದನ್ನು ಉಳಿಸಿಕೊಳ್ಳಲು ನಾವು ಸರ್ವರೀತಿಯ ಪ್ರಯತ್ನಗಳನ್ನೂ ನಡೆಸುವುದು ಅಗತ್ಯ.

1956ರ ಮಧ್ಯಭಾಗದಲ್ಲಿ ಪುಣೆಯಲ್ಲಿ ತಿಲಕರ ಶತಮಾನೋತ್ಸವ ಸಮಾರಂಭ ನೆರವೇರಿತು. ಆದರೆ, ಭಾರತದಲ್ಲಿ ರಾಜಕೀಯ ಅಸಂತೋಷದ ಜನಕರೂ, ಭಾರತೀಯ ಸ್ವಾತಂತ್ರ್ಯದ ಪ್ರಮುಖ ಶಿಲ್ಪಿಯೂ ಆದ ಅವರ ಶತಮಾನೋತ್ಸವವನ್ನು ರಾಷ್ಟ್ರದ ಆಡಳಿತ ಕೇಂದ್ರವಾದ ದಿಲ್ಲಿಯಲ್ಲಿ ಅಧಿಕೃತವಾಗಿ ಆಚರಿಸ ದಿದ್ದುದು ಆಶ್ಚರ್ಯದ ಸಂಗತಿ ಮಾತ್ರವಲ್ಲ, ಇಡೀ ದೇಶಕ್ಕೇ ಅಪಮಾನ ಸಂಗತಿ !

1857ರ ಸ್ವಾತಂತ್ರ್ಯ ಸಂಗ್ರಾಮ ನಡೆದು 1957ಕ್ಕೆ ನೂರು ವರ್ಷಗಳಾದವು. ದಿಲ್ಲಿಯ ಲಾಲಾ ಹಂಸರಾಜಗುಪ್ತರ ಅಧ್ಯಕ್ಷತೆಯಲ್ಲಿ ಶತಮಾನೋತ್ಸವ ಸಮಿತಿ ರಚಿತವಾಯಿತು ; ಮುಖ್ಯ ಅತಿಥಿಯಾಗು ವಂತೆ ನನಗೆ ಆಹ್ವಾನ ಬಂತು. ಮೇ 10ರಿಂದ 12ರ ವರೆಗೆ ಅಭೂತಪೂರ್ವ ಉತ್ಸಾಹದಿಂದ ಸಮಾರಂಭ ನೆರವೇರಿತು. ಪ್ರಧಾನಿ ಪಂ. ನೆಹರೂರವರನ್ನು ಸಮಿತಿಯವರು ಆಹ್ವಾನಿಸಿದ್ದರೂ ಅವರು ಬರಲು ಒಪ್ಪ ಲಿಲ್ಲ. ಮೇ 10ರಂದು ಅವರು ರಾಮಲೀಲಾ ಮೈದಾನದಲ್ಲಿ ಪ್ರತ್ಯೇಕ ಸಭೆ ಏರ್ಪಡಿಸಿಕೊಂಡು ಭಾಷಣ ಮಾಡಿದರು. ಮೇ 12ರಂದು ಅದೇ ಜಾಗದಲ್ಲಿ ನಡೆದ ಶತಮಾನೋತ್ಸವ ಸಮಿತಿಯ ಸಭೆಗೆ ನೆಹರೂರವರ ಸಭೆಗಿಂತಲೂ ಎರಡರಷ್ಟು ಜನ ಸೇರಿದ್ದರು ಹುತಾತ್ಮ ಭಗತಸಿಂಹನ ತಾಯಿಯವರೂ ಅಂದು ವೇದಿಕೆಯ ಮೇಲೆ ಮಂಡಿಸಿದ್ದರು. ನಾನು ಸ್ವಾತಂತ್ರ್ಯಗಳಿಕೆಯ ವಿಚಾರ ಪ್ರಸ್ತಾವಿಸುತ್ತಾ, ಕೆಲವರು ಸ್ವಾತಂತ್ರ್ಯವನ್ನು ತಾವೇ ತಂದುಕೊಟ್ಟುದಾಗಿ ಹೇಳಿಕೊಳ್ಳುವುದುಂಟು ಅವರು ಇಷ್ಟೊಂದು ಸುಳ್ಳು ಹೇಳಬಾರದು. ಸಶಸ್ತ್ರ ಕ್ರಾಂತಿಕಾರಿಗಳಿಂದ ಹಿಡಿದು ನಿಶ್ಶಸ್ತ್ರ ಚಳವಳಿಗಾರರವರೆಗೆ ಎಲ್ಲರ ಹೋರಾಟದ ಅಂತಿಮ ಫಲ ಅದು. ಆ ಪೈಕಿಯೂ ನಿರ್ಣಾಯಕ ಪಾತ್ರ ವಹಿಸಿದವರು ಯಾರು ಎಂಬುದಕ್ಕೆ ನಿಮಗೆ ಉತ್ತರ ಬೇಕಾದರೆ ಈ ತಾಯಿಯನ್ನು ಕೇಳಿ ಎಂದು ಭಗತಸಿಂಗನ ಮಾತೆಯ ಕಡೆಗೆ ಕೈತೋರಿಸಿ ನುಡಿದೆ.

1958ರ ಮೇ ತಿಂಗಳಲ್ಲಿ ನನ್ನ 75ನೆಯ ಹುಟ್ಟುಹಬ್ಬ, ಅದರ ನಿಮಿತ್ತ ಸಾವರಕರ್ ಅಮೃತ ಮಹೋ ತ್ಸವ ಸಮಿತಿ ರಚಿತವಾಗಿ ನೂರಾರು ಸ್ಥಾನಗಳಲ್ಲಿ ಸಮಾರಂಭಗಳನ್ನು ಆಚರಿಸಿತು. ಮುಂಬೈ ನಗರ

ಪಾಲಿಕೆಯು ನನಗೆ ಪೌರ ಸನ್ಮಾನವನ್ನು ನೀಡಿತು. ಅದಾದ ಕೆಲ ದಿನಗಳ ನಂತರ ಪುಣೆ ನಗರಪಾಲಿಕೆ ಏರ್ಪಡಿಸಿದ ಸನ್ಮಾನ ಸಮಾರಂಭಕ್ಕೂ ನಾನು ಹೋಗಿಬಂದೆ.

1959ರ ಅಕ್ಟೋಬರ್ 8ರಂದು ಪುಣೆ ವಿಶ್ವವಿದ್ಯಾನಿಲಯದ ಉಪಕುಲಪತಿ ಪ್ರೊ. ಡಿ.ಜಿ. ಕರ್ವೆ, ಕಾರ್ಯದರ್ಶಿ ವಿ.ಎಚ್. ಗೋಳೆ ಮತ್ತಿತರರು ಸಾವರಕರ್ ಸದನಕ್ಕೆ ಆಗಮಿಸಿದರು ತಮ್ಮ ವಿಶ್ವವಿದ್ಯಾನಿಲಯದ ಡಿ. ಲಿಟ್ ಪ್ರಶಸ್ತಿಯನ್ನು ಗೌನ್ ಸಹಿತ ನನಗೆ ನೀಡಿದರು. ನಾನು ಅದನ್ನು ಸ್ವೀಕರಿಸುತ್ತಾ, ಒಂದು ಪ್ರಶ್ನೆ ಕೇಳಿದೆ: ಗೌನ್ ಬದಲು ನಮ್ಮ ಪರಂಪರೆಗೆ ತಕ್ಕಂತೆ ಶಾಲು ಏಕೆ ಕೊಡುವುದಿಲ್ಲ? ಅದಕ್ಕೆ ಅವರು ಉತ್ತರ ಹೇಳುವ ಸ್ಥಿತಿಯಲ್ಲಿರಲಿಲ್ಲ. ಸ್ವಾತಂತ್ರ್ಯ ಗಳಿಸಿದ ಹದಿನಾರು ವರ್ಷಗಳ ನಂತರವೂ ನಮ್ಮತನದ ದಟ್ಟದಾರಿದ್ರ್ಯ ಕಂಡು ಮನಸ್ಸಿಗೆ ದುಃಖವಾಯಿತು.

ನವೆಂಬರ್ 9ರಂದು ನಿರಂಜನ ಪಾಲರು ನಿಧನರಾದರು. ಆದರೆ ಹೊಸ ಪೀಳಿಗೆ ಅದನ್ನು ಗುರುತಿಸಲೇ ಇಲ್ಲ. ಕಾಂಗ್ರೆಸ್ಸಿನ ಒಂದು ಇಲಿಯೋ ಬೆಕ್ಕೋ ಸತ್ತರೆ ಅದನ್ನು ವರದಿ ಮಾಡುತ್ತಿದ್ದ ಆಕಾಶವಾಣಿಯು ಅಂಥ ಪ್ರಸಿದ್ಧ ಕ್ರಾಂತಿಕಾರಿ ದೇಶಭಕ್ತ, ಲೇಖಕ-ಕಲಾವಿದ ಹಾಗೂ ಬಿಪಿನಚಂದ್ರಪಾಲರ ಪುತ್ರನ ಸಾವಿನ ಬಗ್ಗೆ ಚಕಾರ ಸಹ ಎತ್ತಲಿಲ್ಲ!

ಮಹಾರಾಷ್ಟ್ರ ಮತ್ತು ಗುಜರಾತ್ ಪ್ರಾಂತಗಳನ್ನು ಪ್ರತ್ಯೇಕಗೊಳಿಸುವ ನಿರ್ಧಾರ ಹೊರಬಿದ್ದಾಗ ನಾನು ಹಾಸಿಗೆ ಹಿಡಿದಿದ್ದೆ. ಖುಗ್ಣಶಯ್ಯೆಯಿಂದಲೇ, ಅಹಮದಾಬಾದಿನ ಹೆಸರನ್ನು ಮೊದಲಿನಂತೆ ಕರ್ಣಾವತಿ ಎಂದೂ, ಪಶ್ಚಿಮ ಸಾಗರಕ್ಕೆ ಇರುವ ಅಪಮಾನಕರ ಪರಕೀಯ ಹೆಸರಾದ ಅರಬ್ಬೀ ಸಮುದ್ರವನ್ನು ಸಿಂಧುಸಾಗರ ಅಥವಾ ರತ್ನಾಕರ ಎಂದೂ ಬದಲಿಸುವಂತೆ ಗುಜರಾತಿನ ನಾಯಕರಿಗೆ ಮನವಿ ಕಳುಹಿಸಿದೆ.

ನನಗೆ ಎರಡು ವಿಶ್ವವಿದ್ಯಾಲಯಗಳಿಂದ ಗೌರವಾರ್ಥ ಡಾಕ್ಟರೇಟ್ ಪ್ರಶಸ್ತಿ ದೊರೆತ ನಂತರ, ಬ್ರಿಟಿಷರ ಕಾಲದಲ್ಲಿ ನನ್ನ ಬಿ.ಎ. ಪದವಿ ರದ್ದುಗೊಳಿಸಿದ್ದ ಮುಂಬೈ ವಿಶ್ವವಿದ್ಯಾನಿಲಯಕ್ಕೆ ಜ್ಞಾನೋದಯವಾಗತೊಡಗಿತು. ಆದರೆ, ಡಾಕ್ಟರೇಟ್ ವಿಷಯ ಹಾಗಿರಲಿ, ಬಿ.ಎ. ಪದವಿ ಹಿಂದಿರುಗಿಸುವುದಕ್ಕೂ ಜಿಪುಣತೆ! ಅಲ್ಲಿನವರಲ್ಲೆ ಬಹಳಷ್ಟು ವಾಗ್ವಾದ ನಡೆದು, ಕಡೆಗೂ 1960 ಏಪ್ರಿಲ್ 30ರಂದು ಆ ಪದವಿ ಕೊಡುವ ಕೃಪೆ ಮಾಡಿದರು. ಅದನ್ನು ಕಟ್ಟಿಕೊಂಡು ನಾನು ಮಾಡಬೇಕಾದ್ದು ಏನೂ ಇರಲಿಲ್ಲ; ಯಾವ ನೌಕರಿಗೂ ಅರ್ಜಿ ಹಾಕಬೇಕಾದ್ದಿರಲಿಲ್ಲ! ಆದರೆ ವಿಶ್ವವಿದ್ಯಾಲಯವು ಸಾರ್ವಜನಿಕರ ಟೀಕೆಗಳ ದಾಳಿಯಿಂದ ತಪ್ಪಿಸಿಕೊಂಡು ಬದುಕಿತು, ಅಷ್ಟೆ!

ಮಹಾರಾಷ್ಟ್ರದ ವಿದ್ಯಾಮಂತ್ರಿ ಬಾಳಾಸಾಹೇಬ ದೇಸಾಯಿ ಅವರಿಗೆ ನಾನೊಂದು ಪತ್ರ ಬರೆದು, ಶಾಲಾ ಕಾಲೇಜುಗಳಲ್ಲಿ ಸೈನಿಕ ಶಿಕ್ಷಣ ಆರಂಭಿಸುವಂತೆ ಸಲಹೆಯಿತ್ತೆ. ಅದರಂತೆ ಅವರು ಒಂದು ಯೋಜನೆಯನ್ನು ಸಿದ್ಧಪಡಿಸಿ, ಆಗಿನ ಮುಖ್ಯಮಂತ್ರಿ ಚವ್ಹಾಣರ ಸಮ್ಮತಿಯೊಡನೆ ಕೇಂದ್ರ ಸರಕಾರದ ಒಪ್ಪಿಗೆಗಾಗಿ ಕಳಿಸಿಕೊಟ್ಟರು. ಆದರೆ, ಅದನ್ನು ಕೇಂದ್ರವು ಕಸದ ಬುಟ್ಟಿಗೆ ಎಸೆಯಿತು. ಏಕೆಂದರೆ ಆಗ ನಮ್ಮ ರಕ್ಷಣಾಸೌಧವು ರೂಪುಗೊಂಡಿದ್ದುದು ಪ್ರಧಾನಿಗಳ ಪಂಚಶೀಲದ ಕನಸಿನ ಕಂಬಗಳ ಮೇಲೆ!

1960ರ ಡಿಸೆಂಬರ್ 24! ನಾನು ಐವತ್ತು ವರ್ಷಗಳ (ಎರಡು ಜೀವಾವಧಿ) ಶಿಕ್ಷೆಯನ್ನು ಪೂರ್ತಿಯಾಗಿ ಅನುಭವಿಸಬೇಕಾಗಿ ಬಂದಿದ್ದಲ್ಲಿ, ಅದು ನನ್ನ ಬಿಡುಗಡೆ ಆಗಬೇಕಾಗಿದ್ದ ದಿನ. ಎ.ಎಸ್. ಭಿಡೆಯವರು ಆ ದಿನವನ್ನು ಮೃತ್ಯುಂಜಯ ದಿನವಾಗಿ ಆಚರಿಸುವ ಯೋಜನೆಯನ್ನೂ ದೇಶದ ಮುಂದಿಟ್ಟರು. ಅಂದು ಸಹಸ್ರಾರು ಸಂಘಸಂಸ್ಥೆಗಳೂ, ಪುರಸಭೆ - ಜಿಲ್ಲಾ ಸಮಿತಿಗಳೂ ನನಗೆ ಶುಭಾಶಯಗಳನ್ನು

ಕಳಿಸಿದವು ; ನನ್ನ ಆಸ್ತಿಪಾಸ್ತಿಗಳನ್ನು ಹಿಂದಿರುಗಿಸುವಂತೆ ಸರಕಾರವನ್ನು ಒತ್ತಾಯಿಸುವ ನಿರ್ಣಯವನ್ನು ಸ್ವೀಕರಿಸಿದವು ವಿ.ಬಿ ಗೋಗಟೆ ಆ ಬಗ್ಗೆ ಸರಕಾರವನ್ನು ಪ್ರಶ್ನಿಸಿದಾಗ, ಆ ಆಸ್ತಿ ಮೂರನೆಯವರ ವಶದಲ್ಲಿದೆ ಎಂಬ ಉತ್ತರ ಬಂತು. ಆಗ ಕೆಲವರು - ಮನಸ್ಸಿದ್ದಲ್ಲಿ ಮಾರ್ಗವೂ ಇದೆ; ಓರ್ವ ಪಾರ್ಸಿ ಜಮೀನುದಾರನಿಗೆ ಮಾರಲಾಗಿದ್ದ ಬಾಡೋರ್ಲಿ ರೈತರ ಜಮೀನನ್ನು ವಾಪಸು ಕೊಡಲಿಲ್ಲವೆ ? - ಎಂದು ಪ್ರಶ್ನಿಸಿದರು. ಆದರೆ ಕೇಂದ್ರ ಸರಕಾರದ ಒತ್ತಡಕ್ಕೆ ಸಿಕ್ಕಿಬಿದ್ದು ಪ್ರಾಂತ ಸರಕಾರವು ಆ ಬಗ್ಗೆ ಕೈಕಟ್ಟಿ ಕುಳಿತುಕೊಳ್ಳಬೇಕಾಯಿತು. ಅನೇಕ ಸಾರ್ವಜನಿಕ ಸಭೆಗಳಲ್ಲಿ, ಸಾವರಕರ್‌ಗೆ ಭಾರತರತ್ನ ಪ್ರಶಸ್ತಿ ನೀಡಬೇಕು ಎಂಬ ಬೇಡಿಕೆ ಕೇಳಿಬಂತು. ಅದಕ್ಕೆ ಇನ್ನು ಕೆಲವರು ಉತ್ತರವಿತ್ತರು : ಸಿಂಹವನ್ನು ಸಿಂಹ ಎಂದು ವರ್ಣಿಸುವ ಅಗತ್ಯವಿಲ್ಲ. ಜನ್ಮತಃ ಅದು ಸಿಂಹವೇ. ಆದ್ದರಿಂದ ಭಾರತ ಸರಕಾರವು ಮುಂದೆ ಬರುವ ಭಾರತಾಂಬೆಯ ವಿಜಯಪುತ್ರರಿಗೆ ಸಾವರಕರ್ ಎಂಬ ಪ್ರಶಸ್ತಿ ನೀಡುವುದೇ ಯೋಗ್ಯವಾದೀತು!

ಅಂದು ನಾನು, ಸತಾರಾದಲ್ಲಿ ಸೈನಿಕಶಾಲೆ ಆರಂಭಿಸಿದುದಕ್ಕಾಗಿ, ಯಶವಂತರಾವ್ ಚವ್ಹಾಣರಿಗೆ ಅಭಿನಂದನೆ ಕಳಿಸಿದೆ. ಭಾರತವನ್ನು ಸೈನಿಕ ಸಾಮರ್ಥ್ಯದ ದೃಷ್ಟಿಯಿಂದ ಅಗ್ರಗಣ್ಯ ರಾಷ್ಟ್ರವಾಗಿ ಮಾಡಬೇಕೆಂದು ಯುವಕ ಪೀಳಿಗೆಗೆ ಕರೆಯಿತ್ತೆ. ಆ ದಿನ ನೂರಾರು ಪತ್ರಿಕೆಗಳು ವಿಶೇಷ ಸಂಚಿಕೆಗಳನ್ನು ಹೊರಡಿಸಿದವು. ಸಹಸ್ರಾರು ಜನ ಅಭಿಮಾನಿಗಳು ಸಾವರಕರ್ ಸದನಕ್ಕೆ ಬೆಳಗಿನಿಂದ ಸಂಜೆಯವರೆಗೂ ಬರುತ್ತಿದ್ದರು ; ಫಲಪುಷ್ಪಗಳನ್ನೂ, ಶುಭ ಹಾರೈಕೆಗಳನ್ನೂ ನೀಡಿ ಹೋಗುತ್ತಿದ್ದರು. ಅಂದು ಸಂಜೆ ಶಿವಾಜಿ ಉದ್ಯಾನದಲ್ಲಿ ಪ್ರಚಂಡ ಸಾರ್ವಜನಿಕ ಸಭೆ ನಡೆಯಿತು. ಅನಾರೋಗ್ಯದಿಂದಾಗಿ ನಾನು ಮನೆಯಿಂದ ಹೊರಗೆ ಹೋಗಲಾಗಲಿಲ್ಲ. ಅದೇ ದಿನ ದಿಲ್ಲಿಯಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ, ಮೃತ್ಯುಂಜಯ ಮಹೋತ್ಸವದ ಬಗ್ಗೆ ಆಕಾಶವಾಣಿ ಧರಿಸಿದ ಮೌನವನ್ನು ಖಂಡಿಸಲಾಯಿತು.

ಆ ಸಮಯದಲ್ಲೇ ಇರಬೇಕು, ನನ್ನ ಭೇಟಿಗೆ ಬಂದಿದ್ದ ಪತ್ರಿಕಾಕರ್ತರೊಬ್ಬರು ಪ್ರಶ್ನಿಸಿದರು : ನೆಹರೂ ನಂತರ ಯಾರು ? ನಾನವರಿಗೆ ತಿಳಿಸಿದೆ : ಶುದ್ಧ ಮೂರ್ಖತನದ ಪ್ರಶ್ನೆ ಇದು. ಜಗತ್ತಿನಲ್ಲಿ ಯಾರೊಬ್ಬರೂ ಅನಿವಾರ್ಯರೇನಲ್ಲ. ನೆಹರೂ ಅವರ ನಂತರ ದೇಶವು ನುಚ್ಚುನೂರಾಗುವುದೆಂದು ಭ್ರಮಿಸುವುದು ಕೇವಲ ಹುಚ್ಚುತನ. ಚಂದ್ರಗುಪ್ತ, ವಿಕ್ರಮಾದಿತ್ಯ, ಶಾಲಿವಾಹನ, ಚಾಣಕ್ಯ, ಶಿವಾಜಿಯಂಥವರಿಗೆ ಜನ್ಮವಿತ್ತ ಭೂಮಿ ರಾಜಕೀಯವಾಗಿ ಎಂದಿಗೂ ದಿವಾಳಿಯಾಗದು. ನೆಹರೂರವರೆಂದರೆ ಎರಡನೆ ಬಾಜೀರಾಯನೇ ಸರಿ!

ಮೃತ್ಯುಂಜಯ ಮಹೋತ್ಸವದ ಸಮಾರೋಪ ಸಮಾರಂಭವಿದ್ದುದು ಪುಣೆಯಲ್ಲಿ ; 1961 ಜನವರಿ 15ರಂದು. ಮೈಯಲ್ಲಿ ಅನಾರೋಗ್ಯ ಹಾಗೂ ನಿಶ್ಯಕ್ತಿ ಇದ್ದರೂ, ಅಲ್ಲಿನ ಜನನಾಯಕರ ಪ್ರೀತ್ಯಾದರಗಳಿಗೆ ಮಣಿದು ನಾನು ಹೋಗಬೇಕಾಯಿತು. ಪ್ರಾರಂಭದಲ್ಲಿ ಮಾತನಾಡಿದ ಸುಪ್ರಸಿದ್ಧ ಸಮಾಜವಾದಿ ನಾಯಕ ಎಸ್.ಎಂ. ಜೋಶಿಯವರು, 'ನನ್ನ ತಾರುಣ್ಯದಲ್ಲಿ, ಭಾರತದ ಪೂರ್ಣ ಸ್ವಾತಂತ್ರ್ಯಕ್ಕಾಗಿ ಸಾವರಕರರು ನೀಡಿದ ಕರೆಯಿಂದ ನಾನು ಪ್ರೇರಣೆ ಪಡೆದೆ ; ಆಗ ''ಸಾವರಕರರ ಸ್ಫೂರ್ತಿ ಇನ್ನೂ ಅಳಿದಿಲ್ಲ'' ಎಂಬ ಹೇಳಿಕೆ ನೀಡಿದ್ದೆ. ಸಾವರಕರರ ವಿಚಾರಧಾರೆಯು ಲಕ್ಷೋಪಲಕ್ಷ ದೇಶಬಾಂಧವರ ಮೇಲೆ ಅಚ್ಚಳಿಯದೆ ಪ್ರಭಾವ ಬೀರಿದೆ. ಭಾರತಕ್ಕೆ ಮೊಟ್ಟಮೊದಲು ಸ್ವಾತಂತ್ರ್ಯದ ಸಂದೇಶ ನೀಡಿದ ನಾಯಕರವರು' ಎಂದರು.

ನನ್ನ ಕೊರಳಿಗೆ ಪುಷ್ಪಮಾಲೆಗಳು ಬಿದ್ದವು ; ನಿಧಿ ಸಮರ್ಪಣೆಯೂ ಆಯಿತು. ಭಾಷಣ ಆರಂಭಿಸಿದೆ: 'ನಮ್ಮ ರಾಷ್ಟ್ರದ ಹಾಗೂ ಎಳೆಯ ಪೀಳಿಗೆಯ ಜೀವನದಲ್ಲಿ, ಅದಕ್ಕಿಂತಲೂ ಮಿಗಿಲಾಗಿ ನನ್ನ ಜೀವನದಲ್ಲಿ ಸ್ವದೇಶದ ಸ್ವಾತಂತ್ರ್ಯ ಗಳಿಕೆಯೇ ಅತ್ಯಂತ ಆನಂದಪೂರ್ಣ ಕ್ಷಣ. ಬ್ರಿಟಿಷ್ ಸರಕಾರವು ಅಪಹರಿಸಿದ

ಸ್ವ ಆಸ್ತಿಯಾಗಲಿ, ನಮ್ಮ ಸರಕಾರದ ಭಾರತರತ್ನ ಪ್ರಶಸ್ತಿಯಾಗಲಿ ನನಗೆ ಬೇಕಿಲ್ಲ..... ಇಂದಿನ ಜಗತ್ತಿನಲ್ಲಿ ರಾಷ್ಟ್ರಗಳ ಹಿರಿಮೆಗೆ ಸೈನಿಕ ಶಕ್ತಿಯೊಂದೇ ನಿಜವಾದ ಅರ್ಹತೆಯಾಗಿದೆ. ಭಾರತವು ತನ್ನ ಸೇನಾಪಡೆಗಳಿಗೆ ಆಧುನಿಕ ಶಸ್ತ್ರಾಸ್ತ್ರಗಳನ್ನು ಒದಗಿಸಬೇಕು ; ಹೊಸ ಹೊಸ ಹಾಗೂ ಹೆಚ್ಚು ಪ್ರಭಾವಿಯಾದ ಅಸ್ತ್ರಗಳನ್ನು - ಹೈಡ್ರೋಜನ್ ಬಾಂಬ್ ಸಹ - ತಯಾರಿಸಬೇಕು. ಪ್ರಬಲ ಸೈನಿಕಶಕ್ತಿ ಇಲ್ಲದಿದ್ದರೆ ಆದರ್ಶ ಪ್ರಜಾಪ್ರಭುತ್ವ ಸಹ ಕೆಳಗೆ ಕುಸಿದು ಮಣ್ಣುಗೂಡುತ್ತದೆ.... ಮಹಾರಾಷ್ಟ್ರದ ಯುವಕರು ಹಿಂದುರಾಷ್ಟ್ರದ ಖಡ್ಗಹಸ್ತವಾಗ ಬೇಕು. ನಾವು ಅಣುಬಾಂಬನ್ನು ತಯಾರಿಸಿದ ನಂತರ ಅದನ್ನು ನಮ್ಮ ರಾಷ್ಟ್ರದ ಮೇಲೆ ಬೀಳುವ ಶತ್ರುಗಳ ಮೇಲೆ ಪ್ರಯೋಗಿಸಲು ಸಿದ್ಧರಿದ್ದೇವೆಂಬ ಬಗ್ಗೆ ಜಗತ್ತಿಗೆ ಎಳ್ಳಷ್ಟೂ ಸಂಶಯವಿರಬಾರದು.'

ಭಾರತ ಸರಕಾರವು ತನಗೆ ಇಚ್ಛೆಯಿಲ್ಲದಿದ್ದರೂ ಜನತೆಯ ಒತ್ತಾಯಕ್ಕೆ ಒಳಗಾಗಿ ಹಾಗೂ ಚುನಾವಣೆ ಗಳಲ್ಲಿ ಪ್ರಚಾರ ಸಾಧನವಾಗಿ ಗೋವಾ ವಿಮೋಚನೆಗೆ ಸೈನಿಕ ಕಾರ್ಯಾಚರಣೆ ಕೈಗೊಳ್ಳಬೇಕಾಯಿತು. ಆಗ ಮುಂಬೈನ ಕೆಲವು ಬ್ರಾಹ್ಮಣರು ನನ್ನ ಬಳಿ ಬಂದರು ; ಯುದ್ಧದಲ್ಲಿ ಜಯವಾಗುವಂತೆ ತಾವೊಂದು ಯಾಗ ನಡೆಸುತ್ತೇವೆಂದೂ, ಅದಕ್ಕೆ ನನ್ನ ಸಂದೇಶ ಬೇಕೆಂದೂ ಕೇಳಿದರು. ಅದಕ್ಕೆ ನಾನೆಂದೆ: 'ಯುದ್ಧದೇವತೆ ಗೋವಾದಲ್ಲಿ ರಣಯಜ್ಞ ಆಚರಿಸುತ್ತಿರುವಾಗ, ಇಲ್ಲಿ ನೀವು ದರ್ಭೆಯ ಮೇಲೆ ಮೂಗುಹಿಡಿದು ಕುಳಿತು, ಭಕ್ಷ್ಯ ಭೋಜ್ಯ ಮೆಲ್ಲುವುದರಲ್ಲಿ ಅರ್ಥವಿಲ್ಲ. ಖಡ್ಗ ಹಿರಿದು ಗೋವಾಕ್ಕೆ ಹೋಗಿ ದೇಶದ ಶತ್ರುಗಳನ್ನು ಕೊಲ್ಲುತ್ತಾ ಯಜ್ಞ ಆಚರಿಸಿ. ಅದರಿಂದ ಸಹಸ್ರ ಚಂಡಿ ಹೋಮ ಮಾಡಿದ ಪುಣ್ಯಕ್ಕೆ ಪಾತ್ರರಾಗುತ್ತೀರಿ.'

1961 ಡಿಸೆಂಬರ್ 20ರಂದು ಗೋವಾ ಮುಕ್ತವಾಯಿತು. 450 ವರ್ಷಗಳ ದಾಸ್ಯ ಕಳೆದು, ಭಾರತದ ಕಿಬ್ಬದಿಯ ಕಂಟಕವಾಗಿದ್ದ ಪೋರ್ಚುಗೀಸರ ದುರಾಡಳಿತ ಕೊನೆಗೊಂಡಿತು. ಅಂದು ನಾನು ಸಾವರಕರ್ ಸದನದ ಮೇಲೆ ಹತ್ತಿ ನಮ್ಮ ಗಣರಾಜ್ಯದ ಧ್ವಜ ಹಾರಿಸಿ ವಿಜಯೋತ್ಸವ ಆಚರಿಸಿದೆ.

1962ರ ಮಾರ್ಚ್ ತಿಂಗಳಲ್ಲಿ ರಾ.ಸ್ವ. ಸಂಘದ ಸರಸಂಘಚಾಲಕರಾದ ಗುರೂಜಿಯವರಿಂದ ನನ ಗೊಂದು ಪತ್ರ ಬಂತು. ನಾಗಪುರದಲ್ಲಿ ನಿರ್ಮಿತವಾಗಿದ್ದ ಸಂಘದ ಸಂಸ್ಥಾಪಕ ಡಾಕ್ಟರ್ ಹೆಡಗೆವಾರರ ಸ್ಮೃತಿಮಂದಿರದ ಉದ್ಘಾಟನೆಗೆ ಬರಬೇಕೆಂದು ವಿನಂತಿಸಿದ್ದರು. ಏಪ್ರಿಲ್ 5ರ ಯುಗಾದಿಯಂದು ಆ ಸಮಾರಂಭವಿತ್ತು. ಡಾಕ್ಟರ್ ಹೆಡಗೆವಾರರ ಜನ್ಮದಿನವೂ ಯುಗಾದಿಯಂದೇ. 'ಡಾ. ಹೆಡಗೆವಾರ್ ಎಂದರೆ ನಿಮಗೆ ಅಪಾರ ಗೌರವ, ಆದ್ದರಿಂದ ಇಲ್ಲಿಗೆ ಆಗಮಿಸಿ ಅವರ ಮಹಾನ್ ಕಾರ್ಯವನ್ನು ಹರಸಬೇಕು. ನೀವು ಪ್ರಯಾಣ ಕೈಗೊಂಡು ಸಮಾರಂಭಕ್ಕೆ ಬರುವಷ್ಟು ಶಕ್ತಿ ನೀಡಲೆಂದು ದೇವರನ್ನು ಪ್ರಾರ್ಥಿಸುತ್ತೇನೆ' ಎಂಬುದಾಗಿ ಸಹ ಗುರೂಜಿಯವರು ಬರೆದಿದ್ದರು. ಆದರೆ ತೀರ ಅನಾರೋಗ್ಯದಿಂದ ನಾನು ಹಾಸಿಗೆ ಹಿಡಿದಿದ್ದೆ. ಆದ್ದರಿಂದ ಕೇವಲ ಒಂದು ಸಂದೇಶ ಕಳುಹಿಸಿಕೊಡುವುದರಿಂದಲೆ ತೃಪ್ತನಾಗಬೇಕಾಯಿತು. ಗುರೂಜಿಯವರಿಗೆ ಕಾಗದ ಬರೆದೆ : 'ಸ್ವತಃ ನೀವೇ ಅಲ್ಲಿದ್ದ ಮೇಲೆ ಯಾವ ರೀತಿಯ ಕೊರತೆಯೂ ಆಗುವುದಿಲ್ಲವೆಂಬ ಭರವಸೆ ನನಗಿದೆ. ಈಗಾಗಲೇ ಮರಣದ ಅಂಚಿನಲ್ಲಿರುವ ನಾನು ಬಾರದಿರುವು ದಕ್ಕಾಗಿ ದುಃಖಿಸುವ ಅಗತ್ಯವಿಲ್ಲ. ಕಾರ್ಯ ಮುಂದುವರಿಸಿ.'

1954ರ ಏಪ್ರಿಲ್‌ನಿಂದಲೇ ಭಾರತದ ಗಡಿ ಪ್ರದೇಶಗಳನ್ನು ಚೀನಾ ಆಕ್ರಮಿಸತೊಡಗಿತ್ತು. ಇಡೀ ದೇಶವು ಅದರ ಬಗ್ಗೆ ಎಚ್ಚರಿಕೆ ನೀಡಿದರೂ ಪ್ರಧಾನಿ ನೆಹರೂರವರ ನಿದ್ರೆ ಮಾತ್ರ ಭಂಗಗೊಳ್ಳಲಿಲ್ಲ. ಅವರು ಪಂಚಶೀಲದ ಸ್ವಪ್ನದಲ್ಲಿ ತೇಲುತ್ತಿದ್ದರು. ಚೀನಾ ಆಕ್ರಮಣದ ವಿಷಯ ತಿಳಿದ ನಂತರವೂ ಅದನ್ನು ರಹಸ್ಯವಾಗಿ ಮುಚ್ಚಿಟ್ಟು ತಮ್ಮ ರಾಷ್ಟ್ರವನ್ನೇ ವಂಚಿಸಿದರು. ಚೀನಾ 1960ರ ಹೊತ್ತಿಗೆ ಇಂಡೋನೇಶಿಯಾ,

ನೇಪಾಳ, ಅಫಘಾನಿಸ್ತಾನ, ಬರ್ಮಾ ಮತ್ತು ಪಾಕಿಸ್ತಾನಗಳೊಡನೆ ಒಪ್ಪಂದ ಮಾಡಿಕೊಂಡು ವಿಶ್ವದ ಮಡಿಲಿನಿಂದ ಭಾರತವನ್ನು ಪ್ರತ್ಯೇಕಿಸಿತು. 1954ರಲ್ಲಿ ನಮ್ಮ ಮಹಾ ಪ್ರಧಾನರು ಟಿಬೆಟನ್ನು ಚೀನಾದ ಅತ್ಯಾಚಾರಕ್ಕೆ ಬಿಟ್ಟುಕೊಡುವ ಒಪ್ಪಂದಕ್ಕೆ ಸಹಿಹಾಕಿದಾಗಲೇ ಅನೇಕರು ಅವರಿಗೆ ಮುನ್ನೆಚ್ಚರಿಕೆ ನೀಡಿದ್ದರೂ ಅವರು ಅದನ್ನು ಕಡೆಗಣಿಸಿದ್ದರು. ಪಂ. ನೆಹರೂರವರಿಗೆ ಭಾರತದ ಜನತೆಗಿಂತ ಚೀನಾದ ಮಾವೋ ಬಗ್ಗೆಯೇ ಹೆಚ್ಚು ನಂಬುಗೆ. ವಿದೇಶಾಂಗ ಖಾತೆಯ ಪ್ರಧಾನ ಕಾರ್ಯದರ್ಶಿ ಗಿರಿಜಾಶಂಕರ ವಾಜಪೇಯಿ ಆಗಲೇ - ಮೆಕ್ ಮಹೋನ್ ರೇಖೆಯ ಗಡಿಯನ್ನು ಚೀನಾ ಒಪ್ಪಿಕೊಳ್ಳುವಂತೆ ಮಾಡ ಬೇಕೆಂದು ಒತ್ತಾಯಿಸಿದರು. ಆದರೆ, ಪ್ರಧಾನಿಗಳು ಅವರ ಮಾತನ್ನು ಏಕೆ ಕೇಳುತ್ತಾರೆ ? ತಜ್ಞರಾದ ಸೈನಿಕ ಸಲಹೆಗಾರರ ಬುದ್ಧಿವಾದವನ್ನೂ ಅವರು ತಳ್ಳಿಹಾಕಿದರು. ಚೀನಾ, ಭಾರತದ ಮೇಲೆ ಆಕ್ರಮಣ ಮಾಡುತ್ತದೆ ಎಂದು ಹೇಳುವುದು ಹೆಡ್ಡತನ, ಹುಚ್ಚುತನ, ಸುಳ್ಳು ಎಂದು 1962ರ ಆಗಸ್ಟ್ ತಿಂಗಳಲ್ಲಿ ಲೋಕಸಭೆಯಲ್ಲಿ ಮಹಾಪ್ರಧಾನರು ಘೋಷಿಸಿದರು. ರಕ್ಷಣಾ ಮಂತ್ರಿ ಕೃಷ್ಣಮೆನನ್ ಸಹ ಅವರೊಂದಿಗೆ ದನಿಗೂಡಿಸಿದರು. ಭಾರತದ ಜನಕೋಟಿಯ ಬೆಂಬಲದಿಂದ ಅಧಿಕಾರಪೀಠ ಅಲಂಕರಿಸಿ, ಭಾರತದ ಸೇವೆಗೆಂದು ಜನತೆಯ ಹಣದಿಂದ ವೇತನ ಪಡೆಯುತ್ತಿದ್ದ ಮಹನೀಯರು ಚೀನಾದ ರಾಯಭಾರಿಗಳೋ ಎಂಬಂತೆ ಆ ದೇಶದ ಪರವಾಗಿ ವಾದಿಸಲಾರಂಭಿಸಿದರು ! ರಾಷ್ಟ್ರಾಧ್ಯಕ್ಷರಿಂದ ಹಿಡಿದು ಉಳಿದ ಪ್ರಮುಖ ಕಾಂಗ್ರೆಸ್ ನಾಯಕರೆಲ್ಲರೂ ನಾವಾಗಿಯೇ ನಿಶ್ಶಸ್ತ್ರೀಕರಣ ನೀತಿ ಸ್ವೀಕರಿಸಿ, ಶಸ್ತ್ರಗಳನ್ನು ವಿಸರ್ಜಿಸಬೇಕು ಎಂದು ಜೂನ್ 16ರಂದು ಅಪ್ಪಣೆ ಕೊಡಿಸಿದರು !

ಅಕ್ಟೋಬರ್ 20ರಂದು ನೀಫಾ ಮತ್ತು ಲಢಾಕ್‌ಗಳಿಗೆ ಚೀನಿ ಸೇನೆಗಳು ನುಗ್ಗಿದವು. ಉದ್ದೇಶ ಪೂರ್ವಕವಾಗಿ ಸೇನಾ ಸಿದ್ಧತೆಗಳನ್ನು ತಡೆದಿಟ್ಟ ನಮ್ಮ ಆಡಳಿತಗಾರರ ಅಪರಾಧ ಹಾಗೂ ವಂಚನೆ ಯಿಂದಾಗಿ ಸಹಸ್ರಾರು ಭಾರತೀಯ ವೀರ ಯೋಧರು ಮದ್ದುಗುಂಡುಗಳಿಲ್ಲದೆ ಅಸಹಾಯಕರಾಗಿ ಯಜ್ಞ ಪಶುಗಳಂತೆ ಕೊಲ್ಲಲ್ಪಟ್ಟರು. ಜೀವದಿಂದುಳಿದವರು ಹಿಮ್ಮೆಟ್ಟಬೇಕಾಯಿತು. ಪಂಚಶೀಲದ ಸ್ತಂಭಗಳು ಶತ್ರುಗಳ ಆಕ್ರಮಣದ ಪ್ರವಾಹಕ್ಕೆ ಸಿಕ್ಕಿ ಕೊಚ್ಚಿಕೊಂಡು ಹೋಗಿ ಸಮುದ್ರದಲ್ಲಿ ಸಮಾಧಿ ಹೊಂದಿದವು. ನವೆಂಬರ್ 20ರಂದು ಚೀನಾ, ಸಹಸ್ರಾರು ಚದರ ಮೈಲಿ ಭೂಮಿಯನ್ನು ವಶಪಡಿಸಿಕೊಂಡ ನಂತರ, ತಾನಾಗಿ ಯುದ್ಧವಿರಾಮ ಘೋಷಿಸಿತು. ಆಗ ಪಂ. ನೆಹರೂ ಹೇಳಿಕೆಯಿತ್ತರು : 'ನಾವು ಆಧುನಿಕ ಜಗತ್ತಿನ ಸತ್ಯದ ಅರಿವಿಲ್ಲದೆ, ನಮ್ಮ ಭ್ರಾಮಕ ಕಲ್ಪನೆಗಳ ಗುಂಗಿನಲ್ಲೆ ಮುಳುಗಿದ್ದೆವು. ಈಗ ಭ್ರಮನಿರಸನವಾಗಿದೆ.' ಇದರಲ್ಲಿ ಆ 'ನಾವು' ಎನ್ನುವುದು ಕೇವಲ ನೆಹರೂರವರಿಗೆ ಮಾತ್ರ ಅನ್ವಯಿಸುವಂಥದು. 'ನೆಹರೂರವರು ಎರಡನೆ ಚೇಂಬರ್ಲೇನರಂತೆ' ಎಂದು ಡಾ. ಅಂಬೇಡಕರರು ಹಿಂದೆಯೇ ಹೇಳಿದ್ದರು. ಹಿಂದುಸ್ಥಾನದ ದೌರ್ಭಾಗ್ಯದಿಂದ, ಆ ಮಾತು ನಿಜವಾಯಿತು.

ನಾನು ಸೈನಿಕೀಕರಣದ ಕರೆ ನೀಡದೆ ಯಾವ ಭಾಷಣವನ್ನೂ ಮುಗಿಸುತ್ತಿರಲಿಲ್ಲ. ವಿಪತ್ತಿನ ಸಮಯ ದಲ್ಲಿ ಅಶೋಕಚಕ್ರವು ಸುದರ್ಶನ ಚಕ್ರದ ರೂಪ ತಾಳದಿದ್ದರೆ, ಅದು ಧೂಳಿನಲ್ಲಿ ಹೊರಳಾಡಬೇಕಾ ದೀತೆಂದು ತಪ್ಪದೆ ಎಚ್ಚರಿಸುತ್ತಿದ್ದೆ. ಆದರೆ ಶಾಸನಾರೂಢ ಶಾಂತಿಕೋರರು ನನ್ನನ್ನು ಯುದ್ಧಕೋರ ಎಂದು ಜರಿದು ಹಂಗಿಸುತ್ತಿದ್ದರು. ಅದಕ್ಕೆ ವಿಧಿಯು ತೀರಿಸಿಕೊಂಡ ನಿರ್ದಯ ಸೇಡನ್ನು ಇಡೀ ರಾಷ್ಟ್ರ ಅನುಭವಿಸ ಬೇಕಾಗಿ ಬಂತು. ಧೈರ್ಯ, ಸಾಹಸಗಳಿಗೆ ವಿಶ್ವವಿಖ್ಯಾತರಾಗಿ ಮೆರೆದ ಭಾರತೀಯ ಸೇನೆಗೆ - ರಾಜಕಾರಣಿ ಗಳ ತಪ್ಪಿನಿಂದಾಗಿ - ಒದಗಿದ ದಯನೀಯ ಅವಸ್ಥೆ ಕೇಳಿದಂತೆಲ್ಲ ನನ್ನ ದುಃಖದ ಕಟ್ಟೆ ಒಡೆಯಿತು.

ಸುಮಾರು ಒಂದು ವರ್ಷದಿಂದಲೂ ನಾನು ಹಾಸಿಗೆ ಹಿಡಿದು ಮಲಗಿದ್ದೆ. ಉತ್ತಮ ಶಸ್ತ್ರಾಸ್ತ್ರಗಳನ್ನು ಹೊಂದಿದ್ದ ಚೀನೀ ಪಡೆಗಳು ಹಳೆಯ ಮುರುಕಲು ಶಸ್ತ್ರಗಳನ್ನು ಹೊತ್ತ ನಮ್ಮ ಪರಮ ಸಾಹಸಿ ದೇಶಭಕ್ತ ಸೈನಿಕರನ್ನು ಹೇಗೆ ಕೊಚ್ಚಿಹಾಕಿದವೆಂಬ ಬಗ್ಗೆ ಅನೇಕ ವಾರ್ತೆಗಳು ಬೆಳಕಿಗೆ ಬರುತ್ತಿದ್ದವು. ಒಂದು ದಿನವಂತೂ - ಡಿಸೆಂಬರ್ 14ರಂದು - ನನಗೆ ಕಣ್ಣೀರು ತಡೆದುಕೊಳ್ಳಲಾಗಲಿಲ್ಲ. ನನ್ನ ಮಗ ವಿಶ್ವಾಸನು ಹಾಸಿಗೆಯ ಪಕ್ಕದಲ್ಲೆ ಕುಳಿತಿದ್ದೆ. ಮಲಗಿದಲ್ಲೆ ನಾನು ಗಟ್ಟಿಯಾಗಿ ಅಳತೊಡಗಿದೆ. ಮಗನ ಎದುರಿಗೆ ನಾನು ಹಾಗೆ ಅತ್ತುದು ಅದೇ ಮೊದಲ ಬಾರಿ. ಒಂದು ಗಂಟೆಯವರೆಗೂ ನನ್ನ ರೋದನ ನಿಲ್ಲಲಿಲ್ಲ. ನನ್ನ ಚಿಕಿತ್ಸೆಗೆಂದು ಬರುತ್ತಿದ್ದ ವೈದ್ಯರ ಬಳಿ ನಾನು ಅಂಗಲಾಚತೊಡಗಿದೆ : 'ದಯವಿಟ್ಟು ನನ್ನ ಜೀವನ ಕೊನೆಗೊಳಿಸಿಬಿಡಿ. ಇನ್ನು ನನಗೆ ಜೀವಿಸುವ ಆಸೆಯಿಲ್ಲ ; ದೇಶದ ದುಃಸ್ಥಿತಿಯನ್ನು ನೋಡಲಾರೆ, ಕೇಳಲಾರೆ. ಅಲ್ಲದೆ, ಅನಾರೋಗ್ಯದಿಂದ ಹಾಸಿಗೆ ಹಿಡಿದು ಮಲಗಿ, ಕೆಲಸ ಮಾಡಲು ಕೈಲಾಗದವರು ಹೆಚ್ಚು ದಿನ ಬದುಕುವುದೂ ನ್ಯಾಯವಲ್ಲ.'

ನನ್ನ 81ನೆಯ ಜನ್ಮದಿನೋತ್ಸವದ ಅಂಗವಾಗಿ ಮುಂಬೈನಲ್ಲಿ ಸೈನಿಕೀಕರಣ ಸಪ್ತಾಹ ನಡೆಯಿತು. ಜನರಲ್ ಕಾರ್ಯಪ್ಪ, ಗುರೂಜಿ ಗೋಳವಲ್ಕರ್, ಎನ್.ವಿ. ಗಾಡ್ಗಿಲ್ ಮುಂತಾದವರು ಭಾಷಣ ಮಾಡಿದರು. ಕೆಲವೇ ದಿನಗಳ ಮೊದಲು ಜನರಲ್ ಕಾರ್ಯಪ್ಪನವರು ಮದರಾಸಿನಲ್ಲಿ ಭಾಷಣ ಮಾಡುತ್ತಾ, ದೇಶದ ರಕ್ಷಣಾ ನೀತಿಯ ಬಗ್ಗೆ ನನ್ನ ಅಭಿಪ್ರಾಯವನ್ನು ಸಮರ್ಥಿಸಿದ್ದರು. ಅದರಿಂದ ಸರಕಾರದ ಕೋಪಕ್ಕೂ ತುತ್ತಾಗಿದ್ದರು. ಆದರೆ ಅವರು ಹಿಂಜರಿಯದೆ ಮುಂಬೈನಲ್ಲಿ ಸಹ, 'ತಮ್ಮ ತಾರುಣ್ಯದಿಂದಲೂ ಸಾವರಕರ್ ಅವರಿಗೆ ಸೈನಿಕ ಶಿಕ್ಷಣದಲ್ಲಿ ವಿಶೇಷ ಆಸಕ್ತಿ. ದೇಶವು ಅವರ ಮಾತಿಗೆ ಕಿವಿಗೊಟ್ಟು ಸೈನಿಕೀಕರಣದ ನೀತಿ ಅಳವಡಿಸಿಕೊಂಡು ಸಿದ್ಧವಾಗಿದ್ದಲ್ಲಿ, ಇಂಥ ಶೋಚನೀಯ ಸ್ಥಿತಿ ಒದಗುತ್ತಿರಲಿಲ್ಲ' ಎಂದು ನುಡಿದರು.

ಪ್ರಭಾವಿ ವಕ್ತಾರ ನಾಥ ಪೈ ತಮ್ಮದೊಂದು ಭಾಷಣದಲ್ಲಿ, 'ಕೇಂದ್ರ ಸರಕಾರವು ಸಾವರಕರರನ್ನು ದಿಲ್ಲಿಗೆ ಆಹ್ವಾನಿಸಿ ಸನ್ಮಾನಿಸುವುದು ಯೋಗ್ಯವಾಗಿತ್ತು. ಆದರೆ ಸರಕಾರಕ್ಕೆ ಅಂಥ ಔದಾರ್ಯವಿಲ್ಲ. ಇಂದು ದೇಶ ಸೂರ್ಯನ ಕಡೆಗೆ ಬೆನ್ನು ತಿರುಗಿಸಿ ಮಿಣುಕುಹುಳ ಹುಡುಕಿಕೊಂಡು ಹೊರಟಿದೆ. ಆ ತಪ್ಪಿಗಾಗಿ ದೇಶ ಭಾರೀ ಬೆಲೆ ತೆರಬೇಕಾಗುತ್ತದೆ. ಅಪಾರ ಮನಃಸ್ಥೈರ್ಯದಿಂದ ಸಾವರಕರ್ ತತ್ವಗಳಿಗಾಗಿ ಹೋರಾಡುತ್ತಿದ್ದಾರೆ. ಅವರು ಆದರ್ಶ ಬಿಟ್ಟು ಸ್ವಲ್ಪ ಆಚೀಚೆ ಸರಿದಿದ್ದರೂ ಭಾರತದ ಪ್ರಧಾನಿಯೇ ಆಗಬಹುದಿತ್ತು. ಅಂಥ ವ್ಯಕ್ತಿ ಭಾರತದ ವಿಭಜನೆಯನ್ನು ನೋಡುವಂತಾದುದು ಎಂಥ ದುರ್ದೈವ! ನೇಫಾದಲ್ಲಿ ಭಾರತದ ಸೇನೆಗಾದ ಸೋಲಿನಿಂದ ಅವರ ಮನಸ್ಸಿಗೆ ಭಾರಿ ಆಘಾತವಾಗಿರಲು ಸಾಕು. ಭಾರತರತ್ನ ಪ್ರಶಸ್ತಿ ನೀಡಿದರೂ ಅವರ ಬಗ್ಗೆ ನಮ್ಮ ಋಣ ತೀರದು. ರಾಷ್ಟ್ರೀಯ ಸಾಹಿತ್ಯ ಅಕಾಡೆಮಿಯವರು ಸಾವರಕರ್ ಸಾಹಿತ್ಯವನ್ನು ಪ್ರಕಟಿಸಿದಲ್ಲಿ, ಆ ಅಕಾಡೆಮಿಗೇ ಗೌರವ ಸಂಪಾದನೆಯಾದೀತು.'

ಇದೇ ಸಂದರ್ಭದಲ್ಲಿ ಪುಣೆ ವಿಶ್ವವಿದ್ಯಾನಿಲಯವು 'ವೀರ ಸಾವರಕರ್ ಸೈನಿಕೀಯ ಅಧ್ಯಯನ ಪೀಠ' ಸ್ಥಾಪಿಸಲು ನಿರ್ಧರಿಸಿತು. ಅದಕ್ಕೆ ಬೇಕಾದ ನಿಧಿ ಸಂಗ್ರಹಕ್ಕಾಗಿ ಒಂದು ಸಮಿತಿಯೂ ರಚಿತವಾಯಿತು ಲೆ. ಜನರಲ್ ಥೋರಟ್ ಅವರು ಆ ಸಮಿತಿಗೆ ಕಳಿಸಿದ ಸಂದೇಶದಲ್ಲಿ, 'ಇಂದು ನಮ್ಮ ದೇಶದಲ್ಲಿ ಸೈನಿಕೀಯ ಚಿಂತಕರ ಕೊರತೆ ಬಹಳವಾಗಿದೆ. ಅಧ್ಯಯನ ಪೀಠವು ಈ ಬಹುಕಾಲದ ಕೊರತೆಯನ್ನು ನೀಗುವುದೆಂಬ ಭರವಸೆ ನನಗಿದೆ' ಎಂದು ತಿಳಿಸಿದರು. ಸಮಿತಿಯು ಒಂದು ಲಕ್ಷ ರೂ.ಗಳ ನಿಧಿ ಸಂಗ್ರಹಿಸಿ,

ಪುಣೆ ವಿಶ್ವವಿದ್ಯಾನಿಲಯಕ್ಕೆ ಅರ್ಪಿಸಿತು.

ಚೀನಾದ ಹೊಡೆತದಿಂದಾಗಿ ದೇಶದಾದ್ಯಂತ ಸಾವರಕರ್ ವಿಚಾರಕ್ಕೆ ಬೆಲೆ ಹೆಚ್ಚಿತು 1963ರ ಮೇ 10ರಿಂದ 28ರ ವರೆಗೆ ನನ್ನ 81ನೆಯ ಜನ್ಮದಿನೋತ್ಸವ ವಿಜೃಂಭಣೆಯಿಂದ ಜರುಗಿತು. ನಾನು ಮಾತ್ರ ಹಾಸಿಗೆಯಲ್ಲಿ ಮಲಗಿದ್ದೆ. ದಿ. 29ರಂದು ಬೆಳಿಗ್ಗೆ ಜಾರಿಬಿದ್ದು ನನ್ನ ಎಡಗಾಲಿನ ಮೂಳೆ ಮುರಿಯಿತು. ನಾನು ಚಿಕಿತ್ಸಾಲಯಕ್ಕೆ ಸಾಗಿಸಲ್ಪಟ್ಟೆ. ಅಲ್ಲಿ ಜನ್ಮದಿನೋತ್ಸವ ಸಮಿತಿಯ ಅಧ್ಯಕ್ಷ ಪಂ. ಬಖಲೆಯವರು ನನ್ನ ಭೇಟಿಗೆ ಬಂದರು. 'ನಿನ್ನೆಗೆ ನಿಮ್ಮ ಕಾರ್ಯಕ್ರಮ ಮುಗಿಯಿತು, ಈಗ ನನ್ನ ಕಾರ್ಯಕ್ರಮ ಶುರುವಾಗಿದೆ' ಎಂದೆ. ಅವರು, 'ಹಾಗೆಂದರೇನು ?' ಎಂದರು.

'ನಿಮ್ಮದು ಜಯಂತಿಯ ಕಾರ್ಯಕ್ರಮವಾದರೆ, ನನ್ನದು ಮಯಂತಿಯ (ಮರಣದ) ಕಾರ್ಯಕ್ರಮ! ನೀವು ನನ್ನ ಜನ್ಮತಿಥಿ ಆಚರಿಸಿದಿರಿ; ನಾನು ಈಗ ಪುಣ್ಯತಿಥಿಯ ಕಡೆ ಹೊರಟಿದ್ದೇನೆ!' ಎಂದೆ. ಮೃತ್ಯುವನ್ನು ಆಶಾದೃಷ್ಟಿಯಿಂದ ಎದುರು ನೋಡತೊಡಗಿದೆ. ಆದರೆ, ಮೃತ್ಯು ಬರಲಿಲ್ಲ ; ಬದಲು ಆರೋಗ್ಯ ಉತ್ತಮಗೊಂಡಿತು ! ಕೆಲ ದಿನಗಳಲ್ಲೆ ಯಮುನಾ ಹಾಸಿಗೆ ಹಿಡಿದಳು. ಮನೆಯಲ್ಲಿ ನೋಡಿಕೊಳ್ಳುವವರಿಲ್ಲದೆ, ಅವಳನ್ನು ಚಿಕಿತ್ಸಾಲಯಕ್ಕೆ ಕಳುಹಿಸಿದೆ. ನವೆಂಬರ್ 8ರಂದು ಅವಳು ಇಹಲೋಕ ತ್ಯಜಿಸಿದಳು. ನನ್ನ ಆಪ್ತ ಕಾರ್ಯದರ್ಶಿ ಬಾಳರಾವ್ (ಶಾಂತರಾಮ ಶಿವರಾಮ ಸಾವರಕರ್) ಗೆ ಹೇಳಿದೆ : 'ನನ್ನಿಂದ ಅವಳು ಬಹಳ ಕಷ್ಟ ಸಹಿಸಬೇಕಾಯಿತೆಂಬುದು ನಿಜ. ಆದರೆ, ನನ್ನ ಬಿಡುಗಡೆಯ ನಂತರ ನಾವು 40 ವರ್ಷಗಳು ನೆಮ್ಮದಿಯ ಜೀವನ ನಡೆಸಿದೆವು. ಮಕ್ಕಳು, ಮೊಮ್ಮಕ್ಕಳನ್ನು ಅವಳು ಕಂಡಳು ; ಮಾನ ಸ್ಥಾನ ಪಡೆದಳು. ಅವಳ ಜೀವನ ಸಾರ್ಥಕವಾಯಿತು. ರುಗ್ಣಾಲಯಕ್ಕೆ ಕಳುಹಿಸುವಾಗಲೇ ನಾನು ಅವಳಿಗೆ ಎಲ್ಲವನ್ನೂ ಹೇಳಿ ಬೀಳ್ಕೊಟ್ಟಿದ್ದೇನೆ. ಈಗ ಶವವನ್ನು ಮನೆಗೆ ತಂದು ಕಣ್ಣೀರು ಸುರಿಸುವ ಅಗತ್ಯವೇನು? ತಿರುಗಿ ಬಾರದುದುಕ್ಕೆ ಗೋಳಾಡುವುದೇಕೆ ? ಆದಷ್ಟು ಬೇಗ ವಾಹನದಲ್ಲಿ ಚಂದನವಾಡಿಯ ವಿದ್ಯುತ್ ಶ್ಮಶಾನಕ್ಕೆ ಶವ ತೆಗೆದುಕೊಂಡು ಹೋಗು. ನಾಳೆ ಬಂದು ಏನೇನು ನಡೆಯಿತೆಂಬುದನ್ನು ಹೇಳು.' ಅಂದು ರಾತ್ರಿ ನನಗೆ ಬಹಳ ಹೊತ್ತಿನವರೆಗೆ ನಿದ್ರೆ ಹತ್ತಲಿಲ್ಲ.

ಮರುದಿನ ಬಾಳಾರಾವ್ ಬಂದಾಗ ವಿದ್ಯುತ್ ಚಿತೆ ಮತ್ತು ವಿದ್ಯುತ್ ಶ್ಮಶಾನದ ವ್ಯವಸ್ಥೆಯ ಬಗ್ಗೆ ಅನೇಕ ಪ್ರಶ್ನೆಗಳನ್ನು ಕೇಳಿದೆ. ಕೊನೆಗೆ, 'ಬಹುಶಃ ಇನ್ನು ಒಂದೆರಡು ವರ್ಷಗಳಲ್ಲೆ ನಾನೂ ಅಲ್ಲಿಗೆ ಹೋಗಬೇಕಾಗುತ್ತದೆ. ಆಗ ನಿನ್ನ ನಿನ್ನೆಯ ಅನುಭವ ಉಪಯೋಗಕ್ಕೆ ಬರುತ್ತದೆ!' ಎಂದೆ.

ಅದಾದ ಕೆಲವೇ ದಿನಗಳಲ್ಲಿ ಗೋವಾ ಚುನಾವಣೆಗಳು ಜರುಗಿದವು. ಆಗ ಅಲ್ಲಿನ ಕ್ರಿಶ್ಚನರು 'ಸಾಲಾಜಾರ್ ಜಿಂದಾಬಾದ್' ಎಂಬ ಘೋಷಣೆ ಹಾಕಿದರು. ನಾನು ಮೊದಲಿನಿಂದಲೂ ಧರ್ಮಾಂತರವೆಂದರೆ ರಾಷ್ಟ್ರಾಂತರ ಎಂಬ ಸಿದ್ಧಾಂತವನ್ನು ಪ್ರತಿಪಾದಿಸುತ್ತಾ ಬಂದಿದ್ದೆ. ಅದಕ್ಕೆ ಈ ನಿದರ್ಶನ ಮತ್ತೊಂದು ಐತಿಹಾಸಿಕ ದಾಖಲೆಯಾಯಿತು.

ಡಿಸೆಂಬರ್ 18ರಂದು ಆಚಾರ್ಯ ಪಿ.ಕೆ. ಅತ್ರೆ ನನ್ನ ಭೇಟಿಗೆ ಬಂದರು. ಕೆಲವು ದಿನಗಳ ಮೊದಲು, ಪಾಕಿಸ್ತಾನದ ಪಂಚಮಸ್ತಂಭೀಯರ ಪ್ರಕರಣವೊಂದನ್ನು ಬಹಿರಂಗಪಡಿಸಿದ್ದಕ್ಕಾಗಿ ಅವರನ್ನು ಸರಕಾರ ಬಂಧನದಲ್ಲಿಟ್ಟಿತ್ತು. ಸ್ವತಂತ್ರ ಭಾರತದಲ್ಲೂ ದೇಶಭಕ್ತಿಯೇ ಘೋರ ಅಪರಾಧವಾಗಿತ್ತು ; ಶಿಕ್ಷಾರ್ಹ ಪಾತಕವಾಗಿತ್ತು! ಅತ್ರೆಯವರು ನನ್ನ ಕಾಲುನೋವು ಗುಣವಾದ ಬಗ್ಗೆ ಆನಂದ ವ್ಯಕ್ತಪಡಿಸಿದರು. ಅದಕ್ಕೆ ನಾನು ಹೇಳಿದೆ : 'ನಿಮಗೇನೋ ಆನಂದವಾಯಿತು, ಸರಿ. ಆದರೆ ನನಗೆ ಮಾತ್ರ ನನ್ನ ಪರಲೋಕದ

ಗಾಡಿ ಇನ್ನೊಮ್ಮೆ ತಪ್ಪಿಹೋಯಿತು !' ಇಬ್ಬರೂ ನಕ್ಕೆವು ಅನಂತರನಾನು ಅವರೊಡನೆ, 'ಶಂಕರಾಚಾರ್ಯ, ಜ್ಞಾನೇಶ್ವರ, ರಾಮದಾಸ, ತುಕಾರಾಮ ಮುಂತಾದವರು ತಮ್ಮ ಜೀವನೋದ್ದೇಶ ಪೂರೈಸಿದ ಮೇಲೆ ದೇಹತ್ಯಾಗ ಮಾಡಿ ತಮ್ಮ ಇಹಜೀವನಯಾತ್ರೆಯನ್ನು ಪೂರೈಸಿದರು. ಆ ವಿಷಯವಾಗಿ ನಾನು ಒಂದು ಲೇಖನವನ್ನೂ ಬರೆಯಬೇಕೆಂದಿದ್ದೇನೆ' ಎಂದೆ. ಆದರೆ ನಿಜಕ್ಕೂ ನಾನು ನನ್ನ ಜೀವನಯಾತ್ರೆಯನ್ನು ಕೊನೆಗೊಳಿಸುವ ವಿಚಾರ ಯೋಚಿಸುತ್ತಿದ್ದೆ. ಕಳೆದ ಎರಡು ವರ್ಷಗಳಿಂದಲೂ ಆ ಯೋಚನೆ ಆಗಾಗ್ಗೆ ಬಂದುಹೋಗುತ್ತಲೇ ಇತ್ತು.

ರೋಗದಿಂದ, ಅಪಘಾತದಿಂದ ಇಲ್ಲವೆ ಇನ್ನಾವುದೇ ಅಪರಿಹಾರ್ಯ ರೀತಿಯಲ್ಲೂ ನಾವು ಬಾರದೆ, ಯಾವುದೇ ಕಾರಣಕ್ಕಾಗಿ ಬದುಕು ಬೇಡವೆನಿಸಿತೆನ್ನಿ ; ಆಗ ತಮ್ಮ ಸಾವನ್ನು ತಾವೇ ಬರಮಾಡಿಕೊಳ್ಳುವುದನ್ನು ಆತ್ಮಹತ್ಯೆ ಎನ್ನುತ್ತೇವೆ. ಆದರೆ ಕೆಲವೊಮ್ಮೆ ಅದನ್ನು ಆತ್ಮಹತ್ಯೆ ಎಂದು ಕರೆಯದೆ, ಆತ್ಮಾರ್ಪಣೆ, ಆತ್ಮವಿಸರ್ಜನೆ ಎಂದು ಪ್ರಾಚೀನ ಕಾಲದಿಂದ ಗೌರವಿಸುತ್ತಾ ಬಂದಿಲ್ಲವೇನು ? ಅದೆಷ್ಟೋ ಸಂದರ್ಭಗಳಲ್ಲಿ ಅದನ್ನು ಅಪರಾಧವೆಂದು ಗಣಿಸದೆ ಉದಾತ್ತ ಪುಣ್ಯಕಾರ್ಯವೆಂದು ಗೌರವಿಸಲಾಗಿದೆ.

ಪ್ರಖ್ಯಾತ ಮೀಮಾಂಸಕರಾದ ಕುಮಾರಿಲಭಟ್ಟರು ತಮ್ಮ ಜೀವನ ಕಾರ್ಯ ಮುಗಿಸಿದೊಡನೆ ಚಿತೆಯೇರಿದರು ; ಅದಕ್ಕೆ ತಮ್ಮ ಕೈಗಳಿಂದ ತಾವೇ ಬೆಂಕಿ ಹಚ್ಚಿಕೊಂಡು ಬೂದಿಯಾದರು. ಆದಿ ಶಂಕರಾಚಾರ್ಯರು ಕೊನೆಗಾಲದಲ್ಲಿ ಗುಹೆಯೊಳಗೆ ಕುಳಿತು ಯೋಗಮಾರ್ಗದಿಂದ ಪ್ರಾಣವಿಸರ್ಜನೆ ಮಾಡಿದರು. ಚೈತನ್ಯ ಮಹಾಪ್ರಭುವಾದರೋ, ಅಪಾರ ನೀಲ ಸಾಗರವನ್ನು ಕಾಣುತ್ತಲೇ, 'ಹೇ ಕೃಷ್ಣ ! ಹೇ ಶ್ಯಾಮ !' ಎಂದು ಕೂಗುತ್ತಾ ಮುಂದೆ ಧಾವಿಸಿದರು ; ಸಮುದ್ರವನ್ನು ಹೊಕ್ಕು ಜಲಸಮಾಧಿ ಸ್ವೀಕರಿಸಿದರು. ಜ್ಞಾನೇಶ್ವರರ ಕಥೆಯಂತೂ ಸುಪ್ರಸಿದ್ಧವಾಗಿದೆ. 24ನೆಯ ವಯಸ್ಸಿನೊಳಗೇ ಜ್ಞಾನೇಶ್ವರಿ ಮತ್ತು ಅಮೃತಾನುಭವ ಎಂಬ, ತತ್ವಜ್ಞಾನ ಮಂದಿರದ ಸುವರ್ಣ ಕಲಶದಂತಿರುವ ಎರಡು ಗ್ರಂಥಗಳನ್ನು ರಚಿಸಿದ ಮೇಲೆ ಭೂಗರ್ಭದಲ್ಲಿ ತಾವೇ ನಿರ್ಮಿಸಿದ ಸಮಾಧಿಯೊಳಗೆ ನೇರಿಹೋದರು. ಸಮರ್ಥ ರಾಮದಾಸರೇನು ಕಡಿಮೆಯೆ ? 'ಕನಸಿನಲ್ಲಿ ಕಂಡದ್ದು ನನಸಾಯಿತು ; ದುಷ್ಟರ ದಮನವಾಯಿತು ; ಧರ್ಮದ ಉದ್ಧಾರವಾಯಿತು' ಎಂದು ಹಾಡಿದರು. ಇನ್ನು ತಮ್ಮ ಪ್ರತಿಜ್ಞೆ ಪೂರೈಸಿತೆಂಬ ಕೃತಕೃತ್ಯತೆಯ ಭಾವನೆ ಅವರಲ್ಲಿ ಮೂಡಿತು. ಅನ್ನ ನೀರುಗಳನ್ನು ಅವರು ತ್ಯಜಿಸಿದರು. ಅಚಲ ಆಸನದಲ್ಲಿ ಮಂಡಿಸಿ ರಾಮನಾಮದ ಗರ್ಜನೆ ಆರಂಭಿಸಿದರು. ಅದು ಮುಗಿದಾಗ ಅವರ ಇಹಜೀವನವೂ ಮುಗಿದಿತ್ತು. ಸಂತ ಏಕನಾಥರು ಮತ್ತು ತುಕಾರಾಮರು ಸಹ ಅತ್ಯಂತ ಸುಖ ಸಮಾಧಾನದಿಂದ, ತಮ್ಮ ಐಹಿಕ ಜೀವನ ಕೃತಕೃತ್ಯವಾಯಿತೆಂದು ತಿಳಿದು ಈ ಲೋಕದಿಂದ ಬೀಳ್ಕೊಂಡರು.

ಇವಾವುದನ್ನೂ ನಾವು ಆತ್ಮಹತ್ಯೆ ಎನ್ನುವುದಿಲ್ಲ. ಆತ್ಮಾರ್ಪಣೆ ಎನ್ನುತ್ತೇವೆ. ತಮ್ಮ ಜೀವನದ ಉದ್ದೇಶ ಪೂರ್ಣವಾಗಿ ( ಈ ಪರಿವರ್ತನ ಶೀಲ ಅಥವಾ ಅಖಂಡ ವಿಕಸನಶೀಲ ಜಗತ್ತಿನಲ್ಲಿ ಅಂತಿಮ ಪರಿಪೂರ್ಣತೆ ಎಂಬುದು ಎಂದಿಗೂ ಶಕ್ಯವಿಲ್ಲ ಎನ್ನುವುದಂತೂ ಇದ್ದೇ ಇದೆ) ಸಫಲವಾಗಿದೆ ಎನ್ನುವ ಕೃತಕೃತ್ಯತೆಯ ಭಾವನೆಯಿಂದ ರಿಕ್ತಕಾಮರಾದ ಅಥವಾ ಪೂರ್ಣಕಾಮರಾದ ಧನ್ಯಪುರುಷರು ತಾವಾಗಿಯೇ ತಮ್ಮ ಪ್ರಾಣ ವಿಸರ್ಜಿಸುತ್ತಾರೆ. ತಮ್ಮ ನಶ್ವರ ಜೀವನವನ್ನು ವಿಶ್ವದ ಚಿರಂತನ ಜೀವನದಲ್ಲಿ ತೇಲಿಬಿಡುತ್ತಾರೆ. ಯೋಗವಾಸಿಷ್ಠದಲ್ಲಿ ಹೇಳಿರುವಂತೆ,

**ಅಂತಾರಿಕ್ತೋ ಬಹೀರಿಕ್ತೋ**

**ರಿಕ್ತಕುಂಭ ಇವಾಂಬರೇ ।**
**ಅಂತಃಪೂರ್ಣೋ ಬಹಿಃಪೂರ್ಣೋ**
**ಪೂರ್ಣಕುಂಭ ಇವಾರ್ಣವೇ ॥**

*(ತಮ್ಮ ಜೀವನ ಕಾರ್ಯವು ಸಾಪೇಕ್ಷತಃ ಪರಿಪೂರ್ಣಗೊಂಡಿತೆಂಬ ಆತ್ಮಸಂತುಷ್ಟಿ ಬಂದ ನಂತರ - ತಮ್ಮ ದೇಹವು ಮುಪ್ಪಿನಿಂದಲೋ ರೋಗದಿಂದಲೋ ಸ್ವಂತಕ್ಕೂ ಸಮಾಜಕ್ಕೂ ಕೇವಲ ಹೊರೆಯಾಗಿ ಉಳಿಯುವಂತಾದಾಗ - ಗುಹಾ ಪ್ರವೇಶದಿಂದಲೋ, ಪ್ರಾಯೋಪವೇಶದಿಂದಲೋ, ಅಗ್ನಿ ಪ್ರವೇಶ ದಿಂದಲೋ, ಜಲಸಮಾಧಿಯಿಂದಲೋ, ಇಲ್ಲವೆ ಅಂತಿಮ ಯೋಗ ಸಮಾಧಿಯಿಂದಲೋ ದೇಹ ವಿಸರ್ಜಿಸುವುದು ಆತ್ಮಸಮರ್ಪಣೆಯೇ ಸರಿ.)*

**ಧನ್ಯೋಽಹಮ್ । ಧನ್ಯೋಽಹಮ್ ।**
**ಕರ್ತವ್ಯಂ ಮೇ ನ ವಿದ್ಯತೇ ಕಿಂಚಿತ್ ।**
**ಧನ್ಯೋಽಹಮ್ । ಧನ್ಯೋಽಹಮ್**
**ಪ್ರಾಪ್ತವ್ಯಂ ಸರ್ವಮದ್ಯ ಸಂಪನ್ನಮ್ ॥**

*(ಮಾಡಬೇಕಾದುದು ಏನೂ ಉಳಿದಿಲ್ಲ ; ಗಳಿಸಬೇಕಾದುದೆಲ್ಲವೂ ಸಿಕ್ಕಿದೆ ; ನಾನು ಧನ್ಯ, ನಾನು ಧನ್ಯ !)*

ಈ ಎಲ್ಲ ಸಂಗತಿಗಳನ್ನೂ ಚೆನ್ನಾಗಿ ಆಲೋಚಿಸಿಯೇ ನಾನು ನಿರ್ಧಾರಕ್ಕೆ ಬಂದಿದ್ದೆ. ನನ್ನ ಸಾವನ್ನು ಯಾರೂ ತಪ್ಪು ಅರ್ಥ ಮಾಡಿಕೊಳ್ಳಬಾರದೆಂದು 1964ರ ಜೂನ್ ವೇಳೆಗೆ ಒಂದು ವಿವರವಾದ ಲೇಖನ ವನ್ನೂ ಬರೆದು ನನ್ನ ಹತ್ತಿರವೇ ಇರಿಸಿಕೊಂಡೆ ಆತ್ಮಹತ್ಯೆ ಮತ್ತು ಆತ್ಮಾರ್ಪಣೆ ಎಂಬುದು ಅದರ ಶೀರ್ಷಿಕೆ

ನಾನು ಮನೆಯಿಂದ ಹೊರಗೆ ಹೋಗಿ ಅನೇಕ ತಿಂಗಳುಗಳೇ ಉರುಳಿಹೋಗಿದ್ದವು. ಒಂದು ದಿನ ಆಪ್ತ ಕಾರ್ಯದರ್ಶಿ ಬಾಳಾರಾವ್‌ಗೆ ಹೇಳಿದೆ : 'ಬಾಳಾ, ಸಮುದ್ರದಲ್ಲಿ ಉಬ್ಬರವಿದ್ದಾಗ ತಿರುಗಾಡಲು ಹೋಗೋಣ. ನೀರಿನ ಉಬ್ಬರ ಯಾವಾಗ ಹೆಚ್ಚಾಗಿರುತ್ತದೆ, ಎಲ್ಲಿಂದ ನೋಡಿದರೆ ಚೆನ್ನಾಗಿ ಕಾಣುತ್ತದೆ, ಒಮ್ಮೆ ನೋಡಿಕೊಂಡು ಬಾ.'

ಅವನೆಂದ : 'ಹುಣ್ಣಿಮೆ ಮತ್ತು ಅಮಾವಾಸ್ಯೆಗಳಂದು 12 ಗಂಟೆಗೆ ಅತ್ಯಂತ ಹೆಚ್ಚಾಗಿ ಸಮುದ್ರದ ನೀರು ಉಕ್ಕೇರುತ್ತದೆ. ಅನಂತರ ಅದು ದಿನದಿನಕ್ಕೂ 40 ನಿಮಿಷಗಳಷ್ಟು ತಡವಾಗುತ್ತಾ ಹೋಗುತ್ತದೆ. ಸಂಜೆಯ ವೇಳೆ ಹೋಗುವುದಿದ್ದರೆ ಷಷ್ಠಿ ಅಥವಾ ಸಪ್ತಮಿ ದಿನ ಉತ್ತಮ.'

ಅನಂತರ 15-20 ದಿನ ಅವನು ಆ ಮಾತೇ ಎತ್ತಲಿಲ್ಲ. ಅವನಿಗೆ ಏನಾದರೂ ಸಂಶಯ ಬಂದಿರ ಬಹುದೇ ಎಂದು ನನಗೆ ಸಂಶಯವಾಯಿತು ! ಅವನು ಕೆಲಸ ಮಾಡುತ್ತಿದ್ದುದು ಕೆಳಗಿನ ಕೊಠಡಿಯಲ್ಲಿ. ಒಂದು ದಿನ, ಅವನು ಮಧ್ಯಾಹ್ನ 4 ಗಂಟೆಗೆ ಬರುತ್ತಲೇ, ಇದ್ದಕ್ಕಿದ್ದಂತೆ ಮಹಡಿಯಲ್ಲಿದ್ದ ನನ್ನ ಕೋಣೆಗೆ ಕರೆದೆ. ಈಗಲೇ ಹೋಗಿ ಟ್ಯಾಕ್ಸಿ ತೆಗೆದುಕೊಂಡು ಬಾ. ಈ ದಿನ ಸಮುದ್ರ ತೀರದಲ್ಲಿ ತಿರುಗಾಡಿ ಬರೋಣ ಎಂದೆ. ಮುಂದಿನದನ್ನು ಅವನ ಬಾಯಲ್ಲೇ ಕೇಳಿ :

'ನನಗೆ ಅಚ್ಚರಿಯಾಯಿತು. ಪ್ರತಿಯೊಂದೂ ಕಾರ್ಯಕ್ರಮವನ್ನೂ ಮೊದಲೇ ನಿಶ್ಚಯಿಸಿ, ಪೂರ್ವ ಸೂಚನೆ ಕೊಡುತ್ತಿದ್ದ ತಾತ್ಯಾ ಇಂದು ಒಮ್ಮೆಲೇ ಹೊರಟಿರುವುದೇಕೆ ? ತಾವು ತಿರುಗಾಡಲು ಹೋಗುವುದು ಜನರಿಗೆ ತಿಳಿಯಬಾರದೆಂದು ಹೀಗೆ ನನಗೆ ಹೇಳಿದ್ದಾರು - ಎಂದು ಸಮಾಧಾನ ಮಾಡಿಕೊಂಡೆ. ತಾತ್ಯಾ,

ನಾನು ಮತ್ತು ಅವರ ಶುಶ್ರೂಷೆ ಮಾಡುತ್ತಿದ್ದ ದಾದಿ ಕುಮಾರಿ ಇಂದುತಾಯಿ, ಮೂವರೂ ವರಳಿ ತೀರಕ್ಕೆ ಹೋದೆವು. ಅಲ್ಲಿ ಹೊಸದಾಗಿ ದಡ ನಿರ್ಮಿಸಿದ್ದರು. ಎದುರಿಗೆ ಪಶ್ಚಿಮಸಾಗರ ಅಪಾರವಾಗಿ ಹರಡಿ ಕೊಂಡಿತ್ತು. ಆದರೆ ಅಲ್ಲಿ ಅಲೆಗಳು ದಡದವರೆಗೆ ಬರುತ್ತಿರಲಿಲ್ಲ; ನೀರು ಸಹ ಹೆಚ್ಚು ಆಳವಿರಲಿಲ್ಲ. ಏನು ಕಾರಣವೋ, ತಾತ್ಯಾ ಅವರ ಮನಸ್ಸಿಗೆ ಆ ಜಾಗ ಹಿಡಿಸಲಿಲ್ಲ. ಹದಿನೈದು ದಿನಗಳ ನಂತರ ಪುನಃ ಅವರು ಇದ್ದಕ್ಕಿದ್ದಂತೆ, ಹೊರಡೋಣ ಎಂದರು. ಅಂದು ನಾವು ಸುಭಾಷ್ ರಸ್ತೆಯ ಮೂಲಕ ಸಚಿವಾಲ ಯದ ಪಕ್ಕದಲ್ಲಿರುವ ನರೀಮನ್ ಘಟ್ಟಕ್ಕೆ ಹೋದೆವು. ಆ ಜಾಗವನ್ನು ತಾತ್ಯಾ ತುಂಬ ಮೆಚ್ಚಿಕೊಂಡರು. ಅಲ್ಲಿ ಅಷ್ಟಾಗಿ ಜನಸಂಚಾರವೂ ಇರಲಿಲ್ಲ. ತಾತ್ಯಾ ಅಲ್ಲಿ ಕುಳಿತುಕೊಂಡರು. 'ಸಾಗರವನ್ನು ಕುರಿತು' ಎಂಬ ತಮ್ಮ ಕವನದಲ್ಲಿ ತಾವು ಹಾಕಿದ ಬೆದರಿಕೆ ಹೇಗೆ ಪೂರ್ಣವಾಗಿದೆಯೆಂದು ವಿವರಿಸಿದರು. ಅದರ ಕೊನೆಯ ಚರಣವನ್ನು ಬದಲಾಯಿಸಿ ಬರೆಯುವುದು ಅಗತ್ಯ ಎಂದರು. ಸಮುದ್ರದ ಕಡೆ ಕೈತೋರಿಸುತ್ತಾ, ಇಂಥದೇ ಜಲರಾಶಿ ಕಂಡು ಚೈತನ್ಯ ಮಹಾಪ್ರಭು ಹೇಗೆ ಕೃಷ್ಣನಾಮಸ್ಮರಣೆ ಮಾಡುತ್ತಾ ಅದರ ಒಳಹೊಕ್ಕರು ಎಂಬುದನ್ನೂ ವರ್ಣಿಸಿದರು. ಅದನ್ನು ಕೇಳಿ ನಾನು ಬೆಚ್ಚಿ, ಒಳಗೇ ನಡುಗಿದೆ. ತಾತ್ಯಾರ ಮನಸ್ಸಿನಲ್ಲಿ ಅದೇ ರೀತಿ ಮಾಡುವ ಬಯಕೆ ಇರಲಾರದಷ್ಟೆ! ಭೀತಿಯಿಂದ ಎದೆ ಡವಗುಟ್ಟಿತು.

'ಹಿಂದಿರುಗುವಾಗ ತಾತ್ಯಾ ಪ್ರೀತಿಯಿಂದ ವಿಚಾರಿಸಿದರು: ''ಬಾಳಾರಾವ್, ಇತ್ತಕಡೆಯ ಸಮುದ್ರಕ್ಕೆ ಇಳಿಯಲು ಎಲ್ಲೂ ಮೆಟ್ಟಿಲುಗಳಿಲ್ಲವೆ?'' ಇವೆ, ಆದರೆ ನೀವು ಇಳಿಯುವುದಕ್ಕೆ ಯೋಗ್ಯವಾಗಿಲ್ಲ; ಬಹಳ ಎತ್ತರದ ಮೆಟ್ಟಿಲುಗಳು. ನಿಮಗೆ ಸಮತೋಲನ ತಪ್ಪಬಹುದು! ಎಂದೆ. ಅದಕ್ಕೆ ಅವರು, ''ಆದರೇ ನಂತೆ, ನೀನು ಮತ್ತು ಇಂದು ಜತೆಗಿಲ್ಲವೆ?'' ಎಂದರು. ಅಷ್ಟರಲ್ಲಿ ನಮ್ಮ ವಾಹನ ಮೆಟ್ಟಲಿದ್ದ ಜಾಗದಿಂದ ಮುಂದೆ ಬಂದಿತ್ತು. ಪುನಃ ಎಂದೆಂದಿಗೂ ಅವರನ್ನು ಅಲ್ಲಿಗೆ ಕರೆದೊಯ್ಯಬಾರದೆಂದು ನಿರ್ಧರಿಸಿಕೊಂಡೆ. ಪುನಃ ಎರಡು ಮೂರು ಬಾರಿ, ಪೂರ್ತಿ ಉಬ್ಬರವಿದ್ದ ಸಮಯದಲ್ಲಿ ತಾತ್ಯಾ ಅನಿರೀಕ್ಷಿತವಾಗಿ ತಿರುಗಾಡಲು ಹೋಗೋಣ, ನಡಿ ಎಂದರು. ಆದರೆ ನಾನು ಏನಾದರೊಂದು ನೆಪ ಹೇಳಿ ಆ ಜಾಗಕ್ಕೆ ಹೋಗುವುದನ್ನು ತಪ್ಪಿಸಿದೆ. ಈಗ ಲಜಪತರಾಯ್ ಮಹಾವಿದ್ಯಾಲಯ ಇದೆಯಷ್ಟೆ, ಅದರ ಸಮೀಪದ ಸಮುದ್ರದ ಬಳಿ ಟ್ಯಾಕ್ಸಿ ನಿಲ್ಲಿಸಿಬಿಡುತ್ತಿದ್ದೆ. ಇಡೀ ಮುಂಬೈನಲ್ಲಿ ಇದರಷ್ಟು ರಮ್ಯವಾದ ಏಕಾಂತಸ್ಥಳ ಇನ್ನು ಯಾವುದೂ ಇಲ್ಲ ಎನ್ನುತ್ತಿದೆ. ನೀರಿನ ಹತ್ತಿರ ಕರೆದುಕೊಂಡು ಹೋದರೆ ಎಲ್ಲಿ ಜಲಸಮಾಧಿ ಹೊಂದುತ್ತಾರೋ ಎಂಬ ಭಯ ಕಾಡುತ್ತಿತ್ತು. ನಾನು ಮುಂದೆ ಕರೆದೊಯ್ಯಲು ಏಕೆ ಹೆದರುತ್ತೇನೆಂಬುದು ಅವರಿಗೂ ಸುಳುಹು ಹತ್ತಿತೆಂದು ಕಾಣುತ್ತದೆ!

'ನನ್ನ ತರ್ಕ ನಿಜವಾಗಿತ್ತು! ಒಂದು ದಿನ ತಾತ್ಯಾ ಗಂಭೀರವಾಗಿ ನುಡಿದರು: ''ಜ್ಞಾನೇಶ್ವರನು ಸಮಾಧಿ ತೆಗೆದುಕೊಳ್ಳಲು ಅವನ ಬಂಧುಗಳೇ ನೆರವಾದರು. ಉಪವಾಸ ಮಾಡಿ ಮರಣ ಹೊಂದುವ ಪದ್ಧತಿ ಜೈನರಲ್ಲೂ ಇದೆ. ಹಿಂದೆ, ತಾವಾಗಿ ಸಹಗಮನ ಮಾಡುತ್ತಿದ್ದವರನ್ನು ಯಾರು ಅಡ್ಡಿಪಡಿಸುತ್ತಿರಲಿಲ್ಲ. ನಾನೀಗ ಆತ್ಮಾರ್ಪಣೆ ಮಾಡಿಕೊಳ್ಳಬೇಕಾಗಿದೆ. ನೀನು ಸಹಾಯ ಮಾಡುತ್ತೀಯೋ ಇಲ್ಲವೋ, ಹೇಳು! ನೀನು ಇಲ್ಲ ಎಂದರೆ ನನಗೆ ಕೋಪವಿಲ್ಲ, ಏಕೆಂದರೆ ಅದು ಸ್ವಾಭಾವಿಕ. ಸಹಾಯ ಮಾಡುವುದೇ ಆದರೆ, ನಿನ್ನ ಮೇಲೆ ಏನೂ ಅಪವಾದ ಬಾರದಂತೆ ನಾನು ವ್ಯವಸ್ಥೆ ಮಾಡುತ್ತೇನೆ. ನಾನೀಗ ಆತ್ಮಹತ್ಯೆ ಮತ್ತು ಆತ್ಮಾರ್ಪಣೆ ಲೇಖನ ಬರೆದಿರುವುದರಿಂದ ನಾನು ಎಂದಿದ್ದರೂ ಆತ್ಮಾರ್ಪಣೆ ಮಾಡಿಕೊಳ್ಳುವವನೇ ಎಂಬುದು ಜನರಿಗೆ ಗೊತ್ತಾಗುತ್ತದೆ. ಆದ್ದರಿಂದ ನೀನು ಯಾವುದಕ್ಕೂ ಸರಿಯಾಗಿ ಆಲೋಚನೆ ಮಾಡಿ

ಎಂಟು ದಿವಸದೊಳಗೆ ತಿಳಿಸು.'' ಎಂಟನೆಯ ದಿನ ಬಂತು ಅಂಜುತ್ತ ಅಂಜುತ್ತ ನಾನು ಮೇಲೆ ಹೋದೆ ನಿತ್ಯದ ಕೆಲಸ ಬೇಗಬೇಗ ಮುಗಿಸಿಕೊಂಡು ಬಂದುಬಿಡೋಣ ಎಂದುಕೊಂಡೆ. ಆ ದಿನ ವಿಶೇಷ ಕಾಗದ ಗಳಾಗಲೀ ಕರೆಯೋಲೆಗಳಾಗಲೀ ಇರಲಿಲ್ಲ. ಸದ್ಯ ಗೆದ್ದೆ ಎಂದುಕೊಂಡು ನಾನು ಇನ್ನೇನು ಹೊರಕ್ಕೆ ಜಾರಿ ಕೊಳ್ಳಬೇಕು ಎನ್ನುವಾಗ, ತಾತ್ಯಾ ಬಾಯಿ ತೆರೆದರು : ''ಇಂದೇ ಎಂಟನೆಯ ದಿವಸ. ಏನು ಹೇಳುತ್ತೀ?''

'ಬಹಳ ಗಂಭೀರ ಪ್ರಶ್ನೆ! ಆದರೆ ಆಲೋಚಿಸಲು ಎಂಟು ದಿನ ಸಿಕ್ಕಿದ್ದುದರಿಂದ, ನಾನೂ ಮನಸ್ಸು ಗಟ್ಟಿಮಾಡಿಕೊಂಡಿದ್ದೆ. ನಿರ್ಧಾರದ ಸ್ವರದಲ್ಲಿ ''ಆಗಲಿ'' ಎಂದೆ. ಮುಂದುವರಿದು, ''ಆದರೆ, ಅದರಿಂದ ನನ್ನ ಮೇಲೆ ಹತ್ಯೆಯ ಆರೋಪ ಬರುವುದಿಲ್ಲವೆಂದು ನೀವು ಹೇಳುವುದನ್ನು ಮಾತ್ರ ನಾನು ಒಪ್ಪಲಾರೆ. ಉದಾಹರಣೆಗೆ, ನಿಮ್ಮ ಮಾತಿನಂತೆ ನಾನು ಎಷ್ಟೋ ಜನರನ್ನು ಭೇಟಿಗೆ ಬಿಡದೆ ಹೊರಗೆ ತಡೆಯುತ್ತೇನೆ; ಆದರೆ ಅದರ ತಪ್ಪೆಲ್ಲ ನನ್ನ ತಲೆಗೆ ಬರುತ್ತದೆ. ಅದರಿಂದ ಎಷ್ಟೋ ಜನರ ಸ್ನೇಹ ಕಳೆದುಕೊಂಡಿದ್ದೇನೆ; ಅನೇಕರು ಶತ್ರುಗಳೂ ಆಗಿದ್ದಾರೆ. ಅಂತಹರೆಲ್ಲ ಕೊಲೆಪಾತಕಿ ಎಂದು ನನ್ನ ಕಡೆಗೆ ಬೆಟ್ಟು ತೋರದೆ ಬಿಡು ವುದಿಲ್ಲ. ಇಷ್ಟೆಲ್ಲ ಅಪಾಯದ ಅರಿವಿದ್ದರೂ, ನೀವು ಹೇಳಿದಂತೆ ನಾನು ನಿಮ್ಮ ಜಲಸಮಾಧಿಗೆ ಸಹಾಯ ಮಾಡುತ್ತೇನೆ'' ಎಂದೆ.

'ಸ್ವಲ್ಪ ಹೊತ್ತು ಬಿಟ್ಟು ಮತ್ತೆ, ''ಆದರೆ ಸಮುದ್ರಕ್ಕೆ ಹೋಗುವಷ್ಟಾದರೂ ನಿಮಗೆ ಶಕ್ತಿ ಬೇಕು. ಅದಕ್ಕಾಗಿ ಸ್ವಲ್ಪ ಔಷಧೋಪಚಾರ ಅಗತ್ಯವಿದೆ'' ಎಂದೆ. ಆದರೆ ಅವರು ನನ್ನ ಮಾತಿಗೆ ಒಪ್ಪಲಿಲ್ಲ. ನನ್ನ ಮೇಲೆ ತಮ್ಮ ಹತ್ಯೆಯ ಆರೋಪ ಬರುವುದೆಂದೋ ಅಥವಾ ಈ ಮಾರ್ಗ ಯಶಸ್ವಿಯಾಗದೆಂದೋ, ಜಲಸಮಾಧಿಯ ಯೋಚನೆ ಬಿಟ್ಟುಬಿಟ್ಟರು. ಆಮೇಲೆ ಸಮುದ್ರಕ್ಕೆ ಕರೆದುಕೊಂಡು ಹೋಗುವಂತೆ ಅವರು ಎಂದೂ ಕೇಳಲಿಲ್ಲ.'

ಡಾ. ಆರ್‌ವಿ ಸಾಠೆಯವರಿಗೂ ನನಗೂ ಕಾಲು ಶತಮಾನದ ಸಂಬಂಧ ಅವರೇ ನನಗೆ ವೈದ್ಯಕೀಯ ಪರೀಕ್ಷೆ ಮಾಡುತ್ತಿದ್ದವರು. ಡಾ. ವಾಸುದೇವ ಪುರಂದರೆ ಮತ್ತು ಅವರ ಪುತ್ರ ಡಾ. ಸುಭಾಷ ಪುರಂದರೆ ನಮ್ಮ ಕುಟುಂಬಕ್ಕೆ ವೈದ್ಯರು. ಅವರೆಲ್ಲರಿಗೂ ನಾನು ಆತ್ಮಾರ್ಪಣೆಯ ತತ್ತ್ವವನ್ನು ವಿವರಿಸಿ ಒಪ್ಪಿಸಿದೆ. ಆದರೆ, ನನಗೆ ಮೂಲವ್ಯಾಧಿ ಕೆರಳಿ, ಹೊಟ್ಟೆ ಊದಿಕೊಂಡಿದ್ದಾಗ, ಏನಾದರೊಂದು ಸುಖಸಾವು ಬರುವಂಥ ಔಷಧಿ ಕೊಟ್ಟುಬಿಡಿ ಎಂದರೆ, ಒಬ್ಬರೂ ನೆರವಾಗಲಿಲ್ಲ!

1964ರ ಡಿಸೆಂಬರಿನಲ್ಲಿ ಕೇಸರಿ ಪತ್ರಿಕೆಯ ಜಯವಂತರಾವ್ ತಿಲಕರಿಂದ ನನಗೆ ಸ್ವಲ್ಪ ಹಣ ಬಂತು. ಅದರ ಜತೆಗೆ ಒಂದು ಮನವಿ : 'ನಿಮ್ಮ ಬಳಿ ಇರುವ ಆತ್ಮಹತ್ಯೆ ಮತ್ತು ಆತ್ಮಾರ್ಪಣೆ ಲೇಖನವನ್ನು ಪ್ರಕಟಣೆಯ ಅಧಿಕಾರಸಹಿತ ಕಳುಹಿಸಿಕೊಡಿ' ಎಂದು! ನಾನು ಲೇಖನ ಬರೆಯುತ್ತೇನೆಂದು ಆಚಾರ್ಯ ಅತ್ರೆಯವರೊಡನೆ ಹೇಳಿ ಬಹುದಿನಗಳಾಗಿತ್ತು. ಆದರೆ, ಅದನ್ನು ಬರೆದು ಸಿದ್ಧಪಡಿಸಿರುವ ವಿಷಯ ಜಯವಂತರಾಯರಿಗೆ ಹೇಗೆ ಗೊತ್ತಾಯಿತು? ಇದು ಆಪ್ತ ಕಾರ್ಯದರ್ಶಿ ಬಾಳಾರಾಯನ ಕರಾಮತಿ. ಲೇಖನ ಕಳುಹಿಸಿದ ನಂತರ ಅದು ಸಹ್ಯಾದ್ರಿ ಪತ್ರಿಕೆಯಲ್ಲಿ ಪ್ರಕಟವಾಯಿತು. ಅದನ್ನು ನೋಡಿದ ಅನೇಕ ಆಪ್ತರು ನನ್ನನ್ನು ವಿಚಾರಿಸಲು ಬರತೊಡಗಿದರು. ಅವರೆಲ್ಲರಿಗೂ ನನ್ನದು ಒಂದೇ ಪ್ರಶ್ನೆ : 'ಅದರಲ್ಲಿ ನನ್ನ ಸಂಬಂಧವಾಗಿ ನಾನು ಎಲ್ಲಿ ಬರೆದಿದ್ದೇನೆ, ತೋರಿಸಿ? ಅಥವಾ ನಾನು ಹಾಗೆ ಮಾಡಬೇಕೆಂಬುದು ನಿಮ್ಮ ಇಚ್ಛೆಯೋ?'

ಆ ಲೇಖನ ಬರೆದ ನಂತರ 1964ರ ಆಗಸ್ಟ್ ತಿಂಗಳಲ್ಲೇ ನಾನು ನನ್ನ ಮರಣಶಾಸನವನ್ನೂ ಬರೆದಿಟ್ಟೆ.

ಅದರಲ್ಲಿ ಆಸ್ತಿ ವಿತರಣೆ, ಗ್ರಂಥ ಪ್ರಕಟಣೆಯ ಹಕ್ಕು ಮತ್ತು ನನ್ನ ಅಂತ್ಯಕ್ರಿಯೆ ನಡೆಸಬೇಕಾದ ರೀತಿ ಇತ್ಯಾದಿಗಳ ವಿವರಗಳಿದ್ದವು.

1965ರ ಫೆಬ್ರವರಿ 5ರಂದು ಸುಖದೇವ ವಿಷ್ಣುದಯಾಳ್ ನನ್ನ ಭೇಟಿಗೆ ಬಂದರು. ಮರಿಚಿ (ಮಾರಿಶಸ್) ದೇಶದ ಸ್ಥಳೀಯ ಸಂಸ್ಥೆ ಹಾಗೂ ಸಹಕಾರ ವಿಕಾಸ ಖಾತೆಯ ಸಚಿವರವರು.

'ತಾರುಣ್ಯದಲ್ಲಿ ನಾನು ನಿಮ್ಮ ಜೀವನದ ಬಗ್ಗೆ ಕೇಳಿ ಪ್ರಭಾವಿತನಾದೆ; ಸ್ಫೂರ್ತಿ ಪಡೆದೆ. ನಿಮ್ಮ ಪ್ರಸಿದ್ಧ ಪುಸ್ತಕಗಳಾದ ಹಿಂದುತ್ವ ಮತ್ತು ಭಾರತೀಯ ಸ್ವಾತಂತ್ರ್ಯ ಸಂಗ್ರಾಮ - 1857 ಓದಿದ್ದೇನೆ' ಎಂದರು. ಆ ದೇಶದಲ್ಲಿ ಭಾರತೀಯ ಸಂಜಾತರೇ ಬಹುಸಂಖ್ಯಾತರು. ನನ್ನ ಅನೇಕ ಸವಿಗನಸುಗಳಲ್ಲಿ 'ಬೃಹತ್ತರ ಭಾರತ' ಸಹ ಸೇರಿತ್ತು. ಪರದೇಶಗಳಲ್ಲಿನ ಹಿಂದುಗಳಿಗೆ ಸಂಬಂಧಿಸಿದಂತೆ ಪತ್ರಿಕೆಗಳಲ್ಲಿ ಬರುತ್ತಿದ್ದ ವಾರ್ತೆಗಳನ್ನು ಕತ್ತರಿಸಿ ಇಡುತ್ತಿದ್ದೆ. ಅಲ್ಲದೆ, ಆರ್ಯ ಸಮಾಜದ ಮಾಸಿಕ ಪತ್ರದಲ್ಲಿ ಅದಕ್ಕೆ ಸಂಬಂಧಿಸಿದಂತೆ ಬರುತ್ತಿದ್ದ ಸಂಗತಿಗಳ ಸಂಗ್ರಹವೂ ನನ್ನಲ್ಲಿತ್ತು. ಆದ್ದರಿಂದ ನಾನು ಮರಿಚಿಯಲ್ಲಿನ ಹಿಂದುಗಳ ಸ್ಥಿತಿಗತಿಗಳ ಬಗ್ಗೆ, ಮುಸಲ್ಮಾನರ ದೊಂಬಿಗಳ ಬಗ್ಗೆ ಹೇಳತೊಡಗಿದಾಗ ಅಲ್ಲಿನವರೇ ಆದ ವಿಷ್ಣುದಯಾಳರು ಅಚ್ಚರಿಗೊಂಡರು!

ಜುಲೈನಲ್ಲಿ ದಿಲ್ಲಿಯ 'ವೀರ ಅರ್ಜುನ್' ದಿನಪತ್ರಿಕೆಯ ಸಂಪಾದಕರಾದ ಕುಮಾರ ನರೇಂದ್ರ ಅವರು ಬಂದು ಒಂದು ಚೆಕ್ ಅರ್ಪಿಸಿದರು. ಮೇಲೆ ಏಳಲಾಗದೆ, ಹಾಸಿಗೆಯಲ್ಲಿ ಮಲಗಿಕೊಂಡೇ ಅದನ್ನು ತೆಗೆದುಕೊಂಡೆ. ದಿಲ್ಲಿಯ ಜನರಿಂದ ಸಂಗ್ರಹಿಸಿದ್ದ 51 ಸಹಸ್ರ ರೂ.ಗಳ ನಿಧಿ ಅದು.

'ಮುಂಬೈಗಿಂತ ದಿಲ್ಲಿಯ ಹವಾಗುಣ ಚೆನ್ನಾಗಿದೆ. ನೀವು ಅಲ್ಲಿಗೆ ಬನ್ನಿ ; ನಿಮ್ಮ ಆರೋಗ್ಯ ಉತ್ತಮಗೊಳ್ಳುತ್ತದೆ' ಎಂದು ಕುಮಾರ ನರೇಂದ್ರ ಒತ್ತಾಯಿಸಿದರು.

ನಾನು ದಿಲ್ಲಿಗೆ ಹೋದರೆ ಅಲ್ಲಿನ ಹವಾಗುಣ ಮತ್ತು ದಿಲ್ಲಿಯ ಆರೋಗ್ಯ ಸಹ ಕೆಡುತ್ತದೆ, ಎಂದು ಮನಸ್ಸಿನಲ್ಲೇ ಹೇಳಿಕೊಂಡೆ! ಆದರೆ ಸಂಪಾದಕರೊಡನೆ ಬೇರೆ ವಿಷಯ ಮಾತುಕತೆಯಾಡುತ್ತಾ, ಅವರ ತಂದೆಯವರ ಬಗ್ಗೆ ವಿಚಾರಿಸಿದೆ. ನಡುವೆ, ಸಹಜ ರೀತಿಯಲ್ಲೆ 'ಅವರು ನಿಧನರಾದುದು ದಿಲ್ಲಿಯಲ್ಲಿ ತಾನೆ?' ಎಂದೆ. 'ಹೌದು' ಎಂದರು. 'ನಿಮ್ಮ ತಂದೆಯವರು ಜೀವಮಾನವೆಲ್ಲ ದಿಲ್ಲಿಯಲ್ಲೇ ವಾಸಿಸುತ್ತಿದ್ದರೂ, ಉಳಿಯಲಿಲ್ಲ; ನನಗಿಂತಲೂ ಚಿಕ್ಕ ವಯಸ್ಸಿನಲ್ಲೇ ತೀರಿಕೊಂಡರು. ಅಂದಮೇಲೆ ಈಗ ನಾನು ದಿಲ್ಲಿಗೆ ಬಂದರೆ ಉಳಿಯುವ ಭರವಸೆಯೇನು?' ಎಂದು ಹೇಳಿ ಅವರ ಒತ್ತಾಯದಿಂದ ತಪ್ಪಿಸಿಕೊಂಡೆ!

ಚಿಕಿತ್ಸೆ ಪಡೆಯಲು ಪರದೇಶಕ್ಕೆ ಹೋಗುವಂತೆಯೂ ನನಗೆ ಅನೇಕರು ಸಲಹೆ ಮಾಡುತ್ತಿದ್ದರು. ತಾವು ಅದಕ್ಕೆ ಸಹಾಯ ಮಾಡುವುದಾಗಿಯೂ ಭರವಸೆ ನೀಡುತ್ತಿದ್ದರು. ಅಂಥವರಿಗೆ ಆತ್ಮಸಮರ್ಪಣೆಯ ಉನ್ನತ ಸಿದ್ಧಾಂತ ಹೇಳಿ ಏನು ಉಪಯೋಗ? ಅದಕ್ಕಾಗಿ, 'ಇಂಗ್ಲೆಂಡಿನ ತಜ್ಞವೈದ್ಯರು ತಮಗೆ ಪ್ರಾಣಪ್ರಿಯ ರಾಗಿದ್ದ ಚರ್ಚಿಲರನ್ನೇ ಉಳಿಸಿಕೊಳ್ಳಲಾರದೇ ಹೋದರು; ರಶ್ಯದ ಪ್ರವೀಣರು ತಮ್ಮ ಜನಪ್ರಿಯ ನಾಯಕರ ಪೈಕಿ ಒಬ್ಬರನ್ನೂ ಉಳಿಸಲಿಲ್ಲ! ಇನ್ನು ಅವರು ನನ್ನನ್ನು ಹೇಗೆ ಉಳಿಸಿಯಾರು? ಎನ್ನುತ್ತಿದ್ದೆ.' ಆ ಪ್ರಶ್ನೆಯು ಅಭಿಮಾನಿಗಳ ಕಾಟದಿಂದ ನನ್ನನ್ನು ಉಳಿಸಿತು!

1965ರ ಆಗಸ್ಟ್ ವೇಳೆಗೆ ನನ್ನ ಆರೋಗ್ಯ ತೀರ ಹದಗೆಟ್ಟಿತು. ಆಗ ದೇಶದ ಗಡಿಗಳ ಸುಭದ್ರತೆಯೂ ಹದಗೆಟ್ಟಿತು. ಸೆಪ್ಟೆಂಬರ್ 1ರಂದು ಪಾಕಿಸ್ತಾನದ ಸೈನ್ಯ ಆಕ್ರಮಣ ಆರಂಭಿಸಿತು. ಆದರೆ ಭಾರತೀಯ ಯೋಧರು ದಿಟ್ಟವಾಗಿ ಶತ್ರುಗಳನ್ನು ಎದುರಿಸಲಾರಂಭಿಸಿದರು. ನಮ್ಮ ಸೇನೆ ವೈರಿಗಳನ್ನು ಹಿಮ್ಮೆಟ್ಟಿಸುತ್ತ

ಫೆ. 3ರಿಂದ ಪ್ರಾಯೋಪವೇಶ ಆರಂಭಿಸಿದೆ. ಆಗಲೂ ನನಗೆ ಕಣ್ಣು, ಕಿವಿ, ನಾಲಗೆ ಮೂಗು ಎಲ್ಲವೂ ಚುರುಕಾಗಿದ್ದವು. ಮೊದಲು ಆಹಾರ ಬಿಟ್ಟು, ಕೇವಲ ಚಹಾ ತೆಗೆದುಕೊಳ್ಳತೊಡಗಿದೆ. ಆದರೆ ಅದರಲ್ಲೂ ಹೋಮಿಯೋಪತಿ ಔಷಧಿ ಹಾಕಿದ್ದುದನ್ನು ನನ್ನ ಮೂಗು, ನಾಲಗೆ ಗುರುತಿಸಿದವು. ಚಹಾ ನನಗೆ ಜೀರ್ಣವಾಗುವುದಿಲ್ಲ; ಏನೋ ವಾಸನೆ ಬರುತ್ತದೆ, ಸೇರುವುದಿಲ್ಲ ಎಂದು ಹೇಳಿ ಅದನ್ನೂ ನಿಲ್ಲಿಸಿದೆ. ಆಗ ಮುಂಬೈನಿಂದ ದಿಲ್ಲಿಗೆ ಹಿತೈಷಿಗಳೊಬ್ಬರು ತಂತಿ ಕಳುಹಿಸಿದರು. ಅಲ್ಲಿಂದ ಮಗಳು, ಅಳಿಯ ಮೊಮ್ಮಗಳ ಸಹಿತ ಬಂದಿಳಿದರು. ನನಗೆ ಮಗಳ ಮೇಲೆ ಹೆಚ್ಚು ಪ್ರೀತಿಯಾದ್ದರಿಂದ ಅವಳು ಆಹಾರ ಕೊಟ್ಟರೆ ನಾನು ತೆಗೆದುಕೊಳ್ಳಬಹುದು ಎಂದು ಎಲ್ಲರ ಎಣಿಕೆ.

ಕಣ್ಣೀರಿಡುತ್ತಿದ್ದ ಪ್ರಭಾತಳನ್ನು ಹತ್ತಿರ ಕರೆದು ಹೇಳಿದೆ : 'ನೋಡು, ಮನುಷ್ಯ ಎಂದಿದ್ದರೂ ಸಾಯಲೇಬೇಕು. ದಿನವೂ ಸಾಯುವ ನೆಂಟರಿಷ್ಟರಿಗೆಲ್ಲ ಅಳಬೇಕೆಂದರೆ, ಇಡೀ ಜೀವನವೇ ಅದಕ್ಕೆ ಸಾಲದೆ ಹೋಗುತ್ತದೆ. ನಾನಂತೂ ಅಂತಿಮವಾಗಿ ಹೋಗಬೇಕಾದ ಜಾಗಕ್ಕೆ ಹೊರಟಿದ್ದೇನೆ. ಇನ್ನು ನನ್ನನ್ನು ಚಹಾ ಅಥವಾ ಔಷಧಿ ತೆಗೆದುಕೊಳ್ಳುವಂತೆ ಒತ್ತಾಯಿಸುವುದು ವ್ಯರ್ಥ ಮಗು !'

ತನ್ನ ತಂದೆಯ ನಿರ್ಧಾರವೆಂದರೆ ಅಚಲವೆಂಬುದರ ಪರಿಚಯ ಅವಳಿಗಿತ್ತು ; ಸುಮ್ಮನಾದಳು. ದಿನಕ್ಕೆ ನಾಲ್ಕಾರು ಚಮಚ ನೀರು ಮಾತ್ರ ತೆಗೆದುಕೊಳ್ಳುತ್ತಿದ್ದೆ. ಪತ್ರಿಕೆಗಳನ್ನೂ, ಕಾಗದ ಮತ್ತು ತಂತಿಗಳನ್ನೂ ಓದುತ್ತಿದ್ದೆ. ನಿಶ್ಶಕ್ತಿ ಹೆಚ್ಚುತ್ತಿತ್ತು. ಉಪವಾಸದ ಐದನೆಯ ದಿನ ಹಳ್ಳಿಗೆ ಹೋಗಿದ್ದ ಬಾಳಾರಾವ್ ಬಂದ. ಅವನ ತಾಯಿಯವರ ಯೋಗಕ್ಷೇಮ ವಿಚಾರಿಸಿದೆ. 'ನೀವು ಹೇಗಿದ್ದೀರಿ ?' ಎಂದ. 'ನಾಳೆ ಹೇಳುತ್ತೇನೆ' ಎಂದು ಕಳುಹಿಸಿದೆ.

ಕುತ್ತಿಗೆ, ಮತ್ತು ಹೆಜ್ಜೆ ಊದಿಕೊಳ್ಳತೊಡಗಿದವು. ಫೆಬ್ರವರಿ 12ರಿಂದ ದನಿ ತಗ್ಗಿತು. ಪತ್ರಿಕೆ ಓದಲು ಸಾಧ್ಯವಾಗಲಿಲ್ಲ. ವೈದ್ಯರುಗಳು ಒಂದೇ ಸಮನೆ ಬಂದು ಹೋಗುತ್ತಿದ್ದರು. ಹೊರಗಿನಿಂದ ನೂರಾರು ಜನ ಬಂದು ಹೋಗುವ ಗದ್ದಲ ಕೇಳುತ್ತಿತ್ತು. ನನ್ನ ದೇಹಸ್ಥಿತಿ ವಿಚಾರಿಸುವ ನೂರಾರು ತಂತಿಗಳು ದೇಶದ ಮೂಲೆ ಮೂಲೆಗಳಿಂದ ಬರುತ್ತಿದ್ದವು. ಆ ಪೈಕಿ ಉತ್ತರ ನೀಡಲು ಒಂದು ದಿನ ಎರಡನ್ನು ಆರಿಸಿಕೊಂಡೆ. ದೇಶದ ಇಬ್ಬರು ಹಿರಿಯ ವ್ಯಕ್ತಿಗಳಿಂದ ಅವು ಬಂದಿದ್ದವು; ಇಬ್ಬರೂ ನಿಕಟ ಪರಿಚಿತರು. ಕೆಳಗಿನ ಕೊಠಡಿಯಲ್ಲಿದ್ದ ಬಾಳಾರಾವ್‌ನನ್ನು ಮೇಲಕ್ಕೆ ಕರೆದೆ. ಎರಡು ತಂತಿಗಳನ್ನೂ ಕೈಲಿಟ್ಟು, 'ಸರಿಯಾಗಿ ಓದಿಕೊಂಡು ಅರ್ಥ ಹೇಳು, ನೋಡೋಣ' ಎಂದೆ. ಒಂದರಲ್ಲಿ 'ತಾತ್ಯಾ ಅವರ ಆರೋಗ್ಯ ಹೇಗಿದೆ, ತಿಳಿಸಿ' ಎಂದೂ ಇನ್ನೊಂದರಲ್ಲಿ 'ತಾತ್ಯಾ ಅವರ ಆರೋಗ್ಯ ಉತ್ತಮಗೊಳ್ಳಲೆಂದು ನಾನು ಪ್ರಾರ್ಥಿಸುತ್ತಿದ್ದೇನೆ' ಎಂದೂ ಇದ್ದಿತು.

'ಶಬ್ದಗಳು ಬೇರೆ ಬೇರೆ ಆದರೂ ಅರ್ಥ ಒಂದೇ' ಎಂದ ಬಾಳಾ.

'ಹಾಗಲ್ಲ; ಅವರ ಮನಸ್ಸಿನ ಭಾವನೆಯೇ ತಂತಿಯಲ್ಲೂ ಮೂಡಿದೆ. ಮೊದಲನೆಯವರಿಗೆ ''ತಾತ್ಯಾ ಯಾವಾಗ ಯಾತ್ರೆ ಹೊರಡುತ್ತಾನೆ'' ಎಂಬುದನ್ನು ಅರಿಯುವ ಉತ್ಸುಕತೆ; ''ತಾತ್ಯನಿಗೆ ಗುಣವಾಗಲಿ'' ಎಂಬುದು ಎರಡನೆಯವರ ಇಚ್ಛೆ' ಎಂದು ವಿವರಿಸಿದೆ. ಮೊದಲನೆಯವರಿಗೆ ಆಗಲೇ 90 ವರ್ಷ ಕಳೆದಿತ್ತು. ನಿಮಗೆ ಬದುಕುವ ಆಸೆ ಇರುವುದರಿಂದ ನಾನು ನಿಮಗೆ ಆರೋಗ್ಯಪೂರ್ಣವಾದ ದೀರ್ಘಾಯುಸ್ಸನ್ನು ಕೋರುತ್ತೇನೆ ಎಂದು ಉತ್ತರ ಕಳುಹಿಸಿದೆ. 'ನನಗೆ ಇನ್ನು ಬದುಕುವ ಆಸೆಯಿಲ್ಲ' ಎಂಬುದು ಅದರ ಅಂತರಾರ್ಥ !

ಫೆಬ್ರುವರಿ 20ರಂದು ಅಮಾವಾಸ್ಯೆ. ನಮ್ಮ ತಾಯಿ ಸತ್ತದ್ದೂ ಅಮಾವಾಸ್ಯೆಯ ದಿನವೇ. ನಮ್ಮ ತಂದೆ ದಾಮೂ ಅಣ್ಣಾ ಸಹ ಅದೇ ತಿಥಿಯಂದು ದೈವಾಧೀನರಾಗಿದ್ದರು. ನನಗೂ ಅಮಾವಾಸ್ಯೆಯಂದೇ ಸಾವು ಬರಬಹುದೆಂದು ನಿರೀಕ್ಷಿಸಿದೆ. ಈಗೀಗ ಮೃತ್ಯುದೇವತೆಗೆ ನನ್ನ ಬಗ್ಗೆ ಹೆದರಿಕೆ ಕಡಿಮೆಯಾಗಿತ್ತು. ನಾನು ತೀರ ನಿಶ್ಶಕ್ತನಾಗಿದ್ದೇನೆಂಬ ಬಗ್ಗೆ ನಂಬಿಕೆ ಮೂಡಿತ್ತು. ಹತ್ತಿರ ಬಂದು ಮಂಚದ ಒಂದು ಮೂಲೆಯಲ್ಲಿ ಹೊಂಚು ಹಾಕುತ್ತಾ ಕಾದು ಕುಳಿತಿದ್ದ - ಆ ಮಿತ್ರ ! ಅಂದು ಅವನೊಂದಿಗೆ ನಾನು ಹೋಗುವವನೇ ಇದ್ದೆ. ಆದರೆ ಅಷ್ಟರಲ್ಲೆ ಏನಾಯಿತೋ ತಿಳಿಯದು ; ಡಾ. ಪುರಂದರೆಯವರು ಕೋರಮೈನ್ ಕೊಟ್ಟಂತೆ ನೆನಪು. ಸುತ್ತಲಿನ ದೃಶ್ಯಗಳು ಪುನಃ ನನ್ನ ಕಣ್ಣಿಗೆ ಸ್ಪಷ್ಟವಾಗತೊಡಗಿದವು. ಮರುದಿನ ನಾನು ಯಾವ ವೈದ್ಯರನ್ನೂ ನನ್ನ ಕೊಠಡಿಗೆ ಬರಗೊಡಲಿಲ್ಲ. ಆಮೇಲೆ ಡಾ. ಸಾಠೆಯವರು, 'ನಿಮ್ಮ ಇಚ್ಛೆಗೆ ವಿರುದ್ಧವಾಗಿ ಯಾವ ಔಷಧವನ್ನೂ ಕೊಡುವುದಿಲ್ಲ' ಎಂದು ಚೀಟಿ ಬರೆದು ಕಳುಹಿಸಿ ನನಗೆ ವಚನ ಕೊಟ್ಟರು. ಆಗ ನಾನು ನನ್ನ ದೇಹಪರೀಕ್ಷೆಗೆ ಮಾತ್ರ ಅವಕಾಶ ನೀಡಿದೆ.

ನಗುನಗುತ್ತ ಸಾವಿನ ಕೈಗೆ ದೇಹ ಒಪ್ಪಿಸಲು ಹೊರಟಿದ್ದವನು ನಾನು ; ಮೃತ್ಯುವನ್ನು ಮಿತ್ರನಂತೆ ಕಂಡು, ಅವನೊಡನೆ ಸಲಿಗೆ ಬೆಳೆಸುತ್ತಿದ್ದವನು ನಾನು. ಆದರೆ ಭಯ, ಆತಂಕ, ಗಾಬರಿ, ದುಃಖ ಇತ್ಯಾದಿ ಗಳೆಲ್ಲವೂ ಇತರರಿಗೆ ! ಇದೆಂಥ ವಿಚಿತ್ರ ? ಇವರೆಲ್ಲ ಹೀಗೇಕೆ ಮಾಡುತ್ತಾರೆ ಎಂದು ನನಗನ್ನಿಸಿತು.

ನಾನು ಆತ್ಮಾರ್ಪಣೆಗಾಗಿ ಪ್ರಾಯೋಪವೇಶ ಕೈಗೊಂಡಿದ್ದೇನೆ ಎಂದು ನೇರವಾಗಿ ಬಾಳಾರಾವ್ ಬಿಟ್ಟು ಬೇರೆ ಯಾರೊಡನೆಯೂ ಹೇಳಿರಲಿಲ್ಲ. ಏಕೆಂದರೆ ಆಮರಣ ಉಪವಾಸ ಕೈಗೊಂಡವರು ಎಷ್ಟೋ ಜನ ಮಧ್ಯದಲ್ಲೇ ಅದನ್ನು ಬಿಟ್ಟಿದ್ದರು ; ಅದನ್ನೊಂದು ಹಾಸ್ಯಾಸ್ಪದ ವಿಚಾರವಾಗಿ ಮಾಡಿದ್ದರು ! ಅಲ್ಲದೆ, ಉಪವಾಸವನ್ನು ಆತ್ಮಹತ್ಯೆಯ ಪ್ರಯತ್ನವೆಂದು ಆಪಾದಿಸಿ, ಸರಕಾರವು ನನ್ನನ್ನು ಬಂಧಿಸಿ ಶಿಕ್ಷೆ ವಿಧಿಸು ವುದೆಂಬ ಚಿಂತೆ! ಒಮ್ಮೆ ವೈದ್ಯರ ಬಳಿ, 'ಬೇಕಾದರೆ ಇಂಜಕ್ಷನ್ ಕೊಡಿ' ಎಂದೆ. ಆಗ ಅವರಿಗೆ ಆನಂದವೇ ಆನಂದ. 'ಆದರೆ, ಅದನ್ನು ತೆಗೆದುಕೊಂಡ ಕ್ಷಣವೇ ನಾನು ಜೀವನ್ಮುಕ್ತನಾಗಬೇಕು ; ಅಂತಹದನ್ನು ಮಾತ್ರ ಕೊಡಿ' ಎಂದು ಷರತ್ತು ಹಾಕುತ್ತಲೇ, ಅವರ ಉತ್ಸಾಹವೆಲ್ಲ ತಣ್ಣಗಾಗಿಹೋಯಿತು!

ದಿ. 22ರಂದು ಬಾಳಾರಾವ್ ಹೇಳಿದ : 'ಆಚಾರ್ಯ ಅತ್ರೆಯವರು ಬಂದಿದ್ದರು. ನಿಮ್ಮ ದೇಹಸ್ಥಿತಿ ವಿಚಾರಿಸಿದರು.' ಒಂದು ನಿಮಿಷ ಬಿಟ್ಟು ಪುನಃ ಅವನೆಂದ : 'ಭಾರತ - ಪಾಕಿಸ್ತಾನ ಯುದ್ಧವನ್ನು ಕುರಿತು ಮಂಕೀಕರರು ಬರೆದ Pakistan Cut to Size ಪುಸ್ತಕ ಬಹಳ ಚೆನ್ನಾಗಿದೆ ಎಂದು ಆಚಾರ್ಯ ಅತ್ರೆಯವರೆಂದರು. ಅದನ್ನು ತಂದು ಓದಲೆ ?'

ಭಾರತೀಯ ಯೋಧರ ವೀರಗಾಥೆ ! ಅವರ ಸಾಹಸ ಪರಾಕ್ರಮಗಳ ಕೀರ್ತಿ ಚರಿತ್ರೆ ! ಸಹಸ್ರಾರು ವರ್ಷಗಳ ದಾಸ್ಯದ ನಂತರ ಸ್ವತಂತ್ರ ಹಿಂದುಸ್ಥಾನದ ಗಂಡುಗಲಿಗಳು ಉದ್ಧಟ ವೈರಿಗಳ ರುಂಡಗಳನ್ನು ಚೆಂಡಾಡಿದ ಪುಣ್ಯ ಕಥೆ ! ನನ್ನ ಮನಸ್ಸಿಗೆ ಅದಕ್ಕಿಂತ ಆನಂದ ತರುವ ಸಂಗತಿ ಯಾವುದು ? ಆಧುನಿಕ ಭಾರತದ ರಾಮಾಯಣ ಅದು ; ಮಹಾಭಾರತ ಅದು ! ದೇಹ ಬಿಟ್ಟು ತೆರಳುವ ಮುನ್ನ ಅದರ ಪಾರಾ ಯಣ, ಕೊನೆಯ ಪಕ್ಷ ಪುರಾಣ ಶ್ರವಣ ಮಾಡೋಣ ಎಂದು ಮನಸ್ಸಾಯಿತು.

'ಆಗಲಿ, ಓದು' ಎಂದು ತಲೆಯಾಡಿಸಿ ಸೂಚಿಸಿದೆ. ಮರುದಿನ ಬಾಳಾರಾವ್ ಆ ಪುಸ್ತಕ ತಂದು ಓದತೊಡಗಿದ. ಸಮಾಧಾನದ ಸರಸ್ಸಿನಲ್ಲಿ ನನ್ನ ಮನಸ್ಸು ಮಿಂದಿತು.

ಎಂದಿನಂತೆ ಬೆಳಿಗ್ಗೆ 9-30 ಗಂಟೆಗೆ ಸರಿಯಾಗಿ ಕ್ಷೌರಿಕ ಸದಾಶಿವ ಪವಾರ್ ಬಂದ. ನಿತ್ಯವೂ

ಮುಖಕ್ಷೌರ ಮಾಡಿಸಿಕೊಳ್ಳುವುದು ನನ್ನ ರೂಢಿ ಸದಾಶಿವನು ನಿತ್ಯವೂ 9-30ರಿಂದ 10ರ ವರೆಗೆ ಸಾವರಕರ್ ಸದನದಲ್ಲಿ ಇರಲೇಬೇಕೆಂಬುದು ನನ್ನ ನಿಯಮ ಅವನಿಗೆ ರಜೆ ಬೇಕಾದರೆ ಬೇರೆಯವರಿಗೆ ತನ್ನ ಜವಾಬ್ದಾರಿ ಒಪ್ಪಿಸಿ ಹೋಗಬೇಕಾಗಿತ್ತು ನನ್ನ ಆರೋಗ್ಯ ತುಂಬ ಹದಗೆಟ್ಟಿದ್ದರೆ ಮಾತ್ರ ಅಂಥ ದಿನ ಕ್ಷೌರವಿಲ್ಲ. ಆದರೂ ಕ್ಷೌರಿಕನಿಗೆ ಅವನ ಹಣ ಸಲ್ಲುತ್ತಿತ್ತು. ನನ್ನ ಆರೋಗ್ಯ ಸರಿಯಿದೆಯೋ ಇಲ್ಲವೋ ಎಂಬುದನ್ನು ತಿಳಿಯಲು ನಿಕಟವರ್ತಿಗಳಿಗೆಲ್ಲ ಸದಾಶಿವನ ಕತ್ತಿಯೇ ಅಳತೆಗೋಲು! ಅದು ನನ್ನ ಮುಖದ ಮೇಲೆ ಆಡಿದ ದಿನ ನಾನು ಆರೋಗ್ಯವಾಗಿದ್ದೇನೆಂದೇ ಅರ್ಥ. ಈ ದೃಷ್ಟಿಯಿಂದ ನೋಡುವುದಾದರೆ ಫೆ. 23ರಂದು ಸಹ ನನಗೆ ಕಾಹಿಲೆಯಾಗಿರಲಿಲ್ಲ!

ಫೆ. 24ರಂದು ಬಾಳಾರಾವ್, ಪುಸ್ತಕ ಓದುವನ್ನು ಮುಂದುವರಿಸಲೆ? ಎಂದ. ಬೇಡ ಎಂದೆ. ಅಂದು ಜ್ವರ, ಕೆಮ್ಮು ಆರಂಭವಾಗಿತ್ತು. ಬಾಯಿಂದ ಧ್ವನಿ ಸರಿಯಾಗಿ ಹೊರಡುತ್ತಲೇ ಇರಲಿಲ್ಲ. ಅಂದಿನಿಂದ ಸದಾಶಿವನಿಗೂ ರಜ! ಪಕ್ಕದಲ್ಲಿದ್ದ ದಾದಿಗೆ ಹೊರಗೆ ಹೋಗುವಂತೆ ಸಂಜ್ಞೆ ಮಾಡಿದೆ. ಬಾಳಾರಾವ್ ಹತ್ತಿರ ಬಂದು 15 ವರ್ಷದ ಆಪ್ತಕಾರ್ಯದರ್ಶಿತ್ವದ ಅವಧಿಯಲ್ಲಿ ಮೊದಲ ಬಾರಿಗೆ ನನ್ನ ಕೈ ಹಿಡಿದು ಕೊಂಡ.

'ತಾತ್ಯಾ, ನೀವು ಏನಾದರೂ ಹೊಟ್ಟೆಗೆ ತೆಗೆದುಕೊಳ್ಳಿ, ಜಲಸಮಾಧಿಗಾದರೂ ನಿಮಗೆ ಸ್ವಲ್ಪ ಶಕ್ತಿ ಬೇಕಲ್ಲವೆ?' ಎಂದ.

ಆಗ ನನ್ನ ಧ್ವನಿ ನಿಧಾನವಾದರೂ ಸ್ಪಷ್ಟವಾಗಿ ಹೊರಟಿತು :

'ಈಗ ನನಗೆ ಏನೂ ಬೇಡ. ನಾನು ಹೇಳಬೇಕಾದುದು ಸಹ ಏನೂ ಇಲ್ಲ.'

**ಆಮ್ಹೀ ಜಾತೋ ಆಮುಚ್ಯಾ ಗಾನಾ**
**ಆಮುಚಾ ರಾಮ ರಾಮ ಘ್ಯಾವಾ**
**ಆತಾ ಕೈಚೇ ದೇಣೇ ಘೇಣೇ**
**ಆತಾ ಸಂಪಲೇ ಬೋಲಣೇ ॥**

*(ನಾವು ನಮ್ಮ ಊರಿಗೆ ಹೊರಟಿದ್ದೇವೆ, ನಮ್ಮ ನಮಸ್ಕಾರ ಸ್ವೀಕರಿಸಿ. ಕೊಡುವುದು, ತೆಗೆದುಕೊಳ್ಳುವುದು ಈಗೆಲ್ಲಿ ? ಇನ್ನು ಮಾತು ಮುಗಿಯಿತು !)* ಎಂಬ ತುಕಾರಾಮರ ಪದ್ಯವನ್ನು ಉಚ್ಚರಿಸುತ್ತಾ, ಎರಡೂ ಕೈ ಜೋಡಿಸಿ ನಮಸ್ಕರಿಸಿದೆ. ಅದೇ ನಾನು ಆಡಿದ ಕೊನೆಯ ಮಾತು.

ಫೆ. 26ರಂದು ಬೆಳಿಗ್ಗೆ ದಾದಿ ಬಂದು ನನ್ನ ಬಾಯಿ ತೊಳೆದಳು - ಗಂಟಲಿನಲ್ಲಿ ನೀರು ಇಳಿಯಲಿಲ್ಲ. ಕಾಲ ಬಳಿ ದುಃಖದಿಂದ ಬಿಕ್ಕಳಿಸುವ ಶಬ್ದ.... ಪರಿಚಿತ ಸ್ವರ - ಪ್ರಭಾ ತಾಯಿಯದು! ಅವಳ ಮಗಳು ಮಾಧುರಿ.... ಓ, ಇಲ್ಲೆ ಪಕ್ಕದಲ್ಲಿ ನಿಂತಿದ್ದಾಳೆ. ಈಚೆಯ ಬದಿಯಲ್ಲಿ.... ಯಾರಿವರು ? ವಿಶ್ವಾಸ ಮತ್ತು ಸುಂದರಿ..... ಅಲ್ಲಿ ಕಾಣುವ ಆ ಪುಟ್ಟ ಹುಡುಗಿಯು ಅವರ ಮಗಳು ವಿಮಲಾ ಅಲ್ಲವೆ ?.. .. ಸರಿ, ಸರಿ!

ಆದರೆ ನನ್ನ ಸಂಬಂಧವನ್ನೆಲ್ಲ ಓರ್ವ ಚಿರಪರಿಚಿತ ಗೆಳೆಯನೊಡನೆ ಜೋಡಿಸಿಬಿಟ್ಟಿದ್ದೇನೆ.....

**ಧನ್ಯೋಹಮ್ । ಧನ್ಯೋಹಮ್**
**ಕರ್ತವ್ಯಂ ಮೇ ನ ವಿದ್ಯತೇ ಕಿಂಚಿತ್ ।**
**ಧನ್ಯೋಹಮ್ । ಧನ್ಯೋಹಮ್**

ಪ್ರಾಪ್ತವ್ಯಂ ಸರ್ವಮದ್ಯ ಸಂಪನಮ್ ॥

ಹೆದರಿಕೊಂಡು, ಮುದುರಿಕೊಂಡು ಹಾಸಿಗೆಯ ಮೂಲೆಯಲ್ಲಿ ಎಷ್ಟೋ ದಿನಗಳಿಂದ ಕಾದು ಕುಳಿತಿದ್ದ ಅಗೋಚರ ಗೆಳೆಯನ ಕೈ ಹಿಡಿದುಕೊಂಡೆ ; ಅವನ ನಿಷ್ಠೆಗೆ ಮೆಚ್ಚಿ ಬೆನ್ನು ತಟ್ಟಿದೆ.

ಹೋಗೋಣ ನಡಿ, ಜಗತ್ತಿನ ಕೊನೆಗೆ ; ನಿನ್ನ ಮನೆಗೆ - ಅಲ್ಲ, ನಮ್ಮ ಮೂಲ ನೆಲೆಗೆ ಎಂದೆ. ಹೊರಟೇಬಿಟ್ಟೆವು!

ನಿಜ ಹೇಳಬೇಕು ಅಂದರೆ, ನಾನು ಸತ್ತಿದ್ದು ನನಗೆ ಕಿಂಚಿತ್ತೂ ನೆನಪಿಲ್ಲ! 1966 ಫೆಬ್ರವರಿ 26ರಂದು ಬೆಳಿಗ್ಗೆ 11 ಗಂಟೆ 10 ನಿಮಿಷಕ್ಕೆ ಈ ಜಗತ್ತು ಬಿಟ್ಟೆನಂತೆ!





## ಇತಿ ದೀಧಿತಿ

**ಗುಣಸುಮನೇ ಮೀ ವೇಚಲಿಯಲೀ ಯಾ ಭಾವೇ**
**ಕೀ ತಿನೇ ಸುಗಂಧಾ ಯಾವೇ !**
**ಜರಿ ಉದ್ಧರಣೀ ವ್ಯಯ ನ ತಿಚ್ಯಾ ಹೋ ಸಾಚಾ**
**ಹಾ ವ್ಯರ್ಥ ಭಾರ ವಿದ್ಯೇಚಾ ॥**
*(ತೆಗೆತೆಗೆದರ್ಪಿಸಿದೆನು ಗುಣಸುಮಗಳನೊಂದೊಂದೆ*
*ಹೊರಸೂಸಲಿ ಸೌರಭವೆಂದೆ*
*ದೇಶೋನ್ನತಿ ಆತ್ಮೋನ್ನತಿ ಗಳಿಸಲು ಬಳಸದಿರೆ*
*ವಿದ್ಯೆಯಾಗದೇ ಬರಡು ಹೊರೆ ?)*

– ಸ್ವಾತಂತ್ರ್ಯವೀರ ಸಾವರಕರ್

ದೇಶಭಕ್ತಿಯ ಅಪರಾಧಕ್ಕಾಗಿ ಭಾರತೀಯ ಮಹಾವಿದ್ಯಾಲಯವೊಂದರ ವಸತಿಗೃಹದಿಂದ ಹೊರದೂಡಲ್ಪಟ್ಟ ಮೊಟ್ಟಮೊದಲ ವಿದ್ಯಾರ್ಥಿ ;

ಭಾರತದಲ್ಲಿ ವಿದೇಶಿ ಬಟ್ಟೆಗಳಿಗೆ ಬೆಂಕಿಯಿಟ್ಟು ಹೋಳಿ ಆಚರಿಸಿದ ಮೊಟ್ಟ ಮೊದಲ ಸ್ವದೇಶಾಭಿಮಾನಿ ,

'ಸ್ವರಾಜ್ಯ' ಎಂದು ಉಚ್ಚರಿಸುವುದೇ ಮಹಾಪರಾಧವಾಗಿದ್ದ ಕಾಲದಲ್ಲಿ 'ಸಂಪೂರ್ಣ ಸ್ವಾತಂತ್ರ್ಯವೇ ಭಾರತದ ಧ್ಯೇಯ' ಎಂದು ಘೋಷಿಸಿದ ಮೊಟ್ಟಮೊದಲ ರಾಜಕೀಯ ಮುಂದಾಳು ;

ದಾಸ್ಯರಕ್ಕಸನ ಎದೆ ಮೆಟ್ಟಲು ಪ್ರಯತ್ನಪಟ್ಟುದಕ್ಕಾಗಿ ತಾನು ಗಳಿಸಿದ್ದ ಬಿ ಎ ಪದವಿಯನ್ನು ಕಳೆದುಕೊಂಡ ಮೊಟ್ಟಮೊದಲ ಭಾರತೀಯ ಪದವೀಧರ ;

ಕ್ರಾಂತಿಕಾರಿ ಚಟುವಟಿಕೆಗಳನ್ನು ನಡೆಸಿದ ಕಾರಣಕ್ಕಾಗಿ ಬ್ರಿಟಿಷರಿಂದ ಬ್ಯಾರಿಸ್ಟರ್ ಪದವಿ ನಿರಾಕರಿಸಲ್ಪಟ್ಟ ಮೊಟ್ಟಮೊದಲ ಬ್ಯಾರಿಸ್ಟರ್ ;

ಹಿಂದುಸ್ಥಾನದ ಸ್ವಾತಂತ್ರ್ಯದ ಪ್ರಶ್ನೆಯು ಪರರಾಷ್ಟ್ರಗಳಲ್ಲೂ ಮಹತ್ವ ಗಳಿಸುವಂತೆ ಮಾಡಿದ ಮೊಟ್ಟಮೊದಲ ಭಾರತೀಯ ತರುಣ ,

ಪ್ರಕಟಣೆಗೆ ಮೊದಲೇ ಎರಡು ರಾಷ್ಟ್ರಗಳಲ್ಲಿ ನಿಷೇಧಿಸಲ್ಪಟ್ಟ ಗ್ರಂಥ ರಚಿಸಿದಂಥ ಜಗತ್ತಿನ ಮೊಟ್ಟ ಮೊದಲ ಲೇಖಕ ;

ಬ್ರಿಟಿಷರ ನ್ಯಾಯಾಲಯವನ್ನು ತಾನು ಪುರಸ್ಕರಿಸುವುದಿಲ್ಲವೆಂದು ಸಾರಿದ ಮೊಟ್ಟಮೊದಲ ರಾಜಕೀಯ ಆರೋಪಿ ;

ಜಗತ್ತಿನ ರಾಜಕೀಯ ಇತಿಹಾಸದಲ್ಲಿ, ಹೇಗ್ ಅಂತಾರಾಷ್ಟ್ರೀಯ ನ್ಯಾಯಾಲಯದೆದುರು ತನ್ನ ಬಗ್ಗೆ ಮೊಕದ್ದಮೆ ನಡೆಯುವಂತೆ ಮಾಡಿದ ಮೊಟ್ಟಮೊದಲ ರಾಜಕೀಯ ಕೈದಿ ;

ವಿಶ್ವದ ರಾಜಕೀಯ ಚರಿತ್ರೆಯಲ್ಲಿ, 50 ವರ್ಷಗಳ ಕರಿನೀರಿನ ಶಿಕ್ಷೆಗೆ ಗುರಿಯಾದ ಮೊಟ್ಟಮೊದಲ ರಾಜಕೀಯ ಸೆರೆಯಾಳು ;

ಬರವಣಿಗೆಗೆ ಅಗತ್ಯವಾದ ಸಾಮಗ್ರಿಗಳಾಗಲೀ ಸೌಲಭ್ಯಗಳಾಗಲೀ ಇಲ್ಲದಿದ್ದರೂ, ಬರೆಯುವುದನ್ನು ನಿಷೇಧಿಸಲಾಗಿದ್ದರೂ ಜೈಲುಖಾನೆಯ ಗೋಡೆಗಳ ಮೇಲೆ ಮೊಳೆಯಿಂದಲೇ ಹತ್ತು ಸಹಸ್ರ ಸಾಲುಗಳಷ್ಟು ಕಾವ್ಯ ರಚಿಸಿ, ಬಾಯಿಪಾಠ ಮಾಡಿ 14 ವರ್ಷಗಳ ಸೆರೆವಾಸದ ನಂತರ ಅದನ್ನು ಸುರಕ್ಷಿತವಾಗಿ ದೇಶಕ್ಕೆ ಒಪ್ಪಿಸಿದ ವಿಶ್ವದ ಮೊಟ್ಟಮೊದಲ ಮಹಾಕವಿ !

ಬಂಗಾರದಂತೆ ಮಿಂಚುವ ಮೈಬಣ್ಣ, ಬಂಗಾರದಂಥ ಅಂಗಸೌಷ್ಠವ ; ಸುವಿಶಾಲ ಲಲಾಟ ; ಕನ್ನಡಕದೊಳಗಿನಿಂದ ಮರ್ಮಭೇದಕ ಕಣ್ಣುಗಳ ನೋಟ ; ಮಧ್ಯಮ ನಿಲುವಿನ ದೇಹ, ವಿಶಾಲ ವಕ್ಷ ; ಸಿಂಹಕಟಿ ; ಗುಲಾಬಿಯ ಬಣ್ಣದ ಹಸ್ತಗಳು ; ಪಾದಗಳು. ಅಚ್ಚ ಬಿಳಿಯುಡಿಗೆ ತೊಟ್ಟು, ಪಂಚೆಯ ಅಂಚು ನೆಲಕ್ಕೆ ತಾಗಿಸುತ್ತಾ ಸಾಗುವ ಠೀವಿಯ ನಡಿಗೆ ; ಉಸಿರಿನ ಅಲೆ ಅಲೆಯಲ್ಲೂ ಮೂರುಲೋಕ ಗೆಲ್ಲುವ ಆತ್ಮವಿಶ್ವಾಸ !

ಪರಿಚಿತರಿಗೆಲ್ಲ ಪ್ರೀತಿಯ ತಾತ್ಯಾ !

ಪುಣೆಯ ಕಾಲೇಜು ದಿನಗಳಲ್ಲಿ ತಾತ್ಯಾರಾವ್ ವಿದೇಶಿ ಬಟ್ಟೆಯ ರಾಶಿಗೆ ಬೆಂಕಿ ಹಚ್ಚಿ, ಅದರ ಭಸ್ಮ ಹಣೆಗೆ ಹಚ್ಚಿಕೊಂಡಿದ್ದರು. ಅದೇ ಸ್ವಾತಂತ್ರ್ಯದ ಬೆಂಕಿಯನ್ನು ಎದೆಯಲ್ಲಿ ತುಂಬಿಕೊಂಡು ಮುಂಬೈ ರೈಲುನಿಲ್ದಾಣಕ್ಕೆ ಬಂದಾಗ ಗೆಳೆಯನೊಬ್ಬ ಕಣ್ಣಿಗೆ ಬಿದ್ದ. ಕಣ್ಣಲ್ಲಿ ನೀರು ತಂದುಕೊಂಡು ಮುಖ ಸಪ್ಪಗೆ ಮಾಡಿಕೊಂಡು ಬೆಂಚಿನ ಮೇಲೆ ಕುಳಿತಿದ್ದ.

'ಏನೋ ಶಂಕರ್ ! ಇಲ್ಲೇಕೆ ಬಂದಿರುವೆ ?' ಎಂದು ತಾತ್ಯಾ ವಿಚಾರಿಸುತ್ತಲೇ ಅವನು ಬಿಕ್ಕಳಿಸಿ ಅಳತೊಡಗಿದ. ತಾತ್ಯಾ ಪಕ್ಕದಲ್ಲಿ ಕುಳಿತು, ಸಂತೈಸಿದರು. ಶಂಕರ ಮೋಘೆಯು ವಿದೇಶಿ ವಸ್ತ್ರದಹನದಲ್ಲಿ ಭಾಗವಹಿಸಿದ್ದರಿಂದ ಅವರ ತಂದೆ ಅವನನ್ನು ಮನೆ ಬಿಟ್ಟು ಓಡಿಸಿದ್ದರು !

'ಇಷ್ಟಕ್ಕೆಲ್ಲಾ ಅಂಜಿಕೊಂಡರೆ ಹೇಗೆ ? ಈಗ ನಾಸಿಕಕ್ಕೆ ನನ್ನ ಜತೆ ಹೊರಡುತ್ತೀಯಾ ? ನಿನಗೆ ನಮ್ಮ ಮನೆಯಲ್ಲಿ ವ್ಯವಸ್ಥೆ ಮಾಡುತ್ತೇನೆ.'

ಇಬ್ಬರೂ ನಾಸಿಕಕ್ಕೆ ಹೊರಟರು. ಅಲ್ಲಿ ತಾತ್ಯಾಗೆ ಲೆಕ್ಕವಿಲ್ಲದಷ್ಟು ಮಿತ್ರರು ; ಸದಾ ಅವರ ಸುತ್ತ ಮುತ್ತಿಕೊಂಡೇ ಇರುತ್ತಿದ್ದರು. ತಮ್ಮ ಹೆಂಡತಿ ಗಂಡನಿಗೆಂದು ಹಾಲು ತಂದುಕೊಟ್ಟಾಗಲೆಲ್ಲ ತಾತ್ಯಾ, ಗೆಳೆಯರ ಕೈಗೆ ಎರೆಡೆರಡು ಚಮಚ ಹಾಕಿ, ಕೊನೆಯ ಚಮಚ ತಾವು ಬಾಯಿಗೆ ಹಾಕಿಕೊಳ್ಳುತ್ತಿದ್ದರು !

ತಾತ್ಯಾ ಯಾವಾಗಲೂ ಖಂಡಿತವಾದಿ. ಇಂಗ್ಲೆಂಡಿನಲ್ಲಿ ಇದ್ದಾಗ, ಓರ್ವ ಇಂಗ್ಲಿಷ್ ಮಹಿಳೆ 'ನೀವು ಭಾನುವಾರ ಚರ್ಚ್‌ಗೆ ಹೋಗುವುದಿಲ್ಲವೆ ?' ಎಂದು ಕೇಳಿದಾಗ 'ಇಲ್ಲ' ಎಂದರು. ಆಗ ಆಕೆ 'ನೀವು

ಮತ್ತು ನಿಮ್ಮ ಗೆಳೆಯರು ಹಿಂದುಗಳೋ ?' ಎಂದಳು. ಆಗ ತಾತ್ಯಾ, 'ಹೌದು ; ನಾನೊಬ್ಬ ಹಿಂದು !' ಎಂದು ಎದೆ ತಟ್ಟಿಕೊಂಡು ಹೇಳಿದರು. ಆಗ ತಾತ್ಯಾ ಅವರ ಮಿತ್ರರೊಬ್ಬರು, 'ಇಂಗ್ಲಿಷ್ ಮಹಿಳೆಗೆ ಈ ರೀತಿ ದಿಟ್ಟ ಉತ್ತರ ಹೇಳುವುದು ಆಕೆಗೆ ಅಪಮಾನ ಮಾಡಿದಂತೆ !' ಎಂದರು. ಆಗ ತಾತ್ಯಾ ಸಿಟ್ಟಿನಿಂದ ಗರ್ಜಿಸಿದರು : 'ನೀನು ಹಿಂದು ಎಂದು ಹೇಳಿಕೊಳ್ಳುವುದಕ್ಕೂ ನಾಚುವಂಥ ಹೇಡಿಯಾಗಿದ್ದರೆ, ನಿಮ್ಮ ತಂದೆಯ ಹೆಸರನ್ನು ಬದಲಾಯಿಸಿಕೋ ! ಆ ಮಹಿಳೆ ಇಂಗ್ಲಿಷಿನವಳಾಗಿರುವುದು ನನಗೂ ಅಪಮಾನ ಮಾಡಿದಂತೆ - ಎಂದು ನೀನು ಆಕೆಗೆ ಹೇಳಬಹುದಲ್ಲ !' ಆ ಸ್ನೇಹಿತ ತಲೆತಗ್ಗಿಸಿದ.

ಚಿಕ್ಕ ವಯಸ್ಸಿನಲ್ಲೆ ತಾತ್ಯಾ ಸಂಸ್ಕೃತದಲ್ಲಿ ಪಾಂಡಿತ್ಯ ಗಳಿಸಿದ್ದರು. ರಾಜಕೀಯ ಕ್ಷೇತ್ರಕ್ಕೆ ಕಾಲಿಡುವ ಮುನ್ನ 'ರಾಷ್ಟ್ರಸ್ವತಂತ್ರತಾ ಧ್ಯೇಯಂ, ಯಥಾಸಾಧ್ಯಂ ಚ ಸಾಧನಮ್, ಅಭ್ಯುತ್ಥಾನಾಯ ಹಿಂದೂನಾಮಯಂ ಪಕ್ಷಃ ಪ್ರವರ್ತಿತಃ' ಎಂದು ಘೋಷಿಸಿದರು. ಅಲ್ಲದೆ 'ವರಂ ಜನಹಿತಂ ಧ್ಯೇಯಂ, ಕೇವಲಾ ನ ಜನಸ್ತುತಿಃ' ಎಂದು ಸಾರಿದರು. ಆಗ ಕರ್ಣಾವತಿಯ ಸುಪ್ರಸಿದ್ಧ ಕಾಂಗ್ರೆಸ್ ನಾಯಕ ದಾದಾಸಾಹೇಬ ಮಾವಳಂಕರರು, 'ತಾತ್ಯಾರಾವ್ ಸಾವರಕರ್ ಕಾಂಗ್ರೆಸಿಗೆ ಸೇರಿದ್ದರೆ, ನಿಶ್ಚಿತವಾಗಿಯೂ ಅವರಿಗೆ ಅಧ್ಯಕ್ಷ ಸ್ಥಾನ ಸಿಗುತ್ತಿತ್ತು. ಆದರೆ ಹಿಂದು ಮಹಾಸಭೆಗೆ ಸೇರಿ ತಮ್ಮ ಕ್ಷೇತ್ರವನ್ನು ಸಂಕುಚಿತ ಮಾಡಿಕೊಂಡರು' ಎಂದರಂತೆ. ಅದಕ್ಕೆ ಉತ್ತರವಾಗಿ ತಾತ್ಯಾ ಸಾರ್ವಜನಿಕ ಸಭೆಯಲ್ಲಿ ಮಾತನಾಡುತ್ತಾ ಹೇಳಿದರು : 'ಈಗ ನಾವೆಲ್ಲರೂ ಹುಳುಹುಪ್ಪಟೆಗಳಂತೆ ಪಾರತಂತ್ರ್ಯದಲ್ಲಿ ಕೊಳೆಯುತ್ತಿದ್ದೇವೆ. ಆ ಪೈಕಿ ಒಂದು ಸಗಣಿಯ ಹುಳು ಉಳಿದ ಹುಳುಗಳಿಗಿಂತ ಮೇಲೆ ಕುಳಿತರೂ, ಅದರ ಜಾತಿಯೇನೂ ಬದಲಾಗುವುದಿಲ್ಲ !'

ತಾತ್ಯಾ ನಾಗಪುರಕ್ಕೆ ಹೋದಾಗೊಮ್ಮೆ ಅಲ್ಲಿನ ಮಾರ್ಕ್ಸ್‌ವಾದಿಯೊಬ್ಬರ ಪ್ರಶ್ನೆ : 'ನೀವು ಮಾರ್ಕ್ಸ್ ಕೃತಿಗಳನ್ನು ಓದಿದ್ದೀರೇನು ?' ತಾತ್ಯಾ ಮರು ಪ್ರಶ್ನೆ ಹಾಕಿದರು : 'ಸಾವರಕರರ ಕೃತಿಗಳನ್ನು ಮಾರ್ಕ್ಸ್ ಓದಿದ್ದರೇನು ?'

ತಾತ್ಯಾ ರತ್ನಗಿರಿಯಲ್ಲಿದ್ದಾಗ 1926ರಲ್ಲಿ ಅಭಿಮಾನಿಯೊಬ್ಬರು ಅವರಿಗೊಂದು ಮಂಚವನ್ನು ಕಾಣಿಕೆಯಾಗಿ ಅರ್ಪಿಸಿದರು. ಜತೆಗೆ ಒಂದು ಪದ್ಯವನ್ನೂ ಬರೆದು, 'ಅಂದಮಾನಿನಲ್ಲಿ ತುಂಬ ದಣಿದಿರುವ ನಿಮಗೆ ಇದು ಸುಖಶಯ್ಯೆ ಆಗಲಿ' ಎಂದು ಆಶಿಸಿದ್ದರು. ಅದಕ್ಕೆ ತಾತ್ಯಾ ಕಾವ್ಯರೂಪದಲ್ಲಿ ಬರೆದ ಉತ್ತರದ ಸಾರಾಂಶ : 'ಧ್ಯೇಯ ಪೂರ್ತಿ ಆಗದಿರುವವರೆಗೆ, ರಾಷ್ಟ್ರವನ್ನು ಬಳಸಿರುವ ದಾಸ್ಯದ ಪಾಶ ಹರಿಯದಿರುವವರೆಗೆ, ರಾಹುಗ್ರಸ್ತನಾಗಿರುವ ಹಿಂದು ಜನಾಂಗದ ಗೌರವ ರವಿಯು ಮುಕ್ತನಾಗದಿರುವವರೆಗೆ, ನೀವು ಪ್ರೀತಿಯಿಂದ ನೀಡಿರುವ ಈ ಸುಖಶಯ್ಯೆಯು ಕರ್ತವ್ಯಕ್ಕೆ ಲೋಪ ಬಾರದಂತೆ - ಹೋರಾಡಿ ದಣಿದ ಸೈನಿಕನು ಮರುದಿನದ ಯುದ್ಧಕ್ಕೆ ಸಿದ್ಧನಾಗಲು ಅನಿವಾರ್ಯವಿದ್ದಷ್ಟು ಮಾತ್ರ - ನಿದ್ರೆ ನೀಡುವ ರಣಶಯ್ಯೆಯಾಗಿರಲಿ. ಧ್ಯೇಯ ಪೂರೈಸಿದ ನಂತರ ಬೇಕಾದರೆ, ''ಚಿರಸುಖಶಯ್ಯೆ'' ಯಾಗಲಿ !'

ಮುಂಬೈನ ಪತ್ರಿಕಾಕರ್ತರೊಬ್ಬರು 1950ರಲ್ಲಿ ತಾತ್ಯಾನ ಬಳಿ ಕೇಳಿದರು : 'ಪಾಕಿಸ್ತಾನ ನಿರ್ಮಾಣವಾದ ನಂತರ, ಈಗ ನಮ್ಮ ದೇಶದಲ್ಲಿ ಉಳಿದಿರುವ ನಾಲ್ಕು ಕೋಟಿ ಮುಸಲ್ಮಾನರ ಸಮಸ್ಯೆಯನ್ನು ಹೇಗೆ ಬಗೆಹರಿಸುತ್ತೀರಿ ?'

'ನಾನು ನಿಮಗೆ ಪ್ರಯಾಣದ ಖರ್ಚು ಕೊಡುತ್ತೇನೆ ; ರಹದಾರಿ ಪಡೆಯುವ ಜವಾಬ್ದಾರಿ ನಿಮ್ಮದು. ನೀವು ಈಗಲೇ ಕರಾಚಿಗೆ ಹೋಗಿ ; ಪಾಕಿಸ್ತಾನದ ಪ್ರಧಾನಿ ಲಿಯಾಕತ್ ಅಲಿಯವರನ್ನು, ''ಪಾಕಿಸ್ತಾನದಲ್ಲಿ ಒಂದು ಕೋಟಿ ಹಿಂದುಗಳಿದ್ದಾರೆ ; ಅವರ ಸಮಸ್ಯೆಯನ್ನು ನೀವು ಹೇಗೆ ಬಗೆಹರಿಸುತ್ತೀರಿ'' ಎಂದು

ಕೇಳಿಕೊಂಡು ಬನ್ನಿ. ಅವರು ಹೇಗೆ ಮಾಡುತ್ತಾರೆಯೋ ನಾವೂ ಅದೇ ರೀತಿ ಮಾಡುತ್ತೇವೆ ಎಂದರು ತಾತ್ಯಾ!'

ದೇಶದಲ್ಲಿ ಸೈನಿಕೀಕರಣ ಆಗಬೇಕು; ನವಯುವಕರಲ್ಲಿ ತೇಜಸ್ಸು, ಪೌರುಷ ಹೊರಹೊಮ್ಮಬೇಕು; ಅದರಿಂದ ಸ್ವಾತಂತ್ರ್ಯ ಸಾಧನೆ, ರಕ್ಷಣೆ ಸುಲಭವಾಗುತ್ತದೆ ಎಂಬುದು ಅವರ ಸಿದ್ಧಾಂತ. ಅದಕ್ಕಾಗಿ ಅವರೆನ್ನುತ್ತಿದ್ದರು :

'ಈಗಿನ ತರುಣರು ತಮ್ಮ ತಲೆಗೂದಲು ಸುವ್ಯವಸ್ಥಿತವಾಗಿ ಕಾಣಬೇಕೆಂದು ಆಗಾಗ್ಗೆ ಕೂದಲ ಬಳಿ ಕೈತೆಗೆದುಕೊಂಡು ಹೋಗುತ್ತಿರುತ್ತಾರೆ; ಅಂಥವರ ಬದಲು, ತಮ್ಮ ನಡುಪಟ್ಟಿಯಲ್ಲಿ ರಿವಾಲ್ವರ್ ಸುವ್ಯವಸ್ಥಿತವಾಗಿದೆಯೋ ಇಲ್ಲವೋ ಎಂದು ಮುಟ್ಟಿನೋಡಿಕೊಳ್ಳುವ ತರುಣರು ಹುಟ್ಟಿಕೊಳ್ಳಬೇಕು!'

'ಯುವಕರೇ, ನೀವು ನೋಡಿಲ್ಲವೆ? ಈಗಿನ ಕಾಲದಲ್ಲಿ ಹುಡುಗಿಯರು ಕೂಡ ಲಾಠಿ ತಿರುಗಿಸಲು ಆರಂಭಿಸಿದ್ದಾರೆ. ಈಗ ನೀವು ಕೊನೆಯ ಪಕ್ಷ ಬಂದೂಕವನ್ನಾದರೂ ಕೈಗೆತ್ತಿಕೊಳ್ಳಿ. ಇಲ್ಲದಿದ್ದರೆ ಅವರು ನಿಮ್ಮ ತಲೆಬುರುಡೆ ಒಡೆಯುವುದು ನಿಶ್ಚಿತ!'

ತಾತ್ಯಾರಾವ್ ಸಾವರಕರರ ಮಾತಿನ ಚಮತ್ಕಾರಕ್ಕೆ ಎಣೆಯಿಲ್ಲ. ಎರಡನೆ ಮಹಾಯುದ್ಧದ ಸಮಯದಲ್ಲಿ 'ಸೈನಿಕೀಕರಣ ಮಂಡಲಿ'ಯಲ್ಲಿ ಮಾತನಾಡುತ್ತಾ ಅವರೊಮ್ಮೆ, 'ಬಂದೂಕ ಹೆಗಲ ಮೇಲೆ ಇಟ್ಟುಕೊಳ್ಳಿ; ಚೆನ್ನಾಗಿ ಗುರಿ ಹೊಡೆಯುವುದನ್ನೂ ಅಭ್ಯಾಸ ಮಾಡಿ. ಆದರೆ ಅದನ್ನು ''ಉಲಟ'' ಸಹ (ಇಂಗ್ಲಿಷರ ವಿರುದ್ಧ!) ಉಪಯೋಗಿಸಬಹುದು ಎಂಬುದು ಗಮನದಲ್ಲಿರಲಿ!' ಆಗ ಭಾಷಣ ಕೇಳಲು ಬರುತ್ತಿದ್ದ ಇಂಗ್ಲಿಷ್ ಸೇನಾಧಿಕಾರಿಗಳು ಪರಸ್ಪರ ಮುಖ ನೋಡಿಕೊಳ್ಳುತ್ತಿದ್ದರು. ಬಂದೂಕವನ್ನು 'ಉಲಟ' ಉಪಯೋಗಿಸುವುದು ಹೇಗೆಂದು ಅವರಿಗೂ ಗೊತ್ತಿರಲಿಲ್ಲ!

1937ರಲ್ಲಿ ಪುಣೆ ನಗರಪಾಲಿಕೆಯ ಬಿನ್ನವತ್ತಳೆ ಸಮಾರಂಭದಲ್ಲಿ ಮಾತನಾಡುತ್ತಾ ತಾತ್ಯಾ 'ಲೋಕಮಾನ್ಯ ತಿಲಕರು ಅಧ್ಯಕ್ಷರಾಗಿದ್ದಾಗ ನಗರಪಾಲಿಕೆ ಇದು' ಎಂದರು. ಕೂಡಲೆ ಪಕ್ಕದಲ್ಲಿದ್ದ ನಗರಾಧ್ಯಕ್ಷರು, ಅವರ ತಪ್ಪನ್ನು ತಿದ್ದುತ್ತಾ, 'ಲೋಕಮಾನ್ಯ ತಿಲಕರು ಅಧ್ಯಕ್ಷರಾಗಿರಲಿಲ್ಲ, ಕೇವಲ ಸದಸ್ಯರಾಗಿದ್ದರು' ಎಂದರು. ತಾತ್ಯಾ ಮಾತು ಮುಂದುವರಿಸಿ ಹೇಳಿದರು : 'ಲೋಕಮಾನ್ಯರು ಅಧ್ಯಕ್ಷರಾಗಿರಲಿಲ್ಲ, ಕೇವಲ ಸದಸ್ಯರಾಗಿದ್ದರು ಎಂದು ಇಂದಿನ ಅಧ್ಯಕ್ಷರು ಹೇಳುತ್ತಾರೆ. ಅವರ ಮಾತು ಸತ್ಯ. ಕಪ್ಪೆಗಳ ಗುಂಪಿಗೆ ಸಿಂಹ ಹೇಗೆ ಅಧ್ಯಕ್ಷನಾದೀತು? ತಿಲಕರು ಸಭಾಸದರಾಗಿದ್ದುದರಿಂದ ನಿಮ್ಮ ಗೌರವ ಹೆಚ್ಚಿತು; ಅಧ್ಯಕ್ಷರಾಗದಿದ್ದುದರಿಂದ ಅವರ ಗೌರವ ಉಳಿಯಿತು!'

ಸಭಿಕರ ಚಪ್ಪಾಳೆಗಳ ಪ್ರಚಂಡ ಧ್ವನಿಯಿಂದ ಸಭಾಭವನ ಮೊಳಗತೊಡಗಿತು!

ಸಮಾರಂಭಕ್ಕೆ ಮೊದಲು ಪುಣೆಯ ಪ್ರಮುಖ ಮಾರ್ಗಗಳಲ್ಲಿ ತಾತ್ಯಾರಾವ್ ಸಾವರಕರರ ಮೆರವಣಿಗೆ ನಡೆಯಿತು. ದಾರಿಯುದ್ದಕ್ಕೂ ಅವರ ಕೊರಳಿಗೆ ಹಾರಗಳು ಬೀಳುತ್ತಿದ್ದವು. ಅದರಿಂದ ತಪ್ಪಿಸಿಕೊಳ್ಳಲು ಅವರು ನಾನಾ ಯುಕ್ತಿಗಳನ್ನು ಹೂಡುತ್ತಿದ್ದರು. ಒಬ್ಬರನ್ನು 'ನಿಮ್ಮ ಹೆಸರೇನು?' ಎಂದು ಕೇಳಿದರು.

'ಶಂಕರ ಚಾಫೇಕರ್.'

'ಛೇ, ಚಾಫೇಕರರು ಸಾವರಕರ್‌ಗೆ ಹಾರ ಹಾಕುವುದೆಂದರೇನು? ಸಾವರಕರ್, ಚಾಫೇಕರರಿಗೆ ಹಾರ ಹಾಕುವುದು ನ್ಯಾಯ; ಏಕೆಂದರೆ ನಾನು ಕಾರ್ಯಸ್ಫೂರ್ತಿ ಪಡೆದುದು ಚಾಫೇಕರರಿಂದ' ಎನ್ನುತ್ತಾ ಸಾವರಕರ್ ತಮ್ಮ ಕೊರಳಲ್ಲಿದ್ದ ಹಾರವನ್ನು ಅವರ ಕೊರಳಿಗೆ ಹಾಕಿಬಿಟ್ಟರು!

ಒಮ್ಮೆ ಸಮಾರಂಭವೊಂದರಲ್ಲಿ ಸಾವರಕರ್ ಮತ್ತು ಅಣ್ಣಾರಾವ್ ಭೋಪಟಕರ್ ಇಬ್ಬರೂ ಪರಸ್ಪರ ಹಾರ ಹಾಕಲು ಸಮೀಪಿಸಿದರು. ಭೋಪಟಕರ್ ಹೆಚ್ಚು ಎತ್ತರದ ವ್ಯಕ್ತಿ; ತಮಗೆ ಹಾರ ಹಾಕದಂತೆ ಕೈ ಅಡ್ಡ ಹಿಡಿಯುತ್ತಿದ್ದರು. ಆಗ ಸಾವರಕರ್ ಗಾಬರಿಯ ಸ್ವರದಲ್ಲಿ, 'ಅಣ್ಣಾರಾವ್! ನಿಮ್ಮ ಕಾಲಿನ ಬೆರಳಿಗೆ ಏನೋ ಆಗಿದೆ; ನೋಡಿ!' ಎಂದರು. ಅವರು ಕುತ್ತಿಗೆ ಬಗ್ಗಿಸುತ್ತಿದ್ದಂತೆಯೇ ಹಾರ ಹಾಕಿಬಿಟ್ಟರು!

ಭಾಗಾನಗರದ ಸತ್ಯಾಗ್ರಹದಲ್ಲಿ ಭಾಗವಹಿಸಿ ಬಂಧಿತರಾಗಿದ್ದ ಭೋಪಟಕರ್ ಬಿಡುಗಡೆ ಹೊಂದಿ ಪುಣೆಗೆ ಹಿಂದಿರುಗಿ ಬಂದಾಗ, ಅವರ ಗಡ್ಡ ಹುಲುಸಾಗಿ ಬೆಳೆದಿತ್ತು.

ಪುಣೆ ನಿಲ್ದಾಣದಲ್ಲಿ ಬೆಳಿಗ್ಗೆ ಸಾವರಕರರೊಡನೆ ಅವರೆಂದರು : 'ಈಗ ಮೊದಲು ಮನೆಗೆ ಹೋಗಿ ಗಡ್ಡ ಬೋಳಿಸಿಕೊಳ್ಳಬೇಕು!' ಆಗ ಸಾವರಕರ್, 'ಬೇಡಿ, ಇವತ್ತು ಹಾಗೆಯೇ ಇರಲಿ' ಎಂದರು; ಪುನಃ ಮಧ್ಯಾಹ್ನ ಸಹ, 'ಸಂಜೆ ಶನಿವಾರವಾಡಾ ಎದುರು ಸಭೆ ಮುಗಿಯುವವರೆಗೂ ನಿಮ್ಮ ಗಡ್ಡ ಬೋಳಿಸಬೇಡಿ' ಎಂದು ಪ್ರಾರ್ಥಿಸಿದರು! ಅಣ್ಣಾರಾವ್ ಭೋಪಟಕರರಿಗೆ ಅಚ್ಚರಿ! ಸಂಜೆ ಅವರ ಸತ್ಕಾರ ಸಮಾರಂಭದಲ್ಲಿ ಮಾತನಾಡುತ್ತ ಸಾವರಕರ್ ಹೇಳಿದರು : 'ವ್ಹಾ ನಿಜಾಮ! ಈ ಆಂದೋಲನದಲ್ಲಿ ನಿನಗೆ ಒಂದು ಕೋಟಿ ರೂ. ಖರ್ಚಾದರೂ ನನಗೆ ಸಂತೋಷವೇ! ಅದರಿಂದ ನಾವು ತೆತ್ತ ಚೌಥಾಯಿ, ಸರ್‌ದೇಶಮುಖಿಯ ಬಡ್ಡಿ ವಸೂಲಾದಂತೆ! (ಚಪ್ಪಾಳೆ) ಇಂದು ಅಣ್ಣಾರಾಯರ ತೂಕ ಎಷ್ಟು ಇಳಿದಿದೆಯೋ, ನಮ್ಮ ಪಕ್ಷದ ತೂಕ ಅಷ್ಟೇ ಹೆಚ್ಚಿದೆ! (ಚಪ್ಪಾಳೆ) ಮತ್ತು ಇಂದು ಅಣ್ಣಾರಾಯರ ಗಡ್ಡ ಎಷ್ಟು ಬೆಳೆದಿದೆಯೋ ನಿಜಾಮನ ಗಡ್ಡ ಅಷ್ಟೇ ಮೊಟಕಾಗಿದೆ!' (ದೀರ್ಘಕಾಲ ಪ್ರಚಂಡ ಕರತಾಡನ!)

ಅಣ್ಣಾರಾಯರಿಗೆ ಆಗ ಗೊತ್ತಾಯಿತು - ಸಾವರಕರರ ಪ್ರಾರ್ಥನೆಯ ಗುಟ್ಟು!

ಸಾವರಕರ್ ಭಾಷಣಕ್ಕೆ ನಿಂತರೆ ಸಾಕು - ಜನಸಾಗರದ ಮಹಾಸಾಗರ ತಲೆದೂಗಬೇಕು! ಅವರ ಮಾತಿನ ಮೋಡಿಗೆ ಮರುಳಾಗಬೇಕು; ಕಂಠದ ಮಾಧುರ್ಯಕ್ಕೆ ಮೈಮರೆಯಬೇಕು! ಲಂಡನ್ನಿನ ಭಾರತ ಭವನದಲ್ಲಿ ಅವರನ್ನು ಕಂಡ ಅಸಫ್ ಅಲಿಯವರು ಬರೆದಿರುವ ವರ್ಣನೆಯನ್ನಾದರೂ ಕೇಳಿ :

'ಕುಳ್ಳಗೆ ಲವಲವಿಕೆಯಿಂದ ಕೂಡಿದ ವ್ಯಕ್ತಿ; ಮುಖಕ್ಷೌರ ಮಾಡಿಕೊಂಡ ನಗುಮುಖ; ಚಿನ್ನದ ಕಟ್ಟಿನ ಕನ್ನಡಕದ ಹಿಂದೆ ಹೊಳೆಯುವ ಮೋಹಕ ಕಣ್ಣುಗಳು; ವಿಶಾಲವಾದ ಹಣೆಯ ಮೇಲೆ ಮಧ್ಯಕ್ಕೆ ಬೈತಲೆ ತೆಗೆದ ಗುಂಗುರು ಕೂದಲು. ಅವರು ತುಟಿ ತೆರೆದರೆ ಸಾಕು, ಮುಗ್ಧ ಮಧುರ ಸಂಗೀತದಂತೆ, ವೀಣೆ ಮಿಡಿದಂತೆ ಸ್ವರ; ಕೇಳಲು ಕಿವಿಗಿಂಪು. ಅವರ ರೂಪದಲ್ಲಿ ಎದ್ದು ತೋರುವ ಮಾರ್ದವ; ಧ್ವನಿಯಲ್ಲಿ ಏನೋ ಒಂದು ನಸು ಹೆಣ್ಣುಸ್ವರದ ಆರ್ದ್ರವ ಸೆಳೆತ!..... ಅರಕ್ತತೆಯಿಂದ ಬೆಳ್ಳಗಾದ ಹೆಣ್ಣಿನಂತೆ ತೆಳ್ಳಗಿನ ದೇಹ; ರಭಸದಿಂದ ನುಗ್ಗುವ ಪರ್ವತದ ಝರಿಯಂತೆ ಅಶಾಂತ; ತೀಕ್ಷ್ಣ ಖಡ್ಗಧಾರೆಯಂತೆ ಹರಿತ! ಅವಿಚಲಿತ ಆತ್ಮವಿಶ್ವಾಸದ ಮುದ್ರೆ ಹೊತ್ತು ಸುಲಲಿತವಾಗಿ ಹೊರಹೊಮ್ಮುತ್ತಿದ್ದ ಮಾತು ಕೃತಿಗಳು; ಬಾಯಿ ತೆರೆಯುತ್ತಿದ್ದುದೇ ಅಪರೂಪ; ಒಮ್ಮೆ ತೆರೆದರೆ ಪೂರ್ತಿ ಒಲಿಸಿಕೊಳ್ಳುತ್ತಿದ್ದ ಅಥವಾ ಎದುರಾಳಿಯ ಬಾಯಿ ಮುಚ್ಚಿಸುತ್ತಿದ್ದ ವಾಗ್ರೂಪ. ವಿರೋಧಿಗಳಿಗೆ ಆತ ಬಂಡುಕೋರ; ಸ್ನೇಹಿತರಿಗೆ ಜನ್ಮಜಾತ ನಾಯಕ. ಆದರೆ ಇವೆರಡೂ ಸರಿಯಲ್ಲ; ವಿನಾಯಕ ನಿಜಕ್ಕೂ ಶಿವಾಜಿಯ ಅವತಾರ.

'..... ಅದ್ಭುತ ಪ್ರಸಂಗಾವಧಾನ, ಅದಮ್ಯ ಸ್ಥೈರ್ಯ, ಮಹತ್ಕಾರ್ಯಗಳನ್ನು ಸಾಧಿಸುವ ತನ್ನ ಕರ್ತೃತ್ವಶಕ್ತಿಯ ಅಜೇಯ ಆತ್ಮವಿಶ್ವಾಸ ಇದ್ದಂಥ ವ್ಯಕ್ತಿ; ಹುಟ್ಟು ಸೇನಾನಿ....

'..... ಭಾಷಣ ಮುಗಿಯುವವರೆಗೂ ಸಭಿಕರೆಲ್ಲರನ್ನೂ ಮಂತ್ರಮುಗ್ಧಗೊಳಿಸುವ ಜಾದೂಗಾರ

ಅವರು ಉತ್ಕಟ ಭಾವನೆ ಹಾಗೂ ವಿಚಾರ ಪ್ರಖರತೆಯಿಂದ ಶ್ರೋತೃಗಳ ಮನ ಮುಟ್ಟುವಂತೆ ಅವರು ಮಾತನಾಡುತ್ತಿದ್ದರು... ಇಂಗ್ಲೆಂಡಿನಲ್ಲಾಗಲೀ ಭಾರತದಲ್ಲಾಗಲೀ, ಪ್ರಥಮ ಶ್ರೇಣಿಯ ಎಲ್ಲ ವಾಗ್ಮಿಗಳ ಭಾಷಣಗಳನ್ನೂ ನಾನು ಕೇಳಿದ್ದೇನೆ; ಆದರೆ ಇವರಷ್ಟು ಪ್ರಭಾವಿಯಾಗಿ ಮಾತನಾಡಬಲ್ಲವರು ಯಾರೂ ಇಲ್ಲ ಎಂದರೆ ಉತ್ಪ್ರೇಕ್ಷೆಯಾಗದು.'

ಮುಂಬೈನ ಶಿವಾಜಿ ಉದ್ಯಾನವಿರಲಿ, ದಿಲ್ಲಿಯ ರಾಮಲೀಲಾ ಮೈದಾನವಿರಲಿ; ಕರ್ಣಾವತಿ, ಪುಣೆ, ಲಖನೋ, ಕಲ್ಕತ್ತಾ ಯಾವ ಪಟ್ಟಣವೇ ಆಗಲಿ - ವೇದಿಕೆಗೆ ನಡೆದುಬರುವ ಅವರ ತೇಜಸ್ವಿ ಮುಖ ಕಾಣುತ್ತಲೇ ಸಭಿಕರ ಮುಖ ಅರಳುತ್ತಿತ್ತು ; ಜಯಘೋಷ ಏಳುತ್ತಿತ್ತು. ಮೆಲುದನಿಯಲ್ಲಿ ಮಾತು ಆರಂಭಿಸಿ, ತಮ್ಮ ಸುತ್ತಲೂ ವರ್ತುಲ ವರ್ತುಲವಾಗಿ ಸಮ್ಮೋಹನದ ಬಲೆ ಹರಡಿಬಿಡುತ್ತಿದ್ದರು! ಹಿಂದು ಬಾಂಧವರೇ ಅಥವಾ ಹಿಂದುಬಂಧುಗಳೇ ಎಂದು ಅವರು ಸಂಬೋಧಿಸುತ್ತಿದ್ದಂತೆಯೇ ಸಭಿಕರ ಅಂತಃಕರಣ ಪುಲಕಿತವಾಗಿ ಮೈ ರೋಮಾಂಚನಗೊಳ್ಳುತ್ತಿತ್ತು. ಮನೆಗೆ ಮರಳಿದ ನಂತರವೂ ಸಾವರಕರರ ಶಬ್ದಗಳೂ ವಾಕ್ಯಗಳೂ ಮನಸ್ಸಿನಲ್ಲಿ ಪ್ರತಿಧ್ವನಿಸುತ್ತಿದ್ದವು.

'ಸಾವರಕರರ ವಾಣಿ ಎಂದರೆ ಗಂಗಾಪಾನಿ' ಎಂಬ ಮಾತು ಅನೇಕ ಕಡೆ ಪ್ರಚಲಿತವಾಗಿತ್ತು. ಅವರ ಪದಪದದಲ್ಲೂ ದುರ್ದಮ್ಯ ಆಶಾವಾದ ಪುಟಿಯುತ್ತಿತ್ತು. ನಿರಾಸೆಯ ಅಂಧಕಾರದಲ್ಲೂ ಆಸೆಯ ಬೆಳಕು ತುಂಬುವ ವಾಕ್‌ಚಳಕ ಅವರಲ್ಲಿತ್ತು. ಒಮ್ಮೆ 1904ರಲ್ಲಿ 'ಅಭಿನವ ಭಾರತ' ದ ರಹಸ್ಯ ಸಭೆ ನಡೆಯುತ್ತಿದ್ದಾಗ ಓರ್ವ ಪ್ರಮುಖ ಸದಸ್ಯ ಶಂಕರರಾವ್ ದೇವ್ ಎದ್ದು ನಿಂತು ಹೇಳಿದರು : 'ಇಂಗ್ಲಿಷ್ ಸರಕಾರದ ಶಕ್ತಿ ಅಗಾಧ. ಅವರ ಅಪಾರ ಶಸ್ತ್ರಾಸ್ತ್ರಗಳ ಮುಂದೆ ನಾವು ನಿಲ್ಲಬಲ್ಲೆವೆ? ಸಶಸ್ತ್ರ ಕ್ರಾಂತಿಯಿಂದ ಸ್ವಾತಂತ್ರ್ಯದ ಫಲ ದೊರಕುತ್ತದೆಂದು ನನಗನಿಸುವುದಿಲ್ಲ. ಮುಂದೆ ಆಸೆಯ ಏಕಮಾತ್ರ ಕಿರಣವೂ ನನಗೆ ಕಾಣುತ್ತಿಲ್ಲ.' ಎಲ್ಲರ ಮುಖಗಳೂ ಜೋಲುಬಿದ್ದವು. ಯಾರಿಗೂ ಉತ್ತರ ಹೊಳೆಯಲಿಲ್ಲ; ಮಾತನಾಡುವ ಧೈರ್ಯವೂ ಆಗಲಿಲ್ಲ. ಎಲ್ಲರೂ ಸಾವರಕರರ ಮುಖದ ಕಡೆ ನೋಡತೊಡಗಿದರು. ಯುವಕ ಸಾವರಕರ್ ಮೇಲೆದ್ದರು. ಶಾಂತವಾಗಿ, ನಿಧಾನವಾಗಿ ಅವರ ಮಾತು ಪ್ರಾರಂಭವಾಯಿತು. ಮೊದಲು, ಶಂಕರರಾವ್ ದೇವ್ ಅವರು ದೇಶಭಕ್ತಿಯ ಭಾವನೆಯಿಂದ ಹಾಗೂ ಸ್ವಾತಂತ್ರ್ಯದ ತಳಮಳದಿಂದ ಹೇಳಿದ ಮಾತುಗಳಿಗಾಗಿ ಧನ್ಯವಾದ ಅರ್ಪಿಸಿದರು. ಒಂದೊಂದೇ ಅಂಶ ಎತ್ತಿಕೊಂಡು ಉತ್ತರಿಸುತ್ತಾ, ವೃದ್ಧರಂತೆ ಅಥವಾ ವಿಧವೆಯರಂತೆ ಗೋಳಾಡುವ ಮನಃಪ್ರವೃತ್ತಿಯನ್ನು ಖಂಡಿಸಿದರು. 'ನಾವು ಇನ್ನೂ ತರುಣರು' ಎಂಬುದನ್ನು ನೆನಪು ಮಾಡಿಕೊಟ್ಟರು.

'ಮ್ಯಾಟ್ಸಿನಿಯ ಕಾಲದಲ್ಲಿ ಯಂಗ್ ಇಟಲಿಯು ಆ ದೇಶದ ಸ್ವಾತಂತ್ರ್ಯ ಸಾಧಿಸಿರಬೇಕಾದರೆ, ಅಭಿನವ ಭಾರತದಿಂದ ಭಾರತದ ಸ್ವಾತಂತ್ರ್ಯ ಸಾಧನೆ ಅದೇಕೆ ಸಾಧ್ಯವಿಲ್ಲ? ನಮ್ಮ ಪ್ರಯತ್ನಗಳಿಂದ ಧ್ಯೇಯ ಫಲಿಸುವುದಿಲ್ಲ ಎಂದು ಹೇಳುವುದರಲ್ಲಿ ಅರ್ಥವಿಲ್ಲ; ನಾವು ಧ್ಯೇಯ ಫಲಿಸಲು ತಕ್ಕಷ್ಟು ಪ್ರಯತ್ನ ನಡೆಸಬೇಕು ಎಂದು ಹೇಳಿದರೆ ಅದು ಒಪ್ಪುವ ಮಾತು!'

ಎಲ್ಲರ ಮುಖದಲ್ಲೂ ಕಳೆ ಏರತೊಡಗಿತು. ಆದರೆ ಶಂಕರರಾವ್ ದೇವ್ ಅವರ ಮುಖ ಕಳೆಗುಂದಿತು. ಎಲ್ಲರೂ ಅವರೆಡೆಗೆ ತಿರಸ್ಕಾರದ ನೋಟ ಬೀರತೊಡಗಿದರು. ಆಗ ಸಾವರಕರ್ ಕೊನೆಯ ವಾಕ್ಯ ಹೇಳಿ ಭಾಷಣ ಮುಗಿಸಿದರು : 'ಶಂಕರರಾವ್ ದೇವ್ ಅವರು ನಮ್ಮ ಮನಸ್ಸನ್ನು ಪರೀಕ್ಷಿಸುವುದಕ್ಕಾಗಿ ವಿಫಲತೆಯ ಭೂಮಿಕೆಯನ್ನು ನಮ್ಮ ಮುಂದಿಟ್ಟರು. ಆದರೆ ನಿಜಕ್ಕೂ ಅವರ ಮನಸ್ಸಿನಲ್ಲಿ ಹಾಗಿಲ್ಲ. ಅದನ್ನು

ನಾನು ಬಲ್ಲೆ!'

ಭಾರತದ ಅಖಂಡತೆ ಹಾಗೂ ಏಕಾತತೆಗಳು ಸಾವರಕರರ ಜೀವನದ ಉಸಿರಾಗಿದ್ದವು. ವಿಭಜನೆಗೆ ಮುಂಚೆ ಅವರೊಂದು ಭಾಷಣದಲ್ಲಿ ಅದನ್ನು ಪ್ರಸ್ತಾವಿಸುತ್ತಾ, 'ಒಂದು ವೇಳೆ ಹಿಮಾಲಯಕ್ಕೆ ಬೆಂಕಿ ಹತ್ತಿಕೊಂಡಲ್ಲಿ ಅದನ್ನು ಆರಿಸಲು ಹಿಂದು ಮಹಾಸಾಗರವು ಧಾವಿಸಿ ಹೋಗಬೇಕು. ನನ್ನ ಚಿತ್ತಭಿತಿಯ ಮೇಲೆ ಅಖಂಡ ಭಾರತದ ಚಿತ್ರ ಅಚ್ಚಳಿಯದಂತೆ ಕೊರೆಯಲ್ಪಟ್ಟಿದೆ. ಅದರಲ್ಲಿ ಯಾವ ಪ್ರಾಂತವನ್ನು ತಾನೆ ಕತ್ತರಿಸಿ ಕೊಡಲಿ ? ಪೆಶಾವರ್ ಕೊಡೋಣ ಎಂದರೆ, ಗೀರ್ವಾಣ ವಾಣಿಯಲ್ಲಿ ಪಾಣಿನಿಯು ವ್ಯಾಕರಣ ರಚಿಸಿದ ಭೂಮಿ ಅದು; ದ್ವಾರಕೆಯನ್ನು ಕೊಡೋಣವೆಂದರೆ, ಸಾಕ್ಷಾತ್ ಶ್ರೀಕೃಷ್ಣನು ಅವತರಿಸಿದ ಸ್ಥಾನ ಅದು; ಬಂಗಾಲವಾದರೋ ಶಕ್ತಿಮಾತೆ ಕಾಳಿಯ ಪೂಜಾಸ್ಥಾನ; ಮಹಾರಾಷ್ಟ್ರವಂತೂ ಹೃದಯ ಸಮಾನ! ವ್ಯಾಸ, ವಾಲ್ಮೀಕಿ, ಪರಾಶರರಂತಹ ಮಹಾನ್ ತಪಸ್ವಿಗಳು ಪಾವನಗೊಳಿಸಿರುವ ಈ ಭಾರತ ಭೂಮಿಯನ್ನು ಹೇಗೆ ತುಂಡರಿಸಿ ಕೊಡಲಿ ?'

1958ರಲ್ಲಿ ಸಾವರಕರರನ್ನು ನರಸಿಂಹ ಗಣೇಶ ಜೋಶಿ ಎಂಬುವರು ಒಂದು ಪ್ರಶ್ನೆ ಕೇಳಿದರು : 'ಪಂಜಾಬಿನಲ್ಲಿ ಸೀಖರು ತಮ್ಮನ್ನು ಹಿಂದುಗಳೆಂದು ಕರೆದುಕೊಳ್ಳಲು ತಯಾರಿಲ್ಲ. ಆದ್ದರಿಂದ ಈಗ ಹಿಂದುವಿನ ಬಗ್ಗೆ ನಿಮ್ಮ ಶ್ಲೋಕವನ್ನು ಬದಲಿಸುವುದು ಅಗತ್ಯವಲ್ಲವೆ ?' ಸಾವರಕರ್ ತಟ್ಟನೆ ಮನನೊಂದು ನುಡಿದರು : 'ಇಲ್ಲ; ಬದಲಿಸುವುದು ಸಾಧ್ಯವಿಲ್ಲ. ಐತಿಹಾಸಿಕ ಹಾಗೂ ವಸ್ತುನಿಷ್ಠ ವಿವರಣೆ ನಾನು ಕೊಟ್ಟಿದ್ದೇನೆ. ''ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ''. ಹಿಂದು ಸಮಾಜ ತಮ್ಮ ತಾಯಿ ಅಲ್ಲವೆಂದು ಸೀಖರು ಬೇಕಾದರೆ ಹೇಳಿಕೊಳ್ಳಲಿ ; ಆದರೆ ಹಿಂದು ಸಮಾಜವು ಅವರನ್ನು ''ಇವರು ನನ್ನ ಮಕ್ಕಳಲ್ಲ'' ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ, ಅದು ತನ್ನ ಮಗು ಎಂಬ ವಿವೇಚನೆ ತಾಯಿಗಿದೆ.'

★ ★ ★

ಸ್ವಾತಂತ್ರ್ಯವೀರ ಸಾವರಕರ್ ಯಾವುದೇ ಕ್ಷೇತ್ರಕ್ಕೆ ಕಾಲಿಡಲಿ, ಅಲ್ಲಿ ಕ್ರಾಂತಿ ನಿಶ್ಚಿತ. ರಾಜಕೀಯ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಂತೂ ಅವರ ಕ್ರಾಂತಿಯ ಕೀರ್ತಿ ಸರ್ವವಿದಿತ. ಅಂತೆಯೇ ಸಾಹಿತ್ಯ ಕ್ಷೇತ್ರದಲ್ಲೂ ಅವರು ಕ್ರಾಂತಿ ನಿರ್ಮಿಸಿದರು. ಉಜ್ವಲ ಸ್ವದೇಶಾಭಿಮಾನ, ಸ್ವಭಾಷಾಭಿಮಾನಗಳಿಂದ ಪ್ರೇರಿತರಾಗಿ ಶಬ್ದಗಳನ್ನೂ ಪ್ರತಿಶಬ್ದಗಳನ್ನೂ ಸೃಷ್ಟಿಸಿದರು ; ನಿತ್ಯದ ವ್ಯವಹಾರದಲ್ಲಿ ಬಳಕೆಗೆ ತಂದರು. ಮಹಾವಿದ್ಯಾಲಯ, ಪ್ರಾಚಾರ್ಯ, ಪ್ರಾಧ್ಯಾಪಕ, ಪ್ರಬೋಧಿಕಾ, ವಾಯುದಳ, ದೂರಧ್ವನಿ, ಧ್ವನಿಕ್ಷೇಪಕ, ವಿಧಿಮಂಡಲ, ಅರ್ಥಸಂಕಲ್ಪ, ಚಿತ್ರಪಟ, ನೇಪಥ್ಯ, ಛಾಯಾಚಿತ್ರ, ದಿಗ್ದರ್ಶಕ, ಕ್ರಮಾಂಕ, ದಿನಾಂಕ, ವಾಚನಾಲಯ, ಉಪಸ್ಥಿತ, ಮಹಾಪೌರ, ವ್ಯಂಗ್ಯಚಿತ್ರ, ವಿಶೇಷಾಂಕ, ಲಾಭಾಂಶ, ಭಾಗಾಂಶ, ಸಂಸದ್, ಲೋಕಸಭಾ, ನಗರಪಾಲಿಕಾ, ಮಹಾಪಾಲಿಕಾ, ಹುತಾತ್ಮಾ, ಉಚ್ಚಾಂಕ, ನಭೋವಾಣಿ, ಸಚಿವಾಲಯ, ಸ್ಥಾನಕ, ರುಗ್ಣಾಲಯ, ಪ್ರಮಾಣಪತ್ರ ಇತ್ಯಾದಿ ಇತ್ಯಾದಿ ಶಬ್ದಗಳನ್ನು ಸ್ವತಃ ಸೃಷ್ಟಿಸಿದ ಅಥವಾ ರೂಢಿರಹಿತವಾಗಿದ್ದನ್ನು ಬಳಕೆಗೆ ತಂದ ವ್ಯಕ್ತಿ ಸಾವರಕರರೆಂಬುದು ಅದೆಷ್ಟು ಜನಕ್ಕೆ ಗೊತ್ತು ?

ಪುಣೆಯ ವಿದ್ವಾಂಸರೊಬ್ಬರು ಸಾವರಕರರನ್ನು ನೋಡಲು ಹೋದಾಗ, 'ಪುಣೆಯ ತಾಪಮಾನ ಹೇಗಿದೆ ?' ಎಂದು ಅವರನ್ನು ಸಾವರಕರ್ ಕೇಳಿದರು. 2-3 ಆವರ್ತಿ ಹೇಳುವತನಕ ತಾಪಮಾನ ಎಂದರೆ ಇಂಗ್ಲಿಷಿನ ಟೆಂಪರೇಚರ್ ಎಂಬುದು ಆ ವಿದ್ವಾಂಸರಿಗೆ ಅರ್ಥವೇ ಆಗಲಿಲ್ಲ. ಶಬ್ದಗಳನ್ನು ಪ್ರಯೋಗಿಸುವಾಗ ಎಚ್ಚರ ವಹಿಸಬೇಕೆಂದು ಸಾವರಕರ್ ಒತ್ತಿ ಹೇಳುತ್ತಿದ್ದರು. 1952ರಲ್ಲಿ ಅಭಿನವ ಭಾರತದ

ಸಮಾರೋಪ ಸಮಾರಂಭ ಜರುಗಿದಾಗ ಅಲ್ಲಿನ ಚಿತ್ರಪ್ರದರ್ಶನ ನೋಡುತ್ತಿದ್ದವರೊಬ್ಬರು, 'ಅಗೋ, ರ್‍ಯಾಂಡ್ ಕೊಲೆ' ಎಂದರು. ಕೂಡಲೆ ಪಕ್ಕದಲ್ಲಿದ್ದ ಸಾವರಕರ್, 'ಕೊಲೆಯಲ್ಲ, ವಧೆ ಅಥವಾ ಸಂಹಾರ ಎಂದು ಹೇಳಿ' ಎಂದು ತಿದ್ದಿದರು. ಅಂತೆಯೇ 'ಹಿಂದುಸ್ಥಾನ' ಎಂಬ ದೇಶದ ಹೆಸರನ್ನು 'ಇಂಡಿಯ' ಎಂದು ಬಳಸುವುದನ್ನೂ ಅವರು ಖಂಡಿಸುತ್ತಿದ್ದರು. 'ಅರಬ್ಬಿ ಸಮುದ್ರ' ಎಂಬುದನ್ನು 'ಸಿಂಧುಸಾಗರ' ಎಂದೂ ಬಂಗಾಲ ಕೊಲ್ಲಿಯನ್ನು ಗಂಗಾಸಾಗರ ಎಂದೂ ಬದಲಿಸುವುದು ಅಗತ್ಯವೆಂದರು.

ಲಿಪಿ ಸುಧಾರಣೆಯ ಕ್ಷೇತ್ರದಲ್ಲೂ ಸಾವರಕರರು ಗಣನೀಯ ಕ್ರಾಂತಿ ಸಾಧಿಸಿ ಮುದ್ರಣಕಾರರ ಕೃತಜ್ಞತೆಗೆ ಪಾತ್ರರಾದರು. ದೇವನಾಗರಿಯಲ್ಲಿ ಮೊದಲು 250ರ ವರೆಗೆ ಅಚ್ಚಿನ ಮೊಳೆಗಳ ಬಳಕೆಯಾಗುತ್ತಿತ್ತು. ಸಾವರಕರರ ಸುಧಾರಣೆಗಳನ್ನು ಅಳವಡಿಸಿದ ನಂತರ ಆ ಸಂಖ್ಯೆ 100ಕ್ಕಿಂತ ಕಡಿಮೆಯಾಯಿತು. ಮೊಳೆ ಜೋಡಿಸುವ ವೇಗ ಹೆಚ್ಚಿ, ಸಮಯ ಉಳಿಯುವಂತಾಯಿತು.

ಅವರ ಪ್ರತಿಭೆ ಪಾಂಡಿತ್ಯಗಳ ಬೆಳಕು, ಕಾಲಗಣನೆ ಮತ್ತು ಪಂಚಾಂಗದ ಕ್ಷೇತ್ರಕ್ಕೂ ಹರಿಯಿತು. ಹಳೆಯ ರೀತಿಯ ಕಾಲಗಣನೆಯಲ್ಲಿನ ಲೋಪದೋಷಗಳನ್ನು ಕಂಡುಹಿಡಿದು ಅದಕ್ಕೂ ಪರಿಹಾರ ಸೂಚಿಸಿದರು.

ಇತಿಹಾಸ ಕ್ಷೇತ್ರದಲ್ಲಿ ಸಹ '1857ರ ಭಾರತೀಯ ಸ್ವಾತಂತ್ರ್ಯ ಸಂಗ್ರಾಮ' ದಿಂದ ಹಿಡಿದು 'ಇತಿಹಾಸದ ಸುವರ್ಣ ಪುಟಗಳು' ಎಂಬ ಗ್ರಂಥದ ವರೆಗೆ ಅನೇಕ ಕೃತಿಗಳನ್ನು ಬರೆದು, ಉಪನ್ಯಾಸ ಮಾಲೆಗಳಲ್ಲಿ ಮಾತನಾಡಿ ಹಳೆಯ ದೃಷ್ಟಿಕೋನವನ್ನು ಬದಲಿಸಿದ ಶ್ರೇಯಸ್ಸು ಅವರದು. ಪಾಶ್ಚಾತ್ಯ ಚರಿತ್ರಕಾರರ ನಕಲು ಅಥವಾ ಅಂಧಾನುಕರಣೆಯನ್ನು ವಿರೋಧಿಸಿ, ರಾಷ್ಟ್ರೀಯ ದೃಷ್ಟಿಯಿಂದ ಇತಿಹಾಸ ಬರೆಯುವ ಸಾಧ್ಯತೆಯನ್ನು ಮುಂದಿಟ್ಟರು.

ಆದಿಸಂಸ್ಕಾರದಿಂದ ಹಿಡಿದು ಅಂತ್ಯಸಂಸ್ಕಾರದವರೆಗೆ ಆಹಾರ ವಿಹಾರಗಳೆಲ್ಲದರಲ್ಲೂ - ಎಷ್ಟೇ ವಿವಾದಾಸ್ಪದವೆನಿಸಿದರೂ - ಅವರದು ಕ್ರಾಂತಿಕಾರಕ ವಿಚಾರ ದೃಷ್ಟಿ ; ವಿಶೇಷವಾಗಿ ವೈಜ್ಞಾನಿಕ ದೃಷ್ಟಿ. 'ಯಾವ ಆಹಾರ ತಿನ್ನಬೇಕು ಅಥವಾ ಬಿಡಬೇಕು ಎಂಬುದನ್ನು ವೈದ್ಯರು ನಿರ್ಧರಿಸಿದರೆ ಸಾಕು' ಎನ್ನುತ್ತಿದ್ದರು. ತಮ್ಮ ಪತ್ನಿ ನಿಧನರಾದಾಗ, ತಾವು ರೂಢಿಯಂತೆ ಅಂತ್ಯಕ್ರಿಯೆಗಳನ್ನು ನಡೆಸಲು ಅವರು ಒಪ್ಪಲಿಲ್ಲ. ಆದರೆ ಅಂತ್ಯ ವಿಧಿಗಳನ್ನು ನೆರವೇರಿಸಿದ ತಮ್ಮ ಮಗನಿಗೆ ಅಡ್ಡಿಪಡಿಸಲಿಲ್ಲ. ಹೆಂಡತಿಯ ಹೆಸರಿನಲ್ಲಿ ಕೆಲವು ಸಮಾಜಸೇವಾ ಸಂಸ್ಥೆಗಳಿಗೂ ಮಹಿಳಾ ಸಂಘಗಳಿಗೂ ಧನ ನೀಡಿದರು.

ಮರಣಕ್ಕೆ ಒಂದು ವರ್ಷ ಮೊದಲೇ ತಾವು ಬರೆದಿಟ್ಟಿದ್ದ ಮೃತ್ಯುಪತ್ರದಲ್ಲಿ ಅವರು - ತಮ್ಮ ಶವವನ್ನು ಯಂತ್ರಚಾಲಿತ ವಾಹನ ಮೇಲೆ (ಪ್ರಾಣಿಗಳು ಎಳೆಯುವ ಗಾಡಿಯಲ್ಲಾಗಲೀ, ಮನುಷ್ಯರ ಹೆಗಲ ಮೇಲಾಗಲೀ ಅಲ್ಲ) ವಿದ್ಯುತ್ ಸ್ಮಶಾನಕ್ಕೆ ಸಾಗಿಸಿ ದಹಿಸಬೇಕು - ಎಂದು ತಿಳಿಸಿದ್ದರು. ವೈಜ್ಞಾನಿಕ ಸಾಧನಗಳನ್ನು ಸಾಧ್ಯವಿದ್ದಷ್ಟೂ ಉಪಯೋಗಿಸಿಕೊಳ್ಳಬೇಕೆಂಬುದು ಅವರ ಅಭಿಮತ. ಹರತಾಳದಿಂದ ರಾಷ್ಟ್ರಕ್ಕೂ ಜನತೆಗೂ ಹಾನಿಯಾಗುವುದರಿಂದ ತಮ್ಮ ನಿಧನಕ್ಕಾಗಿ ಯಾರೂ ಹರತಾಳ ಆಚರಿಸಬಾರದೆಂದೂ, ದಿನನಿತ್ಯದ ಕಾರ್ಯ ಚಟುವಟಿಕೆಗಳಿಗೆ ಧಕ್ಕೆ ತಂದುಕೊಳ್ಳಬಾರದೆಂದೂ ಮೃತ್ಯುಪತ್ರದಲ್ಲಿ ಉಲ್ಲೇಖಿಸಿದ್ದರು!

  

ಮುಂಬೈನ ಶಿವಾಜಿ ಉದ್ಯಾನದ ಬಳಿ ಇರುವ ಸರಳ ಸಾಧಾರಣ ಭವನ - ಉಪೇಕ್ಷಿತ ಕ್ರಾಂತಿಕಾರಿ

ಯೊಬ್ಬನ ವಾಸಸ್ಥಾನ !

ಒಂದು ದಿನ ರೈಟ್ ಆನರಬಲ್ ಶ್ರೀನಿವಾಸ ಶಾಸ್ತ್ರಿ ಅಲ್ಲಿಗೆ ಹೋಗುತ್ತಾರೆ. 'ಇದೇನು ? ಇಷ್ಟೊಂದು ಸಣ್ಣ ಮನೆಯಲ್ಲಿ ಇದ್ದೀರಲ್ಲ !' ಎಂದು ಬೆರಗಾಗಿ ಕೇಳುತ್ತಾರೆ. 'ಹೌದು, ಇದು ಅಂದಮಾನಿನ ಜೈಲು ಖಾನೆಗಿಂತ ಉತ್ತಮವಾಗಿಲ್ಲವೇನು ?' ಎನ್ನುತ್ತಾರೆ ಮನೆಯ ಯಜಮಾನರು.

'ಹೊದಿಕೆ ಕೊಳೆಯಾಗಿದೆ ; ಬೇರೆಯದನ್ನು ಹೊದಿಸುತ್ತೇನೆ' ಎಂದು ಯಾರಾದರೂ ಕೇಳಿದರೆ ಆ ರೋಗಗ್ರಸ್ತ ವೃದ್ಧರು ಹೇಳುತ್ತಾರೆ : 'ಬೇಡ, ಬೇಡ, ಅಂದಮಾನಿನಲ್ಲಿ ಇದಕ್ಕಿಂತ ಎಷ್ಟೋ ಕೊಳಕಾದ ಗೋಣಿಯಪಟ್ಟಿ ಇರುತ್ತಿತ್ತು. ಇದು ಎಷ್ಟೋ ವಾಸಿ !'

ಅವರಿಗೆ ಬಿಸಿಯೂಟ ಸೇರದು ; ಚೆನ್ನಾಗಿ ಆರಿತ ತಂಗಳೇ ಆಗಬೇಕು.

'ನಿಮಗೆ ಸರಕಾರ ಬಹಳ ಅನ್ಯಾಯ ಮಾಡಿತು' ಎಂದರೆ, 'ಛೇ, ಹಾಗೆನ್ನಬೇಡಿ. ನಾನು ಯಾವುದೇ ಆಸೆಯನ್ನೂ ಇಟ್ಟುಕೊಂಡು ದೇಶಕ್ಕಾಗಿ ದುಡಿಯಲಿಲ್ಲ. ನನ್ನ ಕರ್ತವ್ಯ ಮಾತ್ರ ಸಲ್ಲಿಸಿದೆ. ನನಗೆ ಏನೂ ಬೇಡ !' ಎನ್ನುತ್ತಾರೆ.

ಮನೆ ಸಣ್ಣದು ; ಆದರೆ ಒಳಗಿದ್ದವರು ಓರ್ವ ವಿಶ್ವವಿಖ್ಯಾತ ವ್ಯಕ್ತಿ. ವ್ಯಕ್ತಿಯ ದೇಹ ಸಣ್ಣದು ; ಆದರೆ ಅದರ ಒಳಗಿದ್ದುದೊಂದು ಪ್ರಚಂಡ ವಿಶ್ವವಿಜೇತ ಶಕ್ತಿ !

ಆ ಶಕ್ತಿ ಆ ದೇಹ ಬಿಟ್ಟು ಹೊರಟಿತು. ಆ ದೇಹ ಆ ಮನೆ ಬಿಟ್ಟು ಹೊರಟಿತು. ಲಕ್ಷಾಂತರ ಜನರು ಕಣ್ಣೀರು ಕರೆದರು ; ಸ್ಮಶಾನದವರೆಗೂ – ಅಲ್ಲಿಯವರೆಗೆ ಮಾತ್ರ – ಹಿಂಬಾಲಿಸಿದರು.

ಯಾರವರು – ಸತ್ತವರು ?

ಅತ್ತವರು ಹೇಳುತ್ತಾರೆ : ಸಾಗರ ಈಜಿದ ಶೂರ, ಸ್ವಾತಂತ್ರ್ಯ ಹೋರಾಟಗಾರ, ಸಮಾಜ ಸುಧಾರಣೆಗಾರ, ಭಾಷಾ ಶುದ್ಧಿಕಾರ, ಕಾದಂಬರಿಕಾರ, ಕಥೆಗಾರ, ಕಾವ್ಯ ಸುಧಾಕರ, ನಾಟಕಕಾರ, ನಿಬಂಧ ಕಾರ, ಅಪ್ರತಿಮ ವಾಗ್ಮಿ, ಇತಿಹಾಸಕಾರ; ಇತಿಹಾಸಕ್ಕೆ ಅಲಂಕಾರ.... ಈ ಒಂದೊಂದು ಕ್ಷೇತ್ರದಲ್ಲೂ ಅವರ ಕಾರ್ಯ ಪರ್ವತಾಕಾರ !

ಇರಬಹುದು, ಇವೆಲ್ಲವೂ ಆಗಿರಬಹುದು. ಆದರೆ ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಅವರೊಂದು ಚಮತ್ಕಾರ ! ಅಭೂತಪೂರ್ವ ಚಮತ್ಕಾರ !

ತಮ್ಮ ಯೌವನದಲ್ಲಿ ಇಂಗ್ಲೆಂಡಿನಲ್ಲಿದ್ದಾಗ ಸಾವರಕರ್, 1857ರ ಪರಮಪ್ರತಾಪಿ ಸೇನಾಪತಿ ತಾತ್ಯಾಟೋಪೆಯನ್ನು ಕುರಿತು ಬರೆದಿದ್ದರು : 'ತಾತ್ಯಾ, ಓ ತಾತ್ಯಾ ! ಈ ಹತಭಾಗ್ಯ ಹಿಂದುಸ್ಥಾನದಲ್ಲಿ ನೀನೇಕೆ ಹುಟ್ಟಿ ಬಂದೆ ? ಇನ್ನಾವುದಾದರೂ ದೇಶದಲ್ಲಿ ಹುಟ್ಟಿದ್ದರೆ ಅಲ್ಲಿನ ಜನ ನಿನ್ನನ್ನು ಚಿನ್ನದ ಪಲ್ಲಕ್ಕಿ ಯಲ್ಲಿ ಮೆರೆಸುತ್ತಿದ್ದರು !'

ಸ್ವಾತಂತ್ರ್ಯವೀರ ಸಾವರಕರರ ಚಿರಪರಿಚಿತ ಹೆಸರು ಸಹ 'ತಾತ್ಯಾ' !



# ವೀರದೀಕ್ಷೆ

**ಹೇ ಮಾತೃಭೂಮಿ ತುಜಲಾ ಮನ ವಾಹಿಯೇಲೇ**
**ವಕ್ತೃತ್ವ – ವಾಗ್ವಿಭವಹೀ ತುಜ ಅರ್ಪಿಯೇಲೇ**
**ತೂ ತೇಚಿ ಅರ್ಪಿಲಿ ನವೀ ಕವಿತಾ ರಸಾಲಾ**
**ಲೇಖಾಪ್ರತೀ ವಿಷಯ ತೂಚಿ ಅನನ್ಯ ಝಾಲಾ ॥**

ಹೇ ಮಾತೃಭೂಮಿ! ನಿನಗಾಗಿ ನನ್ನ ಮನಸ್ಸನ್ನು ಮೀಸಲಿರಿಸಿದೆ. ನನ್ನ ವಕ್ತೃತ್ವ, ವಾಗ್ವೈಭವಗಳೆಲ್ಲವನ್ನೂ ನಿನಗೇ ಅರ್ಪಿಸಿದೆ. ನನ್ನ ಕಾವ್ಯರಸದಿಂದ ನಿನ್ನ ಅಭಿಷೇಕ ಮಾಡಿದೆ. ನನ್ನ ಲೇಖನಕ್ಕೆಲ್ಲ ನೀನೇ ಪ್ರೇರಣೆಯಾದೆ.

**ತ್ವತ್‌ಸ್ಥಂಡಿಲೀ ಢಕಲಿಲೇ ಪ್ರಿಯ ಮಿತ್ರಸಂಘಾ**
**ಕೇಲೇ ಸ್ವಯೇ ದಹನ ಯೌವನ ದೇಹಭೋಗಾ**
**ತ್ವತ್ಕಾರ್ಯ ನೈತಿಕ ಸುಸಮ್ಮತ ಸರ್ವದೇವಾ**
**ತತ್ಸೇವನೀಚ ಗಮಲೀ ರಘುವೀರಸೇವಾ ॥**

ನಿನ್ನ ಬಲಿವೇದಿಯ ಮೇಲೆ ನನ್ನ ಪ್ರಿಯ ಮಿತ್ರಪರಿವಾರವನ್ನು ತಳ್ಳಿದೆ. ಸ್ವತಃ ಯೌವನ, ದೇಹಭೋಗಗಳಿಗೆ ಉರಿ ಹಚ್ಚಿದೆ. ನಿನ್ನ ಕಾರ್ಯವೆಂದರೆ ಎಲ್ಲ ದೇವದೇವತೆಗಳನ್ನೂ ಪ್ರಸನ್ನಗೊಳಿಸುವ ಕಾರ್ಯ, ನಿನ್ನ ಸೇವೆಯೇ ಭಗವಂತನ ಸೇವೆ.

**ತ್ವತ್‌ಸ್ಥಂಡಿಲೀ ಢಕಲಿಲೀ ಗೃಹ ವಿತ್ತ ಮತ್ತಾ**
**ದಾವನಲಾಂತ ವಹಿನೀ ನವಪುತ್ರಕಾಂತಾ**
**ತ್ವತ್‌ಸ್ಥಂಡಿಲೀ ಅತುಲ – ಧೈರ್ಯ – ವರಿಷ್ಠ ಬಂಧು**
**ಕೇಲಾ ಹವೀ ಪರಮ ಕಾರುಣ ಪುಣ್ಯಸಿಂಧು ॥**

ನಿನ್ನ ಬಲಿವೇದಿಯ ಮೇಲೆ ನನ್ನ ಮನೆ ಮಠ, ಐಶ್ವರ್ಯಗಳನ್ನೆಲ್ಲ ಬಲಿಗೊಟ್ಟೆ. ಅತ್ತಿಗೆ, ಹೆಂಡತಿ, ಎಳೆಯ ಮಗು ಎಲ್ಲರನ್ನೂ ಕಾಳ್ಗಿಚ್ಚಿನಲ್ಲಿ ಹಾಕಿಬಿಟ್ಟೆ. ಅಪಾರ ಧೈರ್ಯಶಾಲಿಯೂ ಕರುಣಾಮಯನೂ ಆದ ಅಣ್ಣನನ್ನು ನಿನಗಾಗಿಯೇ ಆಹುತಿ ಕೊಟ್ಟೆ.

**ತ್ವತ್‌ಸ್ಥಂಡಿಲಾವರಿ ಬಳೀ ಪ್ರಿಯ ಬಾಲ ಝಾಲಾ**
**ತ್ವತ್‌ಸ್ಥಂಡಿಲೀ ಬಘ ಅತಾ ಮಮ ದೇಹ ಠೇಲಾ**
**ಹೇ ಕಾಯ ಬಂಧು ಅಸತೋ ಜರಿ ಸಾತ ಆಮ್ಹೀ**
**ತ್ವತ್‌ಸ್ಥಂಡಿಲೀ ಚ ಅಸತೇ ದಿಧಲೇ ಬಳೀ ಮೀ ॥**

ಪ್ರೀತಿಯ ತಮ್ಮನೂ ನಿನಗಾಗಿಯೇ ಮೀಸಲಾದ. ಈಗ ನನ್ನ ದೇಹವನ್ನೂ ಒಡ್ಡುವ ಸರದಿ ಬಂದಿದೆ. ಇಷ್ಟೇ ಏನು, ನಾವು ಕೇವಲ ಮೂರು ಜನಕ್ಕೆ ಬದಲಾಗಿ ಏಳು ಜನ ಒಡಹುಟ್ಟಿದವರಿದ್ದರೂ, ಅವರೆಲ್ಲರನ್ನೂ ನಿನಗಾಗಿಯೇ ಮುಡುಪಿಡುತ್ತಿದ್ದೆ.

**ಸಂತಾನ ಯಾ ಭರತಭೂಮಿಸ ಕೋಟಿ ಕೋಟಿ**
**ಜೇ ಮಾತೃಭಕ್ತಿರತ ಸಜ್ಜನ ಧನ್ಯ ಹೋತೀ**
**ಹೇ ಆಪುಲೇ ಕುಲಹಿ ತ್ಯಾಮಧಿ ಈಶ್ವರಾಂಶ**
**ನಿರ್ವಂಶ ಹೋವುನಿ ಠರೇಲ ಅಖಂಡ ವಂಶ ॥**

ಭಾರತಾಂಬೆಯ ಕೋಟಿ ಕೋಟಿ ಮಕ್ಕಳಲ್ಲಿ ಮಾತೃಭಕ್ತಿಯುಳ್ಳವರ ಜೀವನವೇ ಧನ್ಯ. ಅವರ ಪೈಕಿ, ನಮ್ಮ ಕುಲವಂತೂ ಈಶ್ವರನದೇ ಅಂಶ. ನಿರ್ವಂಶವಾಗಿಯೂ ಅಖಂಡವಾಗುವ ವಂಶ ನಮ್ಮದು.

**ಕೀ ಘೇತಲೇ ವ್ರತ ನ ಹೇ ಅಮ್ಹಿ ಅಂಧತೇನೇ**
**ಲಬ್ಧ ಪ್ರಕಾಶ ಇತಿಹಾಸ - ನಿಸರ್ಗ ಮಾನೇ**
**ಜೇ ದಿವ್ಯ ದಾಹಕ ಮ್ಹಣೂನಿ ಅಸಾವಯಾಚೇ**
**ಬುದ್ಧ್ಯಾಚಿ ವಾಣ ಧರಿಲೇ ಕರಿ ಹೇ ಸತೀಚೇ ॥**

ನಾವೇನೂ ಕುರುಡರಂತೆ ಈ ದಾರಿ ಹಿಡಿಯಲಿಲ್ಲ. ಚೆನ್ನಾಗಿ ಆಲೋಚಿಸಿಯೇ, ಇತಿಹಾಸ ಹಾಗೂ ಮನುಷ್ಯ ಸ್ವಭಾವದ ಬೆಳಕಿನಲ್ಲೇ, ಪ್ರಾಣ ತೆರಬೇಕಾಗುವುದೆಂಬ ಅರಿವಿಟ್ಟುಕೊಂಡೇ ಈ ವೀರಕಂಕಣ ತೊಟ್ಟಿದ್ದೇವೆ.

**- ಸ್ವಾತಂತ್ರ್ಯವೀರ ಸಾವರಕರ್**

## ಸಾವರ್‌ಕರರ ಕೊನೆಯ ಸಂದರ್ಶನ



# "ಈ ದೇಶ ಖಂಡಿತ ಎಂದೂ ರಾಜಕೀಯವಾಗಿ ದಿವಾಳಿಯಾಗುವ ದೇಶವಲ್ಲ"

*1965ರಲ್ಲಿ ವೀರ ಸಾವರ್‌ಕರರು ತೀವ್ರ, ಅನಾರೋಗ್ಯದಿಂದ ಹಾಸಿಗೆ ಹಿಡಿದಿದ್ದರು. ಆಗ ಅವರಿಗೆ 83 ವರ್ಷ ವಯಸ್ಸು. ಹಲವು ವರ್ಷಗಳ ಕಾಲ ಅವರು ಯಾವುದೇ ಪತ್ರಿಕೆಗೂ ಸಂದರ್ಶನ ನೀಡಲು ನಿರಾಕರಿಸಿದ್ದರು. ಆದರೆ, ಹಿರಿಯ ಪತ್ರಕರ್ತ ಶ್ರೀ ಶ್ರೀಧರ್ ತೇಲ್ಕರ್‌ರವರು ''ಆರ್ಗನೈಸರ್'' ಆಂಗ್ಲ ವಾರಪತ್ರಿಕೆಗೆ ಒಂದು ಸಂದರ್ಶನ ಪಡೆಯುವಲ್ಲಿ ಯಶಸ್ವಿಯಾದರು. ಈ ಸಂದರ್ಶನವು ಆ ಪತ್ರಿಕೆಯ 1965ರ ದೀಪಾವಳಿ ಸಂಚಿಕೆಯಲ್ಲಿ ಪ್ರಕಟವಾಯಿತು. ಸೌಜನ್ಯ ಪೂರ್ವಕವಾಗಿ ಸಂದರ್ಶನವನ್ನು ಇಲ್ಲಿ 'ಆತ್ಮಾಹುತಿ'ಯ ಓದುಗರಿಗಾಗಿ ನೀಡುತ್ತಿದ್ದೇವೆ.*

***ಈಗ ಹಿಂತಿರುಗಿ ನೋಡಿದರೆ ನೀವು ಈಗಲೂ ತುಂಬಾ ನೆನೆಸಿಕೊಳ್ಳುವ ರೋಮಾಂಚಕಾರಿ ಕ್ಷಣಗಳು ಯಾವುವು ?***

ನಿಜ. ಹಳೆಯ ನೆನಪುಗಳು ನನ್ನನ್ನು ಕಾಡುತ್ತಿರುತ್ತವೆ. ನಾನು ಈ ರೋಮಾಂಚಕ ನೆನಪುಗಳನ್ನು ಹಾಗೆಯೇ ಕಾಪಾಡಿಕೊಂಡು ಬಂದಿದ್ದೇನೆ. ಅವು ಈಗ ನನ್ನದೇ ಭಾಗವಾಗಿವೆ; ನನ್ನ ಜೀವಿತದ ಅಂತ್ಯದ ವರೆಗೆ ಅವು ನನ್ನ ಜತೆಗೇ ಇರುತ್ತವೆ. ನಾನು ಈಗಲೂ ಅತ್ಯಂತ ಸುಸ್ಪಷ್ಟವಾಗಿ ನೆನಪು ಮಾಡಿಕೊಳ್ಳುವ ಮೊದಲ ರೋಮಾಂಚಕ ಘಟನೆ - ಸ್ಟೀಮರಿನಿಂದ ನಾನು ತಪ್ಪಿಸಿಕೊಂಡದ್ದು. ಅವೆಲ್ಲಾ ನಡೆದದ್ದು ಹೀಗೆ: ಅದು 1910ರ ಮಾರ್ಚ್ 13, ಭಾನುವಾರ. ನಾನು ಪ್ಯಾರಿಸ್ಸಿನಿಂದ ಲಂಡನ್ನಿಗೆ ಬಂದೆ. ಲಂಡನ್ ಪೊಲೀಸರು ನನ್ನನ್ನು ವಿಕ್ಟೋರಿಯಾ ನಿಲ್ದಾಣದಲ್ಲಿ ಕೂಡಲೇ ಬಂಧಿಸಿದರು. ಮುಂಬಯಿ ಸರ್ಕಾರದಿಂದ ಬಂದ ತಂತಿ ಬಂಧನ ವಾರೆಂಟ್ ಆಧಾರದಲ್ಲಿ ನನ್ನನ್ನು ಬಂಧಿಸಲಾಗಿತ್ತು. ನನ್ನನ್ನು 1881ರ ತಲೆತಪ್ಪಿಸಿಕೊಂಡ ಅಪರಾಧಿಗಳ ಕಾಯ್ದೆಯಡಿ ಸೆರೆಹಿಡಿಯಲಾಗಿತ್ತು. ನನ್ನ ಮೇಲಿನ ಆರೋಪಗಳು ಇವು : 1. ಭಾರತದ ದೊರೆಯ ವಿರುದ್ಧ ಯುದ್ಧ ಹೂಡಿದ್ದು ಅಥವಾ ಅಂಥ ಯುದ್ಧಕ್ಕೆ ಪ್ರೋತ್ಸಾಹ ನೀಡಿದ್ದು ; 2. ಬ್ರಿಟಿಷ್ ಇಂಡಿಯಾದಲ್ಲಿ ದೊರೆಗೆ ಇದ್ದ ಸಾರ್ವಭೌಮತ್ವವನ್ನು ಚ್ಯುತಿಗೊಳಿಸಲು ಸಂಚು ಹೂಡಿರುವುದು ; 3. ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಿ ವಿತರಿಸಿದ್ದು ಮತ್ತು ನಾಸಿಕದ ಆಗಿನ ಕಲೆಕ್ಟರ್ ಜಾಕ್ಸನ್‌ನ ಕೊಲೆಗೆ ಸಂಚು ಹೂಡಿದ್ದು; 4. ಲಂಡನ್ನಿನಲ್ಲಿ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಿ, ವಿತರಿಸಿ, ಲಂಡನ್ನಿನಿಂದಲೇ ಯುದ್ಧ ಹೂಡಿದ್ದು; 5. 1906ರ ಜನವರಿಯ ನಂತರ ಭಾರತದಲ್ಲಿ ಮತ್ತು 1908 ಹಾಗೂ 1909ರಲ್ಲಿ ಲಂಡನ್ನಿನಲ್ಲಿ ಪ್ರಚೋದನಕಾರಿ ಭಾಷಣಗಳನ್ನು ಮಾಡಿದ್ದು.

ನನ್ನನ್ನು ಏಡನ್‌ಗೆ ಹೊರಟಿದ್ದ ಎಸ್.ಎಸ್. ಮೊರಿಯಾ ಹಡಗಿನೊಳಗೆ ತಳ್ಳಲಾಯಿತು. ನಾನು ಆ ಹಡಗಿನಲ್ಲಿ ಬ್ರಿಟಿಷರ ಸೆರೆಯಾಳಾಗಿದ್ದೆ. ಭಾರತವನ್ನು ಸೇರಿದ ಮೇಲೆ ನನ್ನ ಗತಿ ಏನಾಗುವುದೆಂದು ನನಗೆ ಅರ್ಥವಾಯಿತು. ಆದ್ದರಿಂದ ನಾನು ಸಾವಿನ ದವಡೆಯಿಂದ ತಪ್ಪಿಸಿಕೊಳ್ಳಲು ನಿರ್ಧರಿಸಿದೆ. ಅದೃಷ್ಟವಶಾತ್ ನನ್ನ ಹಡಗು ದುರಸ್ತಿಗಾಗಿ ಮಾರ್ಸೇಲ್ಸ್‌ನಲ್ಲಿ ಲಂಗರು ಹಾಕಿತ್ತು. ಆಗ ನಾನು ಹೇಗಾದರೂ ಮಾಡಿ ಹಡಗಿನಿಂದ ತಪ್ಪಿಸಿಕೊಳ್ಳುವ ತೀರ್ಮಾನವನ್ನು ಕೈಗೊಂಡೆ. ನಾನು ಶೌಚಾಲಯಕ್ಕೆ ಹೋಗಿ ಒಳಗಿನಿಂದ ಬಾಗಿಲಿನ ಅಗುಳಿ ಹಾಕಿದೆ. ನನ್ನ ಕಾವಲುಭಟ ಹೊರಗೆ ನಿಂತು ಕಾಯುತ್ತಿದ್ದ. ನಾನು ಶೌಚಾಲಯದ ಗವಾಕ್ಷಿಯಿಂದ ಹೊರಗೆ, ಸಮುದ್ರಕ್ಕೆ ಹಾರಿದೆ ; ಬಂದರಿನತ್ತ ಈಜಲು ಆರಂಭಿಸಿದೆ. ಕಾವಲುಭಟರು ಗುಂಡು ಹಾರಿಸತೊಡಗಿದರು, ನನ್ನ ಸುತ್ತಮುತ್ತಲೂ ಗುಂಡುಗಳು ತೂರಿಬಂದವು. ನಾನು ಧೈರ್ಯದಿಂದ ಅವುಗಳನ್ನು ತಪ್ಪಿಸಿಕೊಂಡೆ ; ಸಾವನ್ನೂ ವಂಚಿಸಿದೆ. ಕೊನೆಗೆ ನಾನು ದಡ ತಲುಪಿದೆ. ಅಂತೂ ಫ್ರಾನ್ಸಿನ ನೆಲದ ಮೇಲೆ ನಾನೊಬ್ಬ ಸ್ವತಂತ್ರ ಮನುಷ್ಯನಾಗಿ ನಿಂತೆ ಎಂದು ಖುಶಿಪಟ್ಟೆ.

ಆದರೆ ವಿಧಿ ಕ್ರೂರವಾಗಿತ್ತು, ನಿಷ್ಕಾರುಣಿಯಾಗಿತ್ತು. ಬ್ರಿಟಿಷ್ ಕಾವಲುಭಟರು ನನ್ನನ್ನು ಎಳೆದು ಮತ್ತೆ ಹಡಗಿಗೆ ತಂದರು. ಅದು ನಿಸ್ಸಂಶಯವಾಗಿ ಅಂತಾರಾಷ್ಟ್ರೀಯ ಕಾನೂನಿನ ಉಲ್ಲಂಘನೆಯಾಗಿತ್ತು. ಯಾಕೆಂದರೆ ನಾನು ವಿದೇಶಿ ನೆಲದ ಮೇಲೆ ಬಂಧನಕ್ಕೊಳಗಾಗಿದ್ದೆ. ನನ್ನನ್ನು ಪಾರುಮಾಡಲು ಮಾರ್ಸೇಲ್ಸ್‌ಗೆ ಕಾರಿನಲ್ಲಿ ಬಂದ ಮೇಡಂ ಕಾಮಾ ಮತ್ತು ಅಯ್ಯರ್ ಇಬ್ಬರೂ ಕೊಂಚ ತಡವಾಗಿ ತಲುಪಿದ್ದರು. ನನ್ನನ್ನು ಈ ಪರಾರಿಯ ನಂತರ ಮತ್ತೆ ಬಂಧಿಸಲಾಯಿತು ಎಂದು ಕೇಳಿ ಅವರಿಬ್ಬರು ತಮ್ಮನ್ನು ತಾವೇ ಶಪಿಸಿಕೊಂಡಿರಬೇಕು.

ನನ್ನ ಮನಸ್ಸಿನಲ್ಲಿ ಈಗಲೂ ಕುಳಿತಿರುವ ಇನ್ನೊಂದು ಘಟನೆ ನನ್ನನ್ನು ಎರಡು ಕಾರಣಗಳಿಗಾಗಿ ಆಜೀವಪರ್ಯಂತ ಫಾಸಿ ಶಿಕ್ಷೆಗೆ ಒಳಪಡಿಸಿದ್ದು. ಅಂದರೆ ನಾನು ಅಂದಮಾನಿನ ಸೆಲ್ಯುಲಾರ್ ಸೆರೆಮನೆಯಲ್ಲಿ ಐವತ್ತು ವರ್ಷಗಳ ಕಾಲ ಇರಬೇಕಾಗಿತ್ತು. ನಾನು ನನ್ನ ಶಿಕ್ಷೆಯ ಅವಧಿಯನ್ನು ಸಂಪೂರ್ಣ ಕಳೆದಿದ್ದರೆ 1960ರ ಡಿಸೆಂಬರ್ 24ರಂದು ನನ್ನ ಬಿಡುಗಡೆಯಾಗಬೇಕಾಗಿತ್ತು. ಆದರೆ 14 ವರ್ಷಗಳ ಅಂದಮಾನ್ ಸೆರೆವಾಸದ ನಂತರ ನನ್ನನ್ನು ಹಿಂದುಸ್ಥಾನಕ್ಕೆ ಮರಳಿ ಕಳಿಸಲಾಯಿತು; 13 ವರ್ಷಗಳ ಕಾಲ ರತ್ನಗಿರಿಯಲ್ಲಿ ನಾನು ಗೃಹಬಂಧನಕ್ಕೆ ಒಳಗಾಗಿದ್ದೆ. ಒಟ್ಟಾರೆ ನಾನು ಬ್ರಿಟಿಷರ ಸೆರೆಯಾಳಾಗಿ ಸುಮಾರು 27 ವರ್ಷಗಳನ್ನು ಕಳೆದೆ.

ನಾನು ಸದಾ ನೆನಪಿಸಿಕೊಳ್ಳುವ ಮೂರನೆಯ ಘಟನೆ ಎಂದರೆ, ಎಂಟು ವರ್ಷಗಳ ನಂತರ ಮೊದಲ ಸಲ ಸೆಲ್ಯುಲಾರ್ ಸೆರೆಮನೆಯಲ್ಲಿ ನನ್ನ ದೇಶಭಕ್ತ ಯುವ ತಮ್ಮ ಮತ್ತು ನನ್ನ ಮಹಾನ್ ಪತ್ನಿಯನ್ನು ಭೇಟಿಯಾದದ್ದು. ಅವರಿಗೆ ಅಂದಮಾನ್ ಸೆರೆಮನೆಯಲ್ಲಿ ನನ್ನನ್ನು ನೋಡಲು ಸರ್ಕಾರವು ಅನುಮತಿ ನೀಡಿತ್ತು. ಆಗ ನಾನು ಅನುಭವಿಸಿದ್ದನ್ನು ಹೇಗೆ ತಣ್ಣಗಿನ ಶಬ್ದಗಳಲ್ಲಿ ವಿವರಿಸಲಿ? ಅಂತೂ ನಾನು ನನ್ನ ಪತ್ನಿಯನ್ನು ಕಂಡು ಮಾತನಾಡಿಸಿದ್ದಕ್ಕೆ ತುಂಬಾ ಖುಶಿಗೊಂಡೆ. ಅವಳ ಜತೆ ನಾನು ಕ್ರಾಂತಿಕಾರಿಯ ಜೀವನದ ಯಾತನೆ ಮತ್ತು ವೇದನೆಗಳನ್ನು ಹಂಚಿಕೊಂಡೆ.

***ನೀವು ನಿಮ್ಮ ಕಾಲದಲ್ಲಿ ಮಹಾನ್ ಕ್ರಾಂತಿಕಾರಿಯಾಗಿದ್ದಿರಿ, ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಮಹಾನ್ ಯೋಧರಾಗಿದ್ದಿರಿ. ದಯವಿಟ್ಟು ನೀವು ಹೇಗೆ ಮತ್ತು ಏಕೆ ಕ್ರಾಂತಿಕಾರಿಯಾದಿರಿ ಎಂದು ತಿಳಿಸಿ.....***

ಅದೆಲ್ಲಾ ನಡೆದದ್ದು ಹೀಗೆ. 1897ರ ಸುಮಾರಿನಲ್ಲಿ ದೇಶವು ಬರಗಾಲ ಮತ್ತು ಪ್ಲೇಗಿನಿಂದ ಪೀಡಿತವಾಗಿತ್ತು. ಜನ ಈ ಕಂಟಕದ ಸ್ಥಿತಿಯಲ್ಲಿ ತುಂಬಾ ಯಾತನೆ ಪಟ್ಟರು. ಜನರ ಆತ್ಮ ವೇದನೆಯಿಂದ ನರಳುತ್ತಿತ್ತು. ಜನರ ಈ ನೋವನ್ನು ಪರಿಹರಿಸಲು, ದೂರ ಮಾಡಲು ಸರ್ಕಾರವು ಮಾಡಿದ್ದು ನಗಣ್ಯ. ರೋಗದಿಂದ ಮತ್ತು ಹಸಿವಿನಿಂದ ನೂರಾರು ಜನ ಸತ್ತರು. ಸೈನಿಕರು ತೋರಿದ ಅತಿರೇಕದ ವರ್ತನೆ, ಅಸಮರ್ಥ, ದಬ್ಬಾಳಿಕೆಯ ದೊರೆ, ಪ್ಲೇಗ್ ಕಮೀಷನರ್ ರ್‍ಯಾಂಡ್‌ನ ಕೃತ್ಯಗಳು ಪುಣೆಯ ಚಾಫೇಕರ್ ಸೋದರರಿಗೆ ಆಕ್ರೋಶ ತಂದವು. ಅವರು ರ್‍ಯಾಂಡ್‌ನನ್ನು ಗುಂಡಿಕ್ಕಿ ಸಾಯಿಸಿದರು ; ಇನ್ನೊಬ್ಬ ಇಂಗ್ಲಿಷ್ ಪ್ರಜೆಯೂ ಸತ್ತ. ಚಾಫೇಕರ್ ಸೋದರರನ್ನು ವಿಚಾರಣೆಗೊಳಪಡಿಸಿ ಗಲ್ಲಿಗೇರಿಸಲಾಯಿತು. ಅವರನ್ನು ನೇಣಿಗೆ ಗುರಿಮಾಡಿದ ಸುದ್ದಿ ನನ್ನನ್ನು ತೀವ್ರವಾಗಿ ಕಲಕಿತು. ನನ್ನ ಶೋಧಕ ಮನಸ್ಸು ಅಶಾಂತವಾಯಿತು. ಅಂದಿನ ನನ್ನ ಅತ್ಯಂತ ಯುವ ವಯಸ್ಸಿನಲ್ಲೂ ಚಾಫೇಕರ ಸೋದರರ ಕೃತ್ಯಗಳ ಮಹತ್ವ ಅರಿವಾಯಿತು. ನಾನು ನನ್ನ ದೇಶದ ಸ್ವಾತಂತ್ರ್ಯಕ್ಕಾಗಿ ಮತ್ತು ವಿಮೋಚನೆಗಾಗಿ ಹೋರಾಡುವ ಮತ್ತು ಅಗತ್ಯಬಿದ್ದರೆ ಸಾಯುವ ಒಂದು ಪ್ರತಿಜ್ಞೆಯನ್ನು ಕೈಗೊಳ್ಳಲು ನಿರ್ಧರಿಸಿದೆ. ನಾನು ನಮ್ಮ ಕುಲದೇವತೆ –ಶಸ್ತ್ರಧಾರಿ ದುರ್ಗೆ –ಯ ಪುತ್ಥಳಿಯ ಬಳಿ ಒಬ್ಬನೇ ಕುಳಿತೆ. ದೈವಿಕ ಸ್ಫೂರ್ತಿ ಮತ್ತು ಶಕ್ತಿಯ ಮೂಲವಾದ ಆ ಮಹಾಮಾತೆಯನ್ನು ಅರ್ಚಿಸಿ ಆಶೀರ್ವಾದ ಬೇಡಿದೆ. ದೇಶಕ್ಕಾಗಿ ನನ್ನ ಕರ್ತವ್ಯವನ್ನು ಮಾಡುವ ಮತ್ತು ಹುತಾತ್ಮ ಚಾಫೇಕರ ಸೋದರರ ಮಹಾನ್ ಕಾರ್ಯವನ್ನು ಪೂರ್ಣಗೊಳಿಸುವ ಪ್ರತಿಜ್ಞೆಯನ್ನು ದುರ್ಗೆಯೆದುರು ಕೈಗೊಂಡೆ. ಬ್ರಿಟಿಷರನ್ನು ನನ್ನ ಪ್ರೀತಿಯ ಮಾತೃಭೂಮಿಯಿಂದ ಹೊರಗೆ ತಳ್ಳುವ ಮತ್ತು ನನ್ನ ದೇಶವನ್ನು ಸ್ವತಂತ್ರ ಮತ್ತು ಹಿಂದಿನ 'ಹಿಂದ್' ದೇಶವಾಗಿದ್ದಾಗ ಇದ್ದ ವೈಭವವನ್ನು ಮರಳಿ ತರುವ ಪ್ರತಿಜ್ಞೆಯನ್ನೂ

ಕೈಗೊಂಡೆ. ನಾನು ಕ್ರಾಂತಿಕಾರಿಯಾದದ್ದು ಹೀಗೆ ಮತ್ತು ಈ ಕಾರಣಗಳಿಗೆ.

***ನೀವು ಅಂದಮಾನಿನ ದ್ವೀಪದಲ್ಲಿ ರಾಜಕೀಯ ಕೈದಿಯಾಗಿದ್ದಾಗ ಭಾರತೀಯ ಜೀವನದ ಮತ್ತು ಭಾರತದ ಒಳಗಿನ ಪ್ರಮುಖ ಘಟನೆಗಳಿಂದ ಸಂಪರ್ಕ ಕಡಿದು ಕೊಂಡಿದ್ದಿರಿ. ಹೀಗಿದ್ದಾಗ ನಿಮ್ಮ ಮನಸ್ಸಿನಲ್ಲಿ ಮೂಡುತ್ತಿದ್ದ ಮುಖ್ಯ ಯೋಚನೆಗಳು ಏನಾಗಿದ್ದವು ?***

ನಾನು ನನ್ನ ತಾಯ್ನಾಡಿನಿಂದ ತುಂಬಾ ದೂರ ಇದ್ದರೂ ನನ್ನ ಜನರ ಜೀವನ ಮತ್ತು ಚಿಂತನೆಗಳಿಂದ ಸಂಪರ್ಕ ಕಡಿದುಕೊಂಡಿರಲಿಲ್ಲ. ನಮಗೆ ಸುದ್ದಿಗಳು ಅನೇಕ ಮೂಲಗಳಿಂದ ಹರಿದು ಬಂದು ತಲುಪುತ್ತಿದ್ದವು. ಒಮ್ಮೆ ನನಗೆ ಪಂಜಾಬಿನಲ್ಲಿದ್ದ ಕೈದಿಯೊಬ್ಬನಿಂದ ಪತ್ರ ಬಂತು. ಆತ ಒಂದು ಟಿಕೆಟಿನ ಹಿಂಬದಿ ಆ ಪತ್ರವನ್ನು ಬರೆದು ಇನ್ನೊಬ್ಬ ಕೈದಿಯ ಮೂಲಕ ನನಗೆ ಕೊಟ್ಟು ಕಳಿಸಿದ್ದ. ಆ ಕೈದಿ ಅದನ್ನು ಸುರಕ್ಷಿತವಾಗಿ ನನಗೆ ತಲುಪಿಸಿದ. ನಾನು ಬ್ರಿಟಿಷ್ ಅಧಿಕಾರಿಗಳ ಶೌಚಾಲಯದಲ್ಲಿ ಇರುತ್ತಿದ್ದ ಟಿಶ್ಯೂ ಕಾಗದಗಳನ್ನು ಮತ್ತು ಹಳೆಯ ವೃತ್ತಪತ್ರಿಕೆಗಳನ್ನು ಸಂಗ್ರಹಿಸುತ್ತಿದ್ದೆ. ಇವುಗಳಿಂದ ನಾನು ಹೊರಜಗತ್ತಿನಲ್ಲಿ ಏನಾಗುತ್ತಿದೆ ಎಂಬುದನ್ನು ತಿಳಿದುಕೊಂಡೆ. ಹೀಗೇ ವೃತ್ತಪತ್ರಿಕೆಗಳ ತುಂಡುಗಳನ್ನು ಸೆರೆಮನೆಯೊಳಗೆ ತಂದ ತಪ್ಪಿಗಾಗಿ ಅನೇಕ ಕೈದಿಗಳು ಸೆರೆಮನೆಯ ಹೊರಗಡೆ ಕೆಲಸ ಮಾಡುವ ಸವಲತ್ತನ್ನು ಕಳೆದುಕೊಂಡರು. ಆದರೆ ಇಂಥ ಸೆರೆಮನೆಯ ವಾರ್ಡನ್ನುಗಳು ಮತ್ತು ಕಾವಲುಭಟರ ಕಣ್ತಪ್ಪಿಸುವ ಕಲೆಯನ್ನು ಕರಗತ ಮಾಡಿಕೊಂಡಿದ್ದ ಧೀರ ಸಂದೇಶವಾಹಕರಿಂದಾಗಿ ನಮ್ಮ ಸುದ್ದಿಸಂಸ್ಥೆ ನಿರಂತರವಾಗಿ ಕೆಲಸ ಮಾಡಿತ್ತು. ಅದಲ್ಲದೆ, ಈ ಸುದ್ದಿಗಳು, ಸಂದೇಶಗಳು ಸರಪಳಿಗಳ ವಿಲಕ್ಷಣವಾದ ಶಬ್ದಗಳ ಮೂಲಕ ರಾಜಕೀಯ ಕೈದಿಗಳಿಗೆ ರವಾನೆಯಾಗುತ್ತಿದ್ದವು. ಆದ್ದರಿಂದ ಸಹಜವಾಗಿಯೇ ಅಂದಮಾನಿನಲ್ಲಿದ್ದ ನನ್ನ ಯೋಚನೆಗಳು ಭಾರತದಲ್ಲಿ ಮತ್ತು ವಿದೇಶೀ ನೆಲದಲ್ಲಿದ್ದ ಭಾರತೀಯರಿಂದ ನಡೆಯುತ್ತಿದ್ದ ಕ್ರಾಂತಿಕಾರಿ ಹೋರಾಟದತ್ತಲೇ ಕೇಂದ್ರೀಕೃತವಾಗಿತ್ತು.

ಸೆಲ್ಯುಲಾರ್ ಸೆರೆಮನೆಯಲ್ಲಿ ನನಗೆ ತುಂಬ ಕಠಿಣವಾದ ಕೆಲಸ ಕೊಡಲಾಗಿತ್ತು. ನಾನು ಎತ್ತಿನಂತೆ ಎಣ್ಣೆ ಗಾಣದಲ್ಲಿ ನೊಗ ಹೇರಿಕೊಂಡು ತಿರುಗಬೇಕಾಗಿತ್ತು. ಆದರೆ ಬಕೆಟ್‌ನಲ್ಲಿ ಬಿದ್ದ ಎಣ್ಣೆಯ ಪ್ರತಿಯೊಂದು ಹನಿಯೂ ಎಲ್ಲಾ ಕ್ರಾಂತಿಕಾರಿಗಳ ಹೃದಯಗಳನ್ನು ಬೆಳಗಿಸುವುದು ಎಂದು ನನಗೆ ಗೊತ್ತಿತ್ತು. ಈ ಯೋಚನೆಗಳೇ ನಾನು ಸೆಲ್ಯುಲಾರ್ ಸೆರೆಮನೆಯ ಗಾಢಾಂಧಕಾರದ, ಕಠಿಣ ಶ್ರಮದ, ಯಾತನಾಮಯ ಏಕಾಂತ ಸೆರೆವಾಸವನ್ನು ಕಳೆಯಲು ಸಹಕರಿಸಿದವು, ಸ್ಫೂರ್ತಿ ನೀಡಿದವು.

ನೀವು ಸೆರೆಮನೆಯಲ್ಲಿ ನನ್ನ ಮನಸ್ಸು ಹೇಗೆ ಕೆಲಸ ಮಾಡುತ್ತಿತ್ತು ಎಂದು ಕೇಳಿದಿರಿ. ನಿಜ, ಭೂತದ ದ್ವೀಪದಲ್ಲಿ, ಒಂಟಿ ಕೊಠಡಿಯಲ್ಲಿ ಹುಚ್ಚು ಹಿಡಿಸುವ, ಮರಣಾಂತಿಕ ಏಕಾಂತ ವಾಸವನ್ನು ಎದುರಿಸಲು ಭಾರೀ ಆತ್ಮಸ್ಥೈರ್ಯ, ಕಟುವಾದ ನಿರ್ಧಾರ ಮತ್ತು ಉದ್ದೇಶದ ಬಗ್ಗೆ ಭಾವನಾತ್ಮಕ ಆರಾಧಕತೆ ಬೇಕಾಗುತ್ತದೆ. ನನಗೆ ತೆಂಗಿನ ನಾರು ಬಿಡಿಸಲು ಮರದ ಹಿಡಿಯೊಂದನ್ನು ಕೊಟ್ಟಿದ್ದರು. ಆಗ ನನ್ನ ಕೈಗಳು ಬಾತುಕೊಂಡು ರಕ್ತ ಹರಿಯಿತು. ಆದರೂ ನಾನು ಉಳಿದೆ. ನಾನು ಎಣ್ಣೆಗಾಣದಲ್ಲಿ ನೊಗ ಹಿಡಿದು ತಿರುಗಿದಾಗ - ಅದು ನನಗೆ ನೀಡಿದ ಅತ್ಯಂತ ಘೋರ, ಯಾತನಾಮಯ ಮತ್ತು ಮನಸ್ಥಿತಿಯನ್ನೇ ಕುಗ್ಗಿಸುವ ಕೆಲಸವಾಗಿತ್ತು - ನಾನು ದೂರಲಿಲ್ಲ, ಮೌನವಾಗಿ ಎಲ್ಲವನ್ನೂ ಅನುಭವಿಸಿದೆ. ಒಮ್ಮೆಯಂತೂ ಆತ್ಮಹತ್ಯೆ ಮಾಡಿಕೊಳ್ಳುವ ಯೋಚನೆ ಬಂತು. ಆದರೆ, ವಾಸ್ತವಿಕತೆಯೇ ಗೆದ್ದಿತು ಯಾಕೆಂದರೆ ನಾನು ಸ್ವಾತಂತ್ರ್ಯ

ಹೋರಾಟದಲ್ಲಿ ನಾಯಕನಂತೆ ಸಾಯಬೇಕೆಂದು ಬಯಸಿದ್ದನೇ ಹೊರತು ಆತ್ಮಹತ್ಯೆ ಮಾಡಿಕೊಂಡಲ್ಲ. ಆದ್ದರಿಂದ ನಿಮಗೇ ಗೊತ್ತಾಯಿತಲ್ಲ, ನನ್ನ ಮನಸ್ಸು ಹೇಗೆ - ಒಳಗೆ ಮತ್ತು ಹೊರಗೆ - ಈ ಗಂಭೀರ ಸಮರದಲ್ಲಿ ಕೆಲಸ ಮಾಡಿತ್ತೆಂದು ?

*ನೀವು ಭಾರತೀಯ ಕ್ರಾಂತಿಕಾರಿಗಳನ್ನು ರಷ್ಯಾ ಮತ್ತು ಚೀನಾದ ಕ್ರಾಂತಿಕಾರಿಗಳ ಜೊತೆ ಹೇಗೆ ಹೋಲಿಸುತ್ತೀರಿ ?*

ಭಾರತೀಯ ಕ್ರಾಂತಿಕಾರಿಗಳು ರಷ್ಯಾ ಅಥವಾ ಚೀನಾದ ಕ್ರಾಂತಿಕಾರಿಗಳಿಗಿಂತ ಕಠಿಣವಾದ ಸಮರ ವನ್ನು ಎದುರಿಸಬೇಕಾಯಿತು. ರಷ್ಯಾದಲ್ಲಿ ಅವರು ರಷಿಯನ್ನರೇ ಆದ ಝಾರ್‌ನ ಆಡಳಿತದ ವಿರುದ್ಧ ಮತ್ತು ಚೀನಾದಲ್ಲಿ ಅವರು ಚೀನೀಯರೇ ಆದ ಮಾಂಚು ಮನೆತನದ ಆಳ್ವಿಕೆಯ ವಿರುದ್ಧ ದಂಗೆ ಯೆದ್ದರು. ಆದರೆ ಭಾರತದಲ್ಲಿ ನಾವು ಹಿಂದುಸ್ಥಾನದ ಹಿಂದೂಗಳ ಜೀವನ ವಿಧಾನ, ಸಂಸ್ಕೃತಿ, ಧರ್ಮ, ತತ್ವಶಾಸ್ತ್ರ - ಯಾವುದರಲ್ಲೂ ಸಾಮ್ಯವಿರದ ವಿದೇಶೀ ಆಡಳಿತಗಾರರ ವಿರುದ್ಧ ಹೋರಾಡಬೇಕಾಗಿತ್ತು. ಒಂದು ರೀತಿಯಲ್ಲಿ ನಮ್ಮ ಕ್ರಾಂತಿಕಾರಿಗಳು ರಷ್ಯಾ ಮತ್ತು ಚೀನಾದ ಕ್ರಾಂತಾಕಾರಿಗಳಿಗಿಂತ ಉತ್ತಮರು.

*1857ರ ಬಂಡಾಯವು ಬ್ರಿಟಿಷರ ವಿರುದ್ಧ ಸಂಘಟಿತವಾದ ಭಾರತದ ಪ್ರಪ್ರಥಮ ಪರಿಪೂರ್ಣ ಸ್ವಾತಂತ್ರ್ಯ ಹೋರಾಟ ಎಂದು ನೀವು ತಿಳಿಯುತ್ತೀರಾ ? ಕೆಲವು ಇತಿಹಾಸಕಾರರು 1857ರ ಕ್ರಾಂತಿಯು ಅರ್ಧ ಡಜನ್ ಭಿನ್ನಮತೀಯ ನಾಯಕ ರಿಂದಷ್ಟೇ ಸಂಘಟಿತವಾಗಿತ್ತು, ಅವರೆಲ್ಲರೂ ತಮ್ಮ ಹಕ್ಕುಗಳನ್ನು, ಸ್ಥಾನಗಳನ್ನು ರಕ್ಷಿಸಿಕೊಳ್ಳಲೆಂದೇ ಒಂದಾದರು - ಎಂದು ಹೇಳುತ್ತಾರಲ್ಲ, ನಿಮ್ಮ ಅಭಿಪ್ರಾಯ ವೇನು ?*

ನಾನು 1857ರ ಬಗ್ಗೆ ಒಂದು ಪುಸ್ತಕವನ್ನು ಬರೆದಿದ್ದೇನೆ. ಈ ವಿಷಯದಲ್ಲಿ ನಾನು ತುಂಬ ಸಂಶೋಧನೆ ಮಾಡಿದ್ದೇನೆ. ಮೂಲಪತ್ರಗಳನ್ನು, ಹಲವಾರು ದಾಖಲೆ ಪತ್ರಗಳನ್ನು, ಇಂಡಿಯಾ ಹೌಸ್ ಮತ್ತು ಬ್ರಿಟಿಷ್ ಮ್ಯೂಸಿಯಂನಲ್ಲಿರುವ ನೂರಾರು ಪುಸ್ತಕಗಳನ್ನು ಓದಿದ್ದೇನೆ. 1857ರ ಸ್ಮರಣಾರ್ಹ ಘಟನೆಯು ಬರಿ ಒಂದು ದಂಗೆಯಲ್ಲ ಎಂದು ನಾನು ಸ್ಪಷ್ಟಡಿಸುತ್ತೇನೆ. ವಾಸ್ತವವಾಗಿ ಅದು ಭಾರತದ ಪ್ರಥಮ ಸ್ವಾತಂತ್ರ್ಯ ಹೋರಾಟವಾಗಿದೆ. ಈ ಮೂಲ ಅಂಶವನ್ನು ಅಲ್ಲಗಳೆಯುವ ಇತಿಹಾಸಕಾರರು ತಮ್ಮನ್ನು ತಾವೇ ಮೂರ್ಖರನ್ನಾಗಿಸಿಕೊಳ್ಳುತ್ತಿದ್ದಾರೆ ಮತ್ತು ಇತರರನ್ನೂ ಮೂರ್ಖರನ್ನಾಗಿಸುತ್ತಿದ್ದಾರೆ. ಅವರೆಲ್ಲ ಇನ್ನೂ ಇತಿಹಾಸದಿಂದ ನೈಜ ಇತಿಹಾಸವನ್ನು ಕಲಿಯಬೇಕಾಗಿದೆ.

*ನಮ್ಮ ದೇಶದ ಸ್ವಾತಂತ್ರ್ಯಕ್ಕೆ ಕಾರಣವಾದ ಅಂಶಗಳಾವುವು ?*

ಭಾರತದ ಸ್ವಾತಂತ್ರ್ಯಕ್ಕೆ ಅನೇಕ ಅಂಶಗಳು ಕಾರಣವಾಗಿವೆ. ಬರೀ ಕಾಂಗ್ರೆಸ್ ಒಂದೇ ಹಿಂದುಸ್ಥಾನಕ್ಕೆ ಸ್ವಾತಂತ್ರ್ಯವನ್ನು ಗೆದ್ದುಕೊಟ್ಟಿತು ಎಂದು ಊಹಿಸುವುದು ತಪ್ಪಾಗುತ್ತದೆ. ಹಾಗೆಯೇ ಅಸಹಕಾರ ಚಳವಳಿ, ಚರಖಾ ಮತ್ತು 1942ರ 'ಕ್ವಿಟ್ ಇಂಡಿಯಾ' ಚಳವಳಿಗಳು ಮಾತ್ರ ನಮ್ಮ ದೇಶದಲ್ಲಿ ಬ್ರಿಟಿಷರು ಅಧಿಕಾರ ಹಿಂತೆಗೆದುಕೊಳ್ಳಲು ಕಾರಣವಾಯಿತು ಎಂದು ಯೋಚಿಸುವುದೂ ಅಸಂಬದ್ಧ. ಸ್ವಾತಂತ್ರ್ಯದ ವಿಷಯ ವನ್ನು ಅಂತಿಮವಾಗಿ ನಿರ್ಧರಿಸಿದ ಇತರೆ ಅನೇಕ ಚಲನಶೀಲ ಮತ್ತು ಪ್ರಮುಖ ಒತ್ತಡಗಳು ಇವೆ. ಮೊದಲನೆಯದಾಗಿ, ಭಾರತೀಯ ರಾಜಕಾರಣವನ್ನು ಸೇನೆಯ ಬಳಿ ಒಯ್ಯಲಾಯಿತು ; ಬ್ರಿಟಿಷರು ಹಿಂದುಸ್ಥಾನವನ್ನು ಹಿಡಿದಿಟ್ಟುಕೊಳ್ಳಲು ಸಂಪೂರ್ಣವಾಗಿ ಸೇನೆಯನ್ನೇ ಅವಲಂಬಿಸಿದರು. ಎರಡನೆಯ

**''ನಿರಪೇಕ್ಷ ಅಹಿಂಸೆಯು ಬರೀ ಒಂದು ಪಾಪವಷ್ಟೇ ಅಲ್ಲ, ಅನೈತಿಕ ಕೂಡ''**

ದಾಗಿ, ರಾಯಲ್ ಇಂಡಿಯನ್ ನೇವಿಯಲ್ಲಿ ದಂಗೆಯೆದ್ದಿತು, ವಾಯುಪಡೆಯಿಂದ ಬೆದರಿಕೆ ಬಂತು. ಮೂರನೆಯದಾಗಿ, ನೇತಾಜಿ ಸುಭಾಷ್ ಭೋಸ್ ಮತ್ತು ಐಎನ್ಎಯ ಧೀರೋದಾತ್ತ ಪಾತ್ರ, ನಾಲ್ಕನೆಯ ದಾಗಿ, ಬ್ರಿಟಿಷರನ್ನು ನಡುಗಿಸಿದ 1857ರ ಸ್ವಾತಂತ್ರ್ಯ ಹೋರಾಟ, ಐದನೆಯದಾಗಿ ಕಾಂಗ್ರೆಸ್ ಮತ್ತಿತರ ಗುಂಪುಗಳು, ಪಕ್ಷಗಳಲ್ಲಿದ್ದ ಸಾವಿರಾರು ಕ್ರಾಂತಿಕಾರಿಗಳು ಹಾಗೂ ದೇಶಭಕ್ತರ ಬಲಿದಾನಗಳು. ಆದ್ದರಿಂದ ಸ್ವಾತಂತ್ರ್ಯವು ಹಿಂದುಸ್ಥಾನದ ಅಸಂಖ್ಯ ಪುರುಷರು-ಸ್ತ್ರೀಯರ ರಕ್ತ, ಬೆವರು, ಕಣ್ಣೀರಿನ ಜೊತೆಗೆ ಬಂದಿತು.

***ಯಾವುದೇ ಸಂದರ್ಭದಲ್ಲಿ ಗಾಂಧೀಜಿ ಮತ್ತು ಇತರೆ ಕಾಂಗ್ರೆಸ್ ನಾಯಕರು ನಿಮ್ಮನ್ನು ಕಾಂಗ್ರೆಸ್ ಸೇರಲು ಮನವೊಲಿಸಿದ್ದರೆ? ಹಾಗೆ ಮಾಡಿದ್ದರೆ, ನೀವು ಏಕೆ ಕಾಂಗ್ರೆಸ್ ಪಕ್ಷವನ್ನು ಸೇರಲಿಲ್ಲ?***

ನಾನು ಎಂದೂ ಗಾಂಧೀಜಿಯವರ ಅಹಿಂಸೆಯ ನೀತಿಯಲ್ಲಿ ನಂಬಿಕೆ ಇಟ್ಟಿರಲಿಲ್ಲ. ನಿರಪೇಕ್ಷ ಅಹಿಂಸೆಯು ಬರೀ ಒಂದು ಪಾಪವಷ್ಟೇ ಅಲ್ಲ, ಅನೈತಿಕ ಕೂಡ ಅಹಿಂಸೆಯ ಈ ನೀತಿಯು ಕ್ರಾಂತಿಕಾರಿ ಭಾವನೆಗಳನ್ನು ಹತ್ತಿಕ್ಕಿತು, ಹಿಂದುಗಳ ಅಂಗಾಂಗಗಳನ್ನು, ಹೃದಯಗಳನ್ನು ಮೆದುಮಾಡಿತು, ಶತ್ರುಗಳ ಮೂಳೆಗಳನ್ನು ಗಟ್ಟಿ ಮಾಡಿತು. ಕುರಿಗಳೇನೋ ಸಸ್ಯಾಹಾರಿ ಬದುಕನ್ನು ಸಾಗಿಸಲು ನಿರ್ಧಾರ ಮಾಡಿದವು, ಆದರೆ ತೋಳಗಳು ಮಾತ್ರ ಈ ಪುಣ್ಯದ ನಿರ್ಣಯದ ಬಗ್ಗೆ ಕಿಂಚಿತ್ತೂ ಕಾಳಜಿ ಹೊಂದಿರಲಿಲ್ಲ. ಕ್ರಾಂತಿ, ರಕ್ತಪಾತ ಮತ್ತು ಪ್ರತೀಕಾರ - ಇವು ಅನ್ಯಾಯವನ್ನು ಮೂಲೋತ್ಪಾಟನೆ ಮಾಡಲು ಪ್ರಕೃತಿಯು ರೂಪಿಸಿದ ಸಾಧನಗಳು. ಕಾಂಗ್ರೆಸ್ಸಿನ ವಿಧಾನ, ನೀತಿಗಳು ಮತ್ತು ಕಾರ್ಯಕ್ರಮದ ಬಗ್ಗೆ ನನಗೆ ಮೂಲಭೂತ ಭಿನ್ನಾಭಿಪ್ರಾಯ ಇದ್ದುದರಿಂದ ನಾನು ಕಾಂಗ್ರೆಸ್ ಸೇರಲಾರೆ ಎಂದು ಭಾವಿಸಿದೆ.

ಕಾಂಗ್ರೆಸ್ ಭಾರತದ ಸಂಪೂರ್ಣ ಏಕತೆ ಮತ್ತು ಸಮಗ್ರತೆಗೆ ಖಂಡಿತವಾಗಿಯೂ ಬದ್ಧವಾಗಿ ಇರುತ್ತದೆ ಎಂದು ಖಾತ್ರಿ ನೀಡಿದ್ದರೆ ಮತ್ತು ಕಾಂಗ್ರೆಸ್ ರಾಷ್ಟ್ರವಿರೋಧಿ ಮುಸ್ಲಿಂ ಲೀಗ್ ಜೊತೆ ಯಾವುದೇ ಒಪ್ಪಂದ ಮಾಡಿಕೊಂಡಿರದಿದ್ದರೆ ಹಿಂದು ಮಹಾಸಭಾವು 1942ರ ಚಳವಳಿಯಲ್ಲಿ ಕಾಂಗ್ರೆಸ್ಸಿನ ಜೊತೆ ಸೇರುತ್ತಿತ್ತೇನೋ. ಈಗ ಜನತೆಗೆ ಸ್ವತಂತ್ರ, ಮುಕ್ತ, ಅಖಂಡ ಹಿಂದುಸ್ಥಾನದ ನಮ್ಮ ಕನಸನ್ನು ಕಾಂಗ್ರೆಸ್ ನಾಯಕತ್ವವು ಹೇಗೆ ವ್ಯವಸ್ಥಿತವಾಗಿ ಬುಡಮೇಲು ಮಾಡಿತು ಎಂಬುದು ಗೊತ್ತು.

***ನೀವು ಕಾಂಗ್ರೆಸ್ಸನ್ನು ಹಲವು ವರ್ಷಗಳ ಹಿಂದೆಯೇ ಸೇರಿಬಿಟ್ಟಿದ್ದರೆ ನೀವು ದೇಶಕ್ಕಾಗಿ ನಿಮ್ಮ ಸಿದ್ಧಾಂತಕ್ಕಾಗಿ ಧನಾತ್ಮಕವಾಗಿ ಸೇವೆ ನೀಡಿದ್ದೇನೆ ಎಂದು ಭಾವಿಸುತ್ತಿರಲಿಲ್ಲವೇ?***

ನಾನು ಹಾಗೆ ಯೋಚಿಸುವುದಿಲ್ಲ. ಯಾವುದೇ ಆಧಾರವಿಲ್ಲದ ವಿಷಯದ ಬಗ್ಗೆ ಊಹೆ ಮಾಡುವುದು ತಪ್ಪು ಹೀಗಿದ್ದರೂ ಏನೋ ಪವಾಡವಾಗಿ ನಾನು ಒಮ್ಮೆ ಕಾಂಗ್ರೆಸ್ ಸೇರುವಂತೆ ಆಗಿಬಿಟ್ಟಿದ್ದರೆ ನಾನು ನೀರಿನಿಂದ ಹೊರಬಿದ್ದ ಮೀನಿನಂತಾಗುತ್ತಿದೆ - ಚರಖಾದಲ್ಲಿ ನೂಲುತ್ತಾ ಅಹಿಂಸೆಯ ಘೋಷಣೆಗಳನ್ನು

ಕೂಗುತ್ತಾ ಸ್ವಾತಂತ್ರ್ಯವನ್ನು ಪಡೆಯುವ ಉದ್ದೇಶ ಹೊತ್ತ ಕುರಿಗಳ ಮಂದೆಯಲ್ಲಿ ನಾನು ಸಂಪೂರ್ಣ ಅನ್ಯನಾಗುತ್ತಿದ್ದೆ. ನನ್ನನ್ನು ಕಾಂಗ್ರೆಸ್ಸಿನ ನೀತಿ ಮತ್ತು ಕಾರ್ಯಕ್ರಮಗಳನ್ನು ಪುನಾರೂಪಿಸಲು ಯತ್ನಿಸಿದ ಸುಭಾಷ್ ಬೋಸರಂತೆ ಕಾಂಗ್ರೆಸ್ಸಿನಿಂದ ಹೊರಗೆ ತಳ್ಳಲಾಗುತ್ತಿತ್ತು. ನಾನು ಕಾಂಗ್ರೆಸ್ಸಿಗೆ ಸೇವೆ ಸಲ್ಲಿಸಿದ್ದರೆ ನಾನು ಹಿಂದುತ್ವ ಮತ್ತು ಹಿಂದೂ ರಾಷ್ಟ್ರದ ಧ್ಯೇಯ ಹೊಂದಿದ್ದ ನನ್ನ ಆತ್ಮಸಾಕ್ಷಿಗೆ ದ್ರೋಹ ಬಗೆದಂತಾಗುತ್ತಿತ್ತು. ನಾನು ಹಿಂದುಸ್ಥಾನದ ವಿಭಜನೆಗೆ ಒಬ್ಬ ಹೊಣೆಗಾರನಾಗಲಿಲ್ಲ ಎಂಬ ಬಗ್ಗೆ ನನಗೆ ಹೆಮ್ಮೆ ಮತ್ತು ಖುಷಿ ಇದೆ ಈಗ ಇನ್ನೂ ಹುಟ್ಟದ ಮುಂದಿನ ಪೀಳಿಗೆಗಳು ಖಂಡಿತ ನಾನು ನನ್ನ ದೇಶಕ್ಕಾಗಿ ಮತ್ತು ನನ್ನ ಜನತೆಗಾಗಿ ಶ್ರದ್ಧೆಯಿಂದ ಮತ್ತು ನಂಬಿಕೆಯಿಂದ ಸೇವೆ ಸಲ್ಲಿಸಿದೆ ಎಂದು ಖಂಡಿತ ಹೇಳುತ್ತಾರೆ.

***ನಿಮ್ಮ ಕನಸಿನ ಭಾರತ ಯಾವುದು ?***

ನನ್ನ ಭಾರತವು ಪ್ರಜಾತಾಂತ್ರಿಕ ದೇಶವಾಗಿರುತ್ತದೆ ; ಅಲ್ಲಿ ವಿವಿಧ ಮತಗಳು, ಪಂಥಗಳು ಅಥವಾ ಜನಾಂಗಕ್ಕೆ ಸೇರಿದ ಜನರನ್ನು ಅತ್ಯಂತ ಸಮಾನತೆಯಿಂದ ಕಾಣಲಾಗುತ್ತದೆ. ಅಲ್ಲಿ ಯಾರೂ ಇನ್ನೊಬ್ಬರ ಮೇಲೆ ಸವಾರಿ ಮಾಡಲು ಅವಕಾಶ ಇರುವುದಿಲ್ಲ. ಯಾರಿಗೂ ಅವರ ನ್ಯಾಯ, ಮುಕ್ತ ನಾಗರಿಕತ್ವದ ಸಮಾನ ಹಕ್ಕುಗಳಿಗೆ ಊನ ಬರುವುದಿಲ್ಲ. ಪ್ರತಿಯೊಬ್ಬರೂ ಸಮಾನ ಕರ್ತವ್ಯವನ್ನು ನಿರ್ವಹಿಸುತ್ತಿರುವವರೆಗೆ ಈ ಸ್ವಾತಂತ್ಯ ಇರುತ್ತದೆ. ಸಿಂಧೂ ಕಣಿವೆಯಿಂದ ಸಮುದ್ರಗಳವರೆಗೆ ಇರುವ ಹಿಂದುಗಳ ಪುಣ್ಯಭೂಮಿ, ಮಾತೃಭೂಮಿಯಾದ ಹಿಂದುಸ್ಥಾನವು ಒಂದು ಅವಿಭಾಜ್ಯ ದೇಶವಾಗಿರುತ್ತದೆ. ಹಿಂದು ಗಳು ಜಾತಿರಹಿತ ಸಮಾಜವಾಗಿ, ಆಧುನಿಕ ಮತ್ತು ಸುದೃಢ ದೇಶವಾಗಿ ಇರುತ್ತಾರೆ. ವಿಜ್ಞಾನ ಮತ್ತು ತಂತ್ರಜ್ಞಾನಕ್ಕೆ ಪ್ರೋತ್ಸಾಹ ನೀಡಲಾಗುತ್ತದೆ. ಭೂ ಮಾಲೀಕತ್ವವನ್ನು ಸಂಪೂರ್ಣವಾಗಿ ಕೊನೆಗೊಳಿಸಲಾಗುವುದು. ಎಲ್ಲಾ ಭೂಮಿಯು ಅಂತಿಮವಾಗಿ ಸರ್ಕಾರಕ್ಕೆ ಸೇರುತ್ತದೆ. ಆಹಾರ, ಬಟ್ಟೆ, ವಸತಿ ಮತ್ತು ರಕ್ಷಣೆ - ಈ ವಿಷಯಗಳಲ್ಲಿ ಭಾರತವು ಸ್ವಾವಲಂಬಿಯಾಗುವುದು. ಸಮಾನ ಸಂಪತ್ತಿನ ಜಗತ್ತಿನಲ್ಲಿ ನನ್ನ ಕನಸಿನ ಭಾರತವು ಅಸೀಮ ನಂಬಿಕೆ ಇಡುತ್ತದೆ. ಯಾಕೆಂದರೆ, ನಮ್ಮೆಲ್ಲರಿಗೂ ಈ ಭೂಮಿ ಸಮಾನ ಮಾತೃಭೂಮಿಯಾಗಿದೆ. ಆದರೆ, ಈ ಸಮಾನ ಸಂಪತ್ತಿನ ಜಗತ್ತಿನ ಉಗಮದಲ್ಲಿ ಭಾರತವು ಎಂದೂ ಕೆಳಗೆ ಬೀಳುವುದಿಲ್ಲ. ಸುದೃಢ ಸೇನಾಬಲವನ್ನು ಹೊಂದಿದ ಅಖಂಡ ಹಿಂದುಸ್ಥಾನದ ವಿದೇಶಿ ನೀತಿಯು ಅಲಿಪ್ತತೆ ಮತ್ತು ಶಾಂತಿಯ ನೀತಿಯಾಗಿರುತ್ತದೆ. ಶಕ್ತಿಯುತ ಕೇಂದ್ರೀಕೃತ ಹಿಂದುಸ್ಥಾನವು ಜಗತ್ತಿನಲ್ಲಿ ಶಾಂತಿ ಮತ್ತು ಸಮೃದ್ಧತೆಯನ್ನು ತರಲು ಗಮನಾರ್ಹವಾಗಿ ಕೊಡುಗೆ ನೀಡುತ್ತದೆ.

***ನೀವು ಒಬ್ಬ ಮತಾಂಧ ಕೋಮುವಾದಿ ಆಗಿರುವುದರಿಂದಲೇ ಹಿಂದು ರಾಷ್ಟ್ರದ ಬಗ್ಗೆ ನಂಬಿಕೆ ಇಟ್ಟಿದ್ದೀರ ಎಂದು ಕೆಲವರು ಯೋಚಿಸುತ್ತಾರೆ. ಅದರ ಬಗ್ಗೆ ನೀವೇನು ಹೇಳುತ್ತೀರಿ ?***

ನಾವು ಈ ವಿಷಯದ ಬಗ್ಗೆ ನೇರವಾಗಿ ಮಾತನಾಡೋಣ. ಜನ ಹಿಂದು ರಾಷ್ಟ್ರದ ಬಗ್ಗೆ ಮತ್ತು ಕೋಮುವಾದದ ಬಗ್ಗೆ ತಪ್ಪು ಅಭಿಪ್ರಾಯಗಳನ್ನು ಹೊಂದಿದ್ದಾರೆ. ಸಿಂಧೂ ನದಿಯಿಂದ ಸಮುದ್ರದವರೆಗೆ ಇರುವ ಈ ಭರತವರ್ಷದ ನೆಲವನ್ನು ತನ್ನ ಮಾತೃಭೂಮಿ, ಪುಣ್ಯಭೂಮಿ ಎಂದು ಯಾರು ಭಾವಿಸುತ್ತಾರೋ ಅವರೇ ಹಿಂದು. ಈ ನೆಲ ಆತನ ಧರ್ಮದ ಮೂಲ ಮತ್ತು ಆತನ ನಂಬಿಕೆಗಳ ತೊಟ್ಟಿಲು. ಆದ್ದರಿಂದ ವೈದಿಕ ವಾದ, ಜೈನ ವಾದ, ಬೌದ್ಧ ವಾದ, ಸಿಖ್ ವಾದ ಮತ್ತು ಎಲ್ಲ ಗುಡ್ಡಗಾಡು ಜನರು ಹಿಂದುಗಳು. ಇತರೆ ಅಲ್ಪಸಂಖ್ಯಾತರ ಪೈಕಿ ಪಾರ್ಸಿಗಳು ಜನಾಂಗ, ಮತ, ಭಾಷೆ ಮತ್ತು ಸಂಸ್ಕೃತಿ

**''ನಾನು ಮತಾಂಧ ಹಿಂದುವೂ ಅಲ್ಲ ಅಥವಾ ಕೋಮುವಾದಿಯೂ ಅಲ್ಲ. ಕತ್ತೆಗಳು ಕುದುರೆಗಳ ಹಾಗೆ ಯೋಚಿಸುವಂತೆ ನಾನು ಮಾಡಲಾರೆ''**

ಯಲ್ಲಿ ಬಹುತೇಕ ಹಿಂದುಗಳಂತೆಯೇ ಇದ್ದಾರೆ. ಕ್ರೈಸ್ತರು ಮತ್ತು ಯಹೂದಿಗಳು ಹಿಂದುಗಳ ಜೊತೆ ರಾಜಕೀಯವಾಗಿ ಮಿಳಿತವಾಗಬಹುದು. ಈ ಜೀವನ ಕೇಂದ್ರದಲ್ಲೆ ಹಿಂದುತ್ವ ಮುನ್ನಡೆಯುತ್ತದೆ. ಅದೊಂದು ಮತೀಯ ಘೋಷಣೆಯಲ್ಲ, ಹಿಂದು ಜನಾಂಗದ ಸಮಸ್ತ ಚಟುವಟಿಕೆಗಳ ಮತ್ತು ಚಿಂತನೆಗಳ ಪ್ರವಾಹ. ಅಲ್ಪಸಂಖ್ಯಾತರ ಸಮಸ್ಯೆಗಳು ಅಂದರೆ ಒಂದೇ ಒಂದು ಅಲ್ಪಸಂಖ್ಯಾತ ಸಮುದಾಯದ ಸಮಸ್ಯೆ - ಮುಸ್ಲಿಂ ಅಲ್ಪಸಂಖ್ಯಾತರು. ಆದ್ದರಿಂದ ಸಮಾನ ಮತ - ಸಂಸ್ಕೃತಿ, ಸಮಾನ ಇತಿಹಾಸ - ಸಂಪ್ರದಾಯ, ಸಮಾನ ಸಾಹಿತ್ಯ, ಭೌಗೋಳಿಕ ಏಕತೆಯನ್ನು ಮತ್ತು ರಾಜಕೀಯ ಏಕತೆಯನ್ನು ಬಿಂಬಿಸುವ ಭೂಪ್ರದೇಶ - ಇವೆಲ್ಲವೂ ಸೇರಿದ ಒಂದು ಗುಂಪನ್ನೆ ಹಿಂದು ರಾಷ್ಟ್ರ ಎಂದು ಕರೆಯಬಹುದು ಆದ್ದರಿಂದ ಹಿಂದುಸ್ಥಾನ ದಲ್ಲಿ ಹಿಂದುಗಳೇ ಒಂದು ರಾಷ್ಟ್ರ. ನಾನು ಮತಾಂಧ ಹಿಂದು ಮತ್ತು ಕೋಮುವಾದಿ ಎಂದು ಭಾವಿಸು ವವರು ಒಂದು ವಿಚಿತ್ರ ರೋಗದಿಂದ ಬಳಲುತ್ತಿದ್ದಾರೆ - ಭ್ರಮೆ. ನಾನು ಮತಾಂಧ ಹಿಂದುವೂ ಅಲ್ಲ ಅಥವಾ ಕೋಮುವಾದಿಯೂ ಅಲ್ಲ ಕತ್ತೆಗಳು ಕುದುರೆಗಳ ಹಾಗೆ ಯೋಚಿಸುವಂತೆ ನಾನು ಮಾಡಲಾರೆ.

***ಭಾರತದ ಇಂದಿನ ಪರಿಸ್ಥಿತಿಗಳ ಬಗ್ಗೆ ನಿಮ್ಮ ಅಭಿಪ್ರಾಯಗಳೇನು ?***

ಸ್ವಾತಂತ್ರ್ಯದ ನಂತರ ಜನ ಬ್ರಿಟಿಷ್ ಆಡಳಿತದ ತರುವಾಯ ತಾವು ಕೊಂಚ ಶಾಂತಿ, ಕೊಂಚ ಸಮಾ ಧಾನ, ಕೊಂಚ ಸುಖ ಹೊಂದುತ್ತೇವೆಂದು ನಿರೀಕ್ಷಿಸಿದ್ದರು ಅವರ ನಿರೀಕ್ಷೆಗಳೆಲ್ಲ ಹುಸಿಯಾಗಿವೆ. ಸ್ವಾತಂತ್ರ್ಯ ಬಂದ ಹದಿನೆಂಟು ವರ್ಷಗಳ ನಂತರ ನಾವು ಜನ ಅಸುಖಿಗಳು, ಕಷ್ಟಕಾರ್ಪಣ್ಯ ಅನುಭವಿಸು ತ್ತಿರುವವರು, ನೈತಿಕವಾಗಿ ದಿವಾಳಿಯಾಗಿರುವವರೂ, ಹತಾಶರಾಗಿಯೂ ಇರುವುದನ್ನು ಕಾಣುತ್ತೇವೆ. ದೊಡ್ಡ ಯೋಜನೆಗಳು, ಕಾರ್ಯಕ್ರಮಗಳು ತನ್ನ ದಿನವಹಿ ಕೂಳಿಗಾಗಿ, ತನ್ನ ಕನಿಷ್ಠ ಅಸ್ತಿತ್ವಕ್ಕಾಗಿ ಹತಾಶ ವಾಗಿ ಹೋರಾಡುತ್ತಿರುವ ಸಾಮಾನ್ಯ ಮನುಷ್ಯನನ್ನು ಮುಟ್ಟಿಲ್ಲ ಕಾಂಗ್ರೆಸ್ ಪಾರ್ಟಿ ಮತ್ತು ಸರ್ಕಾರವು ಒಣಮರಗಳಿಂದಲೇ ತುಂಬಿವೆ. ಅಲ್ಲಿ ದೇಶಕ್ಕೆ ಯಾವುದೇ ರಾಜಕೀಯ ಪ್ರಯೋಜನಕ್ಕೆ ಬಾರದ ವೃದ್ಧ ಮತ್ತು ಬಳಲಿದ ಜನರೇ ಇದ್ದಾರೆ. ಅವರು ಅಧಿಕಾರದಲ್ಲೇ ಇದ್ದು ನಾಳೆಯ ಸಮಸ್ಯೆಗಳಿಗೆ ಯುವಕರನ್ನು ತರಬೇತಿಗೊಳಿಸುವುದಕ್ಕೆ ತಡೆಹಾಕುತ್ತಿದ್ದಾರೆ.

***ಭವಿಷ್ಯ ?***

ದೇಶ ಚೂರು ಚೂರಾಗುತ್ತದೆ ಎಂದು ಈಗ ಯೋಚಿಸುವುದು ಬರಿಯ ಹುಚ್ಚು. ಚಂದ್ರಗುಪ್ತ, ವಿಕ್ರಮಾದಿತ್ಯ ಶಾಲಿವಾಹನ, ಚಾಣಕ್ಯ ಮತ್ತು ಶಿವಾಜಿಯಂಥ ದಕ್ಷ ಆಡಳಿತಗಾರರನ್ನು ರೂಪಿಸಿದ ಈ ದೇಶ ಖಂಡಿತ ಎಂದೂ ರಾಜಕೀಯವಾಗಿ ದಿವಾಳಿಯಾಗುವ ದೇಶವಲ್ಲ ಸಂಕಷ್ಟದ ಕಾಲದಲ್ಲಿ ಭರತ ವರ್ಷದ ಭವಿತವ್ಯದ ಬಗ್ಗೆ ಜವಾಬ್ದಾರಿ ಹೊತ್ತ ಮಹಾನ್ ವ್ಯಕ್ತಿಗಳನ್ನು ನೀಡುವ ಪರಂಪರೆಯನ್ನು ಹಿಂದು ಸ್ಥಾನವು ಸಾವಿರಾರು ವರ್ಷಗಳಿಂದ ಹೊಂದಿದೆ. ಹಿಂದಿನಂತೆ ಮುಂದೆಯೂ ಮಾತೃಭೂಮಿಗಾಗಿ ಸೇವೆ ಮಾಡುವ, ಬಲಿದಾನ ನೀಡುವ ಮಹಾನ್ ವ್ಯಕ್ತಿಗಳು ಖಂಡಿತ ಇರುತ್ತಾರೆ.

***ಪರಮಾಣು ಯುಗದಲ್ಲಿ ದೇಶವನ್ನು ಸಂಪೂರ್ಣ ಸೈನಿಕೀಕರಣಗೊಳಿಸುವುದು***

**''ಈ ಜಗತ್ತು ಇರುವವರೆಗೆ ನಮ್ಮ ಪ್ರಾಚೀನ ಭೂಮಿ - ಈ ನಮ್ಮ ಮಹಾನ್ ಭರತವರ್ಷವು ತನ್ನೆಲ್ಲ ವೈಭವದಿಂದ ಬಾಳುತ್ತದೆ''**

***ಅಗತ್ಯವೆಂದು ನೀವು ಭಾವಿಸುತ್ತೀರಾ ?***

ಹೌದು, ನಾನು ಯಾವತ್ತೂ ಎರಡು ವಿಷಯಗಳನ್ನು ಹೇಳುತ್ತಾ ಬಂದಿದ್ದೇನೆ : ರಾಜಕೀಯವನ್ನು ಹಿಂದೂಕರಣಗೊಳಿಸಿ ಮತ್ತು ರಾಷ್ಟ್ರವನ್ನು ಸೈನಿಕೀಕರಣಗೊಳಿಸಿ. ನೀವು ಬಲವಾಗಿದ್ದರೆ ವಿಶ್ವಸಂಸ್ಥೆಯ ಅಧಿವೇಶನದಲ್ಲಿ ಕ್ರುಶ್ಚೇವ್ ಬೂಟು ತೋರಿಸಿದಂತೆ ನೀವೂ ತೋರಿಸಬಹುದು. ಆದರೆ ನೀವು ದುರ್ಬಲರಾಗಿದ್ದರೆ ನಿಮ್ಮ ಹಣೆಬರಹ ಶಕ್ತಿಯುತ ಆಕ್ರಮಣಕಾರಿಯ ಕೈಯಲ್ಲಿರುತ್ತದೆ

***ಕಾಂಗ್ರೆಸ್ ಒಡೆದುಹೋಗುತ್ತದೆ ಎಂದುಕೊಂಡರೆ ರಾಜಕೀಯ ಅಧಿಕಾರಕ್ಕಾಗಿ ಹಿಂದು ಫ್ಯಾಸಿಸ್ಟರು ಮತ್ತು ಕಮ್ಯುನಿಸ್ಟರ ನಡುವೆ ಸಂಘರ್ಷ ಉಂಟಾಗುತ್ತದೆ ಎಂದು ನೀವು ಭಾವಿಸುತ್ತೀರಾ ?***

ನನ್ನ ದೃಷ್ಟಿಯಲ್ಲಿ ಒಬ್ಬ ಹಿಂದು ಫ್ಯಾಸಿಸ್ಟ್ ಅಲ್ಲ ಆತ ನಿಜವಾಗಿಯೂ ಒಬ್ಬ ನೈಜ ಪ್ರಜಾತಾಂತ್ರಿಕ ವ್ಯಕ್ತಿ. ಆತ ಒಂದು ರೀತಿಯಲ್ಲಿ ಕಮ್ಯುನಿಸ್ಟ್ ಕೂಡಾ ಹೌದು. ಹಿಂದುತ್ವದ ಮೂಲಭೂತ ತತ್ವಗಳಲ್ಲಿ ನಂಬಿಕೆಯಿರುವ ಎಲ್ಲಾ ಹಿಂದುಗಳು ಒಗ್ಗಟ್ಟಾದರೆ ರಾಜಕೀಯ ಶಕ್ತಿಗಾಗಿ ಯಾವ ಸ್ಪರ್ಧೆಯೂ ಇರುವ ಪ್ರಶ್ನೆಯೇ ಇಲ್ಲ.

***ಕೊನೆಯದಾಗಿ, ನಮ್ಮ ಕ್ರಾಂತಿ ಸಂಪೂರ್ಣವಾಯಿತೆ ? ಅಥವಾ ನಾವು ಇನ್ನೂ ಅದರ ಹಾದಿಯಲ್ಲೇ ಇದ್ದೇವೆಯೆ ?***

ನಮ್ಮ ಕ್ರಾಂತಿಯು ನಮ್ಮ ಸ್ವಾತಂತ್ರ್ಯಗಳಿಕೆಯ ಜೊತೆಗೇ ಮುಕ್ತಾಯವಾಯಿತು ದೇಶದ ವಿಮೋಚನೆಗಾಗಿ ಹೋರಾಡಿದ ನಮಗೆಲ್ಲರಿಗೂ ಈಗ ದೇಶ ಸ್ವತಂತ್ರವೂ ಮುಕ್ತವೂ ಆಗಿರುವುದನ್ನು ಕಂಡು ಸಹಜವಾಗೇ ತುಂಬ ಖುಷಿಯಾಗುತ್ತದೆ. ಬಾಂಬು, ಪಿಸ್ತೂಲು ಮತ್ತು ಬಂದೂಕಿನ ದಿನಗಳು ಕಳೆದಿವೆ ನಾವು ಕಷ್ಟಪಟ್ಟು ಗೆದ್ದ ಸ್ವಾತಂತ್ರ್ಯವನ್ನು ಬಲಗೊಳಿಸಲು ನಮ್ಮನ್ನು ಇನ್ನಷ್ಟು ಸಮರ್ಪಿಸಿಕೊಳ್ಳಬೇಕಾಗಿದೆ. ಆದರೆ, ಸಹಜ ಗಡಿಗಳೊಂದಿಗೆ ಅಖಂಡ ಹಿಂದುಸ್ಥಾನವನ್ನು ಸಾಧಿಸುವ ನಮ್ಮ ಗುರಿ ಇನ್ನೂ ಪೂರೈಸಬೇಕಾಗಿದೆ. ನಾನೀಗ ವೃದ್ಧ. ಇವಕ್ಕೆಲ್ಲ ನಾನು ವಿದಾಯ ಹೇಳುವ ಸಮಯ ಬಂದಿದೆ ! ನನ್ನ ಆತ್ಮಸಾಕ್ಷಿಯ ನಿರ್ದೇಶಗಳಿಗೆ ತಕ್ಕಂತೆ ನನ್ನ ದೇಶಕ್ಕಾಗಿ ನಾನು ಸೇವೆ ಸಲ್ಲಿಸಿದ್ದೇನೆ. ನನ್ನ ದೇಶ ಗುಲಾಮಗಿರಿಯಿಂದ ಮುಕ್ತವಾಗಿರುವುದನ್ನು ಕಾಣಲು ನಾನು ಬದುಕಿದ ಬಗ್ಗೆ ನನಗೆ ಖುಷಿಯಿದೆ. ಈ ಜಗತ್ತು ಇರುವವರೆಗೆ ನಮ್ಮ ಪ್ರಾಚೀನ ಭೂಮಿ - ಈ ನಮ್ಮ ಮಹಾನ್ ಭರತವರ್ಷವು ತನ್ನೆಲ್ಲ ವೈಭವದಿಂದ ಬಾಳುತ್ತದೆ.



## ಪ್ರಿಯ ಓದುಗರೆ,

ಕಥೆ ಹೇಳಿಯಾಗಿದೆ. ಪರದೆ ಇಳಿದಿದೆ. ಎರಡು ಜೀವಾವಧಿ ಶಿಕ್ಷೆಗಳು ಮುಗಿದಿವೆ. ನಾನು ಈ ಅವಧಿಯ ಎಲ್ಲ ಘಟನೆಗಳನ್ನು ಈ ಪುಸ್ತಕದೊಳಗೆ ಮೂಡಿಸಿದ್ದೇನೆ. ಇವೆಲ್ಲ ತುಂಬ ಸಂಕ್ಷಿಪ್ತವಾಗಿ ಮೂಡಿಬಂದಿವೆ.

ನಾನು ಈ ಜಗತ್ತಿಗೆ ಬಂದಾಗ ದೇವರು ನನ್ನ ಜೊತೆಗೇ ಜೀವಾವಧಿ ಶಿಕ್ಷೆಯನ್ನೇ ಕೊಟ್ಟು ಕಳುಹಿಸಿದ.ಈ ಸೆರೆಮನೆಯ ಬದುಕನ್ನೆ ಬಾಳಲು ನನ್ನ ಜೀವನದ ಪ್ರಮುಖ ಭಾಗವನ್ನು ನಿಗದಿಪಡಿಸಲಾಗಿತ್ತು. ಈ ಕಥೆಯು ನನ್ನ ಇನ್ನೂ ಮುಗಿಯದ ಉದ್ದ ಕಥೆಯ ಒಂದು ಅಧ್ಯಾಯ ಮಾತ್ರ.

ನಿಜ, ನಾನೀಗ ಸ್ವತಂತ್ರ. ನನ್ನ ಕಾಲಿಗೆ ಸುತ್ತಿದ್ದ ಕಬ್ಬಿಣದ ಸರಳುಗಳು ತುಂಡಾಗಿವೆ. ಆದರೆ ನನ್ನ ಹೃದಯವನ್ನು ಬಂಧಿಸಿದ ಆ ತುಡಿತದ ಸರಳು ಈಗಲೂ ಇದೆ. ನಾನು ನನ್ನನ್ನು ಹುಗಿದು ಹಾಕಿದ್ದ ಕಲ್ಲಿನ ಗೋಡೆಗಳಿಂದ ಹೊರಬಂದಿದ್ದೇನೆ. ಆದರೆ ನನ್ನ ಆತ್ಮವು ಇನ್ನೂ ಸೆರೆಯಾಳಾಗಿಯೇ ಇದೆ.

ಪ್ರಿಯ ಓದುಗ, ಖಂಡಿತ ನೀನು ನನ್ನ ಕಥೆಯನ್ನು ಕೇಳಿ ಆಯಾಸಗೊಂಡಿರಬೇಕು. ಇದರಲ್ಲಿ ಬರೀ ಮುಗಿಯದ ಪುನರಾವರ್ತನೆಗಳೇ ಇವೆಯೆಂದು ನೀನು ಬೇಸರಗೊಂಡಿರಬೇಕು. ನೀನು ಇದನ್ನು ಓದುತ್ತಾ ಎಷ್ಟು ಆಯಾಸಗೊಂಡಿದ್ದೀಯೋ ನಾನೂ ಕೂಡ ನನ್ನ ಜೀವನದ ಈ ಆಯಾಸದ ಕಥೆಯನ್ನು ಬರೆಯುತ್ತಾ ಬರೆಯುತ್ತಾ ತುಂಬ ಬಳಲಿದ್ದೇನೆ. ಈ ನನ್ನ ಯಾತನೆಯನ್ನು, ನಾನು ಅನುಭವಿಸಿದ ಮಾನಸಿಕ ಆಘಾತಗಳನ್ನು ಹೇಗೆ ನಾನು ಕಾಗದದ ಮೇಲೆ ಇಳಿಸಿದೆ ಎಂಬುದೇ ನನಗೆ ಬಳಲಿಕೆ ತಂದಿದೆ.

ನೀನೇನೋ ಈ ಕಥೆಯನ್ನು ಒಂದೇ ದಿನದಲ್ಲಿ ಓದಬಹುದು. ಆದರೆ ನಾನು ಇದಕ್ಕಾಗಿ ಹದಿನಾಲ್ಕು ಸುದೀರ್ಘ ವರ್ಷಗಳ ಕಾಲ ಘಾಸಿ ಶಿಕ್ಷೆ ಅನುಭವಿಸಬೇಕಾಯಿತು. ನಿನಗೇ ಈ ಕಥೆ ಇಷ್ಟು ಬೇಜಾರು ಹಿಡಿಸಿದ್ದರೆ ನನಗೆ ಈ ಕಥೆಯನ್ನು ಅನುಭವಿಸಲು ಎಷ್ಟು ಬಳಲಿಕೆಯಾಗಿರಬಹುದು ? ಆ ಹದಿನಾಲ್ಕು ವರ್ಷಗಳ ಸೆರೆಮನೆ ವಾಸದ ಪ್ರತಿಯೊಂದು ಕ್ಷಣವೂ ನನ್ನ ಆತ್ಮ ಮತ್ತು ದೇಹದ ಯಾತನೆಯ ಕ್ಷಣಗಳಾಗಿದ್ದವು, ಸೆರೆಮನೆಯಲ್ಲಿದ್ದ ನನ್ನ ಸಹಕೈದಿಗಳಿಗೂ ಕೂಡ. ಅದು ಬರೀ ಅಸಹನೀಯ ಅಷ್ಟೇ ಆಗಿರಲಿಲ್ಲ, ಅತ್ಯಂತ ಯಾತನಾಮಯವೂ ಆಗಿತ್ತು. ಇಂಥ ಯಾತನೆ, ಅವಮಾನ, ಅಸಹನೆ ಮತ್ತು ನೋವನ್ನು ಅನುಭವಿಸಿದ್ದರಿಂದಲೇ ಅವನ್ನೆಲ್ಲ ನಿನಗಾಗಿ ಇಲ್ಲಿ ಬರೆದಿದ್ದೇನೆ. ನಾವು ಎಂಥ ಕಾಲವನ್ನು ಅನುಭವಿಸಿದೆವು, ಹೇಗೆ ಬಾಳಿ ಉಳಿದೆವು ಎಂಬ ಬಗ್ಗೆ ನಿನಗೆ ಕೊಂಚವಾದರೂ ಕಲ್ಪನೆ ಸಿಕ್ಕಿದೆ ಎಂದು ನಾನು ಭಾವಿಸುತ್ತೇನೆ.

ಪ್ರಿಯ ಓದುಗ, ನಾನೀಗ ಲೇಖನಿಯನ್ನು ಕೆಳಗಿಟ್ಟು ನಿನಗೆ ವಿದಾಯ ಹೇಳುತ್ತೇನೆ. ತಮ್ಮ ಕಾರ್ಯಕ್ಕೆ ಬದ್ಧರಾದವರು ಎಂದಿಗೂ ಎದೆಗುಂದದೆ ಎಂಥ ಕಠಿಣ ಸ್ಥಿತಿ ಇದ್ದಾಗಲೂ ಅದಕ್ಕೆ ಅಂಟಿಕೊಂಡರು, ಹೇಗೆ ಕೊನೆಯವರೆಗೂ ಅದನ್ನು ಪಾಲಿಸಿಕೊಂಡು ಬಂದರು ಎಂಬುದನ್ನು ನೀನು ಖಂಡಿತ ಮರೆಯಬೇಡ ಎಂದು ಹೇಳದೆ ನಾನು ಈ ಲೇಖನಿಯನ್ನು ಕೆಳಗಿಡಲಾರೆ. ಅವರೆಲ್ಲ ಬಹುತೇಕ ತಮ್ಮ ಸಂಘರ್ಷಮಯ ಹೋರಾಟದಲ್ಲಿ ದಹನವಾಗಿಯೇ ಹೋಗುತ್ತಿದ್ದರು. ಆದರೆ ಅವರನ್ನು ಯಾವ ಶಕ್ತಿಯೂ ಸಂಪೂರ್ಣವಾಗಿ ಸುಡಲಾಗದ್ದರಿಂದ ಸುರಕ್ಷಿತವಾಗಿ ಹೊರಬಂದಿದ್ದಾರೆ. ದಯವಿಟ್ಟು ನೀನು ಮರೆಯಬೇಡ.

ಪ್ರಿಯ ಓದುಗ, ಇದೇ ನನ್ನ ಕೊನೆಯ ಮಾತು, ದಯವಿಟ್ಟು ಅವರನ್ನು ಮರೆಯಬೇಡ. ಯಾಕೆಂದರೆ ಇಂದಲ್ಲ ನಾಳೆ ಅವರ ನೆನಪೇ ನಿನಗೆ ಬೇಕಾಗುತ್ತದೆ, ನಿನ್ನ ಮುಕ್ತಿಗೆ ಕಾರಣವಾಗುತ್ತದೆ. ಬೇರೆ ಯಾವುದೂ ಸಿಗುವುದಿಲ್ಲ !

– ವಿ.ಡಿ. ಸಾವರಕರ್

*'ಮೈ ಡಿಪೋರ್ಟೇಶನ್ ಫಾರ್ ಲೈಫ್' ಪುಸ್ತಕದಲ್ಲಿ ಸಾವರಕರ್ ಬರೆದ ಕೊನೆಯ ಅಧ್ಯಾಯದ ಆಯ್ದ ಭಾಗವಿದು.*



ಧೀರೋದಾತ್ತ ನಾಯಕ
ದೂರದರ್ಶಿ ಚಿಂತಕ



22.6.1948. ಕೆಂಪುಕೋಟೆಯಲ್ಲಿ ನಡೆದ ಗಾಂಧಿ ಹತ್ಯೆ ವಿಚಾರಣೆ ಸಂದರ್ಭದಲ್ಲಿ ಕಟಕಟೆಯೊಳಗೆ ಕುಳಿತಿರುವ ಸಾವರಕರ್. ಇಲ್ಲಿ ಈ ಚಿತ್ರದಲ್ಲಿ ಇತರೆ ಆರೋಪಿಗಳಾದ ನಾಥುರಾಮ್ ಗೋಡ್ಸೆ, ಆಪ್ಟೆ, ಕರ್ಕರೆ, ಬಡಗೆ, ಮದನಲಾಲ್, ಗೋಪಾಲ ಗೋಡ್ಸೆ, ಶಂಕರ್ ಕಿಸ್ತಯ್ಯ ಮತ್ತು ಡಾ. ಪರಾಶುರೆಯವರಕನ್ನು ಕಾಣಬಹುದು.



ಆರೋಪ ಮುಕ್ತರಾಗಿ ಬೆಳಗಾವಿ ಸೆರೆಮನೆಯಿಂದ ಹೊರಬರುತ್ತಿರುವ ಸಾವರಕರ್ ಮತ್ತು ಪುಣೆಯ ಮೇಯರ್ ಜಿ.ಎಂ. ನಲವಾಡೆ. ಪಕ್ಕದಲ್ಲಿ ಮಾಜಿ ರಕ್ಷಕ ಅಪ್ಪಾ ಕಾಸರನನ್ನು ಕಾಣಬಹುದು.



10.5.1952. ಪುಣೆಯಲ್ಲಿ ನಡೆದ 'ಹುತಾತ್ಮರಿಗೆ ಶ್ರದ್ಧಾಂಜಲಿ' ಕಾರ್ಯಕ್ರಮದಲ್ಲಿ ಮಾ.ಸ. ಗೋಳವಲ್ಕರ್, ಜಿ.ವಿ. ಖೇತ್ಕರ್ ಮತ್ತು ಜಿ.ಎಸ್. ಕರಂಡೀಕರ್ ಜೊತೆ ಸ್ವಾತಂತ್ರ್ಯವೀರ ಸಾವರಕರ್.







ಸಾವರಕರ್ ಇದ್ದ ಕೋಣೆ ➔






ಅಂದಮಾನಿನ ಸೆಲ್ಯುಲಾರ್ ಜೈಲಿನ ದೃಶ್ಯಗಳು

ಸಾವರಕರ್ ಕುಟುಂಬ: ಪತ್ನಿ ಶ್ರೀಮತಿ ಯಮುನಾಬಾಯಿ ಸಾವರಕರ್, ಪುತ್ರಿ ಶ್ರೀಮತಿ ಪ್ರಭಾತ್ ಚಿಪಳೂಣಕರ್ ಮತ್ತು ಪುತ್ರ ವಿಶ್ವಾಸ್ ಸಾವರಕರ್.



ತಮ್ಮ ಡಾ. ನಾರಾಯಣರಾವ್ ಸಾವರಕರ್ ಜೊತೆ ಸಾವರಕರ್. 'ಬಾಳ್' ಎಂಬ ಪ್ರೀತಿಯ ಹೆಸರಿದ್ದ ಡಾ. ನಾರಾಯಣರಾವ್ ರವರು ಗಾಂಧಿ ಹತ್ಯೆಯ ಸಂದರ್ಭದಲ್ಲಿ ಕಾಂಗ್ರೆಸ್ ಬೆಂಬಲಿಗರಿಂದ ಹಲ್ಲೆಗೊಳಗಾಗಿ, ಪಾರ್ಶ್ವ ವಾಯು ಪೀಡಿತರಾಗಿ ಕೊನೆಯುಸಿರೆಳೆದರು.

## ಲೇಖಕ ಶಿವರಾಮು

### ಕಿರು ಪರಿಚಯ



ಹುಟ್ಟೂರು : ಕನಕಪುರ, ಬೆಂಗಳೂರು ಜಿಲ್ಲೆ. ಹುಟ್ಟುದಿನ : 8-7-1934 ; ಶಿಕ್ಷಣ : ಬಿ.ಇ. ಅಪೂರ್ಣ ; ಕನಕಪುರ ಕರ್ನಾಟಕ ಸಂಘದಲ್ಲಿ ಸಕ್ರಿಯ ಪಾತ್ರ ; ಕಥೆ ಕವನಗಳ ರಚನೆ (1950-55); ರಾ.ಸ್ವ. ಸಂಘದ ಪ್ರಚಾರಕ (1955-83) ; ಪ್ರಾಂತ್ಯ ಪ್ರಕಾಶನ ವಿಭಾಗದ ಹೊಣೆ 1962ರಿಂದ; 'ವಿಕ್ರಮ' ಸಾಪ್ತಾಹಿಕದಲ್ಲಿ ಸೇವೆ (1959-62) ; ರಾಷ್ಟ್ರೋತ್ಥಾನ ಪರಿಷತ್ತಿಗೆ ಆರಂಭದಿಂದ ಸಹಕಾರ; ರಾಷ್ಟ್ರೋತ್ಥಾನ ಸಾಹಿತ್ಯದ ಸಂಪಾದಕ (1964-80) ; 'ಭಾರತ-ಭಾರತಿ' ಯೋಜನೆಗೆ ಸಹಕಾರ; ದೇಶಭಕ್ತಿ ಗೀತೆಗಳು ಹಾಗೂ ಗ್ರಂಥಗಳ ರಚನೆ; ತುರ್ತು ಪರಿಸ್ಥಿತಿಯಲ್ಲಿ (1975-77) ಭೂಗತ ಸಾಹಿತ್ಯದ (ಪತ್ರಿಕೆಗಳು, ಪುಸ್ತಕಗಳು ಇತ್ಯಾದಿ) ಮುಖ್ಯ ಸಂಪಾದಕ; 'ಉತ್ಥಾನ' ಮಾಸಪತ್ರಿಕೆಯ ಗೌರವ ಸಂಪಾದಕ (1978-83) ; ಆರೋಗ್ಯ ಸುಧಾರಣೆಗಾಗಿ ಬೆಂಗಳೂರಿನಿಂದ ದ.ಕ. ಜಿಲ್ಲೆಗೆ ಸ್ಥಳ ಬದಲಾವಣೆ ; ಲೇಖಕರು, ಪತ್ರಕರ್ತರು, ಚಿಂತಕರು, ಆಧ್ಯಾತ್ಮ ಸಾಧಕರು, ಧಾರ್ಮಿಕ ಪೀಠಾಧೀಶರೊಡನೆ ನಿರಂತರ ಸಂಪರ್ಕ; ಯುವಜನರಿಗೆ ಪ್ರೇರಣೆ, ಮಾರ್ಗದರ್ಶನ

### ಶಿವರಾಮು ಕೃತಿಗಳು

**ಗದ್ಯ :**

ರಣವೀಳ್ಯ (1965), ಯವನವಿಜೇತ ಚಂದ್ರಗುಪ್ತ (ಅನುವಾದ : 1966), ಕನ್ನಡದ ಕಡುಗಲಿಗಳು (1967), ಒಂದು ಕಥೆ ಒಂದು ವ್ಯಥೆ (1968), ಅಕ್ಕ ನಿವೇದಿತಾ (1969), ಆತ್ಮಾಹುತಿ (1970), ನೆತ್ತರು - ತಾವರೆ (1973), ಸಂಗೊಳ್ಳಿ ರಾಯಣ್ಣ (1972), ಚಿನ್ನದ ಕತ್ತಿ (1982), ಐ ಎನ್.ಎ ನೆನಪು (1987), ಪ್ರೇಮಧಾರೆ (ಅನುವಾದ : 1997), ಸ್ಫೂರ್ತಿಕಿರಣ (1997).

**'ಭಾರತ-ಭಾರತಿ' ಯೋಜನೆಗಾಗಿ :** ಜಾಜಿ ಪ್ರಭು, ದೇಶಪಾಂಡೆ, ನೇತಾಜಿ ಫಾಲ್ಕರ್, ಸರದಾರ ಪಟೇಲ್, ಭಕ್ತ ನಂದನಾರ್, ಸುಶೀಲಕುಮಾರ ಸೇನ್.

**ಕವನ ಸಂಕಲನಗಳು :**

ಅರಳು ಸುರಳಿ (1979), ನನ್ನ ಜನ ನನ್ನ ಮನ (1980), ತಾಯೇ ವಂದಿಸುವೆ (1984), ಹಿಂದು ಬಂಡಾಯ (1984).



## ಮಿತ್ರಮಾಧ್ಯಮದ ಈವರೆಗಿನ ಪ್ರಕಟಣೆಗಳು

| | |
|---|---|
| **WONDER** - ಕಂಡರ್ | ವೈ.ಎನ್.ಕೆ. |
| ವರ್ತಮಾನದ ಬಿಸಿಲು | ಬೇಳೂರು ಸುದರ್ಶನ |
| ಆಯುದ ಕವನಗಳು | ಡುಂಡಿರಾಜ್ |
| ಅಂತರತಾರಾ ಮೋಡಗಳು | ಮುನಿಯಾಲ ಗಣೇಶ್ ಶೆಣೈ |
| ಡೆಡ್‌ಲೈನ್ ವೀರರ ಕಥೆಗಳು | ಡಿ. ಯಶೋದ |

ಅಚ್ಚಿನಲ್ಲಿ:

| | |
|---|---|
| FROM SARASWATI RIVER TO THE INDUS SCRIPTS | Dr.N.S.Rajaram |